# ಅಂತರಂಗದ ಮಾತು

೧೯೬೫ರ ಆಗಸ್ಟ್. ಒಂದು ಸಂಜೆ ಫೋನ್ ಸದ್ದುಮಾಡಿತು. ಅತ್ತ ಇದ್ದವರು (ಆಗ ಮಾನ್ಯ ಮಂತ್ರಿ) ರಾಮಕೃಷ್ಣ ಹೆಗಡೆಯವರು.

"ದಿಲ್ಲಿಯಿಂದ ದುರ್ಗಾದಾಸ್ ಬಂದಿದಾರೆ."

"ಹೆಸರು ಕೇಳಿದೇನೆ."

"ಅವರ ಇಂಡಿಯಾ ನ್ಯೂಸ್ ಅಂಡ್ ಫೀಚರ್ ಅಲಯೆನ್ಸ್‌ಗೆ ಮೈಸೂರು ರಾಜ್ಯದಲ್ಲಿ ಒಬ್ಬ ಪ್ರತಿನಿಧಿ ಬೇಕಂತೆ."

"ಹುಂ............"

"........ನಿಮಗೆ ಆಸಕ್ತಿ ಇದೆಯೆ?"

"ಇದೆ."

"ಬನ್ನಿ ದುರ್ಗಾದಾಸರನ್ನು ಭೇಟಿಮಾಡಿ."

ಒಂದು ಮಿನಿಟಿಗೂ ಕಡಮೆ ಅವಧಿಯ ಧ್ವನಿದ್ವಂದ್ವ; ಒಂದು ಗಂಟೆ ಕಾಲವನ್ನು ಮೀರದ ಭೇಟಿ. ಪರಿಣಾಮ, ನನ್ನ ಇನ್ನಾ ಅಧ್ಯಾಯದ ಆರಂಭ.

ಪತ್ರಿಕೋದ್ಯಮ ನನಗೆ ಹೊಸದಾಗಿರಲಿಲ್ಲ. ಬರೆವಣಿಗೆಯ ಬದುಕನ್ನು ನಾನು ಆರಂಭಿಸಿದ್ದೇ ಪತ್ರಿಕಾಲಯದಲ್ಲಿ. ಅದೇ ನನ್ನ ವಿಶ್ವವಿದ್ಯಾಲಯ ಕೂಡಾ. 'ಓದು ಮುಂದುವರಿಸಿದೆ.'

ಸಾಹಿತ್ಯಕ್ಕೆ ಮಾತ್ರ ನನ್ನ ಈ ಹೊಸ ಸಂಬಂಧ ಇಷ್ಟವಾಗಲಿಲ್ಲ! ನಾಲ್ಕು ವರ್ಷಗಳಷ್ಟು ದೀರ್ಘವಾಗಿ ನಾನು ಬರೆದ ಇನ್ನಾ ಅಧ್ಯಾಯದಲ್ಲಿ ಒಂದು ಬಗೆಯ ಪತ್ರಿಕಾ ಲೇಖನಗಳ ಹೊರತಾಗಿ ಬೇರೇನೂ ಬರೆವಣಿಗೆ ನನ್ನಿಂದ ಸಾಧ್ಯವಾಗಲಿಲ್ಲ. ಇದ್ದುದರಲ್ಲಿ ನನಗೆ ತುಸು ಸಮಾಧಾನ ನೀಡಿದ್ದು, 'ಕರ್ಮವೀರ'ದಲ್ಲಿ ನನ್ನ ಅಂಕಣ.

ಆರಂಭದಲ್ಲಿ ಇದಕ್ಕೆ 'ರಾಜ್ಯದ ರಾಜಧಾನಿಯಿಂದ' ಎಂಬ ಹೆಸರಿತ್ತು. ಮುಂದೆ ಕರ್ಮವೀರದ ಸಹಾಯಕ ಸಂಪಾದಕ ಗೆ. ಶಂಕರ ಪಾಟೀಲರು, ಬೇರೆಯೇ ಅಂಕಣ ಬೇಕು ಎಂದರು. ಹಾಗೆ ಅವರ ಅಪೇಕ್ಷೆಯಂತೆ ಹುಟ್ಟಿತು, 'ನನ್ನ ದಿನಚರಿಯಿಂದ.'

ಕಾಲದ ಮೂಸೆಯಲ್ಲಿ ಇಂಥ ಬರೆವಣಿಗೆ ಸುಲಭವಾಗಿ ಕರಗುತ್ತದೆ. ಆದರೂ ಒಂದೆಡೆ ಒಟ್ಟಿಗೆ ಇವು ಇದ್ದರೆ ಚೆನ್ನ—ಎಂಬ ಅಂಶವನ್ನು ನನ್ನ ಮೇಲೆ ಬಿಂಬಿಸಿದವರು ಮಿತ್ರರಾದ ಡಾ. ಹಾ. ಮಾ. ನಾಯಕರು. 'ದಿನಚರಿಯಿಂದ' ಹಾಗೂ 'ರಾಜಧಾನಿಯಿಂದ' ಗ್ರಂಥಗಳು ಇಷ್ಟು ಬೇಗನೆ ಹೊರಬರುತ್ತಿರುವುದಕ್ಕೆ ಕಾರಣರು–ನನ್ನಲ್ಲಿ ವಿನಾಕಾರಣ ವಿಶ್ವಾಸ ಇರಿಸಿಕೊಂಡಿರುವ ಗೆ. ಮಾವಿನಕೆರೆ ರಂಗನಾಥನ್.

ಈ ಸಂದರ್ಭದಲ್ಲಿ ಇವರನ್ನು ಕೃತಜ್ಞತೆಯಿಂದ ನಾನು ಸ್ಮರಿಸಬೇಕು.

ಓದುವವರಿಗೆ ಉಪಯುಕ್ತವಾಗಲೆಂದು ಲೇಖನಗಳನ್ನು 'ವ್ಯಕ್ತಿಪ್ರಧಾನ' 'ರಾಷ್ಟ್ರ–ನಾಡು' 'ಸರಕಾರ–ಸಾಹಿತ್ಯ' 'ಸರಸ–ಸಂಕಟ' ಎಂದು ನಾಲ್ಕು ವಿಭಾಗ ಮಾಡಿದ್ದೇನೆ. ಪ್ರಕಟವಾದ ದಿನಾಂಕ ಪ್ರತಿಯೊಂದು ಲೇಖನದ ಕೊನೆಗಿದೆ.

'ದಿನಚರಿಯಿಂದ' ಕೂರ್ಗ್ ಪ್ರಿಂಟರ್ಸ್‌ನವರ ಮುದ್ರಣ. ಅಂದ–ವಿನ್ಯಾಸಗಳಿಗೆಲ್ಲ ಅವರೇ ಕಾರಣರು. ಈ ಅಂಕಣಗಳ ವಿಷಯದಲ್ಲಿ ವಾತ್ಸಲ್ಯ ತೋರಿ, ಕರಡು ತಿದ್ದುವ, ಹೂರಣವನ್ನು ಅಣಿಗೊಳಿಸುವ ಹೊಣೆ ಹೊತ್ತು, ನನಗೆ ನೆರವಾಗಿರುವ ಗೆಳೆಯರು ಕೆ. ಸಿ. ಭೀಮಯ್ಯನವರು ಹಾಗೂ ಎನ್. ವಿ. ರಂಗನಾಥರಾಯರು. ಇವರಿಗೆ ನಾನು ಋಣಿ.

ಉಗಾದಿ, ೧೯೭೨
ಜಯನಗರ
ಬೆಂಗಳೂರು

ನಿರಂಜನ

# ಹೂರಣ

## ವ್ಯಕ್ತಿಪ್ರಧಾನ

## ರಾಷ್ಟ್ರ – ನಾಡು

## ಸರಕಾರ–ಸಾಹಿತ್ಯ



## ಸರಸ–ಸಂಕಟ

# ಮರಿಯಪ್ಪ ಭಟ್ಟರಿಲ್ಲದ 'ಸನ್ಮಾನ-ಶಾಕುಂತಲ'

ಶುಕ್ರವಾರ ಬೆಂಗಳೂರಿನಲ್ಲಿ ಸಾಹಿತ್ಯ ಸಂಭ್ರಮ. ಸಂದರ್ಭ: ಆಚಾರ್ಯ ಮುಂಗ್ಲಿಮನೆ ಮರಿಯಪ್ಪ ಭಟ್ಟರಿಗೆ ಸನ್ಮಾನ; ಅವರ ಶ್ರೇಷ್ಠ ಲೇಖನಗಳ ಸಂಗ್ರಹವಾದ 'ಕನ್ನಡ ಸಂಸ್ಕೃತಿ'ಯ ಬಿಡುಗಡೆ.

ಬೆಳಗ್ಗೆ ಮದರಾಸಿನಿಂದ ಹೊರಟ ಪ್ರೊ॥ ಮರಿಯಪ್ಪ ಭಟ್ಟರು ಮಧ್ಯಾಹ್ನ ದಾಟಿದಾಗ ಬೆಂಗಳೂರು ತಲಪಿ, ಸಂಜೆ ಐದು ಘಂಟೆಗೆ ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರದವರು ಏರ್ಪಡಿಸಿದ್ದ ಉಪಾಹಾರಕೂಟದಲ್ಲಿ ಭಾಗಿಯಾಗಬೇಕು. ಟೆಲಿಫೋನಿಗೆ ಯಾಕೋ ಕಾತರ. ಏನೋ ಸುದ್ದಿಗಳು. 'ನಿನ್ನೆ ರಾತ್ರೆ ಹೊರಟ ರೈಲುಗಾಡಿ ಈಗ ತಾನೇ ಬಂತು.' 'ಹಿಂದೀ ವಿರೋಧಿ ಚಳುವಳಿಗಾರರು ರೈಲಿನ ಡಬ್ಬಿಗಳನ್ನು ಸುಟ್ಟರು.' 'ಈ ದಿನ ಹೊರಟ ಬೃಂದಾವನ ಎಕ್ಸ್‌ಪ್ರೆಸ್ ಬರಲಿಲ್ಲ.' 'ಮೂರು ಘಂಟೆ ಲೇಟು.' 'ನಾಲ್ಕು ತಾಸು ತಡ.'

'ಶಾಕುಂತಲ' ನಾಟಕ ಆರಂಭವಾಗಬೇಕು; ಆದರೆ ದುಷ್ಯಂತನೇ ಇಲ್ಲ. ಮರಿಯಪ್ಪ ಭಟ್ಟರದೇ ಮಾತನ್ನಾಡುತ್ತ ನೆರೆದವರು ಕಪ್ಪು ಸಾಸರುಗಳ ಸಪ್ಪಳ ಮಾಡಿದರು.

ಆರು ಘಂಟೆಗೆ ಸನ್ಮಾನ ಸಮಾರಂಭ. ಟೆಲಿಫೋನಿನ ಕಪ್ಪಿಟ್ಟ ಮುಖ ನುಡಿಯಿತು: 'ಆರೂವರೆಗೆ ರೈಲು ಬರಬಹುದು.'

ದೇಜಗೌ– ಹಾಮಾನಾಯಕರು ರೈಲು ನಿಲ್ದಾಣಕ್ಕೆ ಹೋಗಿ ಬಂದರು. ಬಳಿಕ ಹಂಪನಾ ಹೋದರು.

(ಪ್ರಯಾಣಕ್ಕೆ ವಿಘ್ನ ಉಂಟಾಗುತ್ತದೆಂಬ ಸುಳಿವು ದೊರೆತಿದ್ದರೆ, ಮರಿಯಪ್ಪ ಭಟ್ಟರು ವಿಮಾನದಲ್ಲಿ ಬರುತ್ತಿದ್ದರು; ಅಥವಾ ಕಾರಿನಲ್ಲಿ ಹೊರಡುತ್ತಿದ್ದರು. ಆದರೆ ಗಾಡಿ ಮದರಾಸನ್ನು ಸಕಾಲದಲ್ಲಿ ಬಿಟ್ಟಿತ್ತು. ಪೆರಂಬೂರಿನಲ್ಲಷ್ಟೇ ಚಳುವಳಿಗಾರರು ಅದನ್ನು ತಡೆದರು. ಬಳಿಕ ಉದ್ದಕ್ಕೂ ವಿಲಂಬದ ಧಾರಾವಾಹಿ ಕಥೆ.)

* * * *

ತುಂಬಿಕೊಂಡಿದ್ದ ಸಭಾಭವನ. ಸರಸ್ವತಿ ಲಕ್ಷ್ಮಿಗಳ 'ಪ್ರತಿನಿಧಿ'ಗಳಾದ ಮಂತ್ರಿದ್ವಯರು. ಪಂಡಿತವರೇಣ್ಯ ಮರಿಯಪ್ಪ ಭಟ್ಟರನ್ನು ಕುರಿತು ಪ್ರೊ॥ ದೇಜಗೌ, ಪ್ರಿನ್ಸಿಪಲ್ ಕು. ಶಿ. ಹರಿದಾಸ ಭಟ್ ಮತ್ತು ಡಾ॥ ಹಾ. ಮಾ. ನಾಯಕರು ಮಾತನಾಡಿದರು. ("ಸನ್ಮಾನ್ಯ ಮಂತ್ರಿಗಳೇ, ರೈಲಿನಲ್ಲಿ ಕುಳಿತು ಬರುತ್ತಿರುವ ಮರಿಯಪ್ಪ ಭಟ್ಟರೇ........")

ಆ ಸಭೆಯೊಂದು ಭಾವಗೀತ. ಮೊದಲು ಗಂಟಲು ಪ್ರತಿಭಟಿಸಿತು. ಬಳಿಕ ಉದ್ದಕ್ಕೂ ಕೋಗಿಲೆಗಳ ಹಾಡು.

ಮರಿಯಪ್ಪ ಭಟ್ಟರು ಇಲ್ಲದುದೇ ಒಳಿತಾಯಿತೇನೋ ಎನಿಸಿತು. ಹೊಗಳಿಸಿಕೊಳ್ಳುವ ವ್ಯಕ್ತಿ ಎದುರಿಗಿಲ್ಲದಾಗ ಬಣ್ಣನೆ ಎಲ್ಲಾ ಬಣ್ಣಗಳಿಂದ ಮೆರೆಯುತ್ತದೆ.

(ರೈಲುಗಾಡಿಯ ಸುಳಿವಿಲ್ಲ. ಮತ್ತೆ ಫೋನ್. 'ಎಂಟು ಘಂಟೆಗೆ ಮುಂಚೆ ಬಂದೇ ಬರುತ್ತದೆ.')

ಶಂಕರಗೌಡರು ಸಾಹಿತ್ಯದ ಮಾತನ್ನಾಡಿದರೆ ರಾಮಕೃಷ್ಣ ಹೆಗಡೆಯವರು ಸಂಸ್ಕೃತಿಯ ವ್ಯಾಖ್ಯೆಯನ್ನು ಪ್ರಸ್ತಾಪಿಸಿದರು. ("ಚಲಿಸುವ ರೈಲುಗಾಡಿಗೆ ಕೊಳ್ಳಿ ಇಡುವುದು ಯಾವ ಸಂಸ್ಕೃತಿ?")

"ಕನ್ನಡ ಸಂಸ್ಕೃತಿ" ಗ್ರಂಥದ ಬಿಡುಗಡೆಯಾಯಿತು. ಆ ಸಭೆ 'ಬಿರಿಯಿತು.'

* * * * *

ಎಂಟು ದಾಟಿತ್ತು. ನಾಟಕದ ಕೊನೆಯ ಅಂಕ: ನಗರದ ಕನ್ನಡ ಅಧ್ಯಾಪಕರು ಏರ್ಪಡಿಸಿದ್ದ ಭೋಜನ.

ನೆರೆದವರು ಅವನ್ನು ಏರ್ಪಡಿಸಿದ್ದ ಸ್ಥಳಕ್ಕೆ ತೆರಳುವ ಯೋಜನೆ ಮಾಡುತ್ತಿದ್ದಂತೆಯೇ, ಮರಿಯಪ್ಪ ಭಟ್ಟರು ಬಂದಿಳಿದರು. ಮೊದಲು ಆ ಸಂಸ್ಕೃತಿ ಸಂಪನ್ನ ಕೋರಿದ್ದು ಕ್ಷಮೆಯನ್ನು.

"ನೀವು ಇಲ್ಲದೆಯೇ ಸಮಾರಂಭ........"

ಅವರೆಂದರು:

"ಮದುವಣಿಗನಿಲ್ಲದೆ ವಿವಾಹ ನಡೆಸುವ ಪದ್ಧತಿಯೂ ನಮ್ಮ ನಾಡಿನಲ್ಲಿದೆ!"

* * * * *

ಭೋಜನಕೂಟದಲ್ಲಿ ಮದುವೆಯ ಮನೆಯ ಸಡಗರ. ಪ್ರಕಾಶನ ಮಂದಿರದ ಪ್ರಧಾನ ಸಂಚಾಲಕ ಪ. ಸು. ಭಟ್ಟರು ಆಚಾರ್ಯರಿಗೆ ಶಾಲು ಹೊದಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ವೆಂಕಟಸುಬ್ಬಯ್ಯನವರು ಹಾರ ಹಾಕಿದರು. ಇತರ ಸಂಘ ಸಂಸ್ಥೆಗಳಿಂದಲೂ ಮಾಲಾರ್ಪಣೆ ನಡೆಯಿತು.

ಮಹಾಪಂಡಿತನ ಸರಳತೆ ಸಜ್ಜನಿಕೆಗಳಿಗೆ ದೃಷ್ಟಾಂತವಾಗಿತ್ತು ಮರಿಯಪ್ಪ ಭಟ್ಟರ ಪುಟ್ಟ ಭಾಷಣ.

* * * *

ಸಿರಿವಂತಿಕೆಯನ್ನು ಕಳೆದುಕೊಂಡ ಮನೆತನದ ಬಡ ಹುಡುಗನಾಗಿ ವಿದ್ವತ್ತಿನ ಅಗರ್ಭ ಶ್ರೀಮಂತನಾದ ವ್ಯಕ್ತಿ– ೭೦ರ ಮರಿಯಪ್ಪ ಭಟ್ಟರು. ಕಲಿಯುವ ವಿದ್ಯಾರ್ಥಿಗಳ ಅಭಾವವಿದ್ದರೂ ಪ್ರಾಧ್ಯಾಪಕರಾಗಿ ಮದರಾಸು ವಿಶ್ವವಿದ್ಯಾನಿಲಯ ಭಟ್ಟರನ್ನು ಉಳಿಸಿಕೊಂಡಿರುವುದೇ ಅವರ ಹಿರಿಮೆಗೆ ನಿದರ್ಶನ.

ಬಹುಭಾಷಾವಿದರು. ಹಲವು ಅಮೂಲ್ಯ ಪ್ರಾಚೀನ ಕನ್ನಡ ಗ್ರಂಥಗಳನ್ನು ಸಂಪಾದಿಸಿದವರು. 'ಕನ್ನಡ ಸಾಹಿತ್ಯದ ಸಂಕ್ಷಿಪ್ತ ಇತಿಹಾಸ'ವನ್ನು ರಚಿಸಿದವರು. ಸಾಹಿತ್ಯಿಕ ದ್ರಾವಿಡ ಭಾಷೆಗಳ ಜ್ಞಾನಕೋಶ ಹಾಗೂ ಗಾದೆಗಳ ಕೋಶ; ತುಳು, ಹವ್ಯಕ ಕೋಶಗಳು; ಪರಿಷ್ಕೃತ ಕಿಟಲ್ ಕೋಶ; 'ಆನಲ್ಸ್ ಆಫ್ ಓರಿಯೆಂಟಲ್ ರಿಸರ್ಚ್' ಪತ್ರಿಕೆಯ ಪ್ರಧಾನ ಸಂಪಾದಕತ್ವ; ಅಖಿಲಭಾರತ ಪ್ರಾಚ್ಯ ಸಮ್ಮೇಳನದ ದ್ರಾವಿಡ ವಿಭಾಗದ ಅಧ್ಯಕ್ಷತೆ—ಹೀಗೆ ಇನ್ನೂ ಹಲವು. ಇವೆಲ್ಲ ಮರಿಯಪ್ಪ ಭಟ್ಟರ ಸಾಧನೆ ಸಿದ್ಧಿಗಳ ಇತಿಹಾಸವನ್ನು ಚಿತ್ರಿಸುತ್ತವೆ.

'ಕನ್ನಡ ಸಂಸ್ಕೃತಿ'ಯಲ್ಲಿ ಪ್ರೊ|| ಮರಿಯಪ್ಪ ಭಟ್ಟರನ್ನು ಕುರಿತು ದೇಜಗೌ ಬರೆದಿರುವ ಮನನೀಯ ಲೇಖನದಿಂದ ಈ ಮಾತುಗಳನ್ನು ಉದ್ಧರಿಸಬಹುದು:

"(ಇವರು) ಕನ್ನಡನಾಡಿನ ಹೊರಗಿದ್ದುಕೊಂಡು, ಬಿರುದು ಕೀರ್ತಿಗಳನ್ನು ಅಪೇಕ್ಷಿಸದೆ, ಎಲೆಮರೆಯ ಕಾಯಿಯಂತೆ, ನಿಷ್ಕಾಮಕರ್ಮಿಯಂತೆ ಕರ್ತವ್ಯಪರ ರಾಗಿ, ಕನ್ನಡ ಭಾಷೆಗೆ ಸಾಕಷ್ಟು ಸೇವೆ ಸಲ್ಲಿಸಿದ್ದಾರೆ.... ತಮ್ಮಲ್ಲಿ ಸಾಕಷ್ಟು ಕೆಚ್ಚಿಲ್ಲ ದಿದ್ದರೂ ಗುಂಪುಗುಳಿತನ, ಜಾತೀಯತೆಯ ಆಧಾರದ ಮೇಲೆ ಕೆಲವರು ಬಿರುದು ಬಾವಲಿಗಳನ್ನು, ಸತ್ಕಾರ ಸನ್ಮಾನಗಳನ್ನು, ಕೊನೆಗೆ ಸಾಹಿತ್ಯ ಸಮ್ಮೇಲನದ ಅಧ್ಯಕ್ಷ ಪದವಿಯನ್ನು ಗಿಟ್ಟಿಸಿಕೊಂಡಿದ್ದುಂಟು. ಆ ಅಧ್ಯಕ್ಷಪದವಿ ಇಂಥವರಿಗೆ ದೊರೆಯುತ್ತ ದೆಯೆ? ಬಾಲಬಡಕರಿಗೆ ದೊರೆತೀತು.... ಮುದ್ರೆ ಲಾಂಛನಗಳನ್ನು ಮುಂದೊಡ್ಡಿ ಕೊಂಡು, ಬರಗಾಲದಲ್ಲಿ ತಾನೊಬ್ಬನೇ ಶ್ರೀಮಂತ ಸಾಹಿತಿಯೆನಿಸಿಕೊಂಡು, ಪಾಂಡಿತ್ಯ ವಿನಾ ಅಹಂಕಾರದ ಆಹಾರದಿಂದ ಜೀವಿಸುತ್ತ, ತನ್ನ ಸಮರಿಲ್ಲವೆಂದು ಬೊಬ್ಬಿಡುತ್ತ, ಹಿಂಬಾಲಕರಿಂದ ಮೆರವಣಿಗೆ ಮಾಡಿಸಿಕೊಳ್ಳುತ್ತ, ಸಂಘ ಸಂಸ್ಥೆ ಗಳನ್ನು ನಿವೃತ್ತರಾದ ಮೇಲೂ ಲೂಟಿ ಹೊಡೆಯುವ ಪಿಂಜಾರಾಪೋಲ್ ಜಾತಿಗೆ ಸೇರಿದವರಲ್ಲ ಭಟ್ಟರು. ಕೊನೆಯ ತನಕ ದುಡಿದೇ ಬದುಕುತ್ತೇನೆಂಬ ಛಲ ಅವರದು."

—ಈ ಮಾತು ಕಟು ಸತ್ಯಕ್ಕೆ ಹಿಡಿದ ಕನ್ನಡಿ. ತಮ್ಮ ದುಡಿಮೆಯಲ್ಲಿ ಮೈ ಮರೆಯುವ ಮರಿಯಪ್ಪ ಭಟ್ಟರು ಗೌರವಗಳ ಗೊಡವೆಗೆ ಹೋಗದಿರಬಹುದು. ಆದರೆ ಅವರಿಂದ ಪಡೆದ ಋಣದ ಸಂದಾಯದ ಯೋಚನೆಯನ್ನು ನಾಡು ಮಾಡ ಬೇಕು.

೭–೧–೧೯೬೮

# ಅಸಾಮಾನ್ಯ ವ್ಯಕ್ತಿ ರಾಮಮೂರ್ತಿ

ಲೇಖನ ಕಲೆ ನೂರಾರು ಜನರ ಪಾಲಿಗೆ ಹವ್ಯಾಸ; ಹತ್ತಾರು ಜನರಿಗೆ ವ್ಯವಸಾಯ. ಲೇಖಕರೂ ಇತರರಂತೆಯೇ ವೃದ್ಧರಾಗುತ್ತಾರೆ, ಮುನ್ನೆಚ್ಚರಿಕೆ ನೀಡದೆ ಮೃತರಾಗುತ್ತಾರೆ. ಅವರವರ ಒಲುಮೆಗೆ ಅನುಗುಣವಾಗಿ ನಾಡು ಗುಣಗಾನ ಮಾಡುತ್ತದೆ. ನಿನ್ನೆಯ ಪ್ರವಾತದಲ್ಲಿ ಆ ಜನ ಮುಳುಗಿ ಹೋಗುತ್ತಾರೆ. ನಾಳೆಯ ಜಗತ್ತಿನಲ್ಲಿ, ಅಳಿದವರ ಪ್ರಸ್ತಾಪ ಬಂದರೂ ಬಂತು, ಬರದಿದ್ದರೂ ಆಶ್ಚರ್ಯವಿಲ್ಲ. ಸಾಹಿತ್ಯಲೋಕದಲ್ಲಿ ಎರಡನೆಯ ತರಗತಿಗೆ ಸೇರಿದವರೇ ಹೆಚ್ಚು ಜನ.

ನಿಧನ ಹೊಂದಿದವರನ್ನು ಕುರಿತ ವೇದನೆ ಒಮ್ಮೊಮ್ಮೆ ಅತೀವವಾಗುತ್ತದೆ. ಅದು ಯಾವನೇ ಪ್ರತಿಭಾಶಾಲಿ ಅಕಾಲ ಮರಣಕ್ಕೆ ತುತ್ತಾದಾಗ, ಅಥವಾ ಅಂಥವರಿಗೆ ದುರ್ಮರಣ ಪ್ರಾಪ್ತವಾದಾಗ.

ತ್ರಿವೇಣಿ ತಾಯ್ತನದ ಅಗ್ನಿಪರೀಕ್ಷೆಯಲ್ಲಿ ಬೆಂದು ಹೋದರು. ಒಂದು ದೃಷ್ಟಿಯಲ್ಲಿ ಅವರು ಅತ್ಯಂತ ಜನಪ್ರಿಯ ಕಾದಂಬರಿಗಾರ್ತಿ. ಸಹಸ್ರ ಸಹಸ್ರ ಓದುಗರ ಹೃದಯಗಳಲ್ಲಿ ಅವರು ಮನೆ ಮಾಡಿದ ಬಗೆ ಅಸಾಧಾರಣವಾದದ್ದು.

ಅದಾದ ಮೇಲೆ ಈಗ ರಾಮಮೂರ್ತಿ—

* * * * *

ಮ. ರಾಮಮೂರ್ತಿಯವರ ಸಾಹಿತ್ಯ ಸೃಷ್ಟಿಯ ಬಗೆಗೆ ಎರಡು ಅಭಿಪ್ರಾಯಗಳಿರಬಹುದು. ಎಲ್ಲರ ಬರವಣಿಗೆಯ ವಿಷಯದಲ್ಲೂ ಇದು ಇರುವಂಥದೇ. ಒಮ್ಮತವನ್ನು ನಾವು ಕಾಣುವುದು ಒಂದು ವಿಚಾರದಲ್ಲಿ ಮಾತ್ರ. ಅದು ನಾಡಿಗೂ ನುಡಿಗೂ ಅವರು ಸಲ್ಲಿಸಿರುವ ಸೇವೆ.

ಬದುಕಿನಲ್ಲೂ ಬರವಣಿಗೆಯಲ್ಲೂ ಹೊಸ ಪ್ರಯೋಗಗಳನ್ನು ನಡೆಸಿದ ನೂತನ ವಿಕ್ರಮಗಳನ್ನು ಸ್ಥಾಪಿಸಿದ ವ್ಯಕ್ತಿ ರಾಮಮೂರ್ತಿ.

ಸಮಾಜವಾದಿ ಮಿತ್ರರ ಪ್ರೇರಣೆಯಿಂದ ಆರಂಭವಾದ ಕನ್ನಡ ಚಳುವಳಿಗೆ ರೂಪು ರುಚಿಗಳನ್ನು ನೀಡಲು ರಾಮಮೂರ್ತಿ ಯತ್ನಿಸಿದರು. ಅವರ ಆಕರ್ಷಕ ವ್ಯಕ್ತಿತ್ವ ಹೊಸ ಪರಿಸ್ಥಿತಿಯ ಅಗತ್ಯಗಳನ್ನು ಪೂರೈಸಿತು. ಎತ್ತರದ ಸ್ಥೂಲಕಾಯ, ಕಚ್ಚಿದ ಸಿಗಾರು, ನೀಳ ಜುಬ್ಬ—ಕನ್ನಡಕ್ಕೆ ವಿನೂತನವಾಗಿದ್ದ ಚಳುವಳಿಯ ನಾಯಕತ್ವ ವಹಿಸಿದುವು.

‘ಶ್ರೀ’ಯವರು ಮೊದಲು ಮಾಡಿದ್ದ ಕನ್ನಡ ಪುನರುದಯದ ಚಳುವಳಿ ಈಗಿನದಕ್ಕಿಂತ ಭಿನ್ನವಾದದ್ದು. ಆಗ ಕಾವ್ಯೋದ್ಯಾನದಲ್ಲಿ ಕೋಗಿಲೆಗಳು ಹಾಡಿದುವು;

ಈಗಲೋ ಗಾಂಢೀವಗಳು ಠೇಂಕಾರ ನುಡಿಮವು. ಅಲ್ಲಿದ್ದುದು ಸಾಹಿತ್ಯವೊಂದೇ. ಇಲ್ಲಿನದು ಕನ್ನಡಿಗರ ಭಾಷೆ, ಚಲಚ್ಚಿತ್ರ, ಅನ್ನ ವಸತಿಗಳಿಗೆ ಸಂಬಂಧಿಸಿದ್ದು. ಡಿ. ಎಂ. ಕೆ. ಯೋ ಶಿವಸೇನೆಯೋ ಕನ್ನಡದಲ್ಲಿ ಹುಟ್ಟಲಿಲ್ಲ. ಪ್ರಾಯಶಃ ಅಂಥ ಬೆಳ ವಣಿಗೆ ಈ ನೆಲದ ಜಾಯಮಾನಕ್ಕೆ ಹೊಂದಿದ್ದಲ್ಲ. ಕನ್ನಡ ಚಳುವಳಿ ಮಹಾಪ್ರವಾಹ ವಾಗುವುದರ ಬದಲು ಶಾಖೋಪಶಾಖೆಗಳಾಗಿ ಹರಿಯಿತು. ಅದೇನಿದ್ದರೂ, ಹೊಸ ಜನಶಕ್ತಿಯ ದಿಗ್ಗಜವಾದರು ರಾಮಮೂರ್ತಿ.

ಅವರು ಕಾದಂಬರಿ ಬರೆದರು; ಪತ್ರಿಕೆ ನಡೆಸಿದರು; ಪಕ್ಷ ಕಟ್ಟಿದರು....

* * * * *

ಮ. ರಾಮಮೂರ್ತಿ ಸಾಹಿತ್ಯದ ಬಯಲಿನಲ್ಲೂ ಸರದಾರರಾಗಿಯೇ ಮೆರೆ ದವರು. ಅದೊಂದು ಒಂಟಿ ಕುದುರೆ ಸವಾರಿ. ಅವರ 'ಕಾಮಕಲಾ' ಪತ್ರಿಕೆ ಲೈಂಗಿಕ ವಿಷಯಗಳಿಗೆ ಸಂಬಂಧಿಸಿ ಹೊಸ ದಾರಿ ಹಿಡಿಯಲು ನಡೆದ ಯತ್ನ. ಪುಂಖಾನು ಪುಂಖವಾಗಿ ಬಂದ ಪತ್ತೇದಾರಿ ಕಾದಂಬರಿಗಳು, ಆ ಪ್ರಕಾರಕ್ಕೂ ಪ್ರವೃತ್ತಿಗೂ ಅಗ್ರಪೂಜೆ ದೊರಕಿಸಿಕೊಟ್ಟುವು. ಈ ಬಗೆಯ ಪರ ಸಾಹಿತ್ಯದ ನೆರಳಾಗಿ ಕನ್ನಡ ಕಂಡಿದ್ದರೆ, ಅದು ಅನಿವಾರ್ಯ ಘಟ್ಟ. ರಾಮಮೂರ್ತಿಯವರ ಸ್ವಂತಿಕೆಗೂ ಕಡಿಮೆ ಇರಲಿಲ್ಲ. ತೀರಾ ಸ್ವತಂತ್ರವಾದ ಅವರ ಒಂದೆರಡು ಪತ್ತೇದಾರಿ ಕಾದಂಬರಿಗಳು ವಿದೇಶೀ ಕೃತಿಗಳೊಡನೆ ಸಮಭುಜವಾಗಿ ವಿರಾಜಿಸಬಲ್ಲ ಸಾಮರ್ಥ್ಯವುಳ್ಳವು. ಸಾಲ ದುದಕ್ಕೆ, ರಾಮಮೂರ್ತಿ ಒಳ್ಳೆಯ ಸಾಮಾಜಿಕ ಐತಿಹಾಸಿಕ ಕಾದಂಬರಿಗಳನ್ನೂ ಬರೆದರು.

ಹಾಗೆ ನೋಡಿದರೆ ಈ ಕಥನ ಕಲೆ ರಾಮಮೂರ್ತಿಯವರಿಗೆ ಬಳುವಳಿಯಾಗಿ ದೊರೆತದ್ದು. ವೀರಕೇಸರಿ ಸೀತಾರಾಮಶಾಸ್ತ್ರಿಗಳು ಅವರ ಕಾಲದ ಸಿಂಹಗರ್ಜನೆಯ ಪತ್ರಿಕೋದ್ಯಮಿ. ಲೇಖನಿಯಂತೂ 'ದೌಲತ್'ನಂತಹ ಕೃತಿಗಳನ್ನು ನಾಡಿಗಿತ್ತ ಮೇಲ್ಮೆ ಉಳ್ಳದ್ದು. ಅಂಥವರ ಪುತ್ರ ರಾಮಮೂರ್ತಿ. ಬಾಲ್ಯದಲ್ಲೇ ಶಾಲೆಗೆ ಶರಣು ಹೊಡೆದು ಸ್ವಾತಂತ್ರ್ಯ ಸೇನೆಯ ವಾನರರಾಗಿ, ಸಮಾಜದ ಸುವರ್ಣ ಚೌಕ ಟ್ಟನ್ನು ಕಿಚ್ಚಿನ ಹೊಗೆಯಿಂದ ಮುಸುಕಿದ ಮಹಾನುಭಾವ.

* * * * *

ಬರಹಗಾರ ಇದಿರಿಸಬೇಕಾದದ್ದು ಅನಿಶ್ಚಯತೆಯ ಅಭದ್ರತೆಯ ನಿತ್ಯ ಕಂಪನ ವನ್ನು. ಅಂಥದರಲ್ಲೂ ಸ್ಥಿರ ಸಂಪಾದನೆಯ ಒಂದು ಪ್ರಯತ್ನವನ್ನು ರಾಮಮೂರ್ತಿ ಮಾಡಿದರು. ಕನಕಪುರ ರಸ್ತೆಯಲ್ಲಿ ಬೆಂಗಳೂರು ನಗರದಿಂದ ಹತ್ತು ಮೈಲುಗಳಾಚೆ ಒಂದು ತೋಟವನ್ನು ಅಣಿಗೊಳಿಸಲು ಅವರು ಉದ್ಯುಕ್ತರಾದರು.

(ತರಕಾರಿ, ಹಣ್ಣು ಹಂಪಲು, ಗಿಡಮರಗಳ ತೋಟ. ನಡುವೆ ಗುಡಿಸಲು. ಸಿಗಾರು ಸುಡುತ್ತ ಕಥಾಸೃಷ್ಟಿಯಲ್ಲಿ ನಿರತನಾಗುವ ಲೇಖಕ....)

ತೋಟಕ್ಕೆ ನೀರು ಬೇಕು. ಬಾವಿ ತೋಡುವ ಕೆಲಸ ಆರಂಭವಾಯಿತು. ಮೊನ್ನೆ ಕ್ರಿಸ್‌ಮಸ್ ದಿನ ಸಂಜೆ ರಾಮಮೂರ್ತಿ ತಮ್ಮ ಇಬ್ಬರು ಮಕ್ಕಳೊಡನೆ ತೋಟಕ್ಕೆ ಹೋದರು. ನೀರು ಒಸರುತ್ತಿದೆ ಎಂಬ ಸುದ್ದಿ ಬಂತು. ಅದನ್ನು ನೋಡಲು ಮಕ್ಕಳೊಡನೆ ಬಾವಿಯೊಳಕ್ಕೆ ಇಳಿದರು. ಇಬ್ಬರು ಆಳುಗಳು ಜೊತೆ. ನೆಲದ ಒಳಗಿನಿಂದ ಸಾವು ಹೊರಕ್ಕೆ ಧುಮುಕಿ ಹಸಿ ಮಣ್ಣಾಯಿತು. ಅಸಹಾಯರಾಗಿದ್ದ ಐವರನ್ನೂ ಆಹುತಿ ಪಡೆಯಿತು.

ಅನಂತರದ್ದು ವಾರ್ತಾ ಸಾಹಿತ್ಯಕ್ಕೆ ಸಂಬಂಧಿಸಿದ ಅಧ್ಯಾಯ. ಅದರ ವಸ್ತು: ಕನ್ನಡದ ಕಲಿಯೊಬ್ಬನ ದುರ್ಮರಣ. ಐವತ್ತರ ರಾಮಮೂರ್ತಿ ಬದುಕು ಸಾಗಿದ ರೀತಿ ಅಸಾಮಾನ್ಯವಾದದ್ದು; ಅಷ್ಟೇ ಅಸಾಮಾನ್ಯವಾದದ್ದು ಆ ಜೀವನ ಕೊನೆಗಂಡ ವಿಧಾನ. ಸಹಸ್ರಾರು ಜನ ಮಿಡಿದ ಒಂದು ಹನಿ ಕಣ್ಣೀರು ಆತ ಗಳಿಸಿದ ಮಹಾ ಸಂಪತ್ತು.

೧೪–೧–೧೯೬೪

# ಒಂಟಿ ಪಯಣದ ಕೊನೆ

---

ದಿನಗಳು ಕಳೆದರೂ ಸ್ಟೀನ್‌ಬೆಕ್ಕನ ನೆನಪು ಕಾಡುತ್ತದೆ........

ಎಲ್ಲ ಕಾಲಗಳ ಸಾಹಿತ್ಯಕೃತಿಯಾಗಿ ಉಳಿಯುವ ಹಿರಿಮೆಯುಳ್ಳ 'ದಿ ಗ್ರೇಪ್ಸ್ ಆಫ್ ರಾತ್' ಕಾದಂಬರಿಯಲ್ಲಿ ತಾತ ಜೋಡ್‌ನ ಗೋರಿಯ ಬಳಿ ಧರ್ಮಗುರು ಹೇಳುತ್ತಾನೆ:

"ಅವನು ಬದುಕಿದ್ದ, ಅದೀಗ ಮುಖ್ಯ. ಈಗ ಆತ ಸತ್ತಿದ್ದಾನೆ, ಅದು ಮುಖ್ಯವಲ್ಲ. ಒಮ್ಮೆ ಒಬ್ಬಾತ ಹಾಡೋದನ್ನ ಕೇಳಿದ್ದೆ. ಆತ ಅನ್ನುತ್ತಾ ಇದ್ದ: ಜೀವಿಸಿರುವುದೆಲ್ಲಾ ಪವಿತ್ರ."

ಈ ಮಾತುಗಳ ಮಥಿತಾರ್ಥವೇನೇ ಇರಲಿ, ಮೊದಲ ನಾಲ್ಕು ಪದಗಳು ಪುಟಿದೆದ್ದು ಕಾಣುತ್ತವೆ.

"ಅವನು ಬದುಕಿದ್ದ, ಅದೀಗ ಮುಖ್ಯ."

ತಾತ ಜೋಡ್‌ನಿಗೆ ಮಾತ್ರವಲ್ಲ, ಆತನನ್ನು ಸೃಷ್ಟಿಸಿದ ಸ್ಟೀನ್‌ಬೆಕ್ಕನಿಗೂ ಅನ್ವಯಿಸುವ ಮಾತು ಇದು.

* * * * *

ನಿರ್ದಿಷ್ಟ ಕಾಲಘಟ್ಟವೊಂದರಲ್ಲಿ, ಒಂದು ಬೃಹತ್ ದೇಶದಲ್ಲಿ, ಆಗಿನ ಯುಗ ಧರ್ಮವನ್ನು ಪ್ರತಿಬಿಂಬಿಸಿದ ಮಹಾ ಸಾಹಿತಿ ಸ್ಟೀನ್‌ಬೆಕ್.

೧೯೩೦ ರಲ್ಲಿ ಅಮೆರಿಕದಲ್ಲಿ ಈಗಿನಂತೆ ಸಿರಿವಂತಿಕೆ ಹೆಪ್ಪುಗಟ್ಟಿರಲಿಲ್ಲ. ಆರ್ಥಿಕ ಬಿಕ್ಕಟ್ಟಿನಿಂದ ಬದುಕು ಕಹಿಯಾಗಿತ್ತು. ಹೊಸ ದಿಗಂತದ ಎಲ್ಲ ಕನಸುಗಳನ್ನೂ ಮುಸುಕಿಬಿಟ್ಟಿತ್ತು ಮುಗ್ಗಟ್ಟಿನ ಕರಿ ಮೋಡ. ಆಗ ಸಾಹಿತ್ಯ ಮಾಡಿದ ದೊಡ್ಡ ಕೆಲಸವೆಂದರೆ, ಮಾನವನ ಬದುಕಿಗೂ ಹೋರಾಟಕ್ಕೂ ಅರ್ಥ ಕಲ್ಪಿಸಿದ್ದು; ಜನತೆಯ ವೈಚಾರಿಕ ತುಮುಲಗಳಿಗೆ ಕನ್ನಡಿ ಹಿಡಿದದ್ದು; ಶ್ರೀಸಾಮಾನ್ಯನ ಆಶೋತ್ತರಗಳಿಗೆ ವಾಣಿಯಾದದ್ದು. ಅದು ಅಪ್ಟನ್ ಸಿಂಕ್ಲೇರ್, ಸಿಂಕ್ಲೇರ್ ಲೂಯಿಸ್, ಡಾಸ್ ಪಾಸೊಸ್, ಅರ್ನೆಸ್ಟ್ ಹೆಮಿಂಗ್‌ವೇ ಪಂಥ. ಆ ಶಿಬಿರದ ಒಬ್ಬ ದಿಗ್ಗಜ ಜಾನ್ ಸ್ಟೀನ್‌ಬೆಕ್.

ಮುಂದೆ ಕಾಲ ಬದಲಾದಾಗ ಆ ಜಾತಿಯವರನ್ನು ಅಮೆರಿಕದಲ್ಲಿ ಜರೆದರು. ಕೆಂಪು, ನಸುಗೆಂಪು, ಕಡುಗೆಂಪು–ಎಂದು ಬಣ್ಣಿಸಿದರು. ಅವರು ಸೃಷ್ಟಿಸಿದ್ದು ಸಾಹಿತ್ಯವೇ ಅಲ್ಲ ಎನ್ನುವತನಕವೂ ಹೋದರು.

ಸಾಹಿತ್ಯದ ಒಂದು ಪೀಳಿಗೆ ಹಿಂದಿನ ಪೀಳಿಗೆಯವರನ್ನು ಹೀಗೆ ನಿಂದಿಸುವುದು ಒಂದು ಬಗೆಯ ಕಲಾತ್ಮಕ ಕ್ರೌರ್ಯ. ಹೀಗೆ ಹಿಂಸಿಸುವ ಜನರಿಗೆ ತಮ್ಮನ್ನು ಕುರಿತು ತೀರ್ಪು ಕೊಡುವ ಪೀಳಿಗೆ ನಾಳೆ ಬರುತ್ತದೆ ಎಂಬ ಕಲ್ಪನೆಯೇ ಇಲ್ಲ.

*　　　*　　　*　　　*　　　*

ಸ್ಟೀನ್‌ಬೆಕ್ ಶ್ರೇಷ್ಠ ಸಾಹಿತಿಯಾದ ರೀತಿಯನ್ನು ಗುರುತಿಸುವುದು ಬಲು ಸುಲಭ. ಅದು ಪ್ರಾಯಶಃ ಎಲ್ಲ ಕಾಲಗಳ ಎಲ್ಲ ದೇಶಗಳ ಬಹ್ವಂಶ ಬರಹಗಾರರಿಗೂ ಅನ್ವಯವಾಗುವ ವೈಖರಿ. ನಿನ್ನೆಯವರಿಗೂ ಅಷ್ಟೆ, ಇಂದು ನಾಳೆಯವರಿಗೂ ಅಷ್ಟೆ.

ಬಡತನದ ಬಾಲ್ಯ. ತೃಪ್ತಿಕರವಲ್ಲದ ಶಿಕ್ಷಣ. (ತನ್ನ ಹದಿನೆಂಟನೆಯ ವಯಸ್ಸಿನಲ್ಲಿ ಸ್ಟೀನ್‌ಬೆಕ್ ಪ್ರೌಢ ಶಿಕ್ಷಣಕ್ಕಾಗಿ ಸ್ಟ್ಯಾನ್‌ಫರ್ಡ್ ಸೇರಿದ. ತರಗತಿಗೆ ಹೋದರೆ ಹೋದ, ಇಲ್ಲದಿದ್ದರೆ ಇಲ್ಲ. ಐದು ವರ್ಷ ಹೀಗೆಯೇ ಕಳೆಯಿತು. ಪದವಿ ದೊರೆಯಲಿಲ್ಲ.) ನ್ಯೂಯಾರ್ಕ್ ನಗರದಲ್ಲಿ ಪತ್ರಿಕೋದ್ಯೋಗಿಯಾದ. ಆದರೆ 'ನಿರ್ವಿಕಾರವಾಗಿ', 'ನಿಷ್ಪಕ್ಷಪಾತಿಯಾಗಿ' ವರದಿಗಳನ್ನು ಬರೆಯುವುದು ಆತನಿಂದಾಗಲಿಲ್ಲ. ಮುಂದೆ ನ್ಯೂಯಾರ್ಕ್ ನಗರದಲ್ಲೂ ಕ್ಯಾಲಿಫೋರ್ನಿಯಾದಲ್ಲೂ ನಾನಾ ಬಗೆಗಳ ದುಡಿಮೆ. ಒಂದು ವಸತಿ ಗೃಹದ ಮೇಲ್ವಿಚಾರಕನಾಗಿದ್ದ ವೇಳೆಯಲ್ಲಿ ತನ್ನ ಪ್ರಥಮ ಕಾದಂಬರಿಯನ್ನು—ಕಪ್ ಆಫ್ ಗೋಲ್ಡ್—ಬರೆದು ಮುಗಿಸಿದ. ೧೯೨೯ ರಲ್ಲಿ ಅದು ಪ್ರಕಟವಾಗಿ ಬರೆದವನಿಗೆ ಹೆಸರು ತಂದಿತು. ಅನಂತರ ಕಾದಂಬರಿಗಳು ಒಂದೊಂದಾಗಿ ಬಂದುವು. ೧೯೩೫ ರಲ್ಲಿ ಟೋರಿಲ್ಲಾ ಫ್ಲಾಟ್ ಅತ್ಯಂತ ಜನಪ್ರಿಯವಾಯಿತು. ಶಕ್ತಿ ಹಾಗೂ ದೌರ್ಬಲ್ಯಗಳನ್ನು ಕುರಿತ ಆಫ್ ಮೈಸ್ ಅಂಡ್ ಮೆನ್ ಅವನ ಕಲಾವಂತಿಕೆಯನ್ನು ಇನ್ನೂ ಮೇಲಣ ಎತ್ತರಕ್ಕೆ ಒಯ್ದಿತು. ಅಳಿವಿಲ್ಲದ ಕೀರ್ತಿಯನ್ನು ತಂದುಕೊಟ್ಟ ದಿ ಗ್ರೇಪ್ಸ್ ಆಫ್ ರಾತ್ ೧೯೩೯ರಲ್ಲಿ ಪ್ರಕಟವಾಯಿತು. ಅದು ಆತನ ಎಂಟನೆಯ ಕಾದಂಬರಿ.

ಅನಂತರವೂ ಎಂಟು ಕಾದಂಬರಿಗಳನ್ನು ಸ್ಟೀನ್‌ಬೆಕ್ ಬರೆದ. ಹಲವು ಕಥೆಗಳನ್ನು ಸೃಷ್ಟಿಸಿದ. ಹಲವಾರು ಲೇಖನಗಳನ್ನು ಪತ್ರಿಕೆಗಳಿಗೆ ನೀಡಿದ.

*　　　*　　　*　　　*　　　*

ಯುದ್ಧಾನಂತರ ರೂಪಗೊಂಡದ್ದು ಬೇರೆಯೇ ಅಮೆರಿಕ. ಹೊಸ ಪೀಳಿಗೆಯ ಬರಹಗಾರರು ರಚಿಸಿದ್ದು ಬೇರೆಯೇ ಬಗೆಯ ಸಾಹಿತ್ಯವನ್ನು. ಆ ವೇಳೆಗೆ ಸ್ಟೀನ್‌ಬೆಕ್ 'ಹಿರಿಯ ಸಾಹಿತಿ.' ಹಲವರ ದೃಷ್ಟಿಯಲ್ಲಿ ಹಿರಿಯ ಎಂಬ ಪದಕ್ಕೆ ನಿರುಪಯುಕ್ತ ಎಂಬ ಅರ್ಥವೂ ಇದೆ!

೧೯೬೨ ರಲ್ಲಿ ಸ್ಟೀನ್‌ಬೆಕ್‌ಗೆ ನೊಬೆಲ್ ಸಾಹಿತ್ಯ ಪಾರಿತೋಷಕ ಬಂತು. ಆತ ಅದನ್ನು ಪಡೆದ ಆರನೆಯ ಅಮೆರಿಕನ್ ಸಾಹಿತಿ. (ಇತರ ಐವರು : ಸಿಂಕ್ಲೇರ್ ಲೂಯಿಸ್, ಪರ್ಲ್‌ಬಕ್, ವಿಲ್ಲಿಯಂ ಫಾಕ್ನರ್, ಯೂಜಿನ್ ಒನೀಲ್ ಮತ್ತು ಅರ್ನೆಸ್ಟ್ ಹೆಮಿಂಗ್‌ವೇ.)

ಪಾರಿತೋಷಕ ಸ್ಟೀನ್‌ಬೆಕ್‌ಗೆ ಬಂತೆಂದು ಪರಿಹಾಸ್ಯ ಮಾಡಿದವರು ಬಹಳ ಜನ. ಅದೊಂದು ಬಗೆಯ ತೇಜೋವಧೆಯ ಯತ್ನ, ಅನ್ಯಾಯದ ಟೀಕೆ.

ಸ್ಟೀನ್‌ಬೆಕ್ಕನ್ನು ಒಬ್ಬ ಪತ್ರಿಕಾಬಾಂಧವ ಕೇಳಿಯೇಬಿಟ್ಟ :

"ಈ ಗೌರವಕ್ಕೆ ನೀವು ಅರ್ಹರೆಂದು ಭಾವಿಸ್ತೀರಾ ?"

ಸ್ಟೀನ್‌ಬೆಕ್ ಇತ್ತ ಉತ್ತರ :

"ಖಂಡಿತ ಇಲ್ಲ."

ಆ ಉತ್ತರದ ಹಿಂದಿನ ಯಾತನೆಯನ್ನು ಊಹಿಸಿಕೊಳ್ಳಬೇಕು.

*　　*　　*　　*　　*

ಮನುಷ್ಯ ನೆಲದ ಸಂತಾನ, ಸಮಾಜಕ್ಕೂ ಆತನಿಗೂ ಸಂಬಂಧವಿದೆ–ಎಂಬುದು ಸ್ಟೀನ್‌ಬೆಕ್ಕನ ಗಾಢ ನಂಬುಗೆಯಾಗಿತ್ತು. ತನ್ನ ಜನದ 'ಮನೆ'ಯನ್ನು ಅರಸುತ್ತ ಹೋದ ವ್ಯಕ್ತಿ ಆತ.

ಬದುಕನ್ನು ಸಮಗ್ರ ದೃಷ್ಟಿಯಿಂದ ಅವನು ನೋಡಿದ. 'ಕೌಟುಂಬಿಕ ವಿಧೇಯತೆ, ನೆರೆಹೊರೆಯವರಲ್ಲಿ ವಿಶ್ವಾಸ, ತಾಯ್ನೆಲ–ಹೊಲದ ಬಗೆಗೆ ನಿಷ್ಠೆ'–ಇವು ಸ್ಟೀನ್‌ಬೆಕ್ಕನ ಕೃತಿಗಳ ಬೀಜಮಂತ್ರಗಳಾಗಿದ್ದುವು. ಜೀವನದಲ್ಲೂ ಸಾಹಿತ್ಯದಲ್ಲೂ ಅನೇಕದಲ್ಲಿ ಮೂರನೆಯ ದಶಕದಲ್ಲಿ ಬರಿಯ ಆಕ್ರೋಶಗಳು ಹೇರಳವಾಗಿ ಕೇಳಿ ಬಂದಾಗ, ಅಸಹನೆ ತಾಂಡವವಾಡುತ್ತಿದ್ದಾಗ, ಸ್ಟೀನ್‌ಬೆಕ್ ಸಾಹಿತ್ಯ ತನ್ನ ವಿಶಿಷ್ಟ ಸ್ವಾಸ್ಥ್ಯದಿಂದ ಬೆಳಗಿತು. 'ಮಕ್ಕಳು, ಮನೆ, ತಾಯಿ, ಎಳೆಯ ಪ್ರೇಮ'–ತಂಗಾಳಿಯಂತೆ ವಾತಾವರಣವನ್ನು ತುಂಬಿದುವು.

*　　*　　*　　*　　*

ಸ್ಟೀನ್‌ಬೆಕ್ ಮೊನ್ನೆ ಸತ್ತಾಗ ಅವನಿಗೆ ವಯಸ್ಸು ಅರುವತ್ತೆಂಟು. ಹೃದ್ರೋಗದಿಂದ ಬಳಲಿ ಆತ ಕೊನೆಯ ಉಸಿರೆಳೆದ. 'ಆತ ಸತ್ತಿದ್ದಾನೆ, ಅದು ಮುಖ್ಯವಲ್ಲ' ಎನ್ನೋಣವೆ? ಅದು ಕೃತಘ್ನತೆಯಾದೀತು. ಲೋಕ ಸಾಹಿತ್ಯಕ್ಕೆ ಆತ ನೀಡಿದ ಕಾಣ್ಕೆ ಅಲ್ಪವೆ? ಕಡಮೆ ಬೆಲೆಯದೆ ಆ ಬಳುವಳಿ?

ವೃದ್ಧ ಸ್ಟೀನ್‌ಬೆಕ್ ಒಂದು ವರ್ಷದ ಹಿಂದೆ ವಿಯೆಟ್ನಾಮ್‌ಗೆ ಹೋಗಿ ತಾನು ಕಂಡುದನ್ನು ಕುರಿತು ಪತ್ರ ಸಾಹಿತ್ಯ ರಚಿಸಿದ. ತನ್ನ ಹೊರೆಯನ್ನು ಭುಜಕ್ಕೇರಿಸಿ ಒಂಟಿಯಾಗಿ ನಡೆದ ಪಯಣಿಗ ಆತ.

ಅದೇ ಕೊನೆಯ ಪ್ರಯಾಣವಾಯಿತು.

೨೧–೧–೧೯೬೮

# ಬಡತನ ತಂದ ಅಕ್ಷಯ ಸಂಪತ್ತು

"ಯಾರು ಈ ಮುದ್ದಣ ?"

—ಎಂದು ಬಾಳ ಠಕರೆ ಕೇಳಿರಬಹುದು.

ಅವರ ಚಿತ್ರಗುಪ್ತರು ವರದಿ ಮಾಡಿರಬಹುದು :

"ಅವನೊಬ್ಬ ಕನ್ನಡದ ಕವಿ. ಜಯಂತಿ ಆಚರಿಸುತ್ತಾರಂತೆ."

ಈಗಿನ ವಾತಾವರಣವೇ ಮತ್ತಷ್ಟು ಘನೀಭವಿಸಿ ಹೆಪ್ಪುಗಟ್ಟಿದರೆ, ಇನ್ನು ಕೆಲವೇ ವರ್ಷಗಳಲ್ಲಿ ಮುಂಬಯಿ ನಗರದಲ್ಲಿ ಮುದ್ದಣ ಜಯಂತಿಯ ಆಚರಣೆಗೆ ಲೈಸೆನ್ಸ್ ಪಡೆಯಬೇಕಾದೀತು ; ಮತ್ತೂ ಕೆಲ ವರ್ಷಗಳ ಬಳಿಕ ಅಂತಹ ಚಟುವಟಿಕೆ ಕಾನೂನ ಬಾಹಿರವೂ ಆದೀತು !

ನಾಳೆಯ ಕತೆ ಏನೇ ಆಗಲಿ ; ಇಂದಿನದು ತೀರಾ ಚಿಂತಾಜನಕವಲ್ಲ.

ಕಳೆದ ಕೆಲ ವರ್ಷಗಳಿಂದ ಮುದ್ದಣ ಜಯಂತಿಯನ್ನು ಮುಂಬಯಿಯಲ್ಲಿ ಆಚರಿಸುತ್ತ ಬಂದಿರುವ ಕನ್ನಡ ಮಿತ್ರರು ಈ ಸಲವೂ ಆ ಕಾರ್ಯಕ್ರಮವನ್ನು ಏರ್ಪಡಿಸಿದ್ದರು.

ಅದರ ಅಧ್ಯಕ್ಷತೆ ವಹಿಸಿದ್ದವರು, ಗ್ರಾಮೋದ್ಯೋಗ ಅಧಿಕಾರಿಯಾಗಿ ಮುಂಬಯಿಯಲ್ಲಿರುವ ಕನ್ನಡ ಕವಿ ವಿ. ಜಿ. ಭಟ್ಟರು.

* * * * *

ಆ ಸಮಾರಂಭದ ಬಗೆಗಿನ ಒಂದು ವರದಿ ಸಾಕಷ್ಟು ಕೌತುಕಪೂರ್ಣವಾಗಿದೆ. 'ವಿ. ಜಿ.' ಅಧ್ಯಕ್ಷರಾದುದೇ ಕೌತುಕಕ್ಕೆ ಮೂಲ. ಸತ್ಯದ ಜುಟ್ಟಿಗೆ ಕೈಹಾಕಿದಂತಿತ್ತು ಅವರ ಭಾಷಣ.

ಆ ದಿನದ ಮುಖ್ಯ ಉಪನ್ಯಾಸವನ್ನು ನೀಡಿದವರು ಪ್ರಾಧ್ಯಾಪಕಿ ಸುನೀತಾ ಶೆಟ್ಟಿಯವರು. ಅವರು ಮುದ್ದಣನ ಪದ ಸಂಪತ್ತಿ, ಪದ ಮೈತ್ರಿ, ಕಥನ ಕಲೆ, ಕಿರಿದರಲ್ಲಿ ಹಿರಿದರ್ಥವನ್ನು ಹೇಳುವ ಕೌಶಲ–ಇವುಗಳನ್ನು ಸೋದಾಹರಣವಾಗಿ ಎತ್ತಿ ಹೇಳಿದರು. "ಅವನ ಹಿರಿಮೆಯ ಪ್ರತೀಕಗಳಾದ ರಾಮಾಶ್ವಮೇಧದ ಸಂವಾದಗಳು, ಪತಿಪತ್ನಿಯರೊಳಗಣ ಸರಸ ಸಂಭಾಷಣೆ, ಮನೋರಮೆಯನ್ನು ಹೇಚಿನಲ್ಲಿ ಕೆಡಹುವ ರತಿವರ್ಣನೆ, ಭವತಿ ಭಿಕ್ಷಾಂದೇಹಿ ಪ್ರಸಂಗ–ಇವು ಕನ್ನಡ ಸಾಹಿತ್ಯದಲ್ಲಿ ಮೈಲುಗಲ್ಲುಗಳಾಗಿ ನಿಂತಿವೆ. ಇಂಥ ಕವಿ ನಮ್ಮವನೆಂಬುದು ನಮಗೊಂದು ಹೆಮ್ಮೆ. ಆದರೆ ಅವನ ಬಡತನದ ದಾರುಣ ಚಿತ್ರವನ್ನು ನೆನೆಯುವಾಗ ಇನ್ನೊಬ್ಬ ಕವಿ ದಿವಂಗತ ಕಾರ್ನಾಡ್ ರಾಮಕೃಷ್ಣ ಶೆಟ್ಟರು ಹಾಡಿದ 'ಕಾಡಾಡಿಯಾಗಿ ಅಲೆದರೂ ಕನ್ನಡದ ಕವಿಯಾಗಿ ಹುಟ್ಟಬೇಡ' ಎಂಬ ಸಾಲುಗಳು ನೆನಪಾಗುತ್ತವೆ," ಎಂದರು.

* * * * *

ಸಾಹಿತ್ಯ ಸಭೆ ಸಮಾರಂಭಗಳೆಂದರೆ ಹರದಾರಿ ದೂರವಿರುವ ವ್ಯಕ್ತಿ ವಿ. ಜಿ. ಭಟ್ಟರು. ಕನ್ನಡದಲ್ಲಿ ಅಪೂರ್ವವಾದ ಕವಿಚೇತನ ಅವರದು. ಅಧ್ಯಕ್ಷನಾಗಲು ಒಪ್ಪಿದ ತಪ್ಪಿಗೆ ಏನು ಭಾಷಣವೀಯಲಿ, ಎಂದು ಅವರು ಯೋಚನೆಗೊಳಗಾಗಿರಬೇಕು.

ಮುಖ್ಯ ಉಪನ್ಯಾಸವನ್ನು ನೀಡಿದವರ ಕೊನೆಯ ಮಾತು ಅವರ ಯೋಚನೆಯ ನಿದ್ರೆಗೆ ಭಂಗ ತಂದಿರಬೇಕು.

ಅವರೆಂದರು :

"ಮುದ್ದಣನ ಬಡತನ ನಮ್ಮ ಮನಸ್ಸಿನ ಉದ್ವೇಗವನ್ನು ಹೆಚ್ಚಿಸುವ ಕಾರಣವೇನೂ ನನಗೆ ಕಾಣಿಸುವುದಿಲ್ಲ. ಅವನ ಕಾವ್ಯ ಪ್ರತಿಭೆ ಅವನ ಬಡತನದಿಂದಾಗಿ ಹೆಚ್ಚಿತೇ ವಿನಹ ಕುಗ್ಗಲಿಲ್ಲ. ಹಣಕ್ಕಾಗಿ ಕಾವ್ಯ ರಚಿಸುವ ಕಾಲ ಅದಲ್ಲ. ಮುದ್ದಣ ಶ್ರೀಮಂತಿಕೆಯನ್ನು ಆದರ್ಶವಾಗಿ ಇಟ್ಟುಕೊಳ್ಳದ್ದರಿಂದಲೇ ಇಂದು ನಮ್ಮಿಂದ ಪೂಜೆಗೊಳ್ಳುತ್ತಿದ್ದಾನೆ. ಎಲ್ಲ ಕವಿಗಳ ಪಾಡೂ ಸಾಧಾರಣವಾಗಿ ಇಂಥಾದ್ದೇ! ಆತ ಜೀವಿಸಿರುತ್ತಿದ್ದರೆ ಇನ್ನೂ ಎಷ್ಟೋ ಕಾವ್ಯಗಳನ್ನು ಆತನಿಂದ ನಾವು ಪಡೆಯುತ್ತಿದ್ದೆವೆಂಬುದನ್ನು ನೆನೆದು ವಿಷಾದಿಸೋಣ. ಬಡತನಕ್ಕೆ ಮರುಗಿ 'ಕನ್ನಡದ ಕವಿಯಾಗಿ ಹುಟ್ಟಬೇಡ' ಎಂದು ಯಾರಾದರೂ ಹಾಡಿದರೆ ಅದಕ್ಕೆ ಅರ್ಥವಿಲ್ಲ. ಮುದ್ದಣನ ವೈಶಿಷ್ಟ್ಯ ಇರುವುದು ಎಲ್ಲಿ ಎಂದು ತಿಳಿದುಕೊಂಡು ಸಂತೋಷಪಡೋಣ........... ಇಂಥ ಕವಿಗಳು ಇನ್ನೂ ಹೆಚ್ಚಾಗಿ ಕನ್ನಡದಲ್ಲಿ ಹುಟ್ಟಲಿ ಎಂಬುದೇ ಇಂಥ ಜಯಂತಿಗಳನ್ನು ಏರ್ಪಡಿಸುವ ನಮ್ಮ ಆಶಯವಾಗಿರಲಿ."

* * * * *

ಮುದ್ದಣನ ಬಡತನ ಕನ್ನಡ ಕಾವ್ಯ ಪ್ರಪಂಚಕ್ಕೆ ಅಕ್ಷಯ ಸಂಪತ್ತು ತಂದಿತು. ಅಲ್ಲ, ಎನ್ನುವರುಂಟೆ? ಸಂವೇದನೆ ಸಂಘರ್ಷಗಳಿಗೆ ತುತ್ತಾದವನಿಂದಲೇ ಶ್ರೇಷ್ಠ ಸಾಹಿತ್ಯ ನಿರ್ಮಿತಿ ಸಾಧ್ಯ. ಪ್ರತಿಭೆಯ ಶ್ರೀಮಂತಿಕೆಯೂ ಹೊಟ್ಟೆ ಬಟ್ಟೆಯ ಬಡತನವೂ ಅಪೂರ್ವ ಜೋಡಿ. ಮೊದಲಿನದನ್ನು ಸದಾ ಕಾಲ ಕೊತ ಕೊತ ಕುದಿಸುವ ಇಂಧನ ಎರಡನೆಯದು. ಪರಿಣಾಮ : ಲೋಕ ಉಂಡು ಮೆಚ್ಚುವ ರಸಪಾಕದ ಸೃಷ್ಟಿ.

ವಿ. ಜಿ. ಒಂದು ಸೂಜಿಮೊನೆ ಮಾತನ್ನು ಆಡಿದರು : 'ಹಣಕ್ಕಾಗಿ ಕಾವ್ಯ ರಚಿಸುವ ಕಾಲ ಅದಲ್ಲ.' ಇದು? ಈಗಿನದು? ಸರಕಾರ ನೀಡುವ ಪಾರಿತೋಷಕಗಳಿಗೆ, ಪ್ರಶಸ್ತಿಗಳಿಗೆ, ಹಣಕ್ಕೆ ಮಹತ್ವ ನೀಡುವವರನ್ನು ಕಂಡಾಗ, ತಾನಾಗಿ ಬರಬೇಕಾದ ಕೀರ್ತಿಯನ್ನು ತಾವಾಗಿ ಅಟ್ಟಿಸಿಕೊಂಡು ಹೋಗಿ ಓಲೈಸಲು ಯತ್ನಿಸುವವರನ್ನು ನೋಡಿದಾಗ, ನಮ್ಮ ಕವಿಗಳ ಬಗೆಗೆ ಕನಿಕರವೆನಿಸದೆ ಇನ್ನೇನಾದೀತು?

ಡ್ರಿಲ್ ಮಾಸ್ತರು ನಂದಳಿಕೆ ನಾರಣಪ್ಪನವರು ವಿದ್ಯಾಧಿಕಾರಿ ಪಂಜೆ ಮಂಗೇಶರಾಯರೊಂದಿಗೆ, ಮಂಗಳೂರಿನ ಹಂಪನಕಟ್ಟೆಯ ಬಳಿ ರಸ್ತೆಯಂಚಿನಲ್ಲಿ, ಕನ್ನಡ ಪಂಡಿತನ ಉದ್ಯೋಗ ತನಗೆ ದೊರೆಯುವುದು ಸಾಧ್ಯವಾಗದೆ? ಎಂಬ ಆಶಯದ

# 'ಕಂಪ್ಯೂಟರ್' ಡಾಕ್ಟರು

ಸಂದೇಹಗಳು ಉದ್ಭವಿಸಿದಾಗ ಪರಿಹಾರ ಬಯಸುವುದು, ಪ್ರಶ್ನೆಗಳು ಮೂಡಿದಾಗ ಉತ್ತರಿಸುವ ಯತ್ನದಲ್ಲಿ ನೆರವು ಯಾಚಿಸುವುದು – ಮನುಷ್ಯ ಸ್ವಭಾವ. ಸ್ನೇಹಜೀವಿಯಾದ ಮಾನವ ಹತ್ತಿರದ ಗೆಳೆಯನೊಡನೆ ಅಂತರಂಗದ ಮಾತು ಆಡಲು ಇಷ್ಟಪಡುತ್ತಾನೆ. ಸಾಲಸೋಲಗಳಿಗೆ ಸಂಬಂಧಿಸಿ, 'ಹೀಗೆ ಮಾಡಬೇಕೂಂತಿದೇನೆ. ಏನು ಹೇಳ್ತೀಯಾ?' ಎಂದು ವಿಚಾರವಿನಿಮಯ ನಡೆಸುತ್ತಾನೆ. ವೈಯಕ್ತಿಕ ಅಥವಾ ಕೌಟುಂಬಿಕ ವಿಷಯಗಳಿಗೆ ಸಂಬಂಧಿಸಿಯೂ ಅಷ್ಟೆ.

ಸೋಜಿಗದ ಸಂಗತಿ ಎಂದರೆ, ಒಬ್ಬ ಸ್ನೇಹಿತನಿಂದ ಆಗುವ ಕೆಲಸವನ್ನು ಈಗಿನ ಕಾಲದಲ್ಲಿ ಒಂದು ಯಂತ್ರ ಮಾಡಬಲ್ಲುದು.

ಕೇಳುವ ಪ್ರಶ್ನೆಗಳಿಗೆ ಕಾಗದದ ಉತ್ತರವಲ್ಲ, ಧ್ವನಿ ಹೊರಡಿಸಿ ಉತ್ತರಿಸುವುದೂ ಯಂತ್ರಗಳಿಂದ ಸಾಧ್ಯವಾಗುತ್ತಿದೆ. ಇಂಗ್ಲೆಂಡಿನ ಕೀಲ್ ವಿಶ್ವವಿದ್ಯಾಲಯದಲ್ಲಿ ಇಡೀ ಒಂದು ವಾಕ್ಯವನ್ನೇ ಉಚ್ಚರಿಸಬಲ್ಲ ಕಂಪ್ಯೂಟರನ್ನು ಈಗ ತಯಾರಿಸಿದ್ದಾರೆ.

ಮನುಷ್ಯನ ಮಿದುಳು ಹೇಗಿದೆಯೋ ಅದೇ ಮಾದರಿಯ ವಿದ್ಯುತ್ ಮಿದುಳು ಕಂಪ್ಯೂಟರಿಗಿರುತ್ತದೆ. ವಿಷಯ ಸಂಗ್ರಹ, ಅದನ್ನು ಕ್ರೋಢೀಕರಿಸುವುದು ಅಥವಾ ಸಮೀಕರಿಸುವುದು, ದೊರೆತ ತಿಳಿವಳಿಕೆಯ ಆಧಾರದ ಮೇಲೆ ಪ್ರಶ್ನೆಗಳಿಗೆ ಉತ್ತರ ನೀಡುವುದು – ಈ ಕೆಲಸವನ್ನು ಕಂಪ್ಯೂಟರ್, ಮನುಷ್ಯನ ಮಿದುಳಿಗಿಂತ ಎಷ್ಟೋ ವೇಗವಾಗಿ ಮಾಡುತ್ತದೆ.

* * * * *

ಸಾಹಿತ್ಯ ಕ್ಷೇತ್ರದಲ್ಲಿ ಕಂಪ್ಯೂಟರ್ ಸೇವೆ ಸಲ್ಲಿಸಬಲ್ಲುದೆ? ಮುಂಬಯಿಯ ತಾತಾ ವಿಜ್ಞಾನ ಸಂಸ್ಥೆಯ ಗ್ರಂಥಾಲಯದಲ್ಲಿ ಅಧಿಕಾರಿಯಾಗಿರುವ ಕನ್ನಡ ಬರಹಗಾರ ಶ್ರೀನಿವಾಸ ಹಾವನೂರರು, "ಅಂಥ ಸೇವೆ ಕಂಪ್ಯೂಟರಿನಿಂದ ಸಾಧ್ಯ," ಎನ್ನುತ್ತಾರೆ.

ವಿಷಯ ಸಂಗ್ರಹ, ಜೋಡಣೆ, ಸಮೀಕರಣಗಳಲ್ಲಿ ಹಾವನೂರರು ಎತ್ತಿದ ಕೈ. ಕಳೆದ ಹದಿನೈದು ವರ್ಷಗಳಿಗೂ ಹೆಚ್ಚು ಕಾಲ ಒಂದಲ್ಲ ಒಂದು ರೀತಿಯಲ್ಲಿ ಆ ಕೆಲಸವನ್ನು ಅವರು ಮಾಡಿದ್ದಾರೆ. ಸ್ವತಃ ಹಾವನೂರರೇ ಒಂದು ಬಗೆಯ ಸ್ನೇಹಪರ ಮಾನವ ಕಂಪ್ಯೂಟರ್. ತಮಗೆ ನೆರವಾಗಬಲ್ಲ ದೈತ್ಯನೊಬ್ಬನನ್ನು ಯಾಂತ್ರಿಕ ಕಂಪ್ಯೂಟರಿನಲ್ಲಿ ಅವರು ಕಂಡುಕೊಂಡಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಇದು ಅವರಿಬ್ಬರ ನಡುವೆ ಬೆಳೆಯಬಹುದಾದ ಅತ್ಯಂತ ಸಹಜ ಸ್ನೇಹ.

ಸದಾ ಅಧ್ಯಯನಜೀವಿಯಾದ ಹಾವನೂರರು ಈಗ ಡಾಕ್ಟರೇಟ್‌ಗಾಗಿ ದುಡಿಯುತ್ತಿದ್ದಾರೆ. ಅವರ ನಿಬಂಧದ ವಿಷಯ : ಹತ್ತೊಂಬತ್ತನೆಯ ಶತಮಾನದ ಕನ್ನಡ

ಸಾಹಿತ್ಯ. ಆ ಸಂಬಂಧವಾಗಿ ನಾಲ್ಕೈದು ವರ್ಷಗಳಿಂದ ಅವರು ವಿಷಯ ಸಂಗ್ರಹಿಸುತ್ತಿದ್ದಾರೆ. ಕಳೆದ ಶತಮಾನದಲ್ಲಿ ಪ್ರಕಟವಾದ ಕನ್ನಡ ಗ್ರಂಥಗಳ ಸಂಖ್ಯೆ ಸುಮಾರು ೧,೫೦೦. ಮುದ್ರಣದ ವರ್ಷ, ಪರಿಷ್ಕೃತ ಆವೃತ್ತಿಯ ಪ್ರಕಟಣೆ, ಗ್ರಂಥಕರ್ತ, ರಚನೆ ಅಥವಾ ಸಂಪಾದನೆ, ಪ್ರಕಾರ ಇತ್ಯಾದಿ.... ಹೀಗೆ ಒಂದೊಂದು ಪುಸ್ತಕದ ಬಗೆಗೂ ಸುಮಾರು ಇಪ್ಪತ್ತು ಅಂಶಗಳಿವೆ. ಅಂದರೆ ಒಟ್ಟು ೩೦,೦೦೦ ಅಂಶಗಳನ್ನು ಅವರು ನೆನಪಿಡಬೇಕು. ಅಕಾರಾದಿ ಪಟ್ಟಿಗಳನ್ನು ಮಾಡಬೇಕು, ವರ್ಗೀಕರಿಸಬೇಕು. ಅಗತ್ಯ ಬಿದ್ದಾಗ ಆ ಮಾಹಿತಿ ಅವರಿಗೆ ದೊರೆಯಬೇಕು.

ಹಾವನೂರರು ಪಡುತ್ತಿದ್ದ ಶ್ರಮವನ್ನು ಕಂಡ ಸಹೋದ್ಯೋಗಿಯೊಬ್ಬರು ವಿಜ್ಞಾನ ಮಂದಿರದಲ್ಲಿದ್ದ 'ಸಂಶೋಧಕ ಕಂಪ್ಯೂಟರಿ'ನ ಪರಿಚಯವನ್ನು ಮಾಡಿಸಿಕೊಟ್ಟರು. ಕಂಪ್ಯೂಟರ್ ಎಂದರೆ 'ಬೇರೀಜು ವಜಾ ಭಾಗಾಕಾರ ಗುಣಾಕಾರದ್ದು' ಎಂಬ ಭಾವನೆ ಹಾವನೂರರಲ್ಲಿತ್ತು. ಆದರೆ ಅದು ಸಾಮಾನ್ಯ ಗಣಕಯಂತ್ರ ಮಾಡುವ ಕೆಲಸ; ವಿಜ್ಞಾನ ಮಂದಿರದಲ್ಲಿದ್ದುದು ಸಂಶೋಧಕ ಕಂಪ್ಯೂಟರ್.

ಪರೀಕ್ಷಿಸಿ ನೋಡೋಣವೆಂದು ಹಾವನೂರರು ತಾವು ಸಂಗ್ರಹಿಸಿದ್ದ ಕಳೆದ ಶತಮಾನದ ಕನ್ನಡ ಪತ್ರಿಕೆಗಳನ್ನು ಕುರಿತು ವಿವರವನ್ನು ಕಂಪ್ಯೂಟರಿಗೆ ಒಪ್ಪಿಸಿದರು. ವರ್ಗೀಕೃತ ವಿವರ. ಅದು ಅಂಕೆಗಳಾಗಿ ಪರಿವರ್ತನೆಗೊಂಡು ಕಂಪ್ಯೂಟರ್ ಮೆಮರಿಯ ಒಂದು ಮೂಲೆಯಲ್ಲಿ ಸ್ಥಾನ ಪಡೆಯಿತು.

ಇದಾದ ಮೇಲೆ ಹಾವನೂರರು ಪ್ರಥಮ ಪ್ರಶ್ನೆ ಕೇಳಿದರು :

"ಎಲ್ಲಕ್ಕೂ ಮೊದಲು ಪ್ರಕಟವಾದ ಪತ್ರಿಕೆ ಯಾವುದು ?"

ದೈತ್ಯ ಬರೆದು ತಿಳಿಸಿತು :

"ಮಂಗಳೂರು ಸಮಾಚಾರ. ೧೮೪೩ನೆಯ ಇಸವಿ."

ಅನಂತರ ಯಾವುದು ಪ್ರಕಟವಾಯಿತು ?

—ಇದಕ್ಕೂ ಸಮರ್ಪಕ ಉತ್ತರವೇ.

"ಇದುವರೆಗೆ ಜೀವಂತವಿರುವ ಪತ್ರಿಕೆಗಳು ಯಾವುವು ?"

"ಕರ್ನಾಟಕ ವೈಭವ ; ಮೈಸೂರು ಗೆಜೆಟ್."

(ಎಷ್ಟು ನಿಜ! ಕರ್ನಾಟಕ ವೈಭವಕ್ಕೂ ಮೈಸೂರಿನ ಗೆಜೆಟಿಗೂ ಎಲ್ಲಿಯ ಚ್ಯುತಿ ?!)

ಹೀಗೆ ಇತರ ಪ್ರಶ್ನೆಗಳು, ಸಮರ್ಪಕ ಉತ್ತರಗಳು.

* * * * *

ತಮ್ಮ ಈ ಅನುಭವವನ್ನು ಹಾವನೂರರು ವಿವರಿಸಿದ್ದು ಸಾಹಿತ್ಯ ಪರಿಷನ್ಮಂದಿರದ ಸಭಾಂಗಣದಲ್ಲಿ – ಕೆಲ ಮಿತ್ರರಿಗೆ. ಅಧ್ಯಕ್ಷತೆ ವಹಿಸಿದ್ದ ಜಿ.ವೆಂ.ರನ್ನು ಪ್ರಶ್ನಾರ್ಥಕ ನೋಟದಿಂದ ಎಲ್ಲರೂ ನೋಡುವವರೇ.

ಇಂಥದೊಂದು ಕಂಪ್ಯೂಟರ್ ಇದ್ದರೆ ನಿಘಂಟಿನ ಕೆಲಸ ಸುಲಭವಾಗುವುದೇನೋ! ಸಂಗ್ರಹಿಸಿದ ಅರ್ಥಗಳನ್ನೆಲ್ಲ ಕಂಪ್ಯೂಟರಿಗೆ ತಿಳಿಸಿದರಾಯಿತು. ಅಕಾರಾದಿಯಾಗಿ ಅನುಕ್ರಮವಾಗಿ ಎಲ್ಲವನ್ನೂ ಅದು ಜೋಡಿಸಿಕೊಡುತ್ತದೆ!

*     *     *     *     *

ತಲೆದೂಗುತ್ತಿದ್ದಂತೆಯೇ ಒಂದು ಭಯ ನನ್ನನ್ನು ಕಾಡಿತು. ಒಬ್ಬ ಪ್ರಕಾಶಕ ಇಂಥ ವಿಶಿಷ್ಟ ದೈತ್ಯನೊಬ್ಬನ ಸೇವೆ ಪಡೆದ ಅನ್ನಿ. ವಸ್ತುವನ್ನು, ಪಾತ್ರಗಳ ಸಂಖ್ಯೆಯನ್ನು, ಯಾವ ಯಾವ ಪ್ರಮಾಣದಲ್ಲಿ ಇರಬೇಕು ಎಂಬುದನ್ನು, ಗಾತ್ರವನ್ನು–ತಿಳಿಸಿದರಾಯಿತು; ಅಚ್ಚುಕಟ್ಟಾದ 'ಹಸ್ತಪ್ರತಿ'ಯನ್ನು ಕೆಲವೇ ಘಳಿಗೆಗಳಲ್ಲಿ ಕಂಪ್ಯೂಟರ್ ಹೊರಹಾಕಬಹುದಲ್ಲ!

ಮಾನವನ ಸಾಮರ್ಥ್ಯಕ್ಕೊಂದು ಮಿತಿಯೆ?

(ಒಂದೊಂದು ಕಂಪ್ಯೂಟರಿಗೆ ಐದಾರು ಲಕ್ಷ ರೂಪಾಯಿ ಆಗುತ್ತದೆನ್ನುವುದೇ ಸಮಾಧಾನದ ವಿಷಯ!)

*     *     *     *     *

........ಸಾಹಿತ್ಯ ಕಂಪ್ಯೂಟರುಗಳ ಬಗೆಗೆ ಪ್ರಾಯಶಃ ನಿಮ್ಮ ಮಿತ್ರರ ಆಕ್ಷೇಪ ಇರದು.

....ಕಂಪ್ಯೂಟರಿನ ನೆರವು ಪಡೆದು ನಿಬಂಧ ಬರೆದು ಮುಗಿಸಿ 'ಡಾಕ್ಟರ್'ಆಗುವ ಶ್ರೀನಿವಾಸ ಹಾವನೂರರು ಹೊಸ ದಾಖಲೆ ಸ್ಥಾಪಿಸುತ್ತಾರೆ; ಕೌತುಕದ ವ್ಯಕ್ತಿಯಾಗುತ್ತಾರೆ.

೩–೩–೧೯೬೮

# ಹೃದಯ ಕೈಕೊಟ್ಟಿತು

ಎಂಥ ಸಾವು ಇಷ್ಟ? ನೂರನೆಯ ವಯಸ್ಸಿನಲ್ಲಿ ಪ್ರಾಣೋತ್ಕ್ರಮಣವೆ? ಇಳಿ ವಯಸ್ಸಿನಲ್ಲಿ ಬಂಧು ಬಳಗದ ಮಧ್ಯೆ ಕುಳಿತಿದ್ದಂತೆಯೇ ಕೊನೆಯುಸಿರೆ? ಅಥವಾ ನಡೆಯುತ್ತಲಿದ್ದಂತೆಯೇ ಒಂದೆಡೆ ಕುಸಿದು ವಿದಾಯವೆ?

ನರಸಿಂಹಮೂರ್ತಿಯವರು ಕೊನೆಯ ದಿನವನ್ನು ಕಳೆದದ್ದು ಹೀಗೆ:

ಎಂದಿನಂತೆ ಕಚೇರಿಗೆ ಹೋದರು. ಮಗಳ ಮದುವೆ ವಿಜೃಂಭಣೆಯಿಂದ ನಡೆದು ಒಂದು ವಾರವೂ ಕಳೆದಿರಲಿಲ್ಲ. ಆ ಓಡಾಟದ ಬಳಲಿಕೆ ನೀಗಲು ರಜಾ ಪಡೆಯಬಹುದಾಗಿತ್ತು. ಆದರೆ ಮೂವತ್ತು ವರ್ಷಗಳ ಕಾಲ ವಿವಿಧ ಹುದ್ದೆಗಳಲ್ಲಿ ದುಡಿದ ಅಧಿಕಾರಿಗೆ ಅಂಥ ರಜೆ ಬೇಕು ಎನಿಸಿರಲಿಲ್ಲ.

ಕಚೇರಿಯ ಕೆಲಸ. ಅಲ್ಲಿಂದ ಮಂತ್ರಿಗಳಲ್ಲಿಗೆ. ಇನ್ನೊಂದು ಯೋಜನೆಗೆ ಸಂಬಂಧಿಸಿ ಮೂರು ಗಂಟೆಗಳ ಕಾಲ ಚರ್ಚೆ. ಮೂರು ಗಂಟೆಗೆ ಮನೆಗೆ ಬಂದರು, ಊಟಕ್ಕೆಂದು. ಒಡತಿ ಕೇಳಿದರು: ವಿಶ್ರಾಂತಿ ತಗೋಬಾರದೆ?

"ದೇಹಶ್ರಮ ಮಾಡ್ಕೋಬಾರದು, ಅಷ್ಟೆ. ಅಲ್ಲೇನು ಕುಣೀತೀನಾ?"

ನಗುತ್ತ ಮೂರೂವರೆಗೆ ಮತ್ತೆ ಕಚೇರಿಗೆ ಹೋದರು.

ಸಂಜೆ ಬಂದರು. ದುಡಿದರೂ ಪ್ರಸನ್ನ ಮುಖ. ಆ ದಿನ ಒಂದು ಸಮಾರಂಭ. ಅಲ್ಲಿಗೆ ಹೋಗಿ, ಆಮಂತ್ರಿಸಿದವರನ್ನು ಹರ್ಷಿತರನ್ನಾಗಿ ಮಾಡಿ, ಉಡುಗೊರೆ ನೀಡಿ ವಾಪಸಾದರು.

ಅಳಿಯ ಕೈಹಿಡಿದವಳೊಡನೆ ತವರೂರಿಗೆ ಇನ್ನೂ ಹೊರಟಿರಲಿಲ್ಲ. ಹರ್ಷದ ವಾತಾವರಣ ಮನೆಯಲ್ಲಿ.

ಎಲ್ಲರೂ ಊಟ ಮಾಡಿದರು. ನರಸಿಂಹಮೂರ್ತಿಯವರು ಎಲ್ಲರೊಡನೆಯೂ ನಗುತ್ತ ಮಾತನಾಡಿದರು.

"ಮಾವಿನ ಹಣ್ಣು ಹೆಚ್ಚು" ಎಂದರು ಒಡತಿಗೆ.

ಸುಸಂಸ್ಕೃತ ಸಂಸಾರದ ಸುಖಸಂಕಥಾ ಕಾಲಯಾಪನೆ....

ನಡುವಿರುಳಿಗೆ ಮುಂಚೆ ನರಸಿಂಹಮೂರ್ತಿಯವರು ನಿದ್ದೆ ಹೋದರು.

....ಬೆಳಗಾಯಿತು. ನರಸಿಂಹಮೂರ್ತಿಯವರು ಎದ್ದಿರಲಿಲ್ಲ. ಮುಂಜಾವದ ಕಾಫಿಗೆ ಹೊತ್ತಾಯಿತಲ್ಲ ಎಂದು ಮನೆಯವರು ಕೊಠಡಿಯ ಬಾಗಿಲು ತಳ್ಳಿದರು.

ಐವತ್ತಾರು ಐವತ್ತೇಳು ವರ್ಷಗಳ ಕಾಲ ತಮ್ಮ ಸಜ್ಜನಿಕೆಯಿಂದ, ಸಂಸ್ಕಾರ

ದಿಂದ ಹಲವು ಸಹಸ್ರ ಹೃದಯಗಳನ್ನು ಗೆದ್ದಿದ್ದ ನರಸಿಂಹಮೂರ್ತಿಯವರು ಇನ್ನಿಲ್ಲ. ಸಮಾಜಕ್ಕಾಗಿ ಸದಾ ಮಿಡಿದ ಎದೆಗುಂಡಿಗೆ ಯಾವುದೋ ಅವೇಳೆಯಲ್ಲಿ ಕೆಲಸ ನಿಲ್ಲಿಸಿತ್ತು. ಅವರ ನೆನಪಿನ ದೇಹವಷ್ಟೇ ಭಂಗವಿಲ್ಲದ ನಿಸ್ಪಂದ ಸ್ಥಿತಿ.

*    *    *    *    *

'ಜನಶಂಕರಿ' ಪ್ರಕಟವಾದಾಗ ನನಗೊಂದು ಕಾಗದ ಬಂತು. ಚಿ.ನ. ಮಂಗಳಾ ಅದನ್ನು ಬರೆದಿದ್ದರು. ಇವರು ಕತೆಗಾರ್ತಿ ರಾಜೇಶ್ವರಿಯವರ – ಮೈಸೂರು ಸಂಸ್ಥಾನದ ದಕ್ಷ ಅಧಿಕಾರಿ ನರಸಿಂಹಮೂರ್ತಿಯವರ – ಮಗಳು ಎಂದು ನನಗೆ ತಿಳಿದದ್ದು ಅನಂತರ.

ನರಸಿಂಹಮೂರ್ತಿ ಜನಾನುರಾಗಿಯಾದ ಅಧಿಕಾರಿ ಮಾತ್ರವಲ್ಲ, ಸಾಹಿತ್ಯ ಪ್ರಿಯರು ಕೂಡ ಎಂದು ಕೇಳಿ ಸಂತೋಷಪಟ್ಟೆ.

ಆರು ವರ್ಷಗಳಿಗೆ ಹಿಂದೆ ಮೊದಲ ಬಾರಿ ಅವರನ್ನು ಕಂಡಾಗ ಅವರ ಸರಳ ವ್ಯಕ್ತಿತ್ವಕ್ಕೆ ಮಾರುಹೋದೆ.

'ಚಿಕವೀರರಾಜೇಂದ್ರ'ದ ಮುನ್ನುಡಿಯಲ್ಲಿ ಶ್ರೀನಿವಾಸರು ಕೃತಜ್ಞತೆ ಸಲ್ಲಿಸಿದ್ದ ನರಸಿಂಹಮೂರ್ತಿಯವರು "ನನಗಿಂತ ಕಿರಿಯರಿಲ್ಲ" ಎಂದಂತೆ ಅನಿಸಿತು.

*    *    *    *    *

ಮುಖದ ತೇಜಸ್ಸು, ಮೈಮಾಟ, ಆಗರ್ಭ ಸಿರಿವಂತರನ್ನು ನಾಚಿಸುವಂಥದು. ಬಾಲ್ಯದಲ್ಲಿ ಬಡತನದಲ್ಲಿ ವಿದ್ಯಾರ್ಜನೆ ಮಾಡಿದರು ಎಂದರೆ ನಂಬುವುದು ಕಷ್ಟ. ತಾತಯ್ಯನ ಅನಾಥಾಲಯದಲ್ಲಿ ಸ್ವಲ್ಪ ಸಮಯ ಪ್ರತಿಭಾಶಾಲಿಯಾದ ವಿದ್ಯಾರ್ಥಿಯಾಗಿ ಇವರಿದ್ದರು ಎನ್ನುವುದು – ಇಂದಿನ ಮುಂದಿನ ಪೀಳಿಗೆಗೊಂದು ದಂತಕಥೆ.

ಸಾರಸ್ವತಲೋಕಕ್ಕೆ ವಿಸ್ಮಯವೆನಿಸಬಹುದಾದದ್ದು ಎಂದರೆ, ಎಳೆ ಯೌವನವನ್ನು ಪತ್ರಿಕೋದ್ಯೋಗಿಯಾಗಿ ಇವರು ಕಳೆದರೆಂಬುದು. 'ಸಾಧ್ವಿ', 'ತಾಯಿನಾಡು'ಗಳಿಗೆ ಇವರು ವರದಿಗಾರರಾಗಿದ್ದರು, ಲೇಖನಗಳನ್ನು ಬರೆಯುತ್ತಿದ್ದರು.

ಮೈಸೂರು ಸಂಸ್ಥಾನದ ಅಧಿಕಾರಿಗಳ ಪರೀಕ್ಷೆಯಲ್ಲಿ ಮೊದಲಿಗರಾಗಿ ನರಸಿಂಹ ಮೂರ್ತಿಯವರು ಬದುಕಿನ ಸುದೀರ್ಘ ಅಧ್ಯಾಯವೊಂದನ್ನು ಆರಂಭಿಸಿದರು.

ನಿಷ್ಠೆ, ಶಿಸ್ತು, ನಿಸ್ಪೃಹತೆ – ಇವುಗಳನ್ನು ಜೀವನ ವಿಧಾನವಾಗಿ ರೂಪಿಸಿಕೊಂಡ ಅಲ್ಪ ಸಂಖ್ಯಾತರ ಸಾಲಿನಲ್ಲಿ ನರಸಿಂಹಮೂರ್ತಿ ಅಗ್ರಗಣ್ಯರಾದರು.

ಈ ದುಡಿಮೆಗೆ ಅಂತಿಮ ಹಂತವಾಗಿ ಇನ್ನೇನು ಅವರು ರಾಜ್ಯದ ಚೀಫ್ ಸೆಕ್ರೆಟರಿ ಆಗಬೇಕು ಎನ್ನುವಷ್ಟರಲ್ಲೇ ಸಾವು ನಕ್ಕಿತು.

*    *    *    *    *

ಒಂದು ವಾರದ ಹಿಂದೆ ಮಗಳ ಮದುವೆಯ ಸಡಗರದಲ್ಲಿ ಊಟಕ್ಕೆ ಕುಳಿತಿದ್ದವರೆಲ್ಲರ ಬಳಿಗೆ ಬಂದು ನರಸಿಂಹಮೂರ್ತಿಯವರು ತಮ್ಮ ಸಹಜ ಆತ್ಮೀಯತೆಯಿಂದ ಮಾತಾಡಿದರು.

ಅವರ ಹೃದ್ರೋಗದ ಪ್ರಸ್ತಾಪ ಮಾಡಿದಾಗ, ಅವರನ್ನು ಚಿಕಿತ್ಸೆಗೆ ನೋಡಿಕೊಳ್ಳುತ್ತಿದ್ದ ಡಾಕ್ಟರೆಂದರು :

"ಬಹಳ ಹಳೆಯ ರೋಗ. ಇಲ್ಲದೆ ಹೋಗಿದ್ದರೆ ಹೋದ ವರ್ಷ ಎರಡನೆಯ ಸಲ ಅಟ್ಯಾಕ್ ಆದಾಗ ಅವರು ಉಳೀತಿರಲಿಲ್ಲ. ಶಿಸ್ತು, ಅಚ್ಚುಕಟ್ಟುತನ. ತಮ್ಮನ್ನು ತಾವು ಬಹಳ ಎಚ್ಚರಿಕೆಯಿಂದ ನೋಡ್ಕೋತಾರೆ."

ಅವರು ಹಾಗೆ ಹೇಳಿದ ಏಳೇ ದಿನಗಳಲ್ಲಿ ಹೃದಯ ಕೈಕೊಟ್ಟಿತು.

*        *        *        *        *

ಸುದ್ದಿ ಹಬ್ಬಿದಾಗ ಧಾವಿಸಿ ಬಂದವರು ಸಹಸ್ರಾರು ಜನ. ಅವರಿಂದೆಲ್ಲ ಸಾಲುಗಟ್ಟಿ ಅಂತಿಮ ಪ್ರಣಾಮ.

ವಯಸ್ಸಿನಲ್ಲಿ ನರಸಿಂಹಮೂರ್ತಿಯವರಿಗಿಂತ ಇಪ್ಪತ್ತು ವರ್ಷ ಹಿರಿಯರಾದ ಮಾಸ್ತಿ ಬಂದರು.

ಕೊಠಡಿಯಲ್ಲಿ ನಿಂತು ನಿಟ್ಟುಸಿರು ಬಿಟ್ಟರು.

ತಲೆಯೆತ್ತಿ ಬಳಿಯಲ್ಲಿದ್ದ ಗೋಕಾಕರತ್ತ ನೋಡಿ, ಕ್ಷಣ ಏನೂ ಆಡದೆ, ಬಳಿಕ ಅಂದರು :

"This was too much for the heart."

*        *        *        *        *

ಬಳಿಯಲ್ಲಿ ಮೇಜಿನ ಮೇಲೆ ಫೈಲುಗಳು—ಆಫೀಸು ಫೈಲುಗಳು. ಹೊರಗೆ, ಹಿಂದಿನ ವಾರ ನಡೆದ ಶುಭ ಸಮಾರಂಭದ ಕುರುಹಾಗಿ ಉಳಿದಿದ್ದ ಹಸಿರು ಚಾಚಿದ ಚಪ್ಪರ.

ಸದ್ದಿಲ್ಲದೆ, ಯಾರಿಗೂ ತೊಂದರೆಯಾಗದಂತೆ, ನರಸಿಂಹಮೂರ್ತಿ ಹೊರಟು ಹೋಗಿದ್ದರು.

೧೯–೫–೧೯೬೮

# ಕನ್ನಡವೆ ಗಾಯತ್ರಿ

"ಕೆಲವರಿಗೆ ರಾಮನಿಂದ ಮುಕ್ತಿ, ಕೆಲವರಿಗೆ ಶಿವನಿಂದ ಮುಕ್ತಿ. ನನಗಾದರೊ, ನಾನು ಹಲವು ಸಲ ಹೇಳಿಕೊಂಡಿದ್ದೇನೆ, ಕನ್ನಡದಿಂದಲೆ ಮುಕ್ತಿ."

—ಇದು ದೇಜಗೌ ನುಡಿ.

ಕನ್ನಡ ಪ್ರಜ್ಞೆಗೆ ನಿರ್ದಿಷ್ಟ ಆಳ–ವಿಸ್ತಾರಗಳನ್ನು ಹೊಸದಾಗಿ ದೊರಕಿಸಿಕೊಟ್ಟಿರುವ ಆಚಾರ್ಯರು ಜವರೇಗೌಡರು.

ಮಹಾಕವಿ ಕುವೆಂಪು ಒಮ್ಮೆ ಅಂದರು :

'ಕನ್ನಡದ ಕೆಲಸ ನನಗೆ ಬಹಳ ಪ್ರಿಯವಾದದ್ದು. ಈ ವಿಚಾರದಲ್ಲಿ ನನಗೆ ಬರಿಯ ಉತ್ಸಾಹವಿತ್ತು. ಆದರೆ ಅವರಲ್ಲಿ (ಜವರೇಗೌಡರಲ್ಲಿ) ಉತ್ಸಾಹದ ಜತೆಗೆ ಕ್ರಿಯಾಶೀಲತೆಯೂ ಸೇರಿಕೊಂಡಿದೆ."

ಗುರುವಿನಿಂದ ಶಿಷ್ಯ ಇದಕ್ಕಿಂತ ಹೆಚ್ಚಿನ ಯಾವ ಹೊಗಳಿಕೆಯನ್ನು ತಾನೇ ಪಡೆಯುವುದು ಸಾಧ್ಯ?

*          *          *          *          *

ಮೈಸೂರು ವಿಶ್ವವಿದ್ಯಾನಿಲಯದ ಮಾನವ ವಿಭಾಗದ ಭವ್ಯ ಸಭಾಂಗಣ. ಕಿಕ್ಕಿರಿದ ಜನರು. ಪ್ರೊ. ದೇ.ಜ.ಗೌ. ಅವರ ಐವತ್ತನೆಯ ಹುಟ್ಟುಹಬ್ಬದ ಸಮಾರಂಭ. ಸ್ವಾಗತಾಧ್ಯಕ್ಷ ಎಸ್. ವಿ. ರಂಗಣ್ಣನವರು ಹೇಳಿದಂತೆ ಆ ಹಬ್ಬದ ನಿಮಿತ್ತ ಕನ್ನಡದ ಉತ್ಸವ. ವಿದ್ಯಾಸಚಿವ ಶಂಕರಗೌಡರ ಅಧ್ಯಕ್ಷತೆ. ಬೆಂಗಳೂರು ಮೈಸೂರು ವಿಶ್ವವಿದ್ಯಾಲಯಗಳ ಉಪಕುಲಪತಿದ್ವಯರ–ಡಾ. ಗೋಕಾಕ್, ಡಾ. ಶ್ರೀಮಾಲಿ–ಸಾನ್ನಿಧ್ಯ. ಹಾರತುರಾಯಿಗಳನ್ನರ್ಪಿಸುವವರ ದಂಡು, ಒಂಟಿ ಒಂಟಿಯಾಗಿ ಒಬ್ಬರ ಬೆನ್ನಿಗೊಬ್ಬರು ಅಂಟಿಕೊಂಡು, ಸೂತ್ರಧಾರ ಡಾ. ನಾಯಕರ ಕಣ್ಸನ್ನೆಯಲ್ಲಿ, ದೇಜಗೌರತ್ತ ಲಗ್ಗೆ ಇಡುತ್ತಿವೆ. ಧ್ವನಿವರ್ಧಕಯಂತ್ರ ಗೌರವ ಸಲ್ಲಿಸುವವರ ಹೆಸರುಗಳನ್ನು ಮಂತ್ರದಂತೆ ಉಚ್ಚರಿಸುತ್ತಿದೆ.

ಆಗ ಇಳಿ ವಯಸ್ಸಿನ ಎತ್ತರ ದೇಹದ ಮಹಾನುಭಾವರೊಬ್ಬರು ವೇದಿಕೆಯ ಬಳಿ ಸಾರಿ ದೇ.ಜ. ಗೌಡರಿಗೆ ಹೂಮಾಲೆ ಒಪ್ಪಿಸುತ್ತಾರೆ.

—ಸಭಾಂಗಣದಲ್ಲಿ ಇದ್ದಕ್ಕಿದ್ದಂತೆ ಕರತಾಡನ.

ಹಾರ ತೊಡಿಸಿದವರು ಕನ್ನಡದ ಮಹಾ ವಿದ್ವಾಂಸ ಡಿ.ಎಲ್.ಎನ್.

ಗುರು, ಶಿಷ್ಯನಿಗೆ ಬಿಗಿದ ಹೂಮಾಲೆ–ಆಶೀರ್ವಾದ ರಕ್ಷೆ.

ಆ ಆರೋಹಣ ಲೋಕರಂಜಕವಾಗಿತ್ತು. ಆರೋಹಿಯು ತಳಮಳ ಜೀಗುಬಿ ನೆಲದ ಮೇಲೆ ನಿಂತವರಿಗೆ ತಿಳಿಯದು. ಅವರಿಂದ ಹೊರಡುವುದು ಹರ್ಷೋದ್ಗಾರ ಮಾತ್ರ. (ಅಥವಾ, ಈತ ಹತ್ತಿದನಲ್ಲಾ ಎಂದು ಅಲ್ಲೊಂದು ಇಲ್ಲೊಂದು ಕರುಬು ನುಡಿ.)

*    *    *    *    *

ಐವತ್ತರ ಆಚರಣೆಯ ಬಗೆಗೆ ವಿನಾಯಕರ ಮೀಮಾಂಸೆ ಬೋಧಪ್ರದವಾಗಿತ್ತು. ಆ ವೇಳೆಗೆ ಮನುಷ್ಯ ಬದುಕಿನ ಕಾರಖಾನೆಯಲ್ಲಿ ಸೋತು ಸುಣ್ಣವಾಗುತ್ತಾನೆ; ಇಲ್ಲವೆ ಪರಿಸರದ ಮೇಲೆ ತನ್ನ ಪ್ರಭುತ್ವ ಸ್ಥಾಪಿಸಿ ಹಿರಿಯವನಾಗುತ್ತಾನೆ.

ಹಾಗೆ ಹುದ್ದರಿಯಾದ ವ್ಯಕ್ತಿ ದೇಜಗೌ.

ಅವರ ವೈಯಕ್ತಿಕ ಸಾಧನೆಯಲ್ಲಿ ನಾಡು–ನುಡಿ–ಜನಪದ ತಮ್ಮ ಆಶೋತ್ತರಗಳ ಪಡಿನೆಳಲನ್ನು ಕಾಣುತ್ತಿರುವುದರಿಂದಲೇ ಅವರಿಂದು ಕನ್ನಡಿಗರ ವಿಶೇಷ ಮನ್ನಣೆಗೆ ಪಾತ್ರರಾಗಿದ್ದಾರೆ. ಮುಂದಿನ ಅವರ ಉತ್ಕರ್ಷವೆಂದರೆ ತನ್ನದೇ ಉತ್ಕರ್ಷವೆಂದು ನಾಡು ನಂಬುವಂತಾಗಿದೆ.

*    *    *    *    *

ಕಾರ್ಯಶೀಲರಾದ ಆಚಾರ್ಯರು, ಸಾಹಿತ್ಯ ಲೋಕದ ಶ್ರೇಷ್ಠ ಗದ್ಯ ಶಿಲ್ಪಿ, ಕನ್ನಡ ತೇರಿನ ಸಾರಥಿ – ಈ ಮೂರು ಪಾತ್ರಗಳನ್ನು ಒಂದರಲ್ಲಿ ಒಗ್ಗೂಡಿಸಿಕೊಂಡಿರುವ ಅಸಾಧಾರಣ ವ್ಯಕ್ತಿ ದೇಜಗೌ.

ಅವರ ಪೂಜೆಯೆಲ್ಲ ಕನ್ನಡದ ಗುಡಿಯಲ್ಲಿ. ಕನ್ನಡದ ಕಾಯಕವೇ ಅವರ ಪಾಲಿನ ಕೈಲಾಸ. ಕನ್ನಡವೆಂಬ ತ್ರ್ಯಕ್ಷರಿಯೇ ಅವರ ಗಾಯತ್ರಿ.

೨೧–೭–೧೯೬೮

# ನಾಡಿನ ಜಲಗಾರರು

ದೀರ್ಘಕಾಲದ ಕನಸು ನನಸಾಗಿ ಕನ್ನಡ ನಾಡು ಒಂದುಗೂಡಿದರೂ ಭಾವೈಕ್ಯದ ಸಾಧನೆ ಇನ್ನೂ ಆಗಿಲ್ಲ. ಇಂಥ ಐಕ್ಯವನ್ನು ಹೊಸೆಯಬೇಕಾದವರು ಯಾರು? ರಾಜಕಾರಣಿಗಳೊ? ಸಾಹಿತಿಗಳೊ?

ಈ ಪ್ರಶ್ನೆ ಕಳೆದ ತಿಂಗಳು ಎರಡು ಸಾಂಸ್ಕೃತಿಕ ಸಮಾರಂಭಗಳಲ್ಲಿ ಧ್ವನಿಸಿ ಪ್ರತಿಧ್ವನಿಸಿತು.

ಒಂದು ಶನಿವಾರ ಸಂಜೆ ಬೆಂಗಳೂರಿನಲ್ಲಿ, ಐವತ್ತು ತುಂಬಿತೆಂದು ಪ್ರಾಧ್ಯಾಪಕ ದೇಜಗೌ ಅವರನ್ನು ಸತ್ಕರಿಸುವ ಸಭೆ. ಭಾಷಣಕಾರರಲ್ಲಿ ಒಬ್ಬರಾಗಿದ್ದ ರಾಜ್ಯದ ಅರ್ಥಸಚಿವ ಹೆಗಡೆಯವರು, "ಹನ್ನೆರಡು ವರುಷ ಸಂದರೂ ನಾಡಿನಲ್ಲಿ ಭಾವೈಕ್ಯ ಸಾಧಿತವಾಗಿಲ್ಲ," ಎಂದು ಮರುಗಿದರು. ಅಧ್ಯಕ್ಷತೆ ವಹಿಸಿದ್ದ ಮುಖ್ಯಮಂತ್ರಿ ವೀರೇಂದ್ರ ಪಾಟೀಲರು ಅಚ್ಚಗನ್ನಡದಲ್ಲಿ ಮಾತನಾಡಿ, ಹೆಗಡೆಯವರ ಮಾತಿಗೆ ತಾವೂ ಧ್ವನಿಕೂಡಿಸಿ, "ಭಾವೈಕ್ಯ ಸಾಧನೆಯ ಕೆಲಸ ಸಾಹಿತಿಗಳಿಂದ ಆಗಬೇಕು" ಎಂದರು.

ಮರು ಶನಿವಾರ ಸಂಜೆ ಮೈಸೂರಿನಲ್ಲಿ, ಮಹಾಕವಿ ಕುವೆಂಪು ಅವರಿಗೆ 'ಗಂಗೋತ್ರಿ' ಗ್ರಂಥವನ್ನು ಒಪ್ಪಿಸುವ ಸಮಾರಂಭ. ("ಒಂದು ಸಾವಿರ ವರ್ಷಗಳಿಗೆ ಹಿಂದೆ ಅರಿಕೇಸರಿಯ ಆಸ್ಥಾನದಲ್ಲಿ ಪಂಪನನ್ನು ಹೀಗೆ ಸನ್ಮಾನಿಸಲಾಗಿತ್ತು"– ಈ ರೀತಿ ನುಡಿದು ಅಂದಿನ ಉತ್ಸವವನ್ನು ಚರಿತ್ರೆಯ ಮಣೆಯ ಮೇಲಿಟ್ಟರು ಆಚಾರ್ಯ ಡಿ. ಎಲ್. ಎನ್.) ಗಂಗೋತ್ರಿ ಅಣೆಕಟ್ಟಿನ ಬಾಗಿಲು ತೆರೆಯುತ್ತ ಮಂತ್ರಿ ಹೆಗಡೆಯವರು ಕಳೆದ ವಾರದ ಸಂವಾದವನ್ನು ಮುಂದುವರಿಸಿದರು: "ನಾಡು ಒಂದಾಗಲೆಂದು ಕವಿಗಳು ಕನಸು ಕಂಡರು. ಅದರ ಲಾಭವನ್ನೀಗ ರಾಜಕಾರಣಿಗಳು ಪಡೆಯುತ್ತಿದ್ದಾರೆ. ಹರಿದು ಹಂಚಿಹೋದ ಜನಾಂಗ ಒಂದೇ ಆಡಳಿತಕ್ಕೆ ಒಳಗಾದರೂ, ಭಾವೈಕ್ಯ ಸಾಧನೆಯಾಗಿಲ್ಲ. ಇದು, ತಮ್ಮ ಬರವಣಿಗೆಯ ಮೂಲಕ ಜನಸಮುದಾಯದ ಮೇಲೆ ಪ್ರಭಾವ ಬೀರಬಲ್ಲ ಸಾಹಿತಿಗಳು ಮಾಡಬೇಕಾದ ಕೆಲಸ. ತಮ್ಮ ಹೊಣೆಗಾರಿಕೆಯನ್ನು ಅವರು ಮರೆಯಬಾರದು. ಮನಸ್ಸಿನ ಒಗ್ಗಟ್ಟನ್ನು ರೂಪಿಸಲಿಲ್ಲೆಂದು ನಾಳೆಯ ಪೀಳಿಗೆ ಇಂದಿನ ಸಾಹಿತಿಗಳನ್ನು ದೂಷಿಸುವಂತಾಗಬಾರದು".

ಈ ಮಾತುಗಳನ್ನು ಹೆಗಡೆಯವರು ತಮ್ಮೆಲ್ಲ ಕಲಾಕೌಶಲವನ್ನು ಉಪ

ಯೋಗಿಸಿ, ಹೆಜ್ಜೆ ಹೆಜ್ಜೆಗೂ ಸಾಹಿತಿಗಳ ಕ್ಷಮೆಯನ್ನು ಕೋರಿಯೇ (!), ಸಭಿಕರು ತಲೆದೂಗುವಂತೆ ಆಡಿದರು.

ಏಕೀಕೃತ ಕರ್ನಾಟಕದ ಕನಸನ್ನು ಕಂಡವರಿಗೆ ಭ್ರಮನಿರಸನ ಉಂಟು ಮಾಡಿರುವ ಘಟನೆಗಳು ಯಾವುವು? ಉತ್ತರ ಕರ್ನಾಟಕ, ದಕ್ಷಿಣ ಕನ್ನಡ, ಕೊಡಗು, ಹಳೆಯ ಮೈಸೂರು ಎಂಬ ಪ್ರಾದೇಶಿಕ ಭಾವನೆಗಳು ಈ ದಿನ ಪ್ರಬಲ ವಾಗಿವೆಯಲ್ಲ? ಅಭಿವೃದ್ಧಿ ಕಾರ್ಯದಿಂದ ಹಿಡಿದು ಮಂತ್ರಿಮಂಡಲದಲ್ಲಿ ಪ್ರಾತಿನಿಧ್ಯದ ವರೆಗೆ ವ್ಯಕ್ತಿ ಮಾನದಂಡವೇ ವಿರಾಜಮಾನವಾಗಿವೆಯಲ್ಲ? ಪರಸ್ಪರ ದೂಷಣೆ, ಭರ್ತ್ಸನೆ, ನಿಂದೆಗಳು ರಾಜಕೀಯ ಚೌಕಟ್ಟಿನೊಳಗೆ ನಿತ್ಯಪೂಜೆಯ ಮಂತ್ರ ಗಳಾಗಿವೆಯಲ್ಲ?

ಸೂಕ್ಷ್ಮ ಹೃದಯಿಯೂ ಸಂವೇದನಾ ಜೀವಿಯೂ ಆಗಿರುವ ಬರೆಹಗಾರ ಈ ಪರಿಸ್ಥಿತಿಯನ್ನು ಕಂಡು ವ್ಯಥೆ ಪಡುತ್ತಾನೆ. ಅವನಿಗೆ ಅಸಹ್ಯವೆನಿಸುತ್ತದೆ. ಅವನು ಅಂತರ್ಮುಖಿಯಾಗುತ್ತಾನೆ. "ಇದು ಕೆಟ್ಟ ಸಹವಾಸ" ಎಂದು ಹಳಿದು, ತನ್ನ ಪಾಡಿಗೆ ತಾನು ಉಳಿಯುತ್ತಾನೆ.

ಕನ್ನಡನಾಡು ಒಂದಾದುದಕ್ಕೆ ಕವಿಗಳು ಕಂಡ ಕನಸೇ ಕಾರಣ, ಸಾಹಿತಿಗಳು ನಡೆಸಿದ ಸಾಂಸ್ಕೃತಿಕ ಆಂದೋಲನವೇ ಪ್ರೇರಣೆ, ಎಂದು ರಾಜಕಾರಣಿ ನುಡಿದಾಗ, ಬಡ ಬರೆಹಗಾರ ಒಂದು ಕ್ಷಣ ಕುಬೇರಲೋಕದ ವಿಹಾರಿಯಾಗುತ್ತಾನೆ. ಆದರೆ, ಈಗಿರುವ ಅನೈಕ್ಯವನ್ನು ಹೋಗಲಾಡಿಸುವುದೂ ಬರೆಹಗಾರನದೇ ಜವಾಬುದಾರಿ ಎಂದಾಗ ಮಾತ್ರ, ಆತ ಬೆಚ್ಚಿ ಬೀಳುತ್ತಾನೆ!

* * * * *

ರಾಜಕಾರಣಿಗಳ ಕ್ಷಮೆ ಕೋರಿ, ಪ್ರಚಲಿತವಿರುವ ಕತೆಯೊಂದನ್ನು ಇಲ್ಲಿ ಹೇಳಬಹುದು. ಇದು ತಾನು ಕದ್ದು, ಎಚ್ಚತ್ತ ಮನೆಯವನ ಬೊಬ್ಬೆ ಕೇಳಿ ಜನ ನೆರೆದಾಗ ತಾನೂ ಆ ಗುಂಪನ್ನು ಸೇರಿ, "ಅಗೋ ಆ ಕಡೆ ಓಡಿದ!" ಎಂದು ಹೇಳಿ, ಎಲ್ಲರೂ ಅತ್ತ ಧಾವಿಸುವಂತೆ ಮಾಡಿ ಅವರೊಡನೆ ತಾನೂ 'ಕಳ್ಳ'ನನ್ನು ಬೆನ್ನಟ್ಟಿದ ಜಾಣನ ಕಥೆ. ಕಳ್ಳ ದೊರೆಯದೇ ಇದ್ದಾಗ "ಮನೆಯವನೇ ಕದ್ದಿರಬಹುದು" ಎಂದು ಜಾಣ ಸೂಚಿಸಿದರೂ ಸೂಚಿಸಿದನೇ!

ಇದೀಗ ಬಡಪಾಯಿ ಬರೆಹಗಾರನಿಗೆ ಒದಗಿರುವ ಗತಿ.

ಕನ್ನಡದಲ್ಲಿ ಅಷ್ಟೇ ಅಲ್ಲ, ಇಡಿಯ ದೇಶದಲ್ಲೇ ಹೀಗೆ–ಎನ್ನಬಹುದು. ಭಾವೈಕ್ಯದ ಅಭಾವವಿರುವುದು ಕಪ್ಪು ನೆಲದಲ್ಲಿ ಮಾತ್ರ ಅಲ್ಲವಲ್ಲ. ಇಡಿಯ ದೇಶವೇ ಈ ದಿನ ರೋಗಗ್ರಸ್ತವಾಗಿದೆ. ಆ ಕಾಹಿಲೆಯ ನಿವಾರಣೆಯನ್ನು ತಮ್ಮ ಕವಿತೆ, ಕತೆ, ಕಾದಂಬರಿ, ನಾಟಕಗಳ ಮೂಲಕ ಸಾಹಿತ್ಯ ಧನ್ವಂತರಿಗಳೇ ಮಾಡಲಿ–ಎನ್ನುವುದು ಎಷ್ಟು ಸುಲಭ!

* * * * *

ರಾಜಕೀಯ ಸ್ಥಿತಿಗತಿಗಳು ಸಾಹಿತ್ಯ ಲೋಕದ ಮೇಲೂ ಪ್ರಭಾವ ಬೀರುತ್ತವೆ. ರಾಷ್ಟ್ರಪ್ರಮಾದನ ಕಾಲದಲ್ಲಿಯಂತೂ ಸಾಹಿತಿಯ ಆರೋಗ್ಯವೂ ಸ್ವಲ್ಪ ಕೆಡುತ್ತದೆ. ಇಷ್ಟಿದ್ದರೂ ಸ್ವತಃ ಬರಹಗಾರರ ನಡುವೆ ನಮ್ಮಲ್ಲಿ ಪ್ರಾದೇಶಿಕ ವೈಷಮ್ಯಗಳಿಲ್ಲ; ಸಾಹಿತ್ಯ ಸೃಷ್ಟಿಗೆ ಸಂಬಂಧಿಸಿ ಜಾತಿ ಸೂತಕವಿಲ್ಲ.

ವಾಸ್ತವವಾಗಿ, "ನಿಮ್ಮ ಮನೆಯನ್ನು ಸ್ವಚ್ಛವಾಗಿರಿಸಿಕೊಂಡು ನಾಡಿಗೆ ಮಾದರಿಯಾಗಿ" ಎಂದು ಸಾಹಿತಿಗೆ ರಾಜಕಾರಣಿ ಹೇಳುವಂತೆಯೇ ಇಲ್ಲ. ಏನಿದ್ದರೂ "ಸ್ವಸಾಮರ್ಥ್ಯಕ್ಕೆ ಎತ್ತಿದ ಕೈ ನಿಮ್ಮದು, ನಾಡಿನ ಮನೆಯನ್ನು ದಯವಿಟ್ಟು ಗುಡಿಸಿ," ಎನ್ನಬಹುದು.

* * * * *

ಆದರೆ ಪ್ರೇರಕೆಯೂ ಒಮ್ಮೊಮ್ಮೆ ಉಸಿರಾಡುತ್ತದೆ. ಅನಗತ್ಯವಾಗಿ ಇದ್ದೊಂದು ಕಸ ತುಂಬುವದಲ್ಲ ಎಂದು ಗೊಣಗುತ್ತದೆ. ಈ ನಾಡಿನಲ್ಲಿ ವಿವೇಕದ ಉತ್ಪನ್ನ ಸಾಕಷ್ಟು ಆದರೆ, ತಿಪ್ಪೆಯ ದುರ್ಗಂಧಕ್ಕೆ ಆಸ್ಪದವೇ ಇರದಲ್ಲ ಎಂದು ಹಂಬಲಿಸುತ್ತದೆ.

ಹೀಗಿದ್ದರೂ, ಮುಖ್ಯಮಂತ್ರಿಯೂ, ಅರ್ಥ ಸಚಿವರೂ ತಮ್ಮ ಬಜೆಟ್ಟು ಮಾತುಗಳಿಗಾಗಿ, ಬುದ್ಧಿಜೀವಿಗಳೊಡನೆ ಆರಂಭಿಸಿರುವ ಸಂವಾದಕ್ಕಾಗಿ ಅಭಿನಂದನೀಯರಾಗಿದ್ದಾರೆ. ವರ್ಷಕ್ಕೊಂದು ಇಲ್ಲವೆ ಎರಡು ಭಾಷಣಗಳಿಗಷ್ಟೆ ಸೀಮಿತವಾಗಬಾರದು ಈ ಸಂವಾದ.

೧೧–೮–೧೯೬೮

# ಬಿ. ಶ್ರೀ. ಸಿರಿವಂತಿಕೆ

ಬೆಳಗ್ಗೆ ಎದ್ದು, ಕಿಟಕಿಯಿಂದ ಒಳಕ್ಕೆ ಹಾರಿಬಂದಿದ್ದ ದಿನ ಪತ್ರಿಕೆಗಳನ್ನು ಎತ್ತಿಕೊಂಡೆ. ಮೊದಲನೆಯ ಪುಟಗಳ ಮೇಲೆ ದೃಷ್ಟಿ ಹಾಯಿಸಿದೆ. ಪರಿಚಿತ ವ್ಯಕ್ತಿಯ ಭಾವಚಿತ್ರ ನಸುನಕ್ಕಿತು. 'ಆದರ್ಶ ಶಿಕ್ಷಕ' ಎಂಬ ರಾಷ್ಟ್ರಮಾನ್ಯತೆ ದೊರೆತ ವಾರ್ತೆ ಇತ್ತು ಚಿತ್ರದ ಕೆಳಗೆ. ಸಂತೋಷವಾಯಿತು. ದಿಗಿಲುಗೊಳಿಸುವ ದಿನನಿತ್ಯದ ಸುದ್ದಿಗಳನ್ನು ಓದುವುದನ್ನು ಮರೆತು, ಬಿ. ಶ್ರೀ. ಪಾಂಡುರಂಗರಾಯರು ಮೊದಲ ಪುಟಕ್ಕೆ ಬಂದುದನ್ನು ಮನೆಮಂದಿಗೆ ತಿಳಿಸಲು ಆತುರ ತೋರಿದೆ.

ಕಾಫಿ ಹೀರತೊಡಗಿದಾಗ ನೆನಪು ಹಿಂದಕ್ಕೆ ಹಿಂದಕ್ಕೆ ಸರಿಯಿತು. ನನಗೆ ಬರೆಹಗಾರ ಪಾಂಡುರಂಗರಾಯರ ಪರಿಚಯವಾಗಿ ಇಪ್ಪತ್ತೈದು ವರ್ಷಗಳೇ ಸಂದಿವೆ. ಆ ಅವಧಿಯ ಅನೇಕ 'ಬಿ. ಶ್ರೀ. ಸನ್ನಿವೇಶ'ಗಳ ಸ್ಮರಣ ಚಿತ್ರಗಳು ಕಣ್ಣಿಗೆ ಕಟ್ಟುತ್ತವೆ. ಸದಾ ಹಸನ್ಮುಖಿ, ಸ್ನೇಹಪರ. ಹೃದಯ ತೆರೆದು ಮಾತನಾಡುವ (ಆಧುನಿಕ ಜಗತ್ತಿನಲ್ಲಿ ಅಷ್ಟೊಂದು ಹಿತಕರವಲ್ಲದ) ಪ್ರವೃತ್ತಿ. ಎಂದೂ ಮರೆಯದೆ ನೀಡುವ ಆಹ್ವಾನ: "ಮನೆಗೆ ಬನ್ನಿ."

ನೆನಪಿನ ಆ ಎಲ್ಲ ಚಿತ್ರಗಳೂ ಏಕರೀತಿ. ಅಲ್ಲಿಂದ ಹೊರಟುದು ಚೇತೋಹಾರಿಯಾದ ಮಧುರ ಧ್ವನಿ.

*  *  *  *

ಪಾಂಡುರಂಗರಾಯರೊಬ್ಬರನ್ನೇ ಕುರಿತು ಯೋಚಿಸುವುದು ಆಗದ ಮಾತು. ಅವರ ಸಹಧರ್ಮಿಣಿ ಶಕುಂತಲಾಬಾಯಿ ಪತಿಯಷ್ಟೇ ಹೆಸರಾದವರು. ಬಿ. ಶ್ರೀ. ಚಿತ್ರ ಯಾವಾಗಲೂ ಜಂಟಿ. ಬದುಕಿನ ಸುಖದುಃಖಗಳಲ್ಲಿ ಸಹಭಾಗಿಗಳಾಗಿ ಏಕಜೀವವಾಗಿ ಬಾಳುತ್ತ ಬಂದ ಆದರ್ಶದಂಪತಿಗಳು ಇವರು. ಸರಸ್ವತೀ ಉಪಾಸಕ ಹಾಗೂ ನಾಟಕ ವಿಶಾರದೆ – ಈ ಇಬ್ಬರದು ಹೇಳಿಮಾಡಿಸಿದ ಜೋಡಿ.

ಹತ್ತು ಜನರ ಕಣ್ಣಿಗೆ ಬೀಳುವಂತೆ ಓಡಾಡುವ ವ್ಯಕ್ತಿಗಳಿಗೆ ಇತರರಿಂದ ಸ್ನೇಹ ಕಾಣ್ಕೆ ಸಿಗುತ್ತದೆ, ನಿಂದೆಯ ನುಡಿಗಳೂ ದೊರೆಯುತ್ತವೆ. ಈ ಸಾಮಾನ್ಯ ನಿಯಮಕ್ಕೆ ಬಿ. ಶ್ರೀ. ದಂಪತಿಗಳು ಅಪವಾದವೆನ್ನಬೇಕು. ಇವರ ಮಟ್ಟಿಗೆ ನಿಂದೆಯು, ತಪ್ಪದೆ ಸ್ನೇಹವಾಗಿ ಮಾರ್ಪಡುತ್ತದೆ. ಅತಿಪರಿಚಯ ಅಪ್ಪಿತಪ್ಪಿಯೂ ಅನಾದರಕ್ಕೆ ಎಡೆಕೊಡುವುದಿಲ್ಲ.

ಪಂಚಾಂಗದ ಪುಟಗಳು, ಬಿ. ಶ್ರೀ. ಜನಸಂಪರ್ಕ ಸಾಧಿಸಿ ಮೂವತ್ತೈದು

ವರ್ಷಗಳು ಸಂದಿವೆ ಎನ್ನುತ್ತಾರೆ. ಅಂದು ಬೆಳಗ್ಗೆ ಬೋಸಂದೂ ಮಾಡಿದ್ದೇ ಇವತ್ತ ಬಿ. ಶ್ರೀ. ದಂಪತಿಗಳನ್ನು ಕಂಡಾಗ, ಇಷ್ಟೊಂದು ವರ್ಷಗಳು ಕಳೆದುವೆ? ಎಂದು ಆಶ್ಚರ್ಯವೆನಿಸುತ್ತದೆ. ಅವರಲ್ಲಿ ಇಪ್ಪತ್ತೈದು ವರ್ಷಗಳನ್ನಂತೂ ಅವರವರ ಮಕ್ಕಳ ಒಡನಾಟದಲ್ಲಿ ಅವರು ಕಳೆದಿದ್ದಾರೆ.

* * * * *

ಲೇಖಕ ಹಾಗೂ ಶಿಕ್ಷಕ. ಇವೆರಡೂ ಪರಸ್ಪರ ಹೊಂದಿಕೊಳ್ಳುವ ವೃತ್ತಿ ಪ್ರವೃತ್ತಿಗಳು. ಇತ್ತೀಚಿನ ವರ್ಷಗಳಲ್ಲಿ, ಕನ್ನಡದಲ್ಲಿ ಲೇಖನ ಕಲೆಯನ್ನೇ ಉದ್ಯೋಗವಾಗಿ ಅವಲಂಬಿಸಿದವರೆಲ್ಲ ಬಡವರಲ್ಲ; ಶಿಕ್ಷಣವನ್ನು ವ್ಯವಸಾಯವಾಗಿ ರೂಪಿಸಿದವರೆಲ್ಲ ಬರಿಗೈಯವರಲ್ಲ. ಆದರೆ ಬಿ. ಶ್ರೀ. ಯವರಿಗೆ ಪ್ರಾಪ್ತವಾಗಿರುವುದು ದಾವರೋ ಹೃದಯದ ಸಿರಿವಂತಿಕೆಯೊಂದೇ.

ಈ ಸಂಬಂಧವಾಗಿ ಬಿ. ಶ್ರೀ. ಯವರ 'ಆರ್ಯ ಮಾತೆಯರು' ಕೃತಿಯ ಮುನ್ನುಡಿಯಲ್ಲಿ ಸಿದ್ದವನಹಳ್ಳಿ ಕೃಷ್ಣಶರ್ಮರು ಹೇಳಿರುವುದನ್ನು ಇಲ್ಲಿ ಗುರುತಿಸಬೇಕು:

"ಶಾಲೆ ನಡೆಸುವುದು ಒಂದು ಉದ್ಯೋಗ ಆಗಿರುವ ಕಾಲದಲ್ಲಿ ಪಾಂಡುರಂಗ ರಾಯರ ಹಾಗೆ ಮಕ್ಕಳ ಶಿಕ್ಷಣದಿಂದ ಕೈಸುಟ್ಟುಕೊಂಡವರು ಬೇರೆ ಯಾರೂ ಇಲ್ಲ. ಇದಕ್ಕೆ ಕಾರಣ ಅವರ ಶಿಕ್ಷಣದ ವ್ಯವಹಾರ ವೈಶಿಷ್ಟ್ಯ. ಅವರ ಸಾಹಿತ್ಯ ಸೇವೆಯೂ ಅಷ್ಟೆ. ಉದರಂಭರಣಕ್ಕಾಗಿ ಸಾಹಿತ್ಯ ಸೇವೆಯಲ್ಲ. ಅವರ ಬಾಳು ಬದುಕೇ ಸೇವೆಗೆ ಮುಡಿಪು."

ಸತ್ಯವಾದ ಮಾತು. ಬಿ. ಶ್ರೀ. ಯವರ ವ್ಯವಹಾರ ವಿಶಿಷ್ಟವಾಗದೆ, ಪ್ರಚಲಿತ ನಿಯಮಗಳಿಗೆ ಅನುಸಾರವಾಗಿ ಇದ್ದಿದ್ದರೆ ಅವರ 'ಮಕ್ಕಳ ಮಂಟಪ' ಲಕ್ಷಾಂತರ ರೂಪಾಯಿ ಓಡಾಡುವ ವಿದ್ಯಾ ಸಂಸ್ಥೆಯಾಗುತ್ತಿತ್ತು; ಬೆಳವಣಿಗೆಯ ಗುಡಿ ಲಕ್ಷ್ಮೀ ಪ್ರಸನ್ನ ಎನ್ನಿಸುತ್ತಿತ್ತು.

* * * * *

ಬಿ. ಶ್ರೀ. ಯವರ ಮಗುವಿನಂತಹ ಮನಸ್ಸೇ ಮಕ್ಕಳ ಲೋಕದಲ್ಲಿ ಅವರು ವಿಹರಿಸಲು ಕಾರಣವಾಯಿತೆಂದರೆ ತಪ್ಪಾಗದು.

ಅವರ 'ಕಲ್ಲುಸಕ್ಕರೆ ಬೆಟ್ಟ', 'ಮಳೆರಾಯ', 'ಮುದ್ದು ಸಿಂಗಾರಿ'ಗಳೆಲ್ಲ ಎಳೆಯರಿಗೂ ಹೆತ್ತವರಿಗೂ ಆನಂದ ನೀಡಿರುವ ಕೃತಿಗಳು. ಮಕ್ಕಳಿಗಾಗಿ ಅವರು ಬರೆದಿರುವ ನಾಟಕಗಳೂ ಅಷ್ಟೆ. 'ಆಕಾಶದಲ್ಲಿನ ಅದ್ಭುತಗಳು' ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಗೋಸ್ಕರ ಅವರು ಸಿದ್ಧಗೊಳಿಸಿದ್ದು.

ಸ್ವಲ್ಪ ಸಮಯದ ಹಿಂದೆ ಬಿ. ಶ್ರೀ. ದಂಪತಿಗಳು ಕಾಶ್ಮೀರಕ್ಕೆ ಹೋಗಿಬಂದರು. ಆ ಸೊಬಗಿನ ಬೀಡನ್ನು ಕುರಿತು ಅವರು ಬರೆದ ಪುಸ್ತಕ, ಅವರ ವ್ಯಕ್ತಿತ್ವದಷ್ಟೇ ಅಚ್ಚುಕಟ್ಟು.

* * * * *

ಇತರರ ಜೀವನ ಹಸನಾಗಲೆಂದು ತಮ್ಮನ್ನು ತೇಯುತ್ತ ಬಂದಿರುವ ಬಿ. ಶ್ರೀ. ದಂಪತಿಗಳನ್ನು ಸಮಾಜ ಯಾವ ರೀತಿಯಲ್ಲಿ ಕಂಡಿದೆ? ತಾನು ಹೊತ್ತಿರುವ ಋಣಭಾರವನ್ನು ತೀರಿಸಲು ಏನು ಕ್ರಮ ಕೈಗೊಂಡಿದೆ?

ಪ್ರಾಯಶಃ ಇಂಥ ಪ್ರಶ್ನೆಗಳನ್ನು ಕೇಳದಿರುವುದು ಮೇಲು. ಲೇಖಕನಾಗಲೀ ಕಲಾವಿದನಾಗಲೀ ಶಿಕ್ಷಕನಾಗಲೀ ಸಮಾಜದಿಂದ ತನಗೆ ಮನ್ನಣೆ ಸಲ್ಲಲಿ ಎಂದು ನಿರೀಕ್ಷಿಸುವುದೇ ತಪ್ಪು. ಯಾವುದೇ ಸಮಾಜ ಅಂಥ ಮನ್ನಣೆಯನ್ನು ನೀಡಿದರೆ ತನ್ನ ಕರ್ತವ್ಯವನ್ನು ಅದು ಪಾಲಿಸಿದಂತೆ. ಕರ್ತವ್ಯಚ್ಯುತಿಯ ಪ್ರಮಾದವನ್ನು ಸಮಾಜ ಎಸಗಿದರೆ ಅದಕ್ಕೇ ನಷ್ಟ.

ಸುಮಾರು ೨೫ ವರ್ಷಗಳ ಶಿಕ್ಷಕವೃತ್ತಿಯ ಬಳಿಕ, ಬೆಳ್ಳಿಹಬ್ಬದ ಸಂದರ್ಭದಲ್ಲಿ, ಬಿ. ಶ್ರೀ. 'ಆದರ್ಶ ಶಿಕ್ಷಕ' ಎನಿಸಿಕೊಂಡಿದ್ದಾರೆ. ಇಂಥ ಬಿರುದು ದೊರೆಯುವುದಕ್ಕೆ ಪೂರ್ವಭಾವಿಯಾಗಿ ಸಾಮಾನ್ಯವಾಗಿ ನಡೆಯುವ ಕ್ರಿಯೆಗಳೇನೇ ಇರಲಿ, ಬಿ. ಶ್ರೀ.ಯವರ ಪಾಲಿಗೆ ಇದು ಅತ್ಯಂತ ಅರ್ಹವಾದ ಮನ್ನಣೆ. ಈ ಮೊದಲೇ ಸಲ್ಲಬೇಕಾಗಿದ್ದುದು ಇಂದಾದರೂ ಸಂದಿದೆಯಲ್ಲ – ಎಂಬುದೇ ಸಮಾಧಾನ.

ರಾಷ್ಟ್ರಪತಿಯ ಎದುರಲ್ಲಿ ಸನ್ಮಾನಿತರಾದೊಡನೆ ಯಾವುದೇ ವ್ಯಕ್ತಿಯ ತೂಕ ಹೆಚ್ಚಿದಂತಾಯಿತೆ? ಅದೊಂದು ಭ್ರಮೆ. ಆದರೂ ಸಮಾಜದ ದೃಷ್ಟಿಯಲ್ಲಿ ಇದು ಮಹತ್ವದ ವಿಷಯ. ಹೀಗಿದ್ದೂ ಗಮನದಲ್ಲಿಡಬೇಕಾದ ಸಂಗತಿಯೆಂದರೆ, ಬಿ. ಶ್ರೀ. ಸಿರಿವಂತಿಕೆಯ ಎದುರಿನಲ್ಲಿ ಇಂಥ ಮಾನ ಸನ್ಮಾನಗಳು ಎಷ್ಟಿದ್ದರೂ ಅಲ್ಪವೇ.

೨೨–೯–೧೯೬೮

ಹೊರಗೆ ಚಿಕ್ಕಂದಿನಲ್ಲಿ ತಲೆಹೊಡ್ಡಿದ ಒಪ್ಪ ಓರಣಗಳ, ಶಿಷ್ಟ ಸಂಯಮಗಳ ಮಿತಭಾಷಿ ಇವರು. ಮಲೆನಾಡಿನ ಹಿರಿಮೆಯೂ ಸೌಜನ್ಯವೂ ಈ ಪೀಳಿಗೆಯಲ್ಲಿ ಅಭಿವ್ಯಕ್ತಿ ನೀಡಿರುವುದು ನಾಯಕರ ಮೂಲಕ. ವೇದಿಕೆಯ ಮೇಲೆ ಹಾ. ಮಾ. ನಾ. ನಿಂತರೆಂದರೆ ಬರಡು ಪದಗಳು ಕುಸುರು ನೆಯ್ಗೆಯ ವಾಗ್ಝರಿಯಲ್ಲಿ ಬಣ್ಣ ಬಣ್ಣದ ರೇಶಿಮೆ ದಾರಗಳಾಗುತ್ತವೆ, ಕುಣಿಕೆಗಳಾಗುತ್ತವೆ. ವ್ಯಾಸಗೌಡರಿಗೆ ಇವರು ವಿನಾಯಕರೆನ್ನೋಣವೆ? ಇದು ಸಮರ್ಪಕ ವರ್ಣನೆ, ಒಂದು ರೀತಿಯಲ್ಲಿ.

ಔಪಚಾರಿಕ ಪ್ರಶಂಸೆಯ ಬದಲು ಅಮೂಲ್ಯ ಬಾಣವೊಂದನ್ನು ನಾಯಕರು ಹೆದೆಗೇರಿಸಿದಂತೆ ಕಂಡಿತು. ವೈದ್ಯಕೀಯ ವಿದ್ಯಾರ್ಥಿ ವಿದ್ಯಾರ್ಥಿನಿಯರು ಅಲ್ಲಿ ನಡೆದ ಬಗೆಯಿಂದ ಅವರು ಪ್ರೇರಿತರಾಗಿರಬೇಕು. ತಾಯ್ನುಡಿ ಶಿಕ್ಷಣ ಮಾಧ್ಯಮವಾಗಬೇಕೆನ್ನುವ ವೇಜಗೌ ಅವರ ಅಪೇಕ್ಷೆಯೊಂದನ್ನಿಟ್ಟುಕೊಂಡು ಪರಿಣಾಮಕಾರಿಯಾಗಿ ಹಾ.ಮಾ.ನಾ. ಮಾತನಾಡಿದರು.

ಶುಭಾಶಯಗಳಿಗೆ ಉತ್ತರ ನೀಡಿದ ವೇಜಗೌ, ವೈದ್ಯ ಶಿಕ್ಷಣವೂ ಮಾತೃಭಾಷೆಯಲ್ಲೇ ದೊರೆಯುವ ದಿನ ದೂರವಿಲ್ಲ ಎಂದರು. ಆ ಸಮಾರಂಭದಲ್ಲಿ ವೈದ್ಯಕೀಯ ವಿದ್ಯಾರ್ಥಿಗಳು ತೋರಿಸಿದ ಉತ್ಸಾಹ ಕಂಡು ಅವರ ವಿಶ್ವಾಸ ಬಲಿತಿರಬೇಕು. ವಸ್ತುನಿಷ್ಠವಾದ ವೈದ್ಯಕೀಯ ವೃತ್ತಿಗೂ ಆತ್ಮಾಭಿವ್ಯಕ್ತಿಗೆ ಅಗತ್ಯವಾದ ಸಾಹಿತ್ಯ ಲಲಿತಕಲೆಗಳಿಗೂ ಸಂಬಂಧ ನಿಕಟವಾದದ್ದು. ಡಾ. ಡಿ. ಎಸ್. ಶಿವಪ್ಪನವರ ದೃಷ್ಟಾಂತವನ್ನು ವೇಜಗೌ ನೀಡಿದರು. ಈ ದಿನ ವೈದ್ಯಕೀಯ ವಿಷಯಗಳನ್ನು ಕುರಿತು ಶಿವಪ್ಪನವರಂತೆ ಕನ್ನಡದಲ್ಲಿ ಸುಲಲಿತವಾಗಿ ಬರೆಯುವವರು ಬೇರೊಬ್ಬರಿಲ್ಲ. ಸಹಸ್ರಾರು ಪಾರಿಭಾಷಿಕ ಪದಗಳನ್ನು ಈಗಾಗಲೇ ಅವರು ಅಣಿಗೊಳಿಸಿದ್ದಾರೆ. ಮೆಡಿಕಲ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದುಕೊಂಡು ಬಿಡುವಿನ ಬಹ್ವಂಶವನ್ನು ಈ ಬಗೆಯ ಬರವಣಿಗೆಗೆ ಮೀಸಲಿರಿಸಿದ್ದಾರೆ. ಸಾಲದ್ದಕ್ಕೆ ಶಿವಪ್ಪನವರು ಮೇಲ್ಮಟ್ಟದ ಚಿತ್ರಕಾರ, ಒಳ್ಳೆಯ ಛಾಯಾಚಿತ್ರಗ್ರಾಹಿ. (ಇದಲ್ಲವೆ ಸಮಗ್ರ ವ್ಯಕ್ತಿತ್ವ? ಉದಾತ್ತವಲ್ಲವೆ ಈ ಸ್ಟೆತಸ್ಕೋಪ್ ಸಂಸ್ಕೃತಿ?)

* * * * *

ಸಭಾಂಗಣದಲ್ಲಿ ವಿದ್ಯಾರ್ಥಿಗಳಲ್ಲದವರೂ ಇದ್ದರು. ಮುಖ್ಯರಾದ ಹಿರಿಯ ಸಾಹಿತಿ ಪ್ರಹ್ಲಾದ ನರೇಗಲ್ಲರು, ಪತ್ರಿಕಾರಂಗದ ಹಿರಿಯರಾದ ಪ. ರಾ. ಪುರೋಹಿತರು, ಆ ಕಾಲೇಜಿನ ಅಧ್ಯಾಪಕವರ್ಗದವರು ಮತ್ತಿತರು. ‘ಬೆಂಕಿ’ ಕನ್ನಡ ಸಂಘ ಈ ಕಾಲೇಜಿನ ಕಿರಿಯರಿಗಷ್ಟೇ ಸೀಮಿತವಾಗಿಲ್ಲ ಎನ್ನುವುದನ್ನು ಸಾರುತ್ತಿತ್ತು ಅವರ ಸಾನ್ನಿಧ್ಯ.

ಸಭೆಯ ಅಧ್ಯಕ್ಷತೆ ವಹಿಸಿದ್ದವರು ಕಾಲೇಜಿನ ಡೀನ್ ಡಾ. ಚೌಕರ್. ವಿದ್ಯಾರ್ಥಿ ವೃಂದದಲ್ಲಿ ಇವರ ಜನಪ್ರಿಯತೆ, ಇವರ ಬಗ್ಗೆಯಿದ್ದ ಅಭಿಮಾನ

ನಾಮವೇ ಸರಿ. ಡಾ. ಜೌಕರ್ ನೇತ್ರವಿಭಾಗದ ಪರಿಣತರು. ಅವರ ಸಮಾಜವನ್ನು ನೋಡುವ ಇವರ ಸುಸಂಸ್ಕೃತ ದೃಷ್ಟಿ, ಅವರ ನೇತ್ರಪರಿಣತಿಗೆ ಹೆಚ್ಚಿನ ಮೌಲ್ಯವನ್ನು ದೊರಕಿಸಿಕೊಟ್ಟಿದೆಯೆನ್ನಬೇಕು.

ಡಾ. ಹೆಗಡೆಯವರು, ಹಿಂದೆ ಡಾ. ಶಿವಪ್ಪನವರು ಈ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾಗ ಅವರ ಸಹಾಯಕರಾಗಿದ್ದ ಡಾ. ಸುಬ್ರಹ್ಮಣ್ಯ ಭಟ್ಟರು –'ಕೆಎಂಸಿ' ಕನ್ನಡ ಸಂಘದ ಮಾರ್ಗದರ್ಶಿಗಳು.

ಶರೀರಸ್ವಾಸ್ಥ್ಯಕ್ಕೂ ಸಮಾಜಸ್ವಾಸ್ಥ್ಯಕ್ಕೂ ಎಷ್ಟರ ಸಂಬಂಧ? ಕಾಲೇಜಿನ ಅಧ್ಯಯನವನ್ನು ಇದೀಗ ಮುಗಿಸಿರುವ ಡಾ. ವಿಷ್ಣುಮೂರ್ತಿಯವರಿಗೆ ಆ ಪ್ರಶ್ನೆ ಕೇಳಬೇಕು. ಕನ್ನಡದ ಉದಯೋನ್ಮುಖ ಕವಿಯಾಗಿ ನಾಡಿನ ಗಮನವನ್ನು ಈ ವೈದ್ಯರು ಈಗಾಗಲೇ ಸೆಳೆದಿದ್ದಾರೆ. ಇವರ ಒಡನಾಡಿಯಾಗಿರುವವರು ಪಾಟೀಲ್—ದಣಿವನ್ನರಿಯದ ದುಡಿಮೆಗೆ ದ್ಯೋತಕ.

* * * * *

ಸಮಾರಂಭ ನಡೆದ ರೀತಿಯಲ್ಲೂ ಒಂದು ಸೊಬಗು, ಆಪರೇಶನ್ ಥಿಯೇಟರಿನಲ್ಲಿ ಶಸ್ತ್ರಚಿಕಿತ್ಸೆ ನಡೆಸಿದ ಹಾಗೆ. ರಾಷ್ಟ್ರಗೀತೆಯಾದಾಗ ಪ್ರಜ್ಞೆ ಮರಳಿತ್ತು.

ಹೊರಗೆ ಬಂದಾಗ ವಿದ್ಯಾರ್ಥಿ ವಿದ್ಯಾರ್ಥಿನಿಯರ ಕಲರವ. ಅಲ್ಲಿ ಅತಿಥಿಗಳಿಗೆ ಸಲಿಗೆಯ ಮುತ್ತಿಗೆ.

ಸಾಹಿತ್ಯ ಸಂಸ್ಕೃತಿಗಳ ಸಿಹಿನೀರನ್ನು ಬಯಸುವ ಈ ವೈದ್ಯಕೀಯ ವಿದ್ಯಾರ್ಥಿ ಸಮುದಾಯ ನಿಸ್ಸಂಶಯವಾಗಿಯೂ ಹೊಸ ಪೀಳಿಗೆಯ ಬಗೆಗೆ ಆಸೆ ಹುಟ್ಟಿಸುತ್ತದೆ. ಇವರನ್ನು ಕಂಡಾಗ 'ನಾಳೆ' 'ಇಂದಿ'ಗಿಂತ ಉತ್ತಮವಾಗಿರುವುದು ಸಾಧ್ಯ ಎಂಬ ಭರವಸೆ ಮೂಡುತ್ತದೆ.

೨೭–೧೦–೧೯೬೮

# ಅಭಿನವ ಮುದ್ದಣ ಕಾರ್ಯಹಳ್ಳರು

ಕಾಸರಗೋಡು ಸಾಹಿತ್ಯ ಸಮ್ಮೇಳನದ ಒಂದು ಮೂಲೆಯಲ್ಲಿ ಸಮಾಜವಾದಿ ಪಕ್ಷದ ಪುಸ್ತಕ ಪ್ರದರ್ಶನಾಲಯ ಒಂದಿತ್ತು. ಅದರ ಮುಂದೆ 'ಕಾರ್ಯಹಳ್ಳ ಸ್ಮಾರಕ' ಎಂದು ಬರೆದಿತ್ತು.

ಮುದುಕನೊಬ್ಬ ಚಿಕ್ಕವೆರಡು ಮಕ್ಕಳನ್ನು ಕರೆದುಕೊಂಡು ಅಲ್ಲಿಗೆ ಬಂದ. ಬರಹ ವನ್ನು ನೋಡಿ ಅವನ ಕಣ್ಣುಗಳಲ್ಲಿ ನೀರುಕ್ಕಿ ಬಂತು. ಮಕ್ಕಳು ಬೆಪ್ಪನೆ ನೋಡುತ್ತಿದ್ದುವು.

ಬಹಳ ಹೊತ್ತಿನ ಮೇಲೆ ಅದೇ ಮುದುಕ ಅವೇ ಮಕ್ಕಳನ್ನು ಹಿಡಿದುಕೊಂಡು ಪುನಃ ಬಂದ. ಮಕ್ಕಳು ತಾವು ತಂದ ಹೂಗಳನ್ನು ಅಲ್ಲಿ ಚೆಲ್ಲಿದರು. ಮುದುಕ ಬಾಷ್ಪವೃಷ್ಟಿಗರೆದ.

ಮುದುಕ ಕಾರ್ಯಹಳ್ಳರ ತಂದೆ. ತನ್ನ ಹತಭಾಗ್ಯ ಮೊಮ್ಮಕ್ಕಳನ್ನು ತಂದೆಯ ನೆನಪಿಗೆ ಮಣಿಯಲು ಕರೆತಂದಿದ್ದರು. ಸಮ್ಮೇಳನದಲ್ಲಿ ಅವರ ಪಾಲು ಅಷ್ಟು. ಕನ್ನಡಕ್ಕಾಗಿ ಒಂದು ಜೀವವನ್ನೇ ಬಲಿಯಿತ್ತಿದ್ದರು. ಕನ್ನಡಮ್ಮನಿಗೆ ಅದೇ ಅವರ ಸೇವೆ !

* * * * *

ಇಪ್ಪತ್ತು ವರ್ಷಗಳಿಗೆ ಹಿಂದಿನ ಬರವಣಿಗೆ ಮೇಲಿನದು. ನನ್ನದಲ್ಲ. ಕಾರ್ಯ ಹಳ್ಳ ರಾಮಕೃಷ್ಣಶೆಟ್ಟರನ್ನು ಗುರುವೆಂದು ಸ್ವೀಕರಿಸಿದ್ದ ಎಂ. ಮೋಹನರದು.

'ಜೀವನ ಮತ್ತು ಕಥೆಗಳು' ಪುಸ್ತಕವಲ್ಲಿನ ಒಂದು ಲೇಖನದಲ್ಲಿ ಮೋಹನ್ ಹಾಗೆ ಬರೆದರು.

ಪುಸ್ತಕದ ಪ್ರತಿಯೂ ನನ್ನದಲ್ಲ. ಕಾರ್ಯಹಳ್ಳರ ಇಬ್ಬರು ಮಕ್ಕಳಲ್ಲಿ ಕಿರಿಯವ ರಾದ ಕತೆಗಾರ ಸಾರಂಗರದು. ಕಾರ್ಯಹಳ್ಳ ಸ್ಮಾರಕ ಸಮಿತಿಯವರು ನನಗೂ ಒಂದು ಪ್ರತಿ ಕಳುಹಿಸಿದ್ದರು. ಓದಲೆಂದು ಒಯ್ದು ಪುಸ್ತಕಪ್ರಿಯರು ಹಿಂತಿರುಗಿ ಕೊಟ್ಟಿಲ್ಲ.

ಈಗ ಆ ಪುಸ್ತಕವನ್ನೋದುವಾಗ ಬಾಲ್ಯದ ನೆನಪಿನಿಂದ ಕಣ್ಣು ಮಂಜಾಗು ತ್ತದೆ; ಕಂಠ ಉಮ್ಮಳಿಸುತ್ತದೆ.

ಪುಸ್ತಕದಲ್ಲಿ ಎರಡು ಭಾಗಗಳಿವೆ. ಕಾರ್ಯಹಳ್ಳರನ್ನು ಕುರಿತ ನಾಲ್ಕು ಲೇಖನ ಗಳು; ಅವರ ಎಂಟು ಕತೆಗಳು.

* * * * *

"ಅದು ಕನ್ನಡದ ದೌರ್ಭಾಗ್ಯ."

*  *  *  *  *

ಬ್ರಹ್ಮಾನಂದ ಪದ್ಮಸಾಲಿಯವರ ಲೇಖನದಿಂದ :

"ಅರ್ಧಘಂಟೆ ಕಾಲ ಮಾತು ಸಾಗಿತು. ಅಷ್ಟರಲ್ಲಿ ತಂದೆಯವರಿಂದ ಅವರಿಗೆ ಕರೆ ಬಂದಿತು. ಅನಾರೋಗ್ಯದಿಂದ ದುರ್ಬಲರಿದ್ದ ಅವರು ಯಾರೊಡನೆಯೂ ಹೆಚ್ಚು ಮಾತನಾಡುವುದನ್ನು ಅವರ ತಂದೆಯವರು ಸಹಿಸುತ್ತಿದ್ದಿಲ್ಲ........ ನಿರರ್ಗಳವಾದ ಮಾತಿನ ಪ್ರವಾಹಕ್ಕೆ ತಡೆಹಾಕುವುದೇ ತಂದೆಯವರ ಕರೆಯ ಗೂಢಾರ್ಥವೆಂದು ಅವರಿಗೆ ತಿಳಿಯದೆ ಇರಲಿಲ್ಲ. ಅದರ ಮರ್ಮವನ್ನು ಅವರು ನಮಗೂ ಅರುಹಿದರು.

"ಮೇಲಿನಿಂದ ಕೆಳಗಿಳಿದೆವು ನಾವು. ಅವರೂ ಮೆಟ್ಟಲಲ್ಲಿ ಸ್ವಲ್ಪ, ಇನ್ನೂ ಜಗಲಿಯಲ್ಲೂ ಸ್ವಲ್ಪ. ಅನಂತರ ಅಂಗಳದಲ್ಲೂ ನಿಂತು ಮತ್ತೂ ಮಾತನಾಡಿದರು. ಅವರ ಹಿರಿಯರನ್ನು ವಂದಿಸಿ, ಅನುಜರನ್ನು ನಮಿಸಿ ಮಾರ್ಗಕ್ಕೆ ಇಳಿದೆವು. ಮತ್ತೂ ಬಂದು ಮಾರ್ಗದಲ್ಲಿ ನಿಂತು ಕೊಂಚ ಮಾತು ಬೆಳೆಸಿದರು."

*  *  *  *  *

ಕನಸು ನೆನಸುಗಳಲ್ಲಿ ಸಾಹಿತ್ಯಾರಾಧನೆ; ಜತೆಗೊಂದು ವೃತ್ತಿ–ತೆರಿಗೆ ಕಚೇರಿಯಲ್ಲಿ.

ಎಷ್ಟು ವಿಶೇಷಣಗಳನ್ನು ನೀಡಬಹುದು? ಸ್ನೇಹಶೀಲ, ನಿಷ್ಠುರವಾದಿ, ಭಾವುಕ, ಸಾಧಕ, ಪಂಡಿತವಕ್ಕಿ, ಕಾವ್ಯಶ್ರೀ?

ಕಾರ್ಯಹಳ್ಳ ರಾಮಕೃಷ್ಣಶೆಟ್ಟಿ ಕ್ಷಯಿಸಿ ಕ್ಷಯಿಸಿ ತಮ್ಮ ಇಪ್ಪತ್ತೇಳನೆಯ ವಯಸ್ಸಿನಲ್ಲೇ ಅಕಾಲ ಮೃತ್ಯುವಿಗೆ ತುತ್ತಾದರು; ಅಭಿನವ ಮುದ್ದಣನಾದರು.

'ಮುದ್ದಣನ ನೆನೆಮ' ಕವಿತೆಯಲ್ಲಿ ಅವರು ಬರೆದಿದ್ದರು :

'ನಾಡಾಡಿಯಾಗಿ ಊರೊಳಗೆ ಜೀಡಿದರು, ಕವಿಯಾಗಿ ಜನಿಸಬೇಡ!
ಕನ್ನಡದಿ–ಕವಿಯಾಗಿ ಜನಿಸಬೇಡ!'

ಕಾರ್ಯಹಳ್ಳರಿಗೆ ನೆನಪಿನ ಹೂಗಳ ಅರ್ಚನೆ ಮಾಡುವಾಗಲೆಲ್ಲ ಈ ಸಾಲುಗಳನ್ನು ಕನ್ನಡದ ಜನ ಸ್ಮರಿಸುತ್ತಾರೆ.

೧೭–೧೧–೧೯೬೮

# ಸಿಂಕ್ಲೇರ್ ಇತಿಶ್ರೀ

ಹದಿಮೂರು ಹದಿನಾಲ್ಕು ವರ್ಷಗಳಿಗೆ ಹಿಂದೆ ಅಮೆರಿಕನ್ ಸಾಹಿತ್ಯದ ಅಧ್ಯಾಪಕರೊಬ್ಬರು ಮೈಸೂರಿನ ಮಹಾರಾಜಾ ಕಾಲೇಜಿಗೆ ಬಂದರು. ಅವರು ಮಾತನಾಡಿದುದು ತಮ್ಮ ದೇಶದ ಸಾಹಿತ್ಯವನ್ನು ಕುರಿತು. ಭಾಷಣಕಾರರು ಹೆಸರಿಸಿದ ಸಾಹಿತಿಗಳಲ್ಲಿ ತಮಗೆ ಪರಿಚಿತರಾದ ಒಬ್ಬರಿಲ್ಲ ಎಂದು ಶ್ರೋತೃಗಳಲ್ಲಿ ಕೆಲವರಿಗೆ ಅಸಮಾಧಾನ. ಒಬ್ಬರು ಎದ್ದು ಕೇಳಿಯೂ ಬಿಟ್ಟರು :

"ಅಪ್ಟನ್ ಸಿಂಕ್ಲೇರ್ ವಿಷಯ ನೀವೇನೂ ಹೇಳಲಿಲ್ಲವಲ್ಲ!"

ದೊರೆತ ಉತ್ತರ : "ಸಿಂಕ್ಲೇರ್‌ರನ್ನು ಅಮೆರಿಕದಲ್ಲಿ ಈಗ ಯಾರೂ ಓದುವುದಿಲ್ಲ, ಅಭ್ಯಸಿಸುವುದಿಲ್ಲ."

ತಥ್ಯಾಂಶ ಇಲ್ಲದ ಮಾತು ಅದಲ್ಲ. ಆದರೆ, ಸಿಂಕ್ಲೇರರ ಸಾಮಾಜಿಕ ರಾಜಕೀಯ ತತ್ತ್ವಜ್ಞಾನವೂ ಆ ಉಪನ್ಯಾಸಕರ ತೀರ್ಮಾನಕ್ಕೆ ಕಾರಣ – ಎನ್ನದೆ ವಿಧಿಯಿಲ್ಲ.

*           *           *           *           *

ಅಪ್ಟನ್ ಸಿಂಕ್ಲೇರ್ ಸ್ವತಃ ಹೇಳಿರುವಂತೆ ಅವರು ನಡೆಸಿದ್ದು 'ಸಾಮಾಜಿಕ ನ್ಯಾಯಕ್ಕಾಗಿ ಹೋರಾಟ.' ಎಪ್ಪತ್ತು ವರ್ಷಗಳ ಕಾಲ ಇದು ನಡೆಯಿತು.

ಮಾಗಿದ ಸಿಂಕ್ಲೇರ್ ತಮ್ಮ ತೊಂಭತ್ತನೆಯ ವಯಸ್ಸಿನಲ್ಲಿ ಮೊನ್ನೆ ತೀರಿಕೊಂಡರು. ಇವರು ಎಂಭತ್ತು ಕೃತಿಗಳ ಕರ್ತೃ. ಪ್ರಪಂಚದ ಐವತ್ತು ಭಾಷೆಗಳಲ್ಲಿ ಅವರ ಅನೇಕ ಕೃತಿಗಳು ಪ್ರಕಟವಾದುವು. ಅವರ 'ಬ್ರಾಸ್ ಚೆಕ್' ಕಾದಂಬರಿಯ ೧,೫೫,೦೦೦ ಪ್ರತಿಗಳು ಮಾರಾಟವಾದುವು. ಮಾಂಸ ಉದ್ಯಮದ ಹಿನ್ನೆಲೆಯಲ್ಲಿ ಬರೆದ 'ಜಂಗ್ಲ್' ಐವತ್ತು ಅರುವತ್ತು ವರ್ಷಗಳ ಹಿಂದೆ ಇಡಿಯ ಅಮೆರಿಕವನ್ನೇ ಕಳವಳಕ್ಕೆ ಗುರಿಮಾಡಿತು.

ಪಾರಿತೋಷಕಗಳೂ ಕೆಲವು ಅವರಿಗೆ ದೊರೆತವು.

೧೯೩೦ರಲ್ಲಿ ನೊಬೆಲ್ ಪಾರಿತೋಷಕಕ್ಕಾಗಿ ಸಿಂಕ್ಲೇರರ ಹೆಸರು ಪ್ರಸ್ತಾಪಿಸಲ್ಪಟ್ಟಿತು.

ಆಗ ಅಪ್ಟನ್ ಸಿಂಕ್ಲೇರ್ ನಕ್ಕು ನುಡಿದರು :

"ನಾನೇ ಸಿಂಕ್ಲೇರ್ ಅಂತ ತಪ್ಪು ತಿಳಕೊಂಡಿದ್ದಾರೆ!"

*           *           *           *           *

ಆಡಿದಂತೆ ಮಾಡಿದ ವ್ಯಕ್ತಿ ಸಿಂಕ್ಲೇರ್. ಬರವಣಿಗೆ ಬದುಕು ಎರಡೂ ಅವರ ಪಾಲಿಗೆ ಅವಿಭಾಜ್ಯವಾಗಿದ್ದುವು.

ಒಬ್ಬನೇ ವ್ಯಕ್ತಿ ಏನೇನು ಆಗಿರುವುದು ಸಾಧ್ಯ ? ಸಸ್ಯಾಹಾರಿ, ನೀತಿಪ್ರಸಾರಕ, ಸಮಾಜವಾದಿ, ದೇವರ ಇರುವಿಕೆಯ ಬಗೆಗೆ ಶಂಕೆ ತಳೆದವನು, ಕುಡಿತದ ವಿರೋಧಿ, ಸ್ತ್ರೀ ಸ್ವಾತಂತ್ರ್ಯದ ಪ್ರತಿಪಾದಕ – ಈ ಎಲ್ಲ ಮುಖಗಳನ್ನೂ ಒಳಗೊಂಡಿದ್ದ ಸಮಗ್ರ ವ್ಯಕ್ತಿತ್ವ ಅವರದು.

ನಗರದ ಹೊರಗೆ ಸಹಕಾರ ಪದ್ಧತಿಯ ಮೇಲೆ ಈ ಬರೆಹಗಾರ ಒಮ್ಮೆ ವ್ಯವಸಾಯ ಆರಂಭಿಸಿದರು. ಆತನ ಕಟ್ಟುನಿಟ್ಟಿನ ಶಿಸ್ತು ಪಾಲಿಸಲಾರದೆ ಹಿಂಬಾಲಕರೂ ಆರಾಧಕರೂ ಕಂಗಾಲಾಗಿ ಹೋದರು. ಹೆಂಡತಿ ಈತನ ಸಹವಾಸ ಸಾಕು ಎಂದು ಓಡಿಹೋದಳು.

ಸಮಾಜವಾದಿಯ ಹಣೆಪಟ್ಟಿಯೊಂದಿಗೆ ಅಮೆರಿಕದ ಪ್ರತಿನಿಧಿ ಸಭೆಗೆ ಚುನಾವಣೆಗೆ ನಿಂತರು; ಸೋತರು. ಅದೇ ಬಾವುಟ ಹಿಡಿದು ಸೆನೆಟ್ ಸ್ಪರ್ಧೆಗೆ ನಿಂತರು; ಸೋತರು. ಆ ಘೋಷಣೆಗನ್ನೇ ಕೂಗಿಕೊಂಡು ಕ್ಯಾಲಿಫೋರ್ನಿಯಾದ ಗವರ್ನರ್ ಪದದ ಹೋರಾಟದಲ್ಲಿ ಭಾಗಿಯಾದರು; ಸೋತರು. ಮತ್ತೊಮ್ಮೆ ಡೆಮೊಕ್ರಾಟ್ ಎನಿಸಿಕೊಂಡು ನಿಂತು ನೋಡಿದರು; ಸೋತರು. ಯಾವ ಪಕ್ಷವಾದರೇನು? ಸಿಂಕ್ಲೇರ್ ಸಿಂಕ್ಲೇರರೆ ಎಂಬುದು ಜನರಿಗೆ ತಿಳಿದು ಹೋಗಿತ್ತು !

ಇಂಥವರನ್ನು ವ್ಯಾವಹಾರಿಕ ಜಗತ್ತು ಪ್ರೀತಿಯಿಂದ ಕರೆಯುವುದು 'ಹುಚ್ಚ' ಎಂದು.

ಆದರೆ, ಅವರ ಬರೆವಣಿಗೆ ಎಷ್ಟು ತೀಕ್ಷ್ಣವೂ ಪರಿಣಾಮಕಾರಿಯೂ ಆಗಿತ್ತೆಂದರೆ, ಅಧ್ಯಕ್ಷ ರೂಸ್‌ವೆಲ್ಟರು ಸಿಂಕ್ಲೇರರನ್ನು ವಿಚಾರಿಸಿಮುಯಕ್ಕೆಂದು ಶ್ವೇತಭವನಕ್ಕೆ ಕರೆದಿದ್ದರು.

'ಜಂಗಲ್' ಕಾದಂಬರಿ ಅಮೆರಿಕನ್ ಸಮಾಜದಲ್ಲಿ ಅಲ್ಲೋಲಕಲ್ಲೋಲ ಉಂಟುಮಾಡಿದಾಗ ರೂಸ್‌ವೆಲ್ಟರು ಹತ್ತಿರ ಇದ್ದವರಿಗೆ ಹೇಳಿದರು :

"ಈ ರಾಷ್ಟ್ರವನ್ನು ಆಳೋದಕ್ಕೆ ನನಗೆ ಬಿಡುವ ಹಾಗೆ ಆತನಿಗೆ ಹೇಳಿ."

* * * * *

ಲೋಕದ ವಿವಿಧ ರಾಷ್ಟ್ರಗಳ ಪ್ರಗತಿಶೀಲರು ಅಪ್ಟನ್ ಸಿಂಕ್ಲೇರರಿಗೆ ತಮ್ಮ ಮೆರವಣಿಗೆಯಲ್ಲಿ ಎತ್ತರದ ಸ್ಥಾನ ನೀಡಿದ್ದರು. ಸಿಂಕ್ಲೇರರಿಂದ ಪ್ರಭಾವಿತರಾದ ಬರೆಹಗಾರರುಂಟು ಎಂದು ಖಡಾಖಂಡಿತವಾಗಿ ಹೇಳುವಂತಿಲ್ಲ. ಆದರೆ ಆ ಜನಪ್ರಿಯ ಸಾಹಿತಿಯ ಕೃತಿಗಳನ್ನು ಬರೆಹಗಾರರೂ ಕುತೂಹಲದಿಂದ ಓದುತ್ತಿದ್ದರು ಎನ್ನಬಹುದು.

ಅವರ ಕೃತಿಗಳಲ್ಲಿ ಸಾಹಿತ್ಯದ ಅಂಶವೆಷ್ಟು ? ಪ್ರಚಾರದ (ಹೋರಾಟದ) ಅಂಶ

ಎಷ್ಟು? ಸಾಹಿತ್ಯವನ್ನು ಸಾಹಿತ್ಯವೆಂದೇ ಅಭ್ಯಸಿಸಬಯಸುವವರಿಗೆ ಸಿಂಕ್ಲೇರ್ ಸೃಷ್ಟಿ ನಿರಾಸೆಯುಂಟುಮಾಡುತ್ತದೆ. ಆದರೆ ಆ ಬರವಣಿಗೆಯ ಕಾಲಾವಧಿಯ ಬದುಕಿನ ಹಿನ್ನೆಲೆಯಲ್ಲಿ ಆ ಕೃತಿಗಳನ್ನು ಕಂಡರೆ ಅವುಗಳ ಮಹತ್ವದ ಅರಿವಾಗುತ್ತದೆ.

ನಂಬುವುದು ಕಷ್ಟವಾಗಬಹುದು: ಸಿಂಕ್ಲೇರ್ ತಮ್ಮ ೮೩ನೆಯ ವಯಸ್ಸಿನಲ್ಲಿ—ಏಳು ವರ್ಷಗಳಿಗೆ ಕೆಳಗೆ— ಮೂರನೆಯ ಬಾರಿ ವಿವಾಹವಾದರು.

ಕಾಲವನ್ನೂ ಕಾಲನನ್ನೂ ಕೆಣಕಿ ಸೆಣಸಿ ಸಿಂಕ್ಲೇರ್ ಬದುಕುತ್ತಿದ್ದ ಬಗೆ ಅದ್ಭುತ.

* * * * *

ಸಿಂಕ್ಲೇರ್ ಸ್ನೇಹಶೀಲ. ಕವಿ ರವೀಂದ್ರರು ಅವರ ಮಿತ್ರರಾಗಿದ್ದರು.

ಕೊನೆಯವರೆಗೂ ಕುದುರೆಯ ಮೇಲೆ ಕುಳಿತೇ ಇದ್ದ ಈ ಮಹಾನುಭಾವನ ಬಗೆಗೆ ಪರ್ಯಾಯವಾಗಿ ಬರ್ನಾರ್ಡ್ ಷಾ ಒಮ್ಮೆ ಹೇಳಿದ ಮಾತೇ ಶ್ರೇಷ್ಠತಮ ಪ್ರಶಂಸೆ, ಅತ್ಯುತ್ತಮ ಶ್ರದ್ಧಾಂಜಲಿ.

ಷಾ ಒಮ್ಮೆ ಅಂದರು:

“ನನ್ನ ದೀರ್ಘ ಅವಧಿಯಲ್ಲಿ ಏನು ಸಂಭವಿಸಿತು ಎಂದು ಜನ ನನ್ನನ್ನು ಕೇಳಿದಾಗ, ಸಿಂಕ್ಲೇರರ ಕಾದಂಬರಿಗಳತ್ತ ನಾನು ಬೊಟ್ಟು ಮಾಡುತ್ತೇನೆ.”

೮–೧೨–೧೯೬೮

# ಮಹಾ ಭಿಕ್ಕು-ರತ್ನ

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಮುದ್ದಾಗಿ ಬರೆದಿಡಬೇಕಾದ ಒಂದು ಪುಟ– ಗುರುವಾರ ಸಂಜೆ.

ಸಂದರ್ಭ, ಅರುವತ್ತು ತುಂಬಿದ ಜಿ. ಪಿ. ರಾಜರತ್ನಂ ಅವರಿಗೆ ಸನ್ಮಾನ. ಸಮಾರಂಭಕ್ಕೆ ಡಿ. ವಿ. ಜಿ., ಮಾಸ್ತಿಯವರಿಬ್ಬರೂ ಅಧ್ಯಕ್ಷರು ('ನಾನು ಬೇರೆಯಲ್ಲ, ಅವರು ಬೇರೆಯಲ್ಲ') – ಅದೊಂದು ಅಪೂರ್ವ ವ್ಯವಸ್ಥೆ. ರಾ. ಶಿ. ಯವರಿಂದ ರತ್ನರಿಗೆ ತಮ್ಮ 'ಇಂದಾನೊಂದು ಕಾಲದಲ್ಲಿ' ಕೃತಿಯ ನೀಡಿಕೆ. ["ಬೆಂಗಳೂರು ವಿಶ್ವವಿದ್ಯಾಲಯದ ಪರವಾಗಿ" (ಉಪಕುಲಪತಿ ಗೋಕಾಕರು); "ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘದ ಪರವಾಗಿ" (ಪ್ರಾಧ್ಯಾಪಕ ಮುಗಳಿ)]—ಹೀಗೆ ಹಲವಾರು ಸಂಘ ಸಂಸ್ಥೆಗಳಿಂದ ಹಾರಗಳ ಅರ್ಪಣೆ. ಮೂರು ದಶಕಗಳಿಗೂ ಹೆಚ್ಚು ಕಾಲ ರತ್ನರ ಪುಸ್ತಕಗಳನ್ನು ಮುದ್ರಿಸಿರುವ ಬಿ. ಬಿ. ಡಿ. ಪವರ್ ಪ್ರೆಸ್ಸಿನ ಹಿರಿಯ ಮಲ್ಯರಿಂದ ಕಾರ್ಯಕ್ರಮದ ಏರ್ಪಾಟು. ವಿದ್ಯಾರ್ಥಿಗಳು, ಮಿತ್ರರು, ಸಾರಸ್ವತ ಸಹೃದಯರು– ಜನ ಕಿಕ್ಕಿರಿದು ನೆರೆದಿದ್ದ ನ್ಯಾಷನಲ್ ಕಾಲೇಜಿನ ಸಭಾಂಗಣ.

ಇಲ್ಲಿ ಮಾತು, ಮಾಣಿಕ್ಯ. ಕೇಳಿಸಿದ ಪದಗಳ ಪ್ರತಿ ಅಕ್ಷರಕ್ಕೂ ಲಕ್ಷ ವರಹ.

ಎರಡೂವರೆ ಘಂಟೆಗಳ ಕಾಲ ಸಾಹಿತ್ಯದ ಸುಂದರ ನವಿಲು ಗರಿಗೆದರಿ ಇಲ್ಲಿ ಕುಣಿಯಿತು.

* * * * *

ನೆನಪು ಕಾಡುತ್ತದೆ. ಕಾರಂತರು ಏರ್ಪಡಿಸಿದೊಂದು ಮಕ್ಕಳ ಸಮ್ಮೇಳನ. ನನಗಾಗ ವರ್ಷ ಎಂಟೋ ಹತ್ತೋ. ಸಂಜೆ ಬಯಲಿನಲ್ಲಿ ಚುಟುಕಗಳನ್ನು ಹಿಡಿದು ಕೊಂಡು ಆಟ ನಡೆಸಿದ್ದರು– ತೇಜಸ್ವೀ ಮುಖಮುದ್ರೆಯ ಒಬ್ಬ ಯುವಕ. ಹತ್ತಿರ ಸುಳಿದವರನ್ನೆಲ್ಲ ಸೆಳೆಯುವ ಲೋಹಚುಂಬಕ. 'ಮನೆಯಲೊಂದು ಪಾಪ, ಅದಕೆ ಬಹಳ ಕೋಪ'.... ಅಂದಿನಿಂದ, ನಾನು ಅಂದು ತೋರಿಸಿದ ರತ್ನರ ಚುಟುಕ ಗಳೆಷ್ಟು! ಅನುಕರಣಕ್ಕಾಗಿ ಮಾಡಿದ ಪ್ರಯತ್ನಗಳೆಷ್ಟು!

ಮುಂದೆ 'ರತ್ನನ ಪದಗಳ'ನ್ನು ಪ್ರತಿ ಮಾಡಿ ಹಾಡಿದ್ದೇ ಹಾಡಿದ್ದು. 'ಬ್ರಮ್ಮ ನಿಂಗೆ ಜೋಡಿಸ್ತೀನಿ ಎಂಡ ಮುಟ್ಟಿಸ್ಬೇಡ'ನ'....

'ಧಮ್ಮಪದ' 'ಪಾಲಿ ಪಜ್ಜ ಪುಪ್ಫಾಂಜಲಿ'........

ಬಳಿಕ ಕರ್ನಾಟಕದಲ್ಲೆಲ್ಲ ಖ್ಯಾತಿಯನ್ನು ಪಡೆದ ಕಂಚಿನ ಕಂಠದ ಪರಿಚಯ.

ಕರ್ನಾಟಕ ಸಂಘದ ಸೂತ್ರಧಾರರಾಗಿ ಅವರು ಮಾಡಿದ ನಾಡು ಮೆಚ್ಚುವ ಕೆಲಸ. ಅವರು ದೊಡ್ಡವರ ದಾರಿಯನ್ನು ಕಂಡರು. ಇಂದಿನವರಿಗೆ ಹಿರಿಯ ಬೆಳಕನ್ನು ನೀಡಿದರು. ನಾಳೆಯ ಬದುಕಿಗೆ ಏಳಿಗೆಯನ್ನು ಅಣಿಗೊಳಿಸಿದರು.

ನೂರಾರು ಪುಸ್ತಕಗಳನ್ನು ಬರೆದರು. ಪ್ರಕಟಿಸಿ, ಸಾವಿರಾರು ಜನ ಕೊಳ್ಳುವಂತೆ ಮಾಡಿದರು. ಅನೇಕ ಲೇಖಕರ ಉದಯ ಅಭ್ಯುದಯಗಳಿಗೆ ಕಾರಣರಾದರು. ಸಾಕ್ಷರರಲ್ಲಿ ಸದಭಿರುಚಿಯನ್ನು ಮೂಡಿಸಲು ತಪಸ್ಸು ಕೈಗೊಂಡರು.

ಹೆಚ್ಚು ಕಡಮೆ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಕೈ ಆಡಿಸಿ, ಅವರು ಸವ್ಯಸಾಚಿಯಾದರು.

* * * * *

ಅದು ಶತಮಾನಗಳಿಗೊಮ್ಮೆ ಬರುವ ವಸಂತ. ಎಲ್ಲೆಲ್ಲೂ ಎಳೆ ಚಿಗುರು. ಆ ತಂಗಾಳಿಯನ್ನು ಸೇವಿಸಿದರೇ ಸಾಕು, ಎಲ್ಲರಲ್ಲೂ ಕಾವ್ಯದ ಗರ್ಭಧಾರಣೆ. ಕಿವಿಗೆ ಗಾಳಿ ಹೊಕ್ಕ ಕನ್ನಡದ ಎಳೆಗರುಗಳನ್ನು ಹಿಡಿದವರು ಯಾರಿದ್ದರು ?

ರಾಜರತ್ನಂರದು ಹೆಸರಾದ ಗುಂಡ್ಲುಪಂಡಿತ ಮನೆತನ. ತಾಯಿ ಅವನನ್ನು ರಾಜ ಎಂದು ಕರೆದರು. ರಾಜೈಯಂಗಾರ್ ; ಹುಡುಗನಿಗೆ ಗಣಿತ ಹಿಡಿಸುತ್ತಿರಲಿಲ್ಲ. ಗಣಿತದ ಅಧ್ಯಾಪಕರು ಮೊದಲ ಸಾಲಿನಲ್ಲಿರುತ್ತಿದ್ದ ಹುಡುಗರನ್ನು 'ಆಹಾ ! ರತ್ನಗಳು !' ಎಂದು ಪರಿಹಾಸ್ಯ ಮಾಡುತ್ತಿದ್ದರು. 'ಗುಂಡುಪಂಡಿತ'ನಿಗೆ ಅದೇನು ತೋಚಿತೊ ? ಶಾಲೆಯ ದಾಖಲೆ ಪುಸ್ತಕದಲ್ಲಿ ತನ್ನ ಹೆಸರನ್ನು ರಾಜರತ್ನಂ ಅಂತ ಮಾಡಿಕೊಂಡ. ರಾಜರತ್ನಂ ಐಯಂಗಾರ್. ಸೆಂಟ್ರಲ್ ಕಾಲೇಜಿಗೆ ಬಂದಾಗ ಆಂಗ್ಲರಾಗಿದ್ದ ಪ್ರಾಧ್ಯಾಪಕರು 'ಬಹಳ ಉದ್ದ ಹೆಸರು. ಐಯಂಗಾರ್ ಬಿಟ್ಟುಬಿಡೋಣವೆ ?' ಅಂದರು. ವಿದ್ಯಾರ್ಥಿ ಒಪ್ಪಿದ ; ಬರಿಯ ರಾಜರತ್ನಂ ಆದ.

ಆದರೆ ಹೆಸರಿಗೆ ಇನಿಷಿಯಲ್ಲು ಇರಬೇಕಲ್ಲ ? ಗುಂಡ್ಲು ಪಂಡಿತ ಜಿ. ಪಿ. ಆದ.

ರಾಜರತ್ನಂರಿಗೆ ಅನಿಸುತ್ತದೆ—ಜಿ. ಪಿ. ಅನ್ವರ್ಥಸೂಚ್ಯಾಕ್ಷರಗಳು. ಸಾಹಿತ್ಯದ ಎಲ್ಲ ಗಿಡಗಳನ್ನೂ ಮುಟ್ಟಿರುವ ಜನರಲ್ ಪ್ರಾಕ್ಟೀಷನರ್, ರಾಜರತ್ನಂ.

* * * * *

'ಮಸೆಯಲಿ ಕ್ರಾಂತಿಯ ಕ್ರೂರಕುಠಾರಂ, ನೆಲಸಮವಾಗಲಿ ವೈರಿ ವಠಾರಂ !'

'ಗಂಡುಗೊಡಲಿ' ನಾಟಕದ ಸಾಲು ಇದು. ಸ್ವಾತಂತ್ರ್ಯ ಸಮರದ ಬೇಗೆಯಿಂದ ವಾತಾವರಣ ಕಾವೇರಿದ್ದ ಹಿಂದಿನ ದಿನಗಳಲ್ಲಿ, ಆ ಪದಗಳನ್ನು ಆಲಿಸಿದವರು ಪರಶುರಾಮರಾಗುತ್ತಿದ್ದರು.

ನಿರುದ್ಯೋಗಿ ರಾಜರತ್ನಂ ಒಂದು ಸಭೆಯಲ್ಲಿ ನೆಹರೂ ಭಾಷಣ ಕೇಳಿ ಮನೆಗೆ ಬಂದರು. ಲೇಖನಿಯನ್ನು ಮಸೆದರು. ಅದು ಕೊಡಲಿಯಾಯಿತು. ಗಂಡು-ಗೊಡಲಿಯಾಯಿತು.

ಅಲ್ಲಿಂದ ಬುದ್ಧಂ ಶರಣಂ ಗಚ್ಛಾಮಿ.

ಅಂತಲ್ಲಾಗ ? ಖಂಡಿತ ಅಲ್ಲ. ಅದು ತುಡಿಯುವ ಜೀವ ಏಕಾಂಗಿಯಾಗಿ ನಡೆಸುತ್ತಿದ್ದ ಸಮುದ್ರಮಥನ. ತನ್ನ ತಾನರಿಯಲು ಮಾಡಿದ ಮಹಾನ್ ಪ್ರಯತ್ನ.

ಬುದ್ಧ, ಜಿನ, ಕ್ರಿಸ್ತ, ಹಳಗನ್ನಡ–ಹೊಸಗನ್ನಡ ಎಲ್ಲವನ್ನೂ ಅವರು ಅರಗಿಸಿ ಕೊಂಡರು.

* * * *

ಬಹಳ ಮುಂದಿರುವ ನಾಳೆ, ಯಾವ ಕೃತಿಗಳಿಗಾಗಿ ಜನ ಇವರನ್ನು ನೆನೆಸ ಬಹುದು ? ರತ್ನನ ಪದಗಳು ? ನಾಗನ ಪದಗಳು ? ಆತ್ಮವೃತ್ತ? ಬೌದ್ಧ ಜೈನ ಮತ ಸಂಬಂಧದ ಪುಸ್ತಕಗಳು ? ಸಂಗ್ರಹಿಸಿದ ಗ್ರಂಥಗಳು ? ಶಿಶುಸಾಹಿತ್ಯ?

ಯಾವುದಾದರೂ ಒಂದನ್ನು ಹೆಸರಿಸಿದರೆ ಆನೆ ಕುರುಡರ ಕತೆಯಾದೀತು.

ಅಲ್ಲದೆ ಸಿಂಹಾವಲೋಕನಕ್ಕೂ ಇತ್ಯರ್ಥಕ್ಕೂ ಇದು ಸಮಯವಲ್ಲ. ಗುಂಡು ರತ್ನಂ ಇನ್ನೂ ಅರುವತ್ತು ವರ್ಷ ಬಾಳುತ್ತಾರೆ. ಆ ಅವಧಿಯಲ್ಲಿ ಸಾಹಿತ್ಯದ ಈ ಮಹಾ ಭಿಕ್ಕು ರಚಿಸುವ ಕೃತಿಗಳಿಗಾಗಿಯೂ ಇತಿಹಾಸಕಾರ ಕಾಯಬೇಕು.

ತನ್ನ ಈ ಭಕ್ತ ಇನ್ನೂ ಅರುವತ್ತರ ಮಗು ಎಂದು ಸರಸೋತಮ್ಮನಿಗೆ ಹಿಗ್ಗು.

೧೫–೧೨–೧೯೬೮

# ಕನ್ನಡದ 'ಜ್ವಾಲಾಮುಖಿ'

ಸೋವಿಯೆತ್ ದೇಶ ನೆಹರೂ ಪಾರಿತೋಷಕ ವಿಜೇತ ಬಸವರಾಜ ಕಟ್ಟೀಮನಿಯವರನ್ನು ಸತ್ಕರಿಸುವ ಸಮಾರಂಭ ಜರಗಿದ ದಿನದಿಂದ ಒಂದು ವಿಷಯದ ಬಗೆಗೆ ಬಹಳ ಯೋಚಿಸಿದ್ದೇನೆ. ಅದು ೧೯೪೦ರ ಪೀಳಿಗೆಯ ಕನ್ನಡ ಬರೆಹಗಾರರು ತುಳಿದಿರುವ ದಾರಿ. ಆ ಜನ ಕಾಡನ್ನು ಊರಾಗಿ ಬೆಟ್ಟವನ್ನು ಬಯಲಾಗಿ ಬದಲಾಯಿಸಲು ಹೊರಟವರು. ಅವರು ಸಾಹಿತ್ಯ ಸಮಾಜಗಳೆರಡರಲ್ಲೂ ಬೇರೂರಿದ್ದ ಸಾಂಪ್ರದಾಯಿಕ ಕಲ್ಪನೆಗಳ ಮೇಲೆ ತೀವ್ರ ಯುದ್ಧವನ್ನು ಘೋಷಿಸಿದವರು.

ಕನ್ನಡದಲ್ಲಿ ಲೇಖನಿಯನ್ನು ಖಡ್ಗವಾಗಿ ಬಳಸಿದವರಲ್ಲಿ ಅವರೇ ಮೊದಲಿಗರು ಎನ್ನೋಣವೆ? ತಪ್ಪು, ತಪ್ಪು. ಬಂಡಾಯಗಾರರು ಎಲ್ಲ ಶತಮಾನಗಳಲ್ಲೂ ಇದ್ದವರೇ. ಅದು ಸಮಾಜ–ಸಾಹಿತ್ಯಗಳೆರಡರಲ್ಲೂ ಎಲ್ಲ ಕಾಲಗಳಲ್ಲೂ ಕಾಣಬರುವ ಪ್ರವೃತ್ತಿ. ೧೯೪೦ರೀಚೆಗೆ ಮಾತ್ರ ಕನ್ನಡದಲ್ಲಿ ಅಂಥ ಪ್ರವೃತ್ತಿ ವೈಯಕ್ತಿಕ ಬಲವಾಗಿ ಉಳಿಯುವುದರ ಬದಲು, ದರ್ಶನದ ರೂಪವನ್ನು ತಳೆಯಿತು.

ಆ ದರ್ಶನದ ನೆಲೆಯಿಂದ ಸಾಹಿತ್ಯ ಕೃಷಿಮಾಡಿದ ಯುವಕರಲ್ಲಿ ಪ್ರಮುಖರು ಬಸವರಾಜ ಕಟ್ಟೀಮನಿ.

* * * * *

ಅದೊಂದೇ ಅಲ್ಲ ಬಸವರಾಜರ ಹೆಗ್ಗಳಿಕೆ. ಯಾವುದೇ ದರ್ಶನದ ರೂಪ ಕಾಲದ ಗಾಳಿಗುದ್ದಿಗೆ ಸಿಲುಕಿದಾಗ ಸ್ವಲ್ಪ ಮಟ್ಟಿಗೆ ಜೇಡಿಯಾಗುವುದುಂಟು. ಕಟ್ಟೀಮನಿಯವರ ವಿಷಯದಲ್ಲಿ ಹಾಗಲ್ಲ. ವೈಯಕ್ತಿಕವಾಗಿ ಬದುಕಿನ ಹಲವು ಚಕ್ರತೀರ್ಥಗಳು ಅವರ ಮೈಯನ್ನು ತೋಯಿಸಿದ್ದರೂ, ಬರೆಹಗಾರನಾಗಿ ಒಮ್ಮೆ ಸ್ವೀಕರಿಸಿದ ದರ್ಶನದಿಂದ ಅವರೆಂದೂ ವಿಚಲಿತರಾದವರಲ್ಲ.

ಇನ್ನೂ ಸರಳವಾಗಿ ಹೇಳುವುದಾದರೆ, ೩೫ ವರ್ಷಗಳ ಹಿಂದೆ ಬಂಡಾಯಗಾರನಾಗಿ ಕಂಡುಬಂದ ಕಟ್ಟೀಮನಿ ಇಂದಿಗೂ ಬಂಡಾಯಗಾರನೇ. ಆಗ ಲೇಖನಿ ಎಷ್ಟು ಕಠೋರವಾಗಿದ್ದಿತೋ, ಈಗಲೂ ಅಷ್ಟೇ ಕಠೋರ. ಕಟ್ಟೀಮನಿ ಬರೆವಣಿಗೆ ಎಂದರೆ ಆಗ ಹಲವರು ಅಂಜುತ್ತಿದ್ದರು. ಈಗಲೂ ಅಂಥದೇ ಅಂಜಿಕೆ ಹಲವರಿಗೆ. ಆ ಶೈಲಿಗೆ ಮಾರು ಹೋಗುತ್ತಿದ್ದವರ ಸಂಖ್ಯೆ ಸಹಸ್ರ. ಈಗಲೂ ಅಷ್ಟೆ.

ಬಡತನದ ಬೇಗೆಯಲ್ಲಿ ಹುಟ್ಟಿ ಬೆಳೆದರೂ ಲೇಖಕನಿಂದ ಶ್ರೀಮಂತ ಬರೆವಣಿಗೆ ಸಾಧ್ಯವಾಗುವುದುಂಟು. ಮುದ್ದಣ ಪರಂಪರೆ ಎನ್ನುವುದು ಇದಕ್ಕೇ. ಕಟ್ಟೀಮನಿ

ಆ ಜಾತಿಯವರು. ವಿಶೇಷವೆಂದರೆ, ತನ್ನೆಲ್ಲ ಅನುಭವವನ್ನು ಭಟ್ಟಿ ಇಳಿಸಿ ಬರೆಯುವಕ್ಕೆ ಬೆಲೆ ಬರುವಂತೆ ಅವರು ಮಾಡಿದರು. ಅವರ ಪಾಲಿಗೆ ಬದುಕು-ಕಲೆಗಳೆರಡೂ ಒಂದೇ; ಸತ್ಯ–ಸೌಂದರ್ಯಗಳೆರಡೂ ಒಂದೇ.

* * * * *

ಭೋಜನ ಕೂಟದಲ್ಲಿ ಹಿರಿತನ ವಹಿಸಿದ್ದ ಸಚಿವ ರಾಮಕೃಷ್ಣ ಹೆಗಡೆಯವರು, 'ಗೋಕಾಕರು ಬರೆಯುವ ಸಾಹಿತ್ಯ ಒಂದು ಬಗೆಯದು, ಕಟ್ಟೀಮನಿ ಬರೆಯುವ ಸಾಹಿತ್ಯ ಒಂದು ಬಗೆಯದು. ಒಂದರಲ್ಲಿ ಸೌಂದರ್ಯವಿದ್ದರೆ ಇನ್ನೊಂದರಲ್ಲಿ ವಸ್ತುಸ್ಥಿತಿಯ ಚಿತ್ರಣವಿರುತ್ತದೆ' ಎಂದರು. ಸಾರ್ವಜನಿಕ ಸಮಾರಂಭದಲ್ಲಿ ಮಾತಿನ ಆ ಎಳೆಯನ್ನು ಎತ್ತಿಕೊಳ್ಳುತ್ತ ಅಧ್ಯಕ್ಷಸ್ಥಾನದಿಂದ ಗೋಕಾಕರೆಂದರು: "ಒಂದು ಸತ್ಯದ ಅನ್ವೇಷಣೆ, ಇನ್ನೊಂದು ಸೌಂದರ್ಯದ ಅನ್ವೇಷಣೆ. ಪರಿಣಾಮ ಎರಡರದೂ ಒಂದೇ".

ಸೌಂದರ್ಯೋಪಾಸಕನಲ್ಲದ ಯಾವನಿಂದ ತಾನೇ ಸಾಹಿತ್ಯ ಸೃಷ್ಟಿ ಸಾಧ್ಯ? ಸತ್ಯದ ಆರಾಧಕನಲ್ಲದ ಯಾವನು ತಾನೇ ಜೀವಂತ ಸಾಹಿತ್ಯ ರಚಿಸಬಲ್ಲ? ಸತ್ಯದ ಚಿತ್ರಣಕ್ಕೆ ಹೊರಟ ವ್ಯಕ್ತಿ ಸ್ವತಃ ಕಲಾವಿದನಲ್ಲದಿದ್ದರೆ ಬರಿಯ ವರದಿಯನ್ನಷ್ಟೇ ಅಣಿಗೊಳಿಸುತ್ತಾನೆ. ಮಣ್ಣನ್ನು ಮುಟ್ಟದೆಯೇ ಸೌಂದರ್ಯದ ಉಪಾಸನೆಗೆ ತೊಡಗುವವನು ಭಾವುಕಲೋಕದ ಭ್ರಮರವಾಗಿ ಗಾಳಿ ಪಾಲಾಗುತ್ತಾನೆ.

ಕಟ್ಟೀಮನಿಯ ತಲೆಮಾರಿನವರು, ಸತ್ಯ ಸೌಂದರ್ಯಗಳೆರಡರ ಆವಿಷ್ಕಾರಕ್ಕೂ ಯತ್ನಿಸಿದವರು. ಅವರೆಲ್ಲರಿಗೆ ರಸ ಸಿದ್ಧಿಯಾಯಿತು; ಅವರೆಲ್ಲರ ಎಲ್ಲ ಕೃತಿಗಳೂ ಕಲಾತ್ಮಕವಾಗಿದ್ದುವು—ಎನ್ನುವಂತಿಲ್ಲ. ಬದುಕನ್ನೇ ಮಸಿ ಕುಡಿಕೆಯಾಗಿ ಮಾಡಿ, ಅದರಲ್ಲಿ ಲೇಖನಿಯನ್ನದ್ದಿ, ತಮ್ಮದೇ ದರ್ಶನದ ಬೆಳಕಿನಲ್ಲಿ ಬರೆದವರು ಕೆಲವೊಮ್ಮೆ ಗೆದ್ದರು, ಕೆಲವೊಮ್ಮೆ ಸೋತರು. ಪ್ರತಿಯೊಂದು ಸೋಲೂ ಮುಂದಿನ ಗೆಲುವಿಗೆ ಸೋಪಾನವಾಯಿತು.

* * * * *

ಕಟ್ಟೀಮನಿ ಪಾಸ್ತ ವಾದಿ. ಸುತ್ತು ಮುತ್ತಣ ಬದುಕನ್ನು ಸುಂದರತರಗೊಳಿಸುವ ಕಾರ್ಯದಲ್ಲಿ ತಮ್ಮ ಪಾತ್ರ ಏನು ಎಂಬುದನ್ನು ಅವರು ಬಲ್ಲರು. ನಿರ್ದಿಷ್ಟ ಗುರಿಯುಳ್ಳ ಬರಹ ಎಷ್ಟು ಸತ್ವಶಾಲಿಯಾಗುತ್ತದೆ, ಓಜಸ್ವಿಯಾಗುತ್ತದೆ – ಎನುವುದಕ್ಕೆ ಕಟ್ಟೀಮನಿ ಶ್ರೇಷ್ಠ ನಿದರ್ಶನ.

'ಜ್ವಾಲಾಮುಖಿಯ ಮೇಲೆ' ಬಸವರಾಜ ಕಟ್ಟೀಮನಿಯವರ ಒಳ್ಳೆಯ ಕಾದಂಬರಿ. ಶ್ರಮಜೀವಿಗಳ ಸಂಘಟಿತ ಹೋರಾಟವೇ ಮುಖ್ಯ ವಸ್ತುವಾಗಿರುವ ಆ ಕೃತಿ, ಈ ನಾಡಿನಲ್ಲಿ 'ಜರತಾರಿ ಜಗದ್ಗುರು'ವಿನಷ್ಟು ಜನಪ್ರಿಯವಾಗದುದರಲ್ಲಿ ಆಶ್ಚರ್ಯವಿಲ್ಲ. 'ಜ್ವಾಲಾಮುಖಿಯ ಮೇಲೆ' ಹೊಸ ಬಗೆಯ ಸಾಹಿತ್ಯ ಸೃಷ್ಟಿ

ಬರೆಲ್ಲಾಮ ಪ್ರೈಜುಗಳ್ಳು — ಎಂಬುದನ್ನು ನಮ್ಮ ವಿಮರ್ಶಕ ಮಹಾಶಯರಾದರೂ ಗುರುತಿಸಬಹುದಾಗಿತ್ತು. ಅಂತಹ ಸಾಹಿತ್ಯವಿದಾದನಕ್ಕೆ ೧೯೪೦ರ ಹಿನ್ನೆಲೆಯ ಅರ್ಥವಿಲ್ಲ ಎಂಬ ಭಾವನೆ ನಮ್ಮ ಹಲವು ವಿಮರ್ಶಕರಲ್ಲಿ ಇರುವುದರಿಂದಲೇ ಇರ ಬೇಕು ಅವರ (ಅವರ) ಗೂಡಬೆಗೆ ಆ ಮಹಾನುಭಾವರು ಹೋಗಲಿಲ್ಲ.

ಕಟ್ಟೀಮನಿಯವರ ಸಾಹಿತ್ಯದ ಬಗೆಗೆ ಜಿಜ್ಞಾಸೆ ಸಮಾಜದಲ್ಲಿ ತೀವ್ರವಾಗಿ ನಡೆಯಲು, ಸೋವಿಯೆತ್ ದೇಶದ ನೆಹರೂ ಪಾರಿತೋಷಕ 'ಜ್ವಾಲಾಮುಖಿಯ ಮೇಲೆ' ಕೃತಿಗೆ ದೊರಕಿರುವುದು ಈಗ ಕಾರಣವಾಗಿದೆ.

* * * * *

ಈ ಮನ್ನಣೆ ವೈಯಕ್ತಿಕವಾಗಿ ಕಟ್ಟೀಮನಿಯವರಿಗೆ ಕೀರ್ತಿ ತಂದಿದೆ. ಅದೇ ವೇಳೆಗೆ ಕನ್ನಡದ ಪ್ರಗತಿಶೀಲ ಸಾಹಿತ್ಯವೂ ಈ ಪುರಸ್ಕಾರ ತನಗೆ ಸಂದಿದೆ ಎಂದು ಹೆಮ್ಮೆಪಟ್ಟುಕೊಳ್ಳಬಹುದಾಗಿದೆ.

ಕಟ್ಟೀಮನಿಯವರ ಕೃತಿಗಳನ್ನು ಮೆಚ್ಚಿಕೊಂಡಾಡಿರುವ ಈ ನಾಡಿನ ಸಾವಿರ ಸಾವಿರ ಓದುಗರ ಪಾಲಿಗೆ ಅವರೊಂದು ಎಟ್ನಾ – ಸದಾ ಉರಿ ಆಡುವ ಜ್ವಾಲಾಮುಖಿ. ಲಾವಾರಸವನ್ನು ದೊರಸೂಸದೆ ಇರುವಾಗಲೂ ಜ್ವಾಲಾಮುಖಿ ಜ್ವಾಲಾಮುಖಿಯೇ. ಆಧುನಿಕ ಕನ್ನಡ ಸಾಹಿತ್ಯ ಎಷ್ಟೊಂದು ಶ್ರೀಮಂತವಾಗಿದೆ, ಬಹುಮುಖವಾಗಿದೆ, ಸಜೀವವಾಗಿದೆ ಎನ್ನುವುದಕ್ಕೆ ಕಟ್ಟೀಮನಿ ಕೃತಿಗಳು ಸಾಕ್ಷಿ.

೨೦–೧೨–೧೯೬೮

# ‘ ಸುಳಿದಳಿರೆಲೆಯ ಪೀಪಿ ’

ಅಂಚೆ ಹೊತ್ತುತಂದ ಒಂದು ಕಾಗದದಲ್ಲಿ ಹೀಗಿದೆ :

"ಶ್ರೀ ಎಸ್. ವಿ. ಪರಮೇಶ್ವರ ಭಟ್ಟರಿಗೆ ನಾವು ಏರ್ಪಡಿಸುವ ಕವಿಸನ್ಮಾನ ಕೂಟದ ಆಮಂತ್ರಣವನ್ನು ನಿನ್ನೆ ಕಳಿಸಲಾಗಿದೆ. ಅವರಿಗೆ ೫೫ ಸಂವತ್ಸರ ತುಂಬುತ್ತಿರುವ ಸಲುವಾಗಿ ಈ ಸನ್ಮಾನ. ಅವರು ದಕ್ಷಿಣ ಕನ್ನಡದ ಭಾವಜೀವಿಗಳ ಮನಸ್ಸನ್ನು ಗೆದ್ದಿರುವರು. ಎಲ್ಲೆಲ್ಲಿಯೂ ಅವರೇ ಅಧ್ಯಕ್ಷರು, ಅವರೇ ಭಾಷಣಗಾರರು. ಅವರ 'ದಾಕ್ಷಿಣ್ಯ'ದಿಂದಾಗಿ ಅವರಿಗೆ ಬಿಡುವೇ ದೊರೆಯದಂತಾಗಿದೆ. ನಮ್ಮ ಮನೆಗೂ ಬಂದರು. ಮತ್ತೊಮ್ಮೆ, ಕಡಲಕರೆಗೆ ವಿದ್ಯಾರ್ಥಿಗಳನ್ನು ಕರೆದುಕೊಂಡು ಬಂದರು.... ನೀವು ಒಂದು ಸಂದೇಶವನ್ನು ಅವಶ್ಯ ಕಳಿಸಿಕೊಡಬೇಕು."

ಒಕ್ಕಣಿಸಿದವರು ಕವಿ ಅಮ್ಮೆಂಬಳ ಶಂಕರನಾರಾಯಣ – ಭಾವಜೀವಿಗಳ ಸಮುದಾಯದಲ್ಲಿ ಮೊದಲ ಸಾಲಿಗೆ ಅರ್ಹರಾದವರು.

ಸುಲಭ ಪ್ರಚಾರದ ಸಾಧನಗಳಲ್ಲೊಂದು ಸಂದೇಶರವಾನೆ. ಇಂಥಿಂಥವರ ಸಂದೇಶಗಳು ಬಂದಿದ್ದುವೆಂದು ವೃತ್ತಾಂತ ಪತ್ರಿಕೆಗಳಲ್ಲಿ ಪ್ರಕಟವಾದರೂ ಆಯಿತೇ !

ಇಂಥ ಪ್ರಸಿದ್ಧಿಯನ್ನು ಬಯಸುವುದು ತಪ್ಪೋ ಒಪ್ಪೋ – ಆ ಚರ್ಚೆ ಇಲ್ಲಿ ಅಪ್ರಾಸಂಗಿಕ.

'ಕವಿಗೂ ಜಾಹೀರಾತು ಬೇಕು.' ಸ್ವತಃ ಪರಮೇಶ್ವರ ಭಟ್ಟರದೇ ಅಭಿಪ್ರಾಯ ಇದು. ನಾಗವರ್ಮನ ಮಾತಿಗೆ ಅನುಬಂಧ ಸೇರಿಸಿ ಅವರು ಹೀಗೆ ಬರೆದಿದ್ದಾರೆ :

" ಪ್ರತಿಭೆಯೊಂದಿರಬೇಕು ವ್ಯುತ್ಪನ್ನ ಮತಿ ಬೇಕು
ಅಭ್ಯಾಸ ಗುರುಸೇವೆ ಬೇಕು
ಆ ಹಳೆಯ ಪಟ್ಟಿಗಿನ್ನೊಂದು ಸೇರಿಸಬೇಕು
ಕವಿಗೆ ಜಾಹೀರಾತು ಬೇಕು."

ಈ ಕವಿತೆ ವಸ್ತುಸ್ಥಿತಿಯ ನಿರೂಪಣೆ. ನನಗೆ ಗೊತ್ತಿರುವ ಹಾಗೆ (ಹೆಚ್ಚು ಕಡಮೆ ೨೫ ವರ್ಷಗಳ ಪರಿಚಯ) ಜಾಹೀರಾತಿಗಾಗಿ ಪರಮೇಶ್ವರ ಭಟ್ಟರು ಎಂದೂ ಹಂಬಲಿಸಿದವರಲ್ಲ. ಮೇಘಮಾಲೆಗಾಗಿ ಕೈಚಾಚಿದವರೂ ಅಲ್ಲ. ಪಾಲಿಗೆ ಬಂದುದನ್ನು ಪರಮಾನ್ನವೆಂದೇ ಸ್ವೀಕರಿಸಿದ ವ್ಯಕ್ತಿ. ಹಿಂದೆಯೂ ಅಷ್ಟೆ, ಈಗಲೂ ಅಷ್ಟೆ.

ಕಾಲು ಶತಮಾನಕ್ಕೆ ಹಿಂದೆ ಅಂಬಿಕಾತನಯದತ್ತರ ಅಧ್ಯಕ್ಷತೆಯಲ್ಲಿ ಶಿವಮೊಗ್ಗೆಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆದಾಗ ಎಸ್. ವಿ. ಪರಮೇಶ್ವರ ಭಟ್ಟರ 'ರಾಗಿಣಿ'

ಪ್ರಕಟವಾಯಿತು. ಅವರ ಶ್ರೀಮತಿಯವರು (ಸೋದರ ಮಾವನ ಮಗಳು) 'ರಾಗಿಣಿ'ಯ ಒಂದೊಂದು ಕವಿತೆಗಳನ್ನು ಸುಶ್ರಾವ್ಯವಾಗಿ ಹಾಡಿದ ನೆನಪು.

'ರಾಗಿಣಿ'ಯಿಂದ ಕಾವ್ಯಪ್ರೇಮಿಗಳಿಗೆ ಪರಿಚಿತರಾದ ಯುವಕ ಕವಿ ಅನಂತರದ ವರ್ಷಗಳಲ್ಲಿ ಅದೆಷ್ಟೊಂದು ವಿಸ್ತಾರವನ್ನು ಅಳೆದರು! ಎಷ್ಟು ಧ್ವನಿಗಳು, ಎಷ್ಟು ಬಣ್ಣಗಳು!

ತಮ್ಮ ಕಾವ್ಯಶಕ್ತಿ ಘನೀಭವಿಸಿದ 'ಇಂದ್ರಚಾಪ'ಕ್ಕೆ ಆ ಹೆಸರನ್ನು ಪರಮೇಶ್ವರ ಭಟ್ಟರು ಇಟ್ಟುದು ಆಕಸ್ಮಿಕವೇನೂ ಅಲ್ಲ.

* * * * *

ಈ ಕವಿಯ ಜೀವನದಲ್ಲಿ ಆಕಸ್ಮಿಕವೆಂಬುದೇ ಇಲ್ಲ. ಅವರೇ ಹೇಳುವಂತೆ:

"ಎಡದೊಳಿ ಹೋದರು ಹೇ ಬಾಜು ಎಂದರು
ಎಚ್ಚರದೊಳಿ ನಡೆಸಿದರು
ನನ್ನ ಬಾಳಿನ ಗಾಡಿಗಪಘಾತವೆನ್ನುವುದು
ನಿತ್ಯದ ಮಾತಾಯಿತಿಂದು."

ಹೀಗಾಗಿ, ಯಾವ ಘಟನೆ ನಡೆದರೂ ಕವಿ ತಬ್ಬಿಬ್ಬಾಗುವಂತಿಲ್ಲ. ಏನು ಬಂದರೂ, ಅದು ಸ್ವಾಭಾವಿಕವೆನ್ನುವಂತೆ, ತೀರಾ ಪರಿಚಿತವಾದುದು ಸಾಮಾನ್ಯವಾದುದು ಎನ್ನುವಂತೆ, ಅವರ ವರ್ತನೆ.

....ಹತ್ತುಹದಿನಾರು ವರ್ಷಗಳಿಗೆ ಹಿಂದೊಮ್ಮೆ ನನ್ನ ಬಲಗೈ ಮುರಿದು ಹೋಯಿತು. ಎಲುಬುಗಳನ್ನು ಜೋಡಿಸಿ ಚಿಕಿತ್ಸೆ ಮಾಡಿದ್ದಾಯಿತು. ಗುಣವಾದಾಗ, ಮೊದಲಿನಂತಿಲ್ಲ, ಸ್ವಲ್ಪ ಡೊಂಕು—ಎನಿಸಿತು.

ಆ ಸಂದರ್ಭದಲ್ಲಿ ನಾನು ಕಣ್ಣಿಗೆ ಬಿದ್ದಾಗ ಪರಮೇಶ್ವರ ಭಟ್ಟರು ಪ್ರತಿಕ್ರಿಯೆ ವ್ಯಕ್ತಪಡಿಸಿದ್ದು ಹೀಗೆ:

"ಕೈ ಡೊಂಕಾದರೂ ಬರಹ ಡೊಂಕೆ?"

ಅದರೊಂದಿಗೆ, ಕಣ್ಣ ಗುಳಿಬೀಳುವ ಹೃದಯ ಬಿಗ್ಗಿಸುವ ನಗೆ. ಜೊತೆಗೆ, ಪರಿಹಾಸ್ಯದ ಉಕ್ತಿಯಿಂದ ನನಗೆ ನೋವಾಯಿತೇನೋ ಎಂಬ ಕಾತರ ಬೇರೆ!

ಯಾತನೆಗಳ ಕಾರ್ಮೋಡಗಳು ಎಷ್ಟೇ ದಟ್ಟೈಸಲಿ, ಪರಮೇಶ್ವರ ಭಟ್ಟರ ನಗೆ ಮಿಂಚಿನಿಂದ ಲೋಕಕ್ಕೆಲ್ಲ ಬೆಳಕು.

'ರಾಗಿಣಿ'ಗೆ ಆ ವೇಳೆಗಾಗಲೇ ಪ್ರಖ್ಯಾತರಾಗಿದ್ದ ಕವಿ ಪುಟ್ಟಪ್ಪನವರು, 'ಸೀನೂಮಿತ್ರನ ಈ ಸುಕವಿತೆಯಲಿ ಸಿರಿ ಓ ಮಲೆಯಾಳಿಗರಮ್ಮ ಹೆಚ್ಚೆಸಗೆ' ಎಂದು ಹರಸಿ ಮುನ್ನುಡಿಯ ತಿಲಕವಿಟ್ಟರು.

ಆ ಹಿರಿಮೆಯೇ ಎಸ್. ವಿ. ಪರಮೇಶ್ವರ ಭಟ್ಟರ ಮಹಾನ್ ಆಯುಧ.

ಮೂರನೆಯ ದಶಕದಲ್ಲಿ ಕನ್ನಡದ ಶ್ರೇಷ್ಠ ಪ್ರಾಧ್ಯಾಪಕರ ಶಿಷ್ಯನಾಗಿ, ಬೆಲೆ ಬಾಳುವ ತಮ್ಮ ಕೃತಿಗಳನ್ನೇ ಗುರುದಕ್ಷಿಣೆಯಾಗಿ ಎಸ್. ವಿ. ಪಿ. ನೀಡಿದರು. ಹಳಗನ್ನಡದ ಸೊಬಗನ್ನು, ಸಂಸ್ಕೃತದ ಸಿರಿವಂತಿಕೆಯನ್ನು, ಹೊಸಗನ್ನಡದ ಬಿನ್ನಾಣವನ್ನು, ಆಂಗ್ಲ ಸಾಹಿತ್ಯದ ಸವಿಯನ್ನು ತಮ್ಮದನ್ನಾಗಿಸಿ ಅವರು ಕೃತಿರಚನೆ ಮಾಡಿದರು. ಅವರ ಎಲ್ಲ ಕೃತಿಗಳಲ್ಲಿ ಹಳೆಯ ಜಗತ್ತಿನ ಶ್ರೇಷ್ಠ ಗುಣಗಳಿವೆ; ಹೊಸ ಜಗತ್ತಿನ ಆವಿಷ್ಕಾರವಿದೆ.

* * * *

ಎಸ್. ವಿ. ಪಿ. ಯವರ ಕಾರ್ಯಕ್ಷೇತ್ರ ಬರೆವುದು – ಒರೆವುದು ಅಷ್ಟೇ ಅಲ್ಲ. ಅವರು ಬಲು ಸುಲಭವಾಗಿ ವಿದ್ಯಾರ್ಥಿಗಳ ಮೆಚ್ಚುಗೆಗೆ ಪಾತ್ರರಾಗುವ ಪ್ರಾಧ್ಯಾಪಕ.

ಮೈಸೂರು ವಿಶ್ವವಿದ್ಯಾಲಯ ಮಂಗಳೂರಿನಲ್ಲಿ ಸ್ನಾತಕೋತ್ತರ ಕೇಂದ್ರವೊಂದನ್ನು ತೆರೆದಾಗ ಪರಮೇಶ್ವರ ಭಟ್ಟರು ಕನ್ನಡದ ಪ್ರೊಫೆಸರರೆಂದು ಅಭಿಷಿಕ್ತರಾಗಿ ಅಲ್ಲಿಗೆ ತೆರಳಿದರು. ಆ ಕೇಂದ್ರದ ಪ್ರಧಾನ ಅಧಿಕಾರಿಯ ಪಟ್ಟವೂ ಅವರದೇ.

ಪ್ರಾಧ್ಯಾಪಕ ಭಟ್ಟರ ವಿದ್ಯಾರ್ಥಿಯೊಬ್ಬರು (ಎ. ವಿ. ನಾವಡ) ಬರೆದಿರುವಂತೆ, “ಪ್ರೊ. ಪರಮೇಶ್ವರ ಭಟ್ಟರದು ಈಗ....ಹಗಲಿರುಳು ದುಡಿತ. ಹಗಲು ಸ್ನಾತಕೋತ್ತರ ತರಗತಿಯಲ್ಲಿ ಬೋಧನ, ಸ್ನಾತಕೋತ್ತರ ಕಛೇರಿಯ ಆಡಳಿತದ ಮೇಲೆ ಕಣ್ಣೋಟ. ಸಂಜೆ ಪುನಃ ಕನ್ನಡ ಡಿಪ್ಲೊಮಾ ವಿದ್ಯಾರ್ಥಿಗಳಿಗೆ ಪ್ರವಚನ.” ಇದರೊಂದಿಗೆ, ನಮ್ಮ ಸಾಮಾಜಿಕ ಜೀವನದ ಅನಿವಾರ್ಯ ಅಂಗವಾಗಿರುವ ಸಭೆಗಳು, ಭಾಷಣಗಳು. ಬಿಡುವು ಎಂಬುದೇನಾದರೂ ದೊರೆತರೆ, ಸುಳಿದಳಿರೆಲೆಯ ಪೀಪಿಯನ್ನು ಕೈಗೆತ್ತಿಕೊಳ್ಳುತ್ತಾರೆ ಕವಿ ಪರಮೇಶ್ವರ ಭಟ್ಟರು. ಪರಿಣಾಮ : ಭಾವ – ನಾದ ತನ್ಮಯತೆ, ಸಾವಿರಾರು ಜನರಿಗೆ ಸಹಭಾಗಿತ್ವ ನೀಡುವ ಸೃಷ್ಟಿ.

೧೬–೨–೧೯೬೯

# ಅರುವತ್ತೈದರ ಕಾರಂತರು

ಎಳೆವರೆಯದಲ್ಲಿ ನೂರು ಕನಸುಗಳು. ಭೃಂಗದ ಬೆನ್ನೇರಿ ಕಾಲಯಾಪನೆ. ಒಂದು ದಿನ ಇದ್ದಕ್ಕಿದ್ದ ಹಾಗೆ ಅಚ್ಚರಿ: ಮಧ್ಯವಯಸ್ಸಿಗೆ ಕಾಲಿಟ್ಟೆನಲ್ಲ! ಒಂದೆ ತಿರುಗಿ ನೋಡಿ, ಲೆಕ್ಕಹಾಕಿ, ಮುಂದೆ ಇನ್ನು ಎಷ್ಟಿದೆ ಎಂದು ತಿಳಿಯುವ ತವಕ. ಯಾವ ನೆಲೆಗೆ ಬಂದು ನಿಂತ ಹಾಗಾಯಿತು ಬದುಕಿನ ಜಟಕಾ ಬಂಡಿ? [ 'ಎಷ್ಟೋ ಕಾಲ ವ್ಯರ್ಥವಾಯಿತಲ್ಲ! ಸ್ವಲ್ಪ ವಿವೇಚನೆಯಿಂದ ಗಾಡಿ ಓಡಿಸಿದ್ದರೆ—] ದಾರಿ ಟಾರು ರಸ್ತೆಯಲ್ಲ. ಆದರೂ ಅಶ್ವಶಕ್ತಿ ಸಾಕಷ್ಟಿದೆ. ತಾನು ನೋಡಬಯಸುವ ಬದುಕಿನ ಕೈಕಂಬಗಳನ್ನು ಖಂಡಿತ ದಾಟಬಹುದು. ಹತ್ತು ಸಹಸ್ರರ ಕರತಾಡನವಿದ್ದರೆ ಕುದುರೆಯ ಬೆನ್ನು ಚಪ್ಪರಿಸಿದಂತೆ. ಕರಗಿದ ಭ್ರಮೆಗಳು, ಮುರಿದ ಸೇತುವೆಗಳು 'ಎಚ್ಚರ! ಎಚ್ಚರ!' ಎನ್ನುತ್ತಿವೆಯಲ್ಲ? ಈವರೆಗಿನ ಸಾಧನೆಗಳನ್ನು ನಿಜಸ್ಥಿತಿಯ ಬೆಳಕಿನಲ್ಲಿ ತೂಗಿ ನೋಡುವುದಲ್ಲವೆ ಮೇಲು? ಯಾಕೋ, ಕಣ್ಣು ಮಂಜು. ಇನ್ನು ಕನ್ನಡಕ ಬೇಕು. ಆದರೆ ಇನ್ನೊಬ್ಬರದಲ್ಲ, ತನ್ನದೇ. ಕಂಠ ಶೋಷಣೆ ಮಾಡಿ ಮಾಡಿ ಧ್ವನಿ ಒಡೆದಿದೆ. ಆದರೂ ಬಳಲಿದ ಕಂಠದ ಮಾರ್ದವತೆ ಕಂಡು ತನಗೇ ವಿಸ್ಮಯ. ಜೀವನದುದ್ದಕ್ಕೂ ಕೆಡುಕನ್ನು ಇದಿರಿಸಿದ್ದಾಯಿತು. ಅಲ್ಲಿ ಇಲ್ಲಿ ಇರುವ ಒಳಿತನ್ನೂ ಸ್ವಲ್ಪ ಗುರುತಿಸುವುದು ಬೇಡವೆ? ಮಗುವಿನ ಮಂದಹಾಸ, ಅರಳು ಹೆಣ್ಣಿನ ಮಾದಕ ನಗೆ, ಮಿಡಿ ಕುಡಿಯೊಡೆಯುವ ವಸಂತ—ಇವನ್ನೆಲ್ಲ ಮತ್ತೆ ಮತ್ತೆ ಕಾಣಬೇಕೆಂಬ ಆಸೆಯಾಗುತ್ತದಲ್ಲ?............

ಈಯೆಲ್ಲ ಅವಸ್ಥೆಗಳನ್ನು ಬ್ರಹ್ಮಾಂಡ ಜೀವನದ ಅಲ್ಪ ಕಣವಾದ ಮನುಷ್ಯ ದಾಟಲೇ ಬೇಕು ಇದ್ದೀತು: ಒಬ್ಬೊಬ್ಬರದು ಒಂದೊಂದು ಬಗೆ. ಆದರೂ ಅವಸ್ಥಾಂತರಗಳಿಂದ ಬಾಧಿತನಾಗದೆ ಇರುವ ವ್ಯಕ್ತಿ ದುರ್ಲಭ.

ಶಿವರಾಮಕಾರಂತರೂ ಮಾನವ ಸಹಜವಾದ ಈ ತಾಕಲಾಟಗಳಿಗೆ ಗುರಿಯಾಗಿರಬಹುದು. ಆದರೆ ಅವರ ಮುಖಭಾವ, ಒಳಗಿನ ಹಲ್ಲಟಕ್ಕೆ ಕನ್ನಡಿಯಲ್ಲ. ಶ್ರೀಸಾಮಾನ್ಯನ ಪಾಲಿಗೆ ಅವರು ಯಾವಾಗಲೂ ನಟಭಯಂಕರನೇ; ಕಾರಂತರು ಯಾವಾಗಲೂ ಕಾರಂತರೇ. ಆ ಭಾವನೆಯನ್ನು ಸ್ಥಿರಗೊಳಿಸುವುದರಲ್ಲಿ ಅವರು ಅತ್ಯಂತ ಯಶಸ್ವಿ. ಆ ಶ್ರೇಷ್ಠ ನಟನೆಯಿಂದಲೇ ಅವರಿಗೆ ಅಮಿತ ಆನಂದ. ಮುಖವಾಡ ಧರಿಸಿದ ಕಾರಂತರ ವ್ಯಕ್ತಿತ್ವ ಸಾರಿ ಹೇಳುತ್ತದೆ: "ನಾನು ತೆರೆದ ಪುಸ್ತಕ!"

* * * * *

ಆ ಪುಸ್ತಕವನ್ನು ಈ [ಮಂಗಳವಾರ] ಸಂಜೆ ಬೆಂಗಳೂರಿನ ಪುರಭವನದಲ್ಲಿ ಐವರು ಪ್ರಮುಖರು ಓದಿದರು. ಸಂದರ್ಭ—65 ತುಂಬಿದ ಕಾರಂತರಿಗೆ ಸನ್ಮಾನ. ಸಭಾಂಗಣದ ಕೊನೆಯ ಸಾಲಿನಲ್ಲಿ ಕುಳಿತು ವೇದಿಕೆಯ ಮೇಲೆ ನಡೆದ ವಾಚನಕ್ಕೆ ನಾನು ಕಿವಿಗೊಟ್ಟೆ.

ಓದಿದವರೆಲ್ಲ ಕಾಲು ಶತಮಾನದಿಂದ ನನಗೆ ಪರಿಚಿತರೇ. ಅನಕೃ, ವಿನಾಯಕ, ರಾಜರತ್ನಂ, ರಾಶಿ; ಉತ್ಸವದ ಹಿರಿತನ ವಹಿಸಿದ್ದ ಮಾಸ್ತಿ. ನರೆಗೂದಲು, ಬೊಕ್ಕ ತಲೆ, ಬಚ್ಚಬಾಯಿ. ['ಆಧುನಿಕ ಕನ್ನಡ ಸಾಹಿತ್ಯಕ್ಕೆ ಖಂಡಿತ ವಯಸ್ಸಾಯಿತು.'] ಮೊನ್ನೆ ಮೊನ್ನೆ ಇವರನ್ನೆಲ್ಲ ಅವರವರ ಯೌವನಾವಸ್ಥೆಯಲ್ಲಿ ನೋಡಿದ್ದೆನಲ್ಲ? ಯಾವುದು ನಿಜ? ಒಂದೋ ಅದು ಕನಸು, ಇಲ್ಲವೆ ಇದು. ಪ್ರಗತಿಶೀಲತೆಯ ಶೈಲಿನಲ್ಲಿ ಕೆಂಪು ಬಾವುಟ ಹಿಡಿದ ಯುವಕ ಗಾರ್ಡ್—ಅನಕೃ; ಸಮುದ್ರದಾಚೆಯಿಂದ ತೇಲಿ ಬಂದ ವಿಶಿಷ್ಟ ವಿದೇಶೀಯ—ವಿನಾಯಕ; ಸರಸ್ವತೀ ಮಂದಿರದ ಕಿರಿಯ ಮಹಂತ—ರಾಜರತ್ನಂ; ಅಧ್ಯಕ್ಷ ಕೈಲಾಸಂರನ್ನು ಮದರಾಸಿನ ಸಮ್ಮೇಳನಕ್ಕೆ ಕರೆತಂದ ಜವ್ವನಿಗ—ರಾಶಿ; ನಾಡಿನ ಉದ್ದಗಲಕ್ಕೆ ಪರಿಷತ್ತಿನ ದಂಡನಾಯಕನಾಗಿ ಓಡಾಡುತ್ತಿದ್ದ, ಇತರರಿಗಿಂತ ಸುಮಾರು ಒಂದು ದಶಕದಷ್ಟು ಹಿರಿಯ—ಮಾಸ್ತಿ.... ಆ ವ್ಯಕ್ತಿಗಳೇ ಇರಬಹುದೆ ಇವರು?

ಸಂವೇದ ವೇದ—ಎಂದುವು ಅಲೆಯಲೆಯಾಗಿ ಬಂದ ಧ್ವನಿಗಳು.

*     *     *     *     *

ಕಾರಂತ-ಪುಸ್ತಕವನ್ನು ಅವರು ಓದಿದ ರೀತಿ ಸಾರಿತು: ಇವರೆಲ್ಲ ಬುದ್ಧರು, ಪ್ರಬುದ್ಧರು; ಬೋಧಿ ವೃಕ್ಷದ ನೆರಳಿನಲ್ಲಿ ಸಾಕಷ್ಟು ಎವೆ ಮುಚ್ಚಿ ವಿಶ್ರಾಂತಿ ಪಡೆದವರು.

ಹೊಗಳಿಕೆಯ ನಾಟಕ? ಇದ್ದೀತು. ಶಿಷ್ಟಾಚಾರದ ಚೌಕಟ್ಟಿನಲ್ಲಿ ಚಿತ್ರಕ್ಕೆ ಲೇಪಿಸಲೇ ಬೇಕಾದ ಕೆಲವು ಬಣ್ಣಗಳಿವೆ. ಆದರೆ ಮೂಲ ಚಿತ್ರವೇ ಸಾಕಷ್ಟು ವರ್ಣ ರಂಜಿತವಾಗಿರುವಾಗ, ಬಾಯಿಮಾತಿನ ಬಣ್ಣನೆ ಸುಲಭ. ಮಾತುಗಳಿಗೆ ಹೃದಯದ ಆಳದಿಂದ ಬರುವ ಅಭ್ಯಾಸವಿಲ್ಲ ಎಂದಲ್ಲ. ಬದುಕಿನ ಮೂಸೆಯಲ್ಲಿ ಪುಷ್ಫಳಿಯಾದ ವ್ಯಕ್ತಿತ್ವ ಬಹಳಷ್ಟು ಒಳ್ಳೆಯ ಮಾತನ್ನೆ ಆಡುತ್ತದೆ.

ಕನ್ನಡದ ಕರ್ಮಕಥೆಯೋ ಕಾರಂತ-ಪುಸ್ತಕ. ಇದು ದುರಂತವೋ, ಸುಖಾಂತವೋ? ಉತ್ತರಿಸುವವರ ದೃಷ್ಟಿಯನ್ನು ಅವಲಂಬಿಸಿದೆ, ಉತ್ತರ. ಆ ಪುಸ್ತಕದಿಂದ ಉದಿಸುವ ಬಿಂಬ ಮಾತ್ರ, ಕುದುರೆಮುಖ ಶಿಖರದಷ್ಟು ಎತ್ತರ. ಅದನ್ನು ಏರಿದಾಗಲೇ ವಿಶ್ವರೂಪ ದರ್ಶನ.

*     *     *     *     *

ಕಾರಂತರು ಮಹಾನ್ ವ್ಯಕ್ತಿ. ನಿರ್ವಿವಾದ.

ಒಬ್ಬ ವ್ಯಕ್ತಿ ಆ ಹಂತಕ್ಕೆ ಏರುವ ವಿಧಾನ ಯಾವುದು ?

ಮನುಷ್ಯ ಎಷ್ಟೇ ದೊಡ್ಡವನಾದರೂ ಮನುಷ್ಯನೇ. ರಾಗದ್ವೇಷಗಳು ಅವನನ್ನು ಕಾಡುತ್ತವೆ. ಮಾನವ 'ಗುಣ'ಗಳು ಅವನ ನಡೆನುಡಿಗಳನ್ನು ರೂಪಿಸುತ್ತವೆ.

ಕಾರಂತರಲ್ಲಿ ವಿರೋಧಾಭಾಸಗಳು ಇರಲಿಲ್ಲ, ಇಲ್ಲ—ಎಂದಲ್ಲ. ಅನೇಕ ಸಲ ಎಡವಿದ ಆನೆಯೇ ಈ ನಾಡಾಡಿ, ಕಾಡಾಡಿ. ಜ್ಞಾನಾರ್ಜನೆ, ದುಡಿಮೆ ಇವರ ಪಾಲಿಗೆ ನಿತ್ಯದ ಉಸಿರು. ಪ್ರಯೋಗಶೀಲತೆಯೇ ಇವರ ಜೀವನದ ಬುನಾದಿ. ಅವರೆಷ್ಟೇ ನಿಷ್ಠುರಿಯಾಗಿದ್ದಾಗಲೂ ಜನ ತೋರಿದ ಅಪಾರ ಒಲವುಗಳೇ ಇವರ ತಾಯಿತ.

ಹತ್ತು ಬೆಂಕಿಗಳಲ್ಲಿ ಹದಗೊಂಡೇ ಅವರು ಮಹಾನ್ ಉಕ್ಕಾಗಿದ್ದಾರೆ.

*　　*　　*　　*　　*

ರಾಜಕೀಯ ಭಾಷಣಗಳನ್ನು ದಿನ ನಿತ್ಯವೂ ಓದಿ ಕೇಳಿ ಬೇಸತ್ತು, ಸಾಹಿತ್ಯ ಸಂಸ್ಕೃತಿಗಳ ತಣುಪಿನ ಮೊರೆಹೊಗಲು ನಾನು ಬಯಸಿದ್ದೆ. ಆ ಶೀತಲ ಸ್ಪರ್ಶ ಆಪ್ಯಾಯಮಾನವಾಗಿತ್ತು.

ಕಾರಂತರು ಮಾತನಾಡಲು ಎದ್ದರು. ಇದ್ದಕ್ಕಿದ್ದಂತೆ ರಾಜಕೀಯದ ಕಾರ್ಮೋಡ ಕವಿಯಿತು. ಕಾರಂತರು ಗುಡುಗಾಡಿದರು, ಮಿಂಚಿದರು, ಧೋ ಧೋ ಮಳೆ ಸುರಿಸಿದರು. ಅವರು ಅಭಿನಯಿಸಿದ್ದು ಈ ನಾಡಿನ ನೊಂದ ನಾಗರಿಕನ ಪಾತ್ರವನ್ನು. ಆಡಿದ್ದು ಹೃದಯಸ್ಪರ್ಶಿಯಾದ ಮಾತುಗಳನ್ನು.

ರಾಜಕೀಯದ ಬಡನಿಕೆ ಸರ್ವವ್ಯಾಪಿಯಾಗಿತ್ತು.

ಸಮಾರಂಭದ ಯುವಕ ಸೂತ್ರಧಾರರಾದ ಮಾಲಿನಕೆರೆ ರಂಗನಾಥನ್, ಗುಂಡ್ಮಿ ರಾಮಕೃಷ್ಣ ಐತಾಳ, ಸೂರ್ಯನಾರಾಯಣ ಚಡಗ, ನಾರಾಯಣ ಬಲ್ಲಾಳರು ಅಂಕದ ಪರದೆ ಸರಿಸಲು ಸಿದ್ಧರಾಗುತ್ತಿದ್ದಂತೆ, ನಾನು ಹೊರಬಂದು, ಕೃಷ್ಣವನದ ಹೊರಗಣ ಬದುಕು ನಿತ್ಯದಂತೆಯೇ ಸಾಗಿದ್ದನ್ನು ಕಂಡೆ; ಸಿಗರೇಟು ಹಚ್ಚಿದೆ.

೨೨-೧೦-೧೯೬೭

# ಎಜ್ರಾ ನೀಡಿದ ಹಿಡಿ ಅವಲಕ್ಕಿ

ಎಜ್ರಾ ಪೌಂಡ್: ಸ್ನೇಹವಲಯ. 'ಸಮನ್ವಯ'ದಲ್ಲಿ ಸುಮನಾ ಬರೆದಿರುವ ಲೇಖನ. ಚೆನ್ನಾಗಿದೆ.

ಅದರ ಒಂದು ಭಾಗವನ್ನು ಉಲ್ಲೇಖಿಸಬೇಕು:

"ಪ್ಯಾರಿಸ್ಸಿನಲ್ಲಿ ಒಂದು ದಿನ ತನ್ನ ಹೆಂಡತಿ ಡೊರೋತಿ ಷೇಕ್ಸ್‌ಪಿಯರಳೊಂದಿಗೆ ತಿರುಗಾಡಲು ಹೊರಟಿದ್ದ ಪೌಂಡ್. ಗೆಳತಿ ಸಿಲ್ವಿಯಾ ಬೀಚ್‌ಳ ಪುಸ್ತಕದಂಗಡಿಯೊಳಕ್ಕೆ ನುಗ್ಗಿದಾಗ, ಒಬ್ಬ ವ್ಯಕ್ತಿ ಪುಸ್ತಕದ ಬೀರುಗಳಲ್ಲಿ ಅಸ್ತವ್ಯಸ್ತವಾಗಿ ಏನನ್ನೋ ಹುಡುಕಾಡುತ್ತಿರುವುದನ್ನು ಕಂಡ 'Mousing around the book-shelves'. ಅವನನ್ನು ಸಿಲ್ವಿಯಾ ಪರಿಚಯ ಮಾಡಿಕೊಟ್ಟಳು—"ಅರ್ನೆಸ್ಟ್ ಹೆಮಿಂಗ್ವೆ." ಹೆಮಿಂಗ್ವೆ, ತನ್ನೊಡನೆ ಇದ್ದುದು ಎಜ್ರಾ ಪೌಂಡ್ ಎಂದು ತಿಳಿದಾಗ ಉತ್ತರಿಸಿದ: "ನಿಮ್ಮನ್ನು ಕಾಣಲೆಂದೇ ನಾಲ್ಕು ಸಾವಿರ ಮೈಲಿಗಳ ಪ್ರಯಾಣ ಮಾಡಿ ಬಂದೆ." ಮುಂದೆ ಹೆಮಿಂಗ್ವೆ ತನ್ನ ಸಣ್ಣ ಕತೆಗಳ ಹಸ್ತಪ್ರತಿಯನ್ನು ಪೌಂಡ್‌ನಿಗೆ ತೋರಿಸಿದಾಗ ಅವುಗಳ ರಚನಾಶೈಲಿಯನ್ನು ಅವಲೋಕಿಸಿದ ಪೌಂಡ್ ತಕ್ಷಣ ಆ ತರುಣ ಸಾಹಿತಿಯನ್ನು ಮೆಚ್ಚಿ, "ಅಮೆರಿಕನ್ ಸಾಹಿತ್ಯದಲ್ಲಿ ಇದೊಂದು ನೂತನ ಪ್ರಯೋಗ" ಎಂದು ಹೊಗಳಿದ. ಅಮೆರಿಕದ ಥ್ರೀ ಮೌಂಟೆನ್ ಪ್ರೆಸ್‌ನವರಲ್ಲಿ ಹೆಮಿಂಗ್ವೆಯ ಮೊದಲ ಕಾದಂಬರಿ In Our Time ಪ್ರಕಟಿಸಿ, ಅದುವರೆಗೆ ಹೇಳ ಹೆಸರಿಲ್ಲದ ಸಾಹಿತಿಯಾಗಿದ್ದ ಹೆಮಿಂಗ್ವೆಗೆ ಒಂದು ವಿಶಿಷ್ಟ ಸ್ಥಾನವನ್ನು ದೊರಕಿಸಿಕೊಟ್ಟ ಪೌಂಡ್. ಅವನ ಕಾದಂಬರಿಯನ್ನು ಪರಿಷ್ಕರಿಸಿದವನೂ ಪೌಂಡ್, ಎಂದು ಹೆಮಿಂಗ್ವೆ ತಿಳಿಸಿದ್ದಾನೆ. "Pound taught me more about how to write and how not to write." ಇದರಿಂದ ಅವನು ಪೌಂಡ್‌ಗೆ ಎಷ್ಟರಮಟ್ಟಿಗೆ ಋಣಿಯಾಗಿದ್ದನೆಂದು ತಿಳಿಯುತ್ತದೆ. ತನಗೆ ನೊಬೆಲ್ ಪಾರಿತೋಷಕ ಬಂದಾಗ ಅದು ಪೌಂಡ್‌ನಿಗೆ ದೊರಕಿದ್ದರೆ ಹೆಚ್ಚಿನ ಸಂತೋಷವಾಗುತ್ತಿತ್ತೆಂದು ಹೆಮಿಂಗ್ವೆ ತನ್ನನ್ನು ಭೇಟಿ ಮಾಡಿದ ಪತ್ರಕರ್ತರಿಗೆ ತಿಳಿಸಿದ.

ಆಸ್ಪತ್ರೆಯಿಂದ ಪೌಂಡ್ ಬಿಡುಗಡೆ ಹೊಂದಿದಾಗ ಅವನಿಗೆ ತನ್ನ ಕಾಣಿಕೆಯಾಗಿ ಸಾವಿರದೈನೂರು ಡಾಲರುಗಳ ಚೆಕ್ ನೀಡಿದ ಹೆಮಿಂಗ್ವೆ. ಆದರೆ ಅದನ್ನು ಉಪಯೋಗಿಸಿಕೊಳ್ಳುವ ಬದಲು ಪೌಂಡ್ ಅದಕ್ಕೆ ಪ್ಲಾಸ್ಟಿಕ್‌ನಿಂದ ಫ್ರೇಮ್ ಹಾಕಿಸಿ

ಪ್ರವರ್ತಕ ಎಂಬ ಕಾರಣದಿಂದಲ್ಲ; ಕಾಮ, ಸೀಮ, ಜೇಗುವೆಗೊಳಗಾಗಿದ್ದರೂ ಶ್ರೇಷ್ಠ ಮಾನವನಂತೆ ವರ್ತಿಸಿದ ಎಂಬುದರಿಂದ, ಆತ ವಂದ್ಯನಾಗಿದ್ದಾನೆ.

ಪೌಂಡ್‌ನ ಬದುಕಿನತ್ತ ಬೊಟ್ಟು ಮಾಡಿ, ಉಸಿರು ಕಟ್ಟಿಸುವ ರಾಜಕೀಯದಲ್ಲಿ ಅವನು ಬಂದಿಯಾದುದನ್ನು ತೋರಿಸಿ, ಭುಜ ಹಾರಿಸಬಹುದು. ಅದು ಅರ್ಥಮಾಡಿಕೊಳ್ಳಲಾಗದವರ ವರ್ತನೆ. ಸಮಷ್ಟಿ ನೋಟ ನಷ್ಟವಾಗಿ ಬಣ್ಣದ ಕನ್ನಡಕಗಳನ್ನು ಮೂಗಿನ ಡುಬ್ಬದ ಮೇಲಿರಿಸಿದಾಗ, 'ದೇಶದ್ರೋಹಿ' ಮತ್ತಿತರ ಪದಗಳು ನಾಲಗೆ ತುದಿಯ ಮೇಲೆ ಕುಣಿದಾಡುತ್ತವೆ. ಸಮಾಜ ಸುಸಂಸ್ಕೃತರನ್ನು ಹತ್ತು ವರ್ಷ ಹುಚ್ಚಾಸ್ಪತ್ರೆಯಲ್ಲಿಟ್ಟರೂ ಇಟ್ಟೀತೇ. ಆದರೆ ಮಹಾನ್ ಆತ್ಮ ಅಂಥ ಅಗ್ನಿಪರೀಕ್ಷೆಯಲ್ಲೂ ಬಾಡದೆ ಉಳಿಯುತ್ತದೆ.

೬—೪—೧೯೬೯

# ಕಾಮನಬಿಲ್ಲಿನ ಸೇತುವೆ

'ಮೆಲುದನಿಯಲ್ಲಿ ಮಾತನಾಡಿ.'

ಬೆಂಗಳೂರು ವಿಶ್ವವಿದ್ಯಾಲಯದ ಗ್ರಂಥ ಭಂಡಾರವನ್ನು ಹೊಕ್ಕಾಗ, ಅಲ್ಲಿ ಕರಿಹಲಗೆಯ ಮೇಲೆ ಬರೆದ ಈ ಪದಗಳು ಸ್ವಾಗತ ನೀಡುತ್ತವೆ. ಅಕ್ಷರಗಳನ್ನು ಹೀಗೆ ಪೋಣಿಸಿದವರು ಗ್ರಂಥಾಲಯದ ಹಿರಿಯ ಅಧಿಕಾರಿ ಪ್ರಾಧ್ಯಾಪಕ ದೇಶಪಾಂಡೆ. ಕೆ. ಎಸ್. ದೇಶಪಾಂಡೆ ಕರ್ನಾಟಕ ಹಾಗೂ ಮೈಸೂರು ವಿಶ್ವವಿದ್ಯಾಲಯಗಳ ಗ್ರಂಥ ಭಂಡಾರಗಳ ನಿನ್ನೆಯ ಪುಟಗಳಲ್ಲಿ ನಾಯಕ ಪಾತ್ರವಹಿಸಿದವರು. ಈಗ ಅವರ ತಂಡ ಹೋರಾಟ ನಡೆಸಿರುವುದು ರಾಜಧಾನಿಯ ಗ್ರಂಥಭಕ್ಷಕರ ವಿರುದ್ಧ.

ಆ ಗ್ರಂಥಾಲಯದ ಮಹಡಿಯಲ್ಲಿ ಸಾಕಷ್ಟು ವಿಶಾಲವಾದ ಒಂದು ಕೊಠಡಿ. ಅಲ್ಲೊಂದು ಪ್ರದರ್ಶನ. ಪ್ರದರ್ಶನದ ಕೇಂದ್ರ ಬಿಂದು ತೊಂಭತ್ತು ವರ್ಷಗಳ ಕಾಲ ಮೆಲುದನಿಯಲ್ಲಿ ಮಾತನಾಡುತ್ತ ಬಂದಿರುವ ಒಬ್ಬ ಆಂಗ್ಲ ಸಾಹಿತಿ ಇ. ಎಮ್. ಫಾರ್ಸ್ಟರ್.

*   *   *   *   *

ಮಾರ್ಗನ್ ಫಾರ್ಸ್ಟರ್‌ಗೆ ಆಂಗ್ಲ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವಿದೆ. ಬೇರೆಯೂ ಒಂದು ಕಾರಣಕ್ಕಾಗಿ ಭಾರತೀಯ ಸಾಹಿತ್ಯಾಭ್ಯಾಸಿಗಳಿಗೆ ಆತನ ಬಗೆಗೆ ವಿಶೇಷ ಗೌರವ. ಭಾರತವನ್ನು ಅರ್ಥಮಾಡಿಕೊಂಡು, ಆ ಅರ್ಥವನ್ನು ಲೋಕಕ್ಕೆ ತಿಳಿಯ ಹೇಳಿದುದಕ್ಕಾಗಿ; 'ಎ ಪ್ಯಾಸೇಜ್ ಟು ಇಂಡಿಯಾ' ಮತ್ತು 'ದ ಹಿಲ್ ಆಫ್ ದೇವಿ' ಕೃತಿಗಳ ಮೂಲಕ ಭಾರತದ ವಿಶ್ವರೂಪ ದರ್ಶನ ಮಾಡಿಸಿಕೊಟ್ಟುದಕ್ಕಾಗಿ.

ಆತ ಹೇಳಿದ್ದ: 'ನಮ್ಮೊಳಗಿನ ಗದ್ಯವನ್ನು ಭಾವನೆಯ ತೀವ್ರತೆಯೊಂದಿಗೆ ಜೋಡಿಸಲು ಕಾಮನಬಿಲ್ಲಿನ ಸೇತುವೆ ನಿರ್ಮಿಸುವ ಕೆಲಸ;' 'ಎಲ್ಲ ಜನರೂ ಸೋದರರಾಗುವ ತನಕ, ಕಹಿಯಿಲ್ಲದೆ ಜೋಡಿಸುತ್ತ ಹೋಗುವುದು.'

ತಮ್ಮ ನಾಡಿಗರು ಬಿಗಿಮುಷ್ಟಿಯಿಂದ ಆಳುತ್ತಿದ್ದ ಭಾರತವನ್ನು ಅರ್ಥಮಾಡಿಕೊಳ್ಳಲೆಂದು ಫಾರ್ಸ್ಟರ್ ಮೂರು ಬಾರಿ ಇಲ್ಲಿಗೆ ಬಂದರು. ಮೊದಲ ಸಲ ೧೯೧೨–೧೩ ರಲ್ಲಿ. ಆಗ ಹಿರಿಯ ದೇವಾಸ್ ಸಂಸ್ಥಾನದ ರಾಜರಾಜ ಬಾಪುಸಾಹೇಬರ ಪರಿಚಯ ಅವರಿಗಾಯಿತು. ೧೯೨೧ರಲ್ಲಿ ಎರಡನೆಯ ಸಲ ಬಂದು, ಬಾಪುಸಾಹೇಬರ ಆಪ್ತ ಕಾರ್ಯದರ್ಶಿಯಾಗಿ ಸ್ವಲ್ಪ ಕಾಲ ದುಡಿದರು. ೧೯೪೫ ರಲ್ಲಿ ಮೂರನೆಯ ಸಲ ಪ್ರವಾಸ ಬೆಳೆಸಿ, ಶಾಂತಿನಿಕೇತನದಲ್ಲಿ ಒಂದು ಇರುಳು ತಂಗಿದರು; ದಿಲ್ಲಿ, ಕಲ್ಕತ್ತಾ,

ಮುಂಬಯಿ, ಹೈದರಾಬಾದುಗಳನ್ನು ಸಂದರ್ಶಿಸಿದರು. ಭಾರತೀಯ ಪಿ. ಇ. ಎನ್. (ಲೇಖಕರ) ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದರು.

ಮೊದಲ ಎರಡು ಭೇಟಿಗಳ ಫಲ ‘ಎ ಪ್ಯಾಸೇಜ್ ಟು ಇಂಡಿಯಾ’; ಮೂರನೆಯ ಸಂದರ್ಶನದ ಅನಂತರದ ಸೃಷ್ಟಿ ‘ದ ಹಿಲ್ ಆಫ್ ದೇವಿ’.

ಇವುಗಳಲ್ಲದೆ ಇತರ ಕೃತಿಗಳನೇಕ ಫಾರ್ಸ್ಟರರ ಲೋಕಖ್ಯಾತಿಗೆ ಕಾರಣವಾಗಿವೆಯಾದರೂ ಭಾರತೀಯರ ಪಾಲಿಗೆ ಅವರು ಆತ್ಮೀಯರಾಗಿರುವುದು ಮೇಲಿನ ಎರಡು ಕೃತಿಗಳ ದೆಸೆಯಿಂದ. ರಾಜಾರಾಯರ ಅಭಿಪ್ರಾಯದಂತೆ ‘ದೇವಿ’ “ಈ ಶತಮಾನದ ಅತ್ಯಂತ ಭಾರತೀಯವಾದ ಗ್ರಂಥಗಳಲ್ಲೊಂದು.”

* * * * *

ಕಿಪ್ಲಿಂಗ್ ಮತ್ತು ಫಾರ್ಸ್ಟರ್. ಫಾರ್ಸ್ಟರರ ಕೃತಿಗಳ ಪ್ರಕಟಣೆಗೆ ಮುನ್ನ ಬಾಹ್ಯಲೋಕಕ್ಕೆ ಭಾರತದ ಪರಿಚಯ ಮಾಡಿಕೊಡುತ್ತಿದ್ದುದು ಕಿಪ್ಲಿಂಗ್ ಕೃತಿಗಳು ಮಾತ್ರ. ಆತ ಸೃಷ್ಟಿಸಿದ್ದ ಶಬ್ದಜಾಲಗಳ ಭ್ರಮೆಯ ಲೋಕವನ್ನು ಮುಕ್ತಾಯಗೊಳಿಸಿದವರು ಫಾರ್ಸ್ಟರ್. ಸಾಮ್ರಾಜ್ಯವಾದಿಗಳ ಕಣ್ಣಿಗೆ ಅಂಜನವಾಯಿತು ಇವರ ಕೃತಿ.

೧೯೨೪ರಲ್ಲಿ ‘ಪ್ಯಾಸೇಜ್’ ಪ್ರಕಟವಾದಾಗ ಬಹಳ ಸಮಯ ಯಾರೂ ಅದನ್ನು ಗಮನಿಸಲಿಲ್ಲ. ಬಳಿಕ ‘ಮಾರ್ನಿಂಗ್ ಪೋಸ್ಟ್’ ಪತ್ರಿಕೆಯಲ್ಲಿ ಒಂದು ಅನುಕೂಲಕರ ವಿಮರ್ಶೆ ಪ್ರಕಟವಾಯಿತು. ಅದಾಗಿ ಒಂದೆರಡು ವರ್ಷಗಳಾದ ಮೇಲೆ ಪ್ರತಿಕ್ರಿಯೆಗಳು ಬರತೊಡಗಿದುವು. ಹೊಗಳಿಕೆ, ತೆಗಳಿಕೆ; ಆದರ, ತಿರಸ್ಕಾರ.

ಭಾರತೀಯ ಜೀವನದ ಮಾನವೀಯ ಚಿತ್ರಣದಿಂದ ಆಗಿನ ಆಳುವವರು ದಂಗಾದರು. ಅವರಲ್ಲಿ ಕೆಲವರು ಪರಿಸ್ಥಿತಿಯ ನಿಜರೂಪವನ್ನು ತಿಳಿಯಲು ಯತ್ನಿಸಿದರು.

ಫಾರ್ಸ್ಟರರಾದರೋ ‘ಸಮಸ್ಯೆ ಇದು : ಪರಿಹಾರ ಈ ರೀತಿ’ ಎಂದು ಹೇಳಲು ಹೊರಟಿರಲಿಲ್ಲ. ಅವರ ಪಾಲಿಗೆ ಆ ಕಾದಂಬರಿಯು ಸೃಷ್ಟಿ ಕಲಾಕ್ರಿಯೆ.

ಸಾಹಿತಿಯ ಈ ಬಗೆಯ ಯಥಾರ್ಥ ವ್ಯಕ್ತಿತ್ವ ಕ್ರಿಯಾಶೀಲವಾಗುವುದೂ ಉಂಟು. ಅದೂ ಬದುಕನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ. ಕ್ರಿಯೆ—ಪ್ರತಿಕ್ರಿಯೆ. ಗಾಂಧಿಯ ಬಗೆಗೆ ಫಾರ್ಸ್ಟರರಿಗೆ ಬಹಳ ಗೌರವವಿತ್ತು; ಜವಾಹರರ ವಿಷಯದಲ್ಲಿ ಅತ್ಯಾದರವಿತ್ತು. ಎರಡನೆಯ ಮಹಾಯುದ್ಧದ ವೇಳೆ ಬ್ರಿಟನ್ನಿನ ನಾಗರಿಕ ಸ್ವಾತಂತ್ರ್ಯದ ರಾಷ್ಟ್ರೀಯ ಮಂಡಳಿಯ ಅಧ್ಯಕ್ಷರಾಗಿ ಫಾರ್ಸ್ಟರ್, ಸೆರೆಮನೆಯಲ್ಲಿ ಜಯಪ್ರಕಾಶರಿಗೆ ನೀಡಲಾದ ಚಿತ್ರಹಿಂಸೆಯನ್ನು ಖಂಡಿಸಿದರು. ೧೯೬೨ರಲ್ಲಿ ಚೀನೀ ಆಕ್ರಮಣ ನಡೆದಾಗ, ಭಾರತದ ನೆರವಿಗೆ ಪಾಶ್ಚಾತ್ಯ ಜಗತ್ತಿನ ಎಲ್ಲ ಸರಕಾರಗಳೂ ಬರಬೇಕೆಂದು ಕರೆ ಇತ್ತರು.

* * * * *

ಲೈಂಗಿಕ ಸಂಬಂಧದಲ್ಲಿ ಇಂಥ ವ್ಯಕ್ತಿ ಸ್ವೇಚ್ಛೆಯವನಾಗಿದ್ದುದರಲ್ಲಿ ಆಶ್ಚರ್ಯವಿಲ್ಲ.

೧೯೩೫. ಮುಲ್ಕ್‌ರಾಜ್ ಆನಂದ್ ಇಂಗ್ಲೆಂಡಿನಲ್ಲಿದ್ದ ದಿನಗಳು. ಅವರ 'ಅನ್‌ಟಚಬಲ್' ಕಾದಂಬರಿಯನ್ನು ಹದಿನೇಳು ಪ್ರಕಾಶಕರು ತಿರಸ್ಕರಿಸಿದ್ದರು. ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಆನಂದರಿಗೆ ಅನಿಸಿತು. ಅಂಥ ವೇಳೆಯಲ್ಲಿ ಫಾರ್ಸ್ಟರ್ ಅವರ ಕೃತಿಗೆ ಮುನ್ನುಡಿ ಬರೆದು ಪ್ರಕಾಶನಲೋಕದ ಮಹಾದ್ವಾರವನ್ನು ಆನಂದರು ಪ್ರವೇಶಿಸುವಂತೆ ಮಾಡಿದರು.

ರಾಜಾರಾಯರ 'ಕಾಂತಾಪುರ' ಮತ್ತು 'ದ ಸರ್ಪೆಂಟ್ ಅಂಡ್ ದ ರೋಪ್' ಕೃತಿಗಳಾದರೂ ಫಾರ್ಸ್ಟರ್ ನೆರವಿನಿಂದಲೇ ಬೆಳಕು ಕಂಡುವು.

ಅವರ ಸಹೃದಯತೆಯ ಕಾರಣದಿಂದಲೇ 'ಪ್ಯಾಸೇಜ್' ಕಾದಂಬರಿಯನ್ನು ನಾಟಕವಾಗಿ ರೂಪಾಂತರಿಸುವುದು ಶಾಂತಾ ರಾಮರಾಯರಿಗೆ ಸಾಧ್ಯವಾಯಿತು.

ಅಹ್ಮದ್ ಅಲಿ, ಆರ್. ಕೆ. ನಾರಾಯಣ್, ಜಿ. ವಿ. ದೇಸಾನಿ, ನಾರಾಯಣ ಮೆನನ್—ಇವರಾದರೂ ಫಾರ್ಸ್ಟರರ ಮೆಚ್ಚುಗೆಯ ನುಡಿಗಳ ಬೆಂಗಾವಲಿನಿಂದಲೇ ಲೋಕರಂಗಕ್ಕೆ ಬಂದರು.

ಫಾರ್ಸ್ಟರರ ಔದಾರ್ಯ ಭಾರತೀಯ ಲೇಖಕರಿಗಷ್ಟೇ ಮೀಸಲಾಗಿರಲಿಲ್ಲ. ಶ್ರೇಷ್ಠ ಸಾಹಿತ್ಯವೆಲ್ಲ ಒಂದು–ಎಂಬುದನ್ನು ತಮ್ಮ ನಿತ್ಯದ ನಡವಳಿಕೆಯಿಂದ ಅವರು ಸಾರುತ್ತಿದ್ದರು. ಅವರ ನೆರಳಿನ ಆಸರೆ ಪಡೆದವರು ಹಲವು ಜನ. ಮುಖ್ಯವಾದೊಂದು ಉದಾಹರಣೆಯೆಂದರೆ ಗ್ರೀಕ್ ಕವಿ ಕಾವಾಫಿಯಸ್. ಈತನ ಕೃತಿಗಳು ಇಂಗ್ಲಿಷಿನಲ್ಲಿ ಪ್ರಕಟವಾಗಲು ಫಾರ್ಸ್ಟರರೇ ಕಾರಣರಾದರು.

* * * * *

ಇಂಥ ಧೀಮಂತ ಬದುಕನ್ನು ಬಾಳುತ್ತ ಬಂದರೂ, ಫಾರ್ಸ್ಟರ್ 'ಮೆಲುದನಿಯ ಮನುಷ್ಯ.' ಎಲ್ಲ ವೈವಿಧ್ಯದಲ್ಲೂ ಅವರು ನುಡಿಯುತ್ತಿದ್ದುದು ಸಮನ್ವಯರಾಗವನ್ನು. ಪ್ರತಿ ನಿಮಿಷದ ದುಡಿಮೆಯೂ ಕಾಮನಬಿಲ್ಲಿನ ಸೇತುವೆ ನಿರ್ಮಾಣಕ್ಕಾಗಿಯೇ........

....ವಿಶ್ವವಿದ್ಯಾಲಯದ ಇಂಗ್ಲಿಷ್ ವಿಭಾಗದವರೂ ಗ್ರಂಥಾಲಯದವರೂ ಏರ್ಪಡಿಸಿದ ಫಾರ್ಸ್ಟರ್ ಪ್ರದರ್ಶನ, ಚಿತ್ರಮಾಲಿಕೆಯಿಂದ, ಹಸ್ತಪ್ರತಿಗಳಿಂದ, ಮುದ್ರಿತ ಗ್ರಂಥಗಳಿಂದ ಫಾರ್ಸ್ಟರರ ವ್ಯಕ್ತಿತ್ವದ ದರ್ಶನವನ್ನು ಮಾಡಿಕೊಟ್ಟಿತು; ಅವರ ಆ ಸೇವೆಯೂ ಕಾಮನಬಿಲ್ಲಿನ ಸೇತುವೆ ನಿರ್ಮಾಣಕ್ಕಾಗಿಯೇ....

೨೭–೪–೧೯೬೯

# ಲೇಖನಿಯ ಕಂಬನಿ

ಮಹಾನುಭಾವನೊಬ್ಬನ ಮರಣದಿಂದ ರಾಷ್ಟ್ರ ಬಡವಾಗಿದೆ; ಕೋಟಿ ಜೀವಗಳ ಮನಸ್ಸು ಮಂಕಾಗಿದೆ.

"ಇಡಿಯ ಭಾರತವೇ ನನ್ನ ಮನೆ; ಅದರ ಜನತೆ ನನ್ನ ಕುಟುಂಬ."

ಮತಯಾಚನೆಗೆ ಹೊರಟ ಉಮೇದುವಾರನ ಮಾತಲ್ಲ; ತನ್ನ ಅಂತರಂಗವನ್ನು ತೋಡಿಕೊಳ್ಳಲು ಬಯಸಿದ ರಾಷ್ಟ್ರಪತಿಯ ನುಡಿ.

ನುಡಿಯಂತೆ ನಡೆ.

ಹಿಂದೊಮ್ಮೆ, 'ಕೇಂದ್ರ ಮಂತ್ರಿ ಮಂಡಲಕ್ಕೆ ಬನ್ನಿ' ಎಂದು ಕರೆಯು ಲಾಯಿತಂತೆ. 'ಕ್ಷಮಿಸಿ' ಎಂದರು ಆತ. ಶಿಕ್ಷಣ ಕ್ಷೇತ್ರದಲ್ಲಿ ದುಡಿಯುವುದರಲ್ಲೇ ತೃಪ್ತಿ.

ಆದರೆ ಅದು ದೀರ್ಘಕಾಲ ಪರಿಣಾಮ ಬೀರುವಂತಹ ದುಡಿಮೆ. ಅವರು ಬಾಳಿದ್ದೇ ಒಂದು ಸಂಕೇತವಾಗಿ.

ಸಮಾಜ ಹೇಗೇ ಉರುಳಲಿ, ಸಂಕೇತಗಳಿಗೆ ಬೆಲೆಯುಂಟು.

*    *    *    *    *

ಕಾವ್ಯವನ್ನು ಬರೆಯಬಹುದು. ಆದರೆ ಕಾವ್ಯವನ್ನು (ಕಾವ್ಯದಂತೆ) ಬದುಕ ಬಹುದೆ?

ಅದು ಸಾಧ್ಯ ಎಂದು ತೋರಿಸಿಕೊಟ್ಟವರು ಡಾ. ಜಕೀರ್ ಹುಸೇನ್.

ಎರಡು ನೂರು ಬಗೆಯ ರೋಜಾ ಹೂಗಳ ರಾಜ ಆತ. ಅದೇನು ಹುಚ್ಚೆ? ಹೂಗಳನ್ನು, ಗಿಡಗಳನ್ನು, ಮರಗಳನ್ನು ಪ್ರೀತಿಸುವವನು ಒಂದು ಬಗೆಯ ಋಷಿ. ಇದೇನು ಬಗೆಬಗೆಯ ಕಲ್ಲುಗಳ ಮೋಹ? ಪ್ರಕೃತಿಯ ಆರಾಧನೆ ಎನ್ನೋಣವೆ? ಚಿತ್ರಗಳನ್ನು ಕಂಡು ಭಾವಸಮಾಧಿಗೆ ಇಳಿಯುವ ಪ್ರವೃತ್ತಿ ಎಂಥದಿದು?

—ಬೇರೆಯವರಿಗಿಂತ ಭಿನ್ನ ಮನುಷ್ಯ.

ಅಂತಹ ಹೆಗ್ಗಳಿಕೆ ಲಭಿಸುವುದು ಅಸಾಧಾರಣ ವ್ಯಕ್ತಿಗಳಿಗೆ ಮಾತ್ರ.

*    *    *    *    *

ಸುಮಾರು ಅರ್ಧ ಶತಮಾನಕ್ಕೆ ಹಿಂದಿನ ಮಾತು. ಇಪ್ಪತ್ತು ಚಿಲ್ಲರೆ ಹ[illegible] ಹುಸೇನ್, ಮಾರ್ಕ್ಸ್ ಹುಟ್ಟಿದ ಜರ್ಮನಿಗೆ ತೆರಳಿ, ವಿದ್ಯಾರ್ಥಿ ವೇಷವನ್ನು [illegible]. ಅಲ್ಲಿ ಡಾಕ್ಟರಾದರು. ಮಹಾತ್ಮರ ಪ್ರಭಾವಕ್ಕೆ ಸಿಲುಕಿದ ವ್ಯಕ್ತಿ. ಆ ಕಾಲಾವಧಿಯ ಪ್ರಮುಖ ಸಮಸ್ಯೆಯನ್ನು ಕುರಿತು ಒಂದು ಪುಸ್ತಕ ಬರೆದರು. ಅದು, "ಬಂಡವಾಳ."

ಆರ್ಥಿಕ ವಿಷಯಗಳಲ್ಲಿ ಅವರ ಆಸಕ್ತಿ ವ್ಯಾಪಕವಾದದ್ದು. ಲಿಸ್ಟ್‌ನ 'ಅರ್ಥ ಶಾಸ್ತ್ರದ ರಾಷ್ಟ್ರೀಯ ವ್ಯವಸ್ಥೆ' ಮತ್ತು ಎಡ್ವಿನ್ ಕ್ಯಾನನ್‌ರ 'ಅರ್ಥಶಾಸ್ತ್ರದ ಮೂಲ ಅಂಶಗಳು' ಎಂಬ ಎರಡು ಗ್ರಂಥಗಳನ್ನು ಉರ್ದು ಭಾಷೆಗೆ ಅವರು ತರ್ಜುಮೆ ಮಾಡಿದರು.

ಆ ವಿಚಾರಶೀಲ ಚಿಂತನಪರ ಮನುಷ್ಯ ಪ್ಲೇಟೋನ 'ಗಣರಾಜ್ಯ'ವನ್ನು ಉರ್ದು ಭಾಷೆಗೆ ಅನುವಾದಿಸಿದ್ದೂ ಆಕಸ್ಮಿಕವಲ್ಲ.

ಶಿಕ್ಷಣವನ್ನು ಕುರಿತ ಅವರ ಹಗಲಿರುಳಿನ ಧ್ಯಾನ ಹಿಂದಿಯಲ್ಲಿ 'ಶಿಕ್ಷಾ' ಎಂಬ ಕೃತಿಗೆ ಕಾರಣವಾಯಿತು.

* * * * *

ಪ್ರಾಯಶಃ ಬಹಳ ಜನರು ತಿಳಿಯದೇ ಇರುವ ವಿಷಯವೆಂದರೆ, ಹುಸೇನರು ಕತೆಗಾರರಾಗಿದ್ದರೆಂಬುದು. ಅದೂ ಎಂತಹ ಕತೆಗಾರ!

ಹೂವನ್ನು ಪ್ರೀತಿಸುವವರಿಗೆ ಮಕ್ಕಳು ಮುದ್ದು ಎಂದು ತೋರುತ್ತದೆ! ಹುಸೇನರು ಕತೆಗಳನ್ನು ಬರೆದಿರುವುದೆಲ್ಲ ಎಳೆಯರಿಗಾಗಿ.

"ಅಬ್ಬುಖಾನನ ಮೇಕೆ ಮತ್ತು ಹದಿನಾಲ್ಕು ಇತರ ಕತೆಗಳು"—ಇದು ಹುಸೇನರ ಒಂದು ಸಂಗ್ರಹದ ಶೀರ್ಷಿಕೆ. ಒಪ್ಪಿಸಿದ್ದು "ರುಖಯ್ಯ ರೆಹಾನಾ." ಕಾವ್ಯನಾಮವಲ್ಲ. ಹುಸೇನರ ಮಗಳ ಹೆಸರು. ಆಕೆ ತನ್ನ ಐದನೆಯ ವರ್ಷದಲ್ಲೇ ಕಮರಿ ಹೋದ ಮೊಗ್ಗು. ಈ ಸಂಕಲನಕ್ಕೆ ಮುನ್ನುಡಿ ಬರೆದವರು ಹುಸೇನರೇ. ಅದರಲ್ಲಿ ಅವರೆಂದಿದ್ದಾರೆ: "ಈ ಕತೆಗಳನ್ನು ನನಗೆ ಹೇಳಿದವರು ರುಖಯ್ಯ."

ಡಾ. ಜಕೀರ್ ಹುಸೇನರ ಇತ್ತೀಚಿನ ಕೃತಿ ಶಿಶುಸಾಹಿತ್ಯ. ಉರ್ದು ಭಾಷೆಯಲ್ಲಿ ಮಕ್ಕಳಿಗಾಗಿ ಬರೆದುದು.

ಈ ಕತೆ ನಡೆಯುವ ಸ್ಥಳ ಓಖ್ಲಾ. (ರಾಷ್ಟ್ರಪತಿಯನ್ನು ಬಸಿರೊಳಗೆ ಮತ್ತೆ ಕರೆದುಕೊಂಡು, ಭಾರತದ ಇತಿಹಾಸದಲ್ಲಿ ಮರೆಯಲಾಗದ ಸ್ಥಾನ ದೊರಕಿಸಿ ಕೊಂಡಿರುವ ಪ್ರದೇಶ. ಹುಸೇನರು ಇಪ್ಪತ್ತು ವರ್ಷಗಳ ಕಾಲ ದುಡಿದು ಕಟ್ಟಿದ ಶಿಕ್ಷಣ ಸಂಸ್ಥೆ ಜಾಮಿಯ ಮಿಲ್ಲಿಯ ಇರುವುದು ಇಲ್ಲೇ. ಲೋಕನಾಯಕರೆಲ್ಲ ಮೊನ್ನೆ ತಾನೇ ಅಲ್ಲಿಗೆ ಹೋಗಿಬಂದರು. ಅಗಲಿದವರಿಗೆ ವಿದಾಯ ನುಡಿಯಲೆಂದು (ಗೋರಿಯೊಳಗೆ ಹಿಡಿಮಣ್ಣು ಇಳಿಸಲೆಂದು). ಕತೆಯೂ ಪರಿಚಿತವಾದದ್ದೇ: ಅದು ಮೊಲಗಳಿಗೆ ಸಂಬಂಧಿಸಿದ್ದು.

ಪರಿಚಿತ, ಆದರೂ ಭಿನ್ನ. ಯಾಕೆ ಅಂದರೆ, ಹುಸೇನರು ಪುನಃ ಸೃಷ್ಟಿಸಿದ ಈ ಕತೆಯಲ್ಲಿ ನಿಧಾನ ನಡಿಗೆಯ ಆಮೆ ಪಂದ್ಯದಲ್ಲಿ ಗೆಲ್ಲುವುದಿಲ್ಲ; ಅತಿ ಆತ್ಮ ವಿಶ್ವಾಸದ ಆಮೆ, ನಿಯಮಗಳನ್ನು ಮುರಿದು ಚುಟುಕು ನಿದ್ದೆ ಮಾಡುವುದೂ ಇಲ್ಲ. ಆದರೆ ಗೆಲುವು ಮಾತ್ರ ಇಬ್ಬರ ಪಾಲಿಗೂ ನಾಸ್ತಿ. ಯಾಕೆಂದರೆ, ಸಾಗುವ ದಾರಿ

ಯಲ್ಲಿ ಅವೆರಡೂ ಬೇರೆ ಬೇರೆಯಾಗುತ್ತವೆ. ಆಗ ಜೇಬಿನಾಯಿಗೆ ತುತ್ತಾಗುತ್ತವೆ.

ತಮಾಷೆಯೆಂದರೆ, ಈ ಕಥೆಯಲ್ಲಿ ಮೊಂಡುಬುದ್ಧಿಯ ಇಬ್ಬರು ಪ್ರಾಧ್ಯಾಪಕರ ಪಾತ್ರಗಳೂ ಇವೆ. ಒಬ್ಬ ಹಿಂದೀವಾದಿ, ಇನ್ನೊಬ್ಬ ಉರ್ದೂವಾದಿ. ಇಕ್ಕಟ್ಟಾದ ಹಾದಿಯಲ್ಲಿ ಅವರಿಬ್ಬರೂ ದಾರಿ ತಪ್ಪುತ್ತಾರೆ!

ನೀತಿಬೋಧಕವಾದ ಸೊಗಸಾದ ಕತೆ. ಇಂಥವು ಇನ್ನೂ ಹಲವು. ಈ ಬಗೆಯ ಸಾಹಿತ್ಯದಿಂದ ಮಕ್ಕಳಿಗೆ ಒಳಿತಾಗುತ್ತದೆ; ಅವರಲ್ಲಿ ಸದಭಿರುಚಿ ರೂಪುಗೊಳ್ಳುತ್ತದೆ ; ಅವರಿಗೆ ಯೋಗ್ಯ ಮಾರ್ಗದರ್ಶನ ದೊರೆಯುತ್ತದೆ ಎಂದು ಆ ಕತೆಗಾರ ನಂಬಿದ್ದರು.

* * * * *

ಕ್ಷಮ್ಯವಾದ ಒಂದು ಬಯಕೆ. ಹುಸೇನರ ಬರೆವಣಿಗೆ ಯಾರದು ? ಉರ್ದೂ ಮಾತನಾಡುವವರದೆ ? ಹಿಂದೀ ಸಾಕ್ಷರರದೆ ? ಇಡೀ ದೇಶದ ಸೊತ್ತಲ್ಲವೆ ಅದು ? ಭಾರತೀಯ ಸಾಹಿತ್ಯವಲ್ಲವೆ ?

ಅವರ ಕತೆಗಳು, ಇತರ ಸ್ವತಂತ್ರ ಕೃತಿಗಳು, ಅವರ 'ಮನೆ'ಯ, 'ಕುಟುಂಬ'ದ ಎಲ್ಲ ಸದಸ್ಯರಿಗೂ ದೊರೆಯುವುದು ಬೇಡವೆ ?

ಶ್ರೇಷ್ಠ ತತ್ತ್ವವೇತ್ತ ರಾಧಾಕೃಷ್ಣನ್ ಈ ರಾಷ್ಟ್ರದ ಅಧ್ಯಕ್ಷರಾಗಿದ್ದರು. ಆದರೆ ಅವರ ಬರೆವಣಿಗೆ ಆ ಅವಧಿಯಲ್ಲೂ ದೇಶದ ಎಲ್ಲ ಭಾಷೆಗಳಲ್ಲಿ ಪ್ರಕಟವಾಗಲಿಲ್ಲ. ಈಗಲೂ ಇಲ್ಲ. ಪ್ರಾಯಶಃ ಹುಸೇನರ ಕೃತಿಗಳಿಗೆ ಒದಗುವ ಗತಿಯೂ ಇಂಥದೇ ಎಂದು ತೋರುತ್ತದೆ.

ಅಳಬೇಕು ; ಈ ದುಃಸ್ಥಿತಿಗಾದರೂ ನಾವು ಅಳಬೇಕು.

೧೮–೫–೧೯೬೯

# ರತ್ನಪ್ರಾಯ ಆರ್. ಎಲ್. ಎನ್.

ವಿಶ್ವೇಶ್ವರ ಕೈಗಾರಿಕಾ ಮ್ಯೂಸಿಯಮಿನಲ್ಲಿ 'ಜನಪ್ರಿಯ ವಿಜ್ಞಾನ' ವಿಭಾಗದ ಉದ್ಘಾಟನೆ, ಕೇಂದ್ರದ ವಿದ್ಯಾಸಚಿವರಿಂದ.

ಆ ನಿಮಿತ್ತ ಮ್ಯೂಸಿಯಮಿಗೆ ಭೇಟಿ ನೀಡಿದವರ ಸಂಖ್ಯೆ ದೊಡ್ಡದು.

ಬಹಳ ಜನ ಬಂದರು. ಆದರೆ ಒಬ್ಬರು ಬರಲಿಲ್ಲ. ಯಾರಿಗೂ ಅಡ್ಡಿಯಾಗದಂತೆ ಒಂದು ಮೂಲೆಯಲ್ಲಿ ನಿಂತು, ದಪ್ಪ ಕನ್ನಡಕಗಳೆಡೆಯಿಂದ ಸಂದರ್ಭವನ್ನು ನೋಡಿ ಮುಗುಳುನಗಬಹುದಾಗಿದ್ದ ಗೌರವರ್ಣದ ಕೃಶಾಂಗ ಸುಸಂಸ್ಕೃತರೊಬ್ಬರು ಬಂದಿರಲಿಲ್ಲ.

ಭೌತಶಾಸ್ತ್ರದ ಪ್ರಾಧ್ಯಾಪಕ ಆರ್. ಎಲ್. ಎನ್.ರ ದೇಹಾವಸಾನವಾಗಿ ಆಗಲೇ ಹತ್ತು ಹನ್ನೆರಡು ದಿನಗಳಾಗಿದ್ದುವು.

* * * *

ಕನ್ನಡ–ಕನ್ನಡ ನಿಘಂಟಿನ ಸಂಪಾದಕ ಮಂಡಳಿಯ ಸಭೆಗೆಂದು ಮೈಸೂರಿನಿಂದ ಪ್ರೊ. ಜವರೇಗೌಡರು ಬಂದಿದ್ದರು. ಕಿರಿಯರ ವಿಶ್ವಕೋಶ ನಿರ್ಮಿತಿಯ ಯೋಜನೆಯನ್ನು ಕುರಿತು ಅವರೂ ನಾನೂ ಮಾತನಾಡುತ್ತಿದ್ದೆವು.

ನಾನೆಂದೆ :

"ವಿಜ್ಞಾನ ವಿಭಾಗದ ಸಲಹೆಗಾರರಾಗಿರುವಂತೆ ಆರ್. ಎಲ್. ಎನ್.ರನ್ನು ಕೇಳಿಕೊಳ್ಳಬಹುದು, ಅಲ್ಲವೆ ?"

"ಓಹೋ. ಆ ಕ್ಷೇತ್ರದಲ್ಲಿ ಅವರೇ ಶ್ರೇಷ್ಠರು. ಅವರನ್ನು ಒಪ್ಪಿಸಿದರೆ ತುಂಬಾ ಚೆನ್ನಾಗಿರುತ್ತದೆ,"

—ಎಂದರು ದೇಜಗೌ.

ಮಾತನಾಡಿ ಕೆಲವೇ ಗಂಟೆಗಳಾಗುವುದರೊಳಗೆ ನರಸಿಂಹಯ್ಯನವರ 'ಇಹಲೋಕ ಯಾತ್ರೆ' ಮುಗಿದಿತ್ತು.

* * * * *

ಅಸಂಖ್ಯ ವಿದ್ಯಾರ್ಥಿಗಳ ಪಾಲಿಗೆ ಆರ್. ಎಲ್. ಎನ್. ಆರಾಧ್ಯರು. ತರಗತಿಗಳ ಹೊರಗೆ ಸಭೆಗಳಲ್ಲಿ ಅವರ ಉಪನ್ಯಾಸಗಳನ್ನು ಆಲಿಸುವ ಅವಕಾಶ ದೊರೆತವರ ದೃಷ್ಟಿಯಲ್ಲಿ ಅವರು ಅದ್ವಿತೀಯರು, ಅಸಾಮಾನ್ಯರು.

ಸರಳತೆ ಸೌಜನ್ಯಗಳ ಸಾಕಾರ ಮೂರ್ತಿ. ಒಂದು ಜನ್ಮದ ಸಾಧನೆಯೇ ಈ

ಸಂಸ್ಕಾರ? – ಎಂಬ ಶಂಕೆ ಹುಟ್ಟಿಸುವಂತಹ ನುಡಿ, ನಡೆ. ಅವರ ಪ್ರಾಗತಿಕ ವಿಚಾರಸರಣಿ ಸಾಮಾನ್ಯರನ್ನು ಬೆಚ್ಚಿಬೀಳಿಸುತ್ತಿತ್ತು. ಎಷ್ಟು ನಿಷ್ಠುರಿಯೋ ಅಷ್ಟೇ ಸ್ನೇಹಪರ.

ಅಸಿಸ್ಟೆಂಟ್ ಪ್ರೊಫೆಸರ್ ಪದವಿಯನ್ನು ಹಿಂದೆ ಅವರಿಗೆ ನೀಡಲಾಗಿತ್ತು. ಆದರೆ ಹುದ್ದೆಗೆ ಸಂಬಂಧಿಸಿ ವಿಧಿಸಲಾದ ನಿರ್ಬಂಧಗಳು ಆರ್. ಎಲ್. ಎನ್. ರಿಗೆ ಇಷ್ಟವಾಗಲಿಲ್ಲ. ಹಿರಿಯ ಹುದ್ದೆ ಬೇಡ ಎಂದರು. ಉಪನ್ಯಾಸಕರಾಗಿಯೇ ಉಳಿದರು. ಆದರೆ ಆಚಾರ್ಯರೆಂದೇ ಎಲ್ಲರಿಂದಲೂ ಪರಿಗಣಿತರಾದರು.

* * * * *

ಆರ್. ಎಲ್. ಎನ್. ಹೆಗ್ಗಳಿಕೆಯೇನು? ಅವರು ವಿದ್ವತ್ತಿನ ಅಕ್ಷಯಪಾತ್ರೆಯಾದದ್ದು. ಅವರು ನೀಡಿದಷ್ಟೂ ಅದು ಹೆಚ್ಚಿತು. ಕನ್ನಡದಲ್ಲಿ ವಿಜ್ಞಾನವನ್ನು ಅವರಷ್ಟು ಪ್ರಚುರಗೊಳಿಸಿದವರು ಇನ್ನೊಬ್ಬರಿಲ್ಲ. ಅವರಷ್ಟು ಸರಳವಾಗಿ ಸೊಗಸಾಗಿ ಬರೆಯುವವರನ್ನೂ ಬೇರೆ ಕಾಣೆವು.

ಅವರ ಕೃತಿಗಳ ನಾಮಾವಳಿಯನ್ನು ಜಪಿಸಿದರೂ ಸಾಕು, ನಮ್ಮ ನುಡಿಯ ಸಾಮರ್ಥ್ಯದ ಬಗೆಗೆ ನಂಬುಗೆ ಮೂಡುತ್ತದೆ:

“ಚಂದ್ರ ಲೋಕಯಾತ್ರೆ”, “ನಕ್ಷತ್ರ ದರ್ಶನ”, “ಜಗತ್ತುಗಳ ಹುಟ್ಟು ಸಾವು,” “ಶಕ್ತಿ”, “ರೇಡಾರ್”, “ಶಬ್ದಪ್ರಪಂಚ”.... ಪ್ರತಿಯೊಂದೊಂದೂ ಕನ್ನಡದಲ್ಲಿ ವಿಜ್ಞಾನ ಸಾಹಿತ್ಯದ ಹೆಗ್ಗುರುತುಗಳು. ಹಿರಿಯ ಎಂಬ ಬಿರುದು ಪ್ರಾಪ್ತವಾಗಲು ಈ ಸ್ವತಂತ್ರ ಕೃತಿಗಳೇ ಸಾಕು.

ವಿಷಯ ಯಾವುದಾದರೇನಂತೆ? ಎಷ್ಟು ಗಹನವಾಗಿದ್ದರೇನಂತೆ? ತಿಳಿಸುವವನಿಗೆ ಅದು ಸ್ಪಷ್ಟವಾಗಿದ್ದರೆ ತಿಳಿಯ ಹೇಳುವ ಕೆಲಸ ಸುಲಭ. ಸ್ವಂತದ ಜ್ಞಾನ ಸಂಪಾದನೆಯಾದದ್ದು ಇಂಗ್ಲಿಷಿನ ಮಾರ್ಗವಾಗಿ. ಆ ಪರಕೀಯ ಭಾಷೆಯ ಮೇಲೆ ಅವರಿಗಿದ್ದ ಪ್ರಭುತ್ವವೂ ಮೆಚ್ಚುವಂಥಾದ್ದು. ಆದರೂ ನಾಡಿನ ಪಾತ್ರೆ ಸೌಟುಗಳನ್ನು ಬಳಸಿಯೇ ಅವರು ವಿಜ್ಞಾನವನ್ನು ಬಡಿಸಿದರು. ಎಂಥ ನಳ! ಎಂಥ ಪಾಕ!

ಬಲ್ಲವರು ಹೇಳಿದ್ದಾರೆ:

“ಪಾರಿಭಾಷಿಕ ಪದಗಳನ್ನು ನಿರ್ಮಿಸುವ ಅವರ ಜಾಣ್ಮೆಯಂತೂ ಮೆಚ್ಚಬೇಕಾದ್ದು.”

ಅವರ ಮೂಲ ಬರೆವಣಿಗೆ ಎಷ್ಟು ಸೊಗಸೋ ಭಾಷಾಂತರಗಳೂ ಅಷ್ಟೇ ಹೃದಯಂಗಮ. “ವಿಜ್ಞಾನ ಬುದ್ಧಿಗಮ್ಯ” “ಜನಗಳೂ ಯಂತ್ರಗಳೂ”- ಇವೆರಡು ಆರ್. ಎಲ್. ಎನ್. ಅನುವಾದಿಸಿದ ಗ್ರಂಥಗಳು. “ಇಂಟ್ರೊಡಕ್ಷನ್ ಟು ಮಾಡರ್ನ್ ಫಿಸಿಕ್ಸ್” – ಇದು ಅವರ ಸಾವಿರ ಪುಟಗಳ ಅನುವಾದಿತ ಗ್ರಂಥ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆ ಅದನ್ನು ಪ್ರಕಟಿಸಲಿದೆ. “ಪಂಚಾಂಗಗಳೂ

ಬಗೆಗಿನ ವಿಜ್ಞಾನವೂ" ಪ್ರಕಟವಾಗಬೇಕಾಗಿರುವ ಅವರ ಇನ್ನೊಂದು ಕೃತಿ. ಅವರು ಸಿದ್ಧಗೊಳಿಸಿದ "ಪಾರಿಭಾಷಿಕ ಪದಕೋಶ" ಅಚ್ಚಿನಲ್ಲಿದೆ. ತಮ್ಮ ಅನೇಕ ಪ್ರಸಾರ (ರೇಡಿಯೋ) ಭಾಷಣಗಳನ್ನೂ ಪತ್ರಿಕಾಲೇಖನಗಳನ್ನೂ ಒಂದು ಸಂಪುಟದಲ್ಲಿ ಪ್ರಕಟಿಸುವ ಯೋಜನೆಯನ್ನೂ ಇತ್ತೀಚೆಗೆ ಅವರು ಹಾಕಿಕೊಂಡಿದ್ದರು.

*　　*　　*　　*　　*

'ಚಂದ್ರಲೋಕ ಯಾತ್ರೆ'ಯ ಪರಿಚ್ಛೇದಗಳು ಹಿಂದೆ ಬಿಡಿ ಬಿಡಿಯಾಗಿ ಪ್ರಕಟವಾಗಿದ್ದುವು. ಆಗ ಅವುಗಳನ್ನೋದಿ ಸಂತೋಷಪಟ್ಟಿದ್ದೆ.

ಪುಸ್ತಕವನ್ನೀಗ ಕಗ್ಗಗಳ ಗಂಟಿನಿಂದ ಹುಡುಕಿ ತೆಗೆದು ಪುಟ ತಿರುವಿದ್ದೇನೆ. 'ಅರಿಕೆ'ಯಲ್ಲಿ ಅವರು ಹೇಳಿರುವ ಒಂದು ಮಾತು ಎಷ್ಟು ಚೆನ್ನ!

"ಚಂದ್ರಲೋಕ ಯಾತ್ರೆಯ ವಿಷಯಗಳನ್ನು ಕುರಿತು ಬರೆಯುವ ಲೇಖಕ ಒಂದು ರೀತಿಯ ಭಂಡನಾಗಿರಬೇಕು. ಏಕೆಂದರೆ ಪುಸ್ತಕದ ಹಾಳೆಗಳು ಅಚ್ಚಾಗುತ್ತಿರುವಂತೆಯೇ ಅವುಗಳಲ್ಲಿ ಚರ್ಚಿಸಿರುವ ಅನೇಕ ವಿಷಯಗಳು ಹಳೆಯವಾಗಿಬಿಟ್ಟಿರುತ್ತವೆ. ಅವುಗಳಿಗಿದ್ದ ಪ್ರಾಧಾನ್ಯ ಅಳಿಸಿಹೋಗಿರುತ್ತದೆ. ವೈಜ್ಞಾನಿಕ ಪ್ರಗತಿಯ ವೇಗ ಅಷ್ಟು ಶೀಘ್ರವಾಗಿದೆ....ಇನ್ನೊಂದು ದೃಷ್ಟಿಯಿಂದ ನೋಡಿದರೆ ಬಹಳ ಕಾಲದವರೆಗೆ ಬಳಕೆಯಲ್ಲಿರಲಿ ಎಂಬ ಉದ್ದೇಶದಿಂದ ಬರೆದಿರುವ ಪುಸ್ತಕಗಳಿರುವಂತೆಯೇ, ಜನಸಾಮಾನ್ಯದ ತಾತ್ಕಾಲಿಕ ಜ್ಞಾನತೃಷ್ಣೆ ಪರಿಹಾರವಾಗಲಿ ಎಂಬ ಉದ್ದೇಶದಿಂದ ಬರೆದಿರುವ ಪುಸ್ತಕಗಳಿಗೂ ಸಾಹಿತ್ಯ ಪ್ರಪಂಚದಲ್ಲಿ ಸ್ಥಾನವಿರಬೇಕು ಎಂದೆನ್ನಿಸುತ್ತದೆ. 'ಚಂದ್ರಲೋಕ ಯಾತ್ರೆ' ಈ ಎರಡನೆಯ ವರ್ಗಕ್ಕೆ, ಅಲ್ಪಾಯುಗಳ ಜಾತಿಗೆ ಸೇರಿದ ಪುಟ್ಟ ಪುಸ್ತಕ. ಈ ಜಾತಿಯ ಪುಸ್ತಕಗಳು ಹಣ್ಣುಗಳ ರಸಾಯನದಂತೆ, ತಯಾರಾದ ಕೂಡಲೇ ಅವನ್ನು ಸವಿ ನೋಡಿ ಅರಗಿಸಿಕೊಳ್ಳಬೇಕು."

*　　*　　*　　*　　*

ನಿವೃತ್ತರಾದ ಮೇಲೂ ಅಧ್ಯಾಪನ ವೃತ್ತಿಯಿಂದ ಆರ್. ಎಲ್. ಎನ್. ದೂರ ಸರಿಯಲಿಲ್ಲ. ಜೊತೆಗೆ ವಿಶ್ವಕೋಶದ ವಿಜ್ಞಾನ ವಿಭಾಗದ ಸಂಪಾದಕರಾಗಿದ್ದರು. ಇಂಗ್ಲಿಷ್-ಕನ್ನಡ ಕೋಶದ ಸಂಪಾದಕ ಮಂಡಲಿಯಲ್ಲಿದ್ದರು. ಅಲ್ಪಾಯು ಕೃತಿಗಳಿಂದ ವಿನಮ್ರವಾಗಿ ಅರಿಕೆಮಾಡಿಕೊಳ್ಳುತ್ತ ದೀರ್ಘಾಯು ಕೃತಿಗಳನ್ನು ಬರೆದರು.

ಕನ್ನಡ ದೀರ್ಘ ನಿದ್ರೆಯಿಂದೆಚ್ಚತ್ತು ಚಂದ್ರಲೋಕದತ್ತ ನೋಡಿದ ಕಾಲಾವಧಿಯಲ್ಲಿ ತಮಗೆ ಅದರ ಅರಿವಿಲ್ಲದೆಯೇ ಐತಿಹಾಸಿಕ ಮಹತ್ವದ ಸೇವೆಯನ್ನು ಆರ್. ಎಲ್. ಎನ್. ಸಲ್ಲಿಸಿದರು.

ಇನ್ನು ನೂರು ವರ್ಷಗಳ ಬಳಿಕ ಕನ್ನಡ ಜನ ಅವರನ್ನು ಕೊಂಡಾಡುತ್ತಾರೆ. ಅವಿನಾಶಿಯಾದ ಪ್ರಶಸ್ತಿಗಳನ್ನು ಅವರಿಗೆ ಅರ್ಪಿಸುತ್ತಾರೆ.

೧-೬-೧೯೬೯

# ಸುದ್ದಿ: ಶ್ರೀನಿವಾಸಮೂರ್ತಿ

ಮೈಸೂರಿನ ಶ್ರೀಕಾಂತ ಸಂಸ್ಕೃತಿ ಸಂಘದವರು ಕಳುಹಿಸಿರುವ ಒಂದು ಆಹ್ವಾನ ಪತ್ರಿಕೆ.

"ಸಂಘದ ಸಂಸ್ಥಾಪಕ ಸದಸ್ಯರಲ್ಲೊಬ್ಬರೂ ನಗರದ ಹಿರಿಯ ಕಾರ್ಯನಿರತ ಪತ್ರಿಕೋದ್ಯೋಗಿಗಳೂ ಆದ ಶ್ರೀ ಎಸ್. ಶ್ರೀನಿವಾಸಮೂರ್ತಿ ಅವರು ಕಳೆದ ಇಪ್ಪತ್ತೈದು ವರ್ಷಗಳಿಂದ ಸತತವಾಗಿ ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸಭೆಯ ಚುನಾಯಿತ ಸದಸ್ಯರಾಗಿದ್ದು ಉನ್ನತ ಶಿಕ್ಷಣಕ್ಕಾಗಿ ಸಲ್ಲಿಸುತ್ತಿರುವ ಸೇವೆಯ ಬಗ್ಗೆ ಮೆಚ್ಚಿಗೆ ಸೂಚಿಸಿ ಅಭಿನಂದಿಸಲು, ಇದೇ ಜೂನ್ ಮಾಹೆ ೧೫ನೇ ತಾರೀಖು ಭಾನುವಾರ ಸಂಜೆ ೬–೩೦ ಗಂಟೆಗೆ ಶಾರದಾವಿಲಾಸ ಲಾ ಕಾಲೇಜಿನ ಸಭಾಂಗಣದಲ್ಲಿ ಸನ್ಮಾನ ಸಭೆಯನ್ನು ಏರ್ಪಡಿಸಲಾಗಿದೆ. ರಾಜ್ಯದ ಕೈಗಾರಿಕಾ ಮತ್ತು ವಾರ್ತಾ ಶಾಖೆಯ ಮಾನ್ಯ ಮಂತ್ರಿಗಳಾದ ಶ್ರೀ ಎಂ. ರಾಜಶೇಖರಮೂರ್ತಿ ಅವರು ಅಧ್ಯಕ್ಷತೆ ವಹಿಸಲು ದಯವಿಟ್ಟು ಒಪ್ಪಿರುತ್ತಾರೆ. ತಾವು ಕೃಪೆಮಾಡಿ ಸಭೆಗೆ ದಯಮಾಡಿಸಬೇಕಾಗಿ ಪ್ರಾರ್ಥನೆ. ಭಾಷಣ: ಪ್ರೊ. ದೇ. ಜವರೇಗೌಡರು, ಪ್ರೊ. ಎಚ್. ಎಸ್. ಕೃಷ್ಣಸ್ವಾಮಯ್ಯಂಗಾರ್ಯರು...."

ಈ ಆಹ್ವಾನ ಪತ್ರಿಕೆ ವೃತ್ತಿಬಾಂಧವ ಶ್ರೀನಿವಾಸಮೂರ್ತಿಯವರನ್ನು ಕುರಿತ ಹಲವು ನೆನಪುಗಳು ಗರಿಗೆದರಲು ಕಾರಣವಾಗಿದೆ.

* * * * *

ಮೈಸೂರು ಪತ್ರಿಕೋದ್ಯಮದಲ್ಲಿ ಎಸ್. ಶ್ರೀನಿವಾಸಮೂರ್ತಿಯವರನ್ನು ಅರಿಯದವರು ವಿರಳ. 'ಕನ್ನಡ' ಎನ್ನುವುದರ ಬದಲು 'ಮೈಸೂರು' ಪದವನ್ನು ಬಳಸಲು ಕಾರಣವಿಷ್ಟೆ. ಹಿಂದೆ ಬೆಂಗಳೂರಿನ ದಿನಪತ್ರಿಕೆಗಳ ಪ್ರಸಾರ ಸೀಮಿತವಾಗಿದ್ದುದು ಹಳೆಯ ಮೈಸೂರಿಗೆ. ಆ ಕಾಲದಲ್ಲಿ 'ತಾಯಿನಾಡು' ಪತ್ರಿಕೆಗೆ ಏರು ಯೌವನ. ಆ ತಂಡದಲ್ಲಿದ್ದು ಮೆರೆದವರು ಶ್ರೀನಿವಾಸಮೂರ್ತಿ. ಮೈಸೂರು ಸಂಸ್ಥಾನದಲ್ಲಿ (ಸಂಸ್ಥಾನಾವಳಿ ಎನ್ನಬಹುದು) ಎಲ್ಲ ಪತ್ರಿಕಾ ವಾಚಕರಿಗೂ ಶ್ರೀನಿವಾಸಮೂರ್ತಿ ಪರಿಚಿತರು. ಮಹಿಷೂರರಸರ ರಾಜ್ಯದಲ್ಲಿ ಮೈಸೂರು ನಗರಕ್ಕೆ ಎಲ್ಲಿಲ್ಲದ ಪ್ರಾಧಾನ್ಯ. ಒಂಟಿ ಸಲಗ ಶ್ರೀನಿವಾಸಮೂರ್ತಿಗೆ ಅದೇ ಕದಳಿ ತೋಟ.

ಈಗ ಅವರಿಗೆ ಅರುವತ್ತು. ಹೊಸ್ತಿಲು, ಇಲ್ಲವೆ ಅದರಾಚೆಗೆ. ಈ ಹಳೆಯ ಕಾಲದ ಪದವೀಧರ ಪತ್ರಿಕಾವೃತ್ತಿಗೆ ನಾಲ್ವತ್ತು ವರ್ಷಗಳ ಅಖಂಡ ಸೇವೆಯನ್ನೇ

ಸಿದ್ಧವಾಗಿದೆ. ಓದುಗರ ಅಪೇಕ್ಷೆಗಳಿಗೆ, ಪ್ರಜಾಪ್ರಭುತ್ವದ ಹೊಸ ಸಮಾಜಕ್ಕೆ ಹೊಂದಿಕೊಂಡ ವೈಖರಿಗೆ, ರಾಷ್ಟ್ರೀಯ ಚಳವಳಿ ಬಲಿತುದಕ್ಕೆ ಸಾಕ್ಷಿಯಾಗಿದ್ದವರು ಶ್ರೀನಿವಾಸಮೂರ್ತಿ. ಒಂದು ತಲೆಮಾರು ಕಣ್ಣು ಮುಚ್ಚಿ ಹೊಸದೊಂದು ಅಧ್ಯಾಯ ಆರಂಭವಾದುದನ್ನು ಅವರು ಕಂಡರು. ಸಂಪ್ರದಾಯವಾಗಿದ್ದುದು ಅಂತರ್ಧಾನವಾಗಿ, ಪ್ರಗತಿ ಎನ್ನಿಸಿಕೊಂಡುದೇ ಸಂಪ್ರದಾಯವಾಗಿ ಮಾರ್ಪಟ್ಟುದನ್ನು ಈಕ್ಷಿಸಿದರು.

*   *   *   *   *

ನುರಿತ ಜನಪ್ರಿಯ ಪತ್ರಿಕೋದ್ಯೋಗಿ. ಎಲ್ಲೆಲ್ಲೂ ಮುಕ್ತದ್ವಾರ. ಶ್ರೀನಿವಾಸ ಮೂರ್ತಿಯವರಂತೆ ಸ್ನೇಹಪರರೂ ವಾಚಾಳಿಯೂ ಆದ ವ್ಯಕ್ತಿಗಂತೂ ರಾಜಮನ್ನಣೆ. ತಾತ ವೆಂಕಟಕೃಷ್ಣಯ್ಯನವರು, ಅಗರಂ ರಂಗಯ್ಯನವರು ಕಡಿದ ತುಳಿದ ಹೆದ್ದಾರಿಯೇ ಇವರದೂ. ಆ ಪಯಣದಲ್ಲಿ ಮಾತ್ರ ವಿಶಿಷ್ಟ ಮೆರುಗು.

ಈಗ ಪ್ರತಿದಿನವೂ ಪತ್ರಕಾರರೊಬ್ಬರು ವಿದೇಶ ಪ್ರವಾಸ ಮಾಡುತ್ತಿರುತ್ತಾರೆ. ಎರಡು ಮೂರು ದಶಕಗಳಿಗೆ ಹಿಂದಿನ ಮಾತು ಬೇರೆ. 'ತಾಯಿನಾಡು'ವಿನ ಆಗಿನ ಯುವಕ ಸಂಪಾದಕ ಪಿ. ಬಿ. ಶ್ರೀನಿವಾಸನ್ನರೂ ಪ್ರತಿನಿಧಿ ಶ್ರೀನಿವಾಸಮೂರ್ತಿಯವರೂ ಒಂದು ಅಪೂರ್ವ ಜೋಡಿ. ಇಂಗ್ಲೆಂಡ್, ಫ್ರಾನ್ಸ್, ಸ್ವಿಟ್ಜರ್ಲೆಂಡ್ ಮುಂತಾದ ಐರೋಪ್ಯ ರಾಷ್ಟ್ರಗಳಲ್ಲೆಲ್ಲ ಜತೆಯಾಗಿ ಸಂಚರಿಸಿ, ಕನ್ನಡ ಪತ್ರಿಕೋದ್ಯಮದ ಆಳ ವಿಸ್ತಾರಗಳನ್ನು ಇವರಿಬ್ಬರೂ ಹೆಚ್ಚಿಸಿದರು.

ಸ್ವಾತಂತ್ರ್ಯೋತ್ತರ ಭಾರತದಲ್ಲಿ ಪತ್ರಿಕಾವೃತ್ತಿ ಉದ್ಯಮದ ಗುಣಗಳನ್ನು ಆವಾಹನೆ ಮಾಡಿಕೊಂಡಿತು. 'ತಾಯಿನಾಡು' ತನ್ನ ಸುದೀರ್ಘ ಅಧ್ಯಾಯವನ್ನು ಬರೆದು ಅಸ್ತಮಿಸಿರುವುದರ ಗುರುತು ಹಾಕಿತು. ನೂತನ ರಾಜ್ಯದ ನಿರ್ಮಾಣವಾದ ಮೇಲೆ ಬೆಂಗಳೂರಿನಿಂದ ಆವೃತ್ತಿಯನ್ನು ಪ್ರಕಟಿಸತೊಡಗಿದ 'ಸಂಯುಕ್ತ ಕರ್ನಾಟಕ'ಕ್ಕೆ ಶ್ರೀನಿವಾಸಮೂರ್ತಿ ಪ್ರತಿನಿಧಿಯಾದರು. ಮುಂದೆ ವಯಸ್ಕರ ಶಿಕ್ಷಣ ಸಮಿತಿಯ 'ಬೆಳಕು', 'ಪುಸ್ತಕ ಪ್ರಪಂಚ'ಗಳ ಗೌರವ ಸಂಪಾದಕರಾದರು. ಜೀವನಮುದ್ದಕ್ಕೂ ಕಾರ್ಯನಿರತನಾದ ಪತ್ರಕರ್ತನಿಗೆ ಕೊನೆಯವರೆಗೂ ದುಡಿಮೆಯೇ. ಕಡೆಗೆ ಬೆಳೆಯ ಸಣ್ಣ ಪತ್ರಿಕೆಗಳಿಗೆ ಹೆಸರಾದ ಮೈಸೂರಿನಲ್ಲಿ ಶ್ರೀನಿವಾಸಮೂರ್ತಿ ಸಂಪಾದಿಸುವ ಪತ್ರಿಕೆಯೂ ಒಂದಿದೆ: 'ಅಶೋಕ'.

ಪತ್ರಿಕೋದ್ಯಮವೂ ಸ್ವಾತಂತ್ರ್ಯ ಸಂಗ್ರಾಮವೂ ಒಂದೇ ನಾಣ್ಯದ ಎರಡು ಮೈಗಳಾಗಿದ್ದ ಕಾಲದಲ್ಲಿ ರಾಜಕೀಯವನ್ನು ಆ ವೃತ್ತಿಯಿಂದ ಬೇರ್ಪಡಿಸಲು ಯತ್ನಿಸಿದವರಿಲ್ಲ. ಶ್ರೀನಿವಾಸಮೂರ್ತಿ ಖಾದಿಧಾರಿಯಾದುದೂ ಕಾಂಗ್ರೆಸ್ ಪಕ್ಷಪಾತಿಯಾದುದೂ ಆ ಕಾರಣದಿಂದ. ಕೈನೂಲಿನ ಬಟ್ಟೆಯ ಬೆಳೆಯ ರುಚಿ ಒಮ್ಮೆ ಹತ್ತಿದ ಮೇಲೆ ಬದಲಾಯಿಸುವುದು ಕಷ್ಟ. ಆ ಕಾರಣದಿಂದಲೇ ಶ್ರೀನಿವಾಸಮೂರ್ತಿ ಇಂದಿಗೂ ಖಾದಿಧಾರಿ.

ಪತ್ರಿಕಾ ವೃತ್ತಿಯಲ್ಲಿರುವವನು ಇತರ ಸಂಘ ಸಂಸ್ಥೆಗಳ ಹವ್ಯಾಸದಲ್ಲಿ ತೊಡಗಬಹುದೆ? ಈಗಿನ ನಂಬಿಕೆಯಂತೆ ಅಂತಹ ಹವ್ಯಾಸಗಳು ವೃತ್ತಿಯ ದಕ್ಷತೆಗೆ ಅಡ್ಡಿಯಾಗುತ್ತವೆ. ಆದರೆ ಹಿಂದಿನ ಹಲವರು ಬೆಳೆದ ರೀತಿ ಬೇರೆ. ಸಾಮಾಜಿಕ ಪರಿಸರದೊಡನೆ ಅವರು ಬೆರೆತವರು. ಅದರಿಂದಲೂ ತಮ್ಮ ವ್ಯಕ್ತಿತ್ವದ ವಿಕಾಸಕ್ಕೆ ಗೊಬ್ಬರ, ನೀರು ಪಡೆದವರು.

ಈ ಹಿನ್ನೆಲೆಯಲ್ಲಿ ಶ್ರೀನಿವಾಸಮೂರ್ತಿಯವರ ಇತರ ಚಟುವಟಿಕೆಗಳನ್ನು ಅರ್ಥಮಾಡಿಕೊಳ್ಳುವುದು ಸುಲಭ. ಅವುಗಳಲ್ಲಿ ಒಂದು ಮೈಸೂರು ವಿಶ್ವವಿದ್ಯಾನಿಲಯದೊಡನೆ ಕಳೆದ ಇಪ್ಪತ್ತೈದು ವರ್ಷಗಳಿಂದ ಅವರು ಉಳಿಸಿಕೊಂಡಿರುವ ಸಂಬಂಧ. ಅವರು ಸೆನೆಟ್ ಸದಸ್ಯರು. ಯಾವಾಗಲೂ ಪದವೀಧರ ಕ್ಷೇತ್ರದಿಂದ ಚುನಾಯಿತರು. ಅತ್ಯಧಿಕ ಮತ ಪಡೆಯುವುದಂತೂ ಅವರಿಗೆ ಒಗ್ಗಿರುವ ವೈಖರಿ. ಹಿಂದೊಮ್ಮೆ (೧೯೪೫–೫೦ ರ ಅವಧಿಯಲ್ಲಿ) ಮೈಸೂರು ವಿಶ್ವವಿದ್ಯಾನಿಲಯ ಕ್ಷೇತ್ರದಿಂದ ಆಯ್ಕೆಗೊಂಡು, ಆ೯.ನ ರಾಜ್ಯ ಪ್ರತಿನಿಧಿ ಸಭೆಯ ಸದಸ್ಯರಾಗಿಯೂ ಇದ್ದರು.

ಇಂಥವರ ಸನ್ಮಾನ ಸಮಾರಂಭಗಳು ಸಹಜವಾಗಿ ಈಗ ಜರುಗುತ್ತಿವೆ. ಬೆಳ್ಳಿಯ ಹಬ್ಬವಾಚರಿಸುವ ಅಖಂಡ ಸೆನೆಟ್ ಸದಸ್ಯತ್ವಕ್ಕಾಗಿ ವಿಶ್ವವಿದ್ಯಾನಿಲಯದ ಸೆನೆಟ್ ಕೂಡಾ ಅವರನ್ನು ಸತ್ಕರಿಸಲು ತೀರ್ಮಾನಿಸಿದೆ.

* * * * *

ಪತ್ರಿಕೋದ್ಯಮಿ ಒಂದು ಬಗೆಯ ಹೇಸರಗತ್ತೆ ಕೂಡಾ. ಎಷ್ಟೊಂದು ಜನರ ಹೊರೆಯೇ ಇರಲಿ, ಆತನ ಬೆನ್ನು ಗಟ್ಟಿ. ಅವನು ಯಾವಾಗಲೂ ಕೊಡುವವನು. ಪಡೆಯುವವನಲ್ಲ. ಕೊನೆಯವರೆಗೂ ಅವನಿಂದ ಏನನ್ನಾದರೂ ಸುತ್ತುಮುತ್ತಲವರು ನಿರೀಕ್ಷಿಸಲೇಬೇಕು.

ಶ್ರೀನಿವಾಸಮೂರ್ತಿಯವರಿಂದ ನಾಡು ಬಯಸಬಹುದಾದ ಒಂದು ವಸ್ತು ನೆಂದರೆ, ಅವರ ನಾಲ್ಕು ದಶಕಗಳ ಅನುಭವದ ದಾಖಲೆ. ಅವರ ಬದುಕಿನೊಡನೆ ಬೆರೆತ ಇತಿಹಾಸ ದರ್ಶನ.

ಅಂಥದೊಂದು ಕೃತಿಯನ್ನು ಈಗಾಗಲೇ ಅವರು ಬರೆದಿದ್ದಾರೆ. ವಿದೇಶಗಳಲ್ಲಾದರೆ ಪ್ರಕಾಶಕರು ಅವರಿಗೆ ಒತ್ತಾಯಿಸಿ ಬರೆಸುತ್ತಿದ್ದರು. ಇಲ್ಲಿ ಹಾಗಲ್ಲ, ಹಸ್ತಪ್ರತಿ ಪ್ರಕಾಶಕರನ್ನು ಹುಡುಕಬೇಕು.

ಸುದ್ದಿಯನ್ನು ಹುಡುಕುತ್ತ ವರ್ಷಗಳನ್ನು ಸವೆಸಿದವರು ಶ್ರೀನಿವಾಸಮೂರ್ತಿ. ಈಗಲೋ ಅವರೇ ಸುದ್ದಿಯಾಗಿದ್ದಾರೆ.

೨೨–೬–೧೯೬೯

# ವೊಲೆ ಸೊಯಿಂಕಾ

‘ಆಧುನಿಕ ಆಫ್ರಿಕದ ಸಾಹಿತ್ಯ ಮತ್ತು ವಿಚಾರ’. ಬರೆದವನು ಒಬ್ಬ ಫ್ರೆಂಚ್ ಬರೆಹಗಾರ: ಕ್ಲಾಡ್ ವಾಥಿಯರ್.

ನಿನ್ನೆ ಮೊನ್ನೆಯವರೆಗೂ ಲೋಕ ಇತಿಹಾಸದಲ್ಲಿ ಇರುಳಿನ ಭೂಖಂಡವಾಗಿತ್ತಲ್ಲ ಆಫ್ರಿಕ? ಇಂದು ಹಾಗಲ್ಲ. ಅಲ್ಲಿ ಸಹಸ್ರ ದೀಪಗಳು ಬೆಳಗುತ್ತಿವೆ. ನೆಲದ ಬಸಿರಿನ ಬಡಬಾಗ್ನಿ ಅಲ್ಲಿ ಹೊರಕ್ಕೆ ಹೊಮ್ಮುತ್ತಿದೆ. ಈ ಜನ, ಶತಮಾನಗಳ ನಿದ್ರೆಯಿಂದ ಎಚ್ಚೆತ್ತವರು. ದಾಸ್ಯದ ಸಂಕೋಲೆಗಳನ್ನು ತಮ್ಮ ಮುಷ್ಟಿಯಿಂದಲೇ ಗುದ್ದಿ, ಹಲ್ಲುಗಳಿಂದಲೇ ಕಚ್ಚಿ, ಪುಡಿಗೂಡಿಸಿದವರು. ಗದ್ದಲ? ಆಕ್ರೋಶ? ಚೀರಾಟ? ಅಂತಃಕಲಹ? ಇವೆಲ್ಲವೂ ಅನಿವಾರ್ಯವೆನ್ನಿಸುವಂತಹ ಘಟ್ಟ.

ಗ್ರಂಥವನ್ನು ಓದುತ್ತ ಅನಿಸುತ್ತದೆ: ಯಾಕೆ ಈ ಕ್ರೌರ್ಯ? ಯಾಕೆ ಈ ಅಸಹನೆ?

ಒಂದೆರಡು ವರ್ಷಗಳ ಹಿಂದಿನವರೆಗೂ ನಾನು ಅನ್ನುತ್ತಿದ್ದೆ:

“ಈ ಜಗತ್ತಿನಲ್ಲಿ ಸಾಹಿತ್ಯ ಸ್ವತಂತ್ರವಾಗಿರುವುದು ಆಫ್ರಿಕದಲ್ಲಿ ಮಾತ್ರ; ಯಾಕೆಂದರೆ ಅಲ್ಲಿ ಸಾಹಿತ್ಯವೇ ಇಲ್ಲ.”

ಈಗ ಅರ್ಥವಿಲ್ಲದ ಮಾತು. ನಿಸ್ಸಂಕೋಚವಾಗಿ ಇತಿಹಾಸದ ಕಸದ ಬುಟ್ಟಿಗೆ ಅದನ್ನೆಸೆಯಬಹುದು. ಆಫ್ರಿಕದಲ್ಲೂ ಈಗ ಸಾಹಿತ್ಯವಿದೆ. ಕ್ಷಣಗಳ ಅವಧಿಯಲ್ಲೇ ಶೈಶವವನ್ನೂ ದಾಟಿ, ಕೌಮಾರ್ಯಭಂಗವನ್ನೂ ಮಾಡಿಸಿಕೊಂಡಿದೆ. ಅಲ್ಲಿ ಇಲ್ಲಿ ‘ಪಾವಿತ್ರ್ಯರಕ್ಷಣೆ’ಗಾಗಿ ಹೋರಾಟವನ್ನೂ ನಡೆಸಿದೆ. ಉಡಿಗೆ ಕೈಹಾಕಿದವರಿಗೆ ಕಚ್ಚಿದೆ.

*　　*　　*　　*　　*

ಭಾವ ವಿಕಾರಕ್ಕೊಂದು ದೃಷ್ಟಾಂತ ಸೆನೆಗಲಿನ ಕವಿ ಡೇವಿಡ್ ಡಿಯೋಪನ ಒಂದು ಕವಿತೆಯ ಸಾಲುಗಳು:

“ನೀನು ಕರಿಯ!
ಕರಿಯ! ಕೊಳಕು ಕರಿಯ!
ನಿನ್ನ ಹೃದಯ ಒಂದು ಸ್ಪಾಂಜ್
ದುರುಳತನದ ವಿಷ ಬೆರೆತ ಮದಿರೆಯನ್ನು
ಅದು ಹೀರುತದೆ, ಬಿರುಸಾಗಿ ಹೀರುತದೆ

ನಿನ್ನ ಬಣ್ಣ, ನಿನ್ನ ರಕುತವ ನಿರಂತರ ದಾಸ್ಯದಲಿ ಬಿಗಿಯುತದೆ
ಶಾಸನದ ಕಡುಗೆಂಪು ಕಬ್ಬಿಣದ ಬರೆ ನಿನ್ನ ಮೇಲೆ,
ನಿನ್ನ ವಿಷಯಾಸಕ್ತ ಮಾಂಸದ ಮೇಲೆ
ಹಿಡಿದಿರುವೆ ಅವಹೇಳನದ
ಕಡು ಹಿಂಸೆಯ ದಾರಿ.
ಓ ಹಾಳೂರ ದೈತ್ಯ,
ದುರವಸ್ಥೆಯು ಈ ದಿನವೇ ನಿನ್ನಯ ನಾಳೆ.”

....ಇದು ನಿನ್ನೆಯ ಗೀತೆ. ಈಗಲೋ, ಯುಗವೇ ದಿನವಾಗಿ ಕಳೆದಿದೆ. ಇಡಿಯ ಆಫ್ರಿಕದಲ್ಲಿ ನೂರಐವತ್ತಕ್ಕೂ ಮಿಕ್ಕಿದ ಕವಿಗಳು, ಕಾದಂಬರಿಕಾರರು, ನಾಟಕಕಾರರು ಹೊಸ ಉದಯದ ಕಹಳೆಯೂದಿದ್ದಾರೆ, ಭೇರಿ ಬಾರಿಸಿದ್ದಾರೆ: ಲಿಯೊಪಾಲ್ಡ್ ಸೆಡೊನ್ ಸೆಂಘರ್, ಕಾಮರಾ ಲಾಯೆ, ಫೆರ್ಡಿನಾಂಡ್ ಒಯೊನೊ–ಎಂಥೆಂಥ ಹೆಸರುಗಳು!

ವೈಚಿತ್ರ್ಯವೊ? ದುರದೃಷ್ಟವೊ?

* * * * *

ನಿನ್ನೆ ಗುಲಾಮರಾಗಿದ್ದವರು ಈಗ ಸ್ವತಂತ್ರರಾದರು. ಸ್ವತಂತ್ರರಾದೊಡನೆಯೇ ತಮ್ಮ ತಮ್ಮಲ್ಲೇ ಕಡಿದಾಡತೊಡಗಿದರು. ಮೂಕರಾಗಿದ್ದವರಿಗೆ ಮಾತು ಬಂದಿತ್ತು. ಆದರೆ ಆ ಮಾತು ಕರ್ಕಶವಾಯಿತು, ಕರ್ಣಕಠೋರವಾಯಿತು.

ಡೆನಿಸ್ ಒಸಾದೆಬೇ ಒಬ್ಬ ಶ್ರೇಷ್ಠ ಕವಿ, ನೈಜೀರಿಯಾದವನು. ಅವನ ರಾಷ್ಟ್ರ ಸ್ವತಂತ್ರವಾದಾಗ ಆತನೇ ಅದರ ಅಧ್ಯಕ್ಷನಾದ. ಇಂಥದು, ಕಾಲದ ಸುದೀರ್ಘ ಪಯಣದಲ್ಲಿ ಎಂದೋ ಒಮ್ಮೆ ನಡೆಯುವ ಪ್ರಸಂಗ. ರಾಜಕೀಯದ ಮಾರಿಗೆ ಇದೆಲ್ಲಿ ಸಹ್ಯವಾಗಬೇಕು? ನೈಜೀರಿಯಾದಲ್ಲಿ ಮಿಲಿಟರಿ ಕ್ರಾಂತಿಯಾಯಿತು. ಒಸಾದೆಬೇ ಪದಚ್ಯುತನಾದ. ಅಧಿಕಾರಕ್ಕೆ ಬಂದವನು ದಂಡನಾಯಕ.

ನೈಜೀರಿಯಾ ಒಂದೇ ಅಲ್ಲ. ಆಫ್ರಿಕದ ಅನೇಕ ಸ್ವತಂತ್ರ ರಾಷ್ಟ್ರಗಳಲ್ಲಿ ಇಂಥ ‘ಕ್ರಾಂತಿ’ಗಳಾಗಿವೆ. ಕೆಲವೆಡೆ ಜನ ಇಂಥ ಬದಲಾವಣೆಯನ್ನು ಸ್ವಾಗತಿಸಿದ್ದೂ ಉಂಟು. ಹೊಸ ಪ್ರಭುಗಳ ಮರ್ಕಟ ಮುಷ್ಟಿ ಬಿಗಿಯಾದಾಗ ಗೋಳಾಡಿದ್ದೂ ಉಂಟು.

ಈ ಯಾದವೀ ಕಲಹದಲ್ಲಿ ಕವಿಗಳು ಬೆಂದರು. ಮಾಲಿಯ ಫಿಲಿ ಡಾಬೊಸಿಸ್ಸೊಕೊ, ಘಾನಾದ ಡಾನ್‌ಖಾ ಸೆರೆಮನೆಗಳಲ್ಲಿ ಸತ್ತರು. ಇನ್ನೂ ಬೇರೆ ಬೇರೆ ಕಾರಾಗೃಹಗಳಲ್ಲಿರುವ ಬರೆಹಗಾರರೆಂದರೆ, ಮಮಾಡೊವ್ ದೊವಾ, ನಾದ ಬಾನಿಂಗಿ ಸಿಥೋಲೆ, ವೊಲೆ ಸೊಯಿಂಕಾ....

* * * * *

# ರಾಶಿ: "ನಗೆಗನ್ನಡಂ ಗೆಲ್ಗೆ!"

ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿರುವ ಒಬ್ಬ ಹುಡುಗ. ಶ್ರೀಮಂತನಲ್ಲ. ಸಿರಿವಂತಿಕೆಯ ಪ್ರಸ್ತಾಪ ಯಾಕೆ? ಬಡವನೇ. ಫೀಸು ತುಂಬಿರಲಿಲ್ಲ ಎಂದು ತರಗತಿಯಿಂದ ಹೊರಕ್ಕೆ ಕಳುಹಿದರು. ಹುಡುಗಿಯರ ಮುಂದೆ ಹುಡುಗರ ಮುಂದೆ ಎಂಥ ಅವಮಾನ! ತಾನು ಬಡವ ಎಂಬುದು ಇತರರಿಗೆ ಗೊತ್ತಾಗಬೇಕೆ?

ವಿದ್ಯಾರ್ಥಿ ಮಾರನೆಯ ದಿನ ಅಳುಕುತ್ತ ಪ್ರಿನ್ಸಿಪಾಲರ ಮನೆಗೆ ಹೋಗಿ ಜಗಲಿಯಲ್ಲಿ ನಿಂತ. ಶುಲ್ಕ ಸಂದಾಯಮಾಡಲು ಸ್ವಲ್ಪ ಕಾಲಾವಧಿ ಕೇಳುವ ಬಯಕೆ. ಹೊರಗೆ ಬಂದ ಪ್ರಿನ್ಸಿಪಾಲರು "ಏನು?" ಎಂದರು. "ಸರ್, ಫೀಸು—" ಪ್ರಿನ್ಸಿಪಾಲರು ಹುಡುಗನ ಮಾತನ್ನು ಅಷ್ಟಕ್ಕೇ ತಡೆದು, "ಫಸ್ಟಿಗೆ ಬಾ. ಐದು ರೂಪಾಯಿ ಕೊಡ್ತೀನಿ," ಎಂದರು. ಅಷ್ಟು ಹೇಳಿ ಅವರು ಮಾತಿಗೆ ನಿಲ್ಲದೆ ಪುನಃ ಮನೆಯೊಳಕ್ಕೆ ಹೋಗಿಯೇ ಬಿಟ್ಟರು.

ಆ ವಿದ್ಯಾರ್ಥಿ ಭಿಕ್ಷೆ ಕೇಳಲು ಬಂದಿರಲಿಲ್ಲ. ಒಂದನ್ನು ಮಾಡಲು ಹೋಗಿ ಇನ್ನೊಂದಾಯಿತು. ಸ್ವಾಭಿಮಾನಿಗೆ ಎಲ್ಲಿಲ್ಲದ ಸಂಕಟ. ಲಾಲ್‌ಬಾಗ್ ಕೆರೆ ಹತ್ತಿರದಲ್ಲಿತ್ತು. "ಜತೆಯಲ್ಲೊಬ್ಬ ಹುಡುಗ ಇದ್ದ. ವಾಚಾಮಗೋಚರವಾಗಿ ಯಾರು ಯಾರನ್ನೋ ಉದ್ದೇಶಿಸಿ ಏನೇನು ಬಯ್ದನೋ ತಿಳೀದು. ಮನಸ್ಸಿನಲ್ಲಿ ಅನಿಸಿದ್ದೊಂದೇ – ಕೆರೆಗೆ ಹಾರಿ ಸತ್ತು ಬಿಡಬೇಕು, ಅಂತ. ಆ ಹುಡುಗ ಜತೆಗೆ ಇರದೇ ಇದ್ದಿದ್ರೆ ಆತ್ಮಹತ್ಯೆಮಾಡಿಕೊಂಡೇ ಬಿಡುತ್ತಿದ್ದೆ."

ಸಹಸ್ರ ಸಹಸ್ರ ಜನರ ಅದೃಷ್ಟ ಒಳ್ಳೆಯದು. ವಿದ್ಯಾರ್ಥಿ ನೀರಿಗೆ ಬೀಳಲಿಲ್ಲ.

ಆತ ಮುಂದೆ ಪ್ರಖ್ಯಾತ ಡಾಕ್ಟರಾದ. ಆ ಪ್ರಿನ್ಸಿಪಾಲರಿಗೆ ಅಚ್ಚುಮೆಚ್ಚಿನವನಾದ. ಅವರು ನಿವೃತ್ತರಾದ ಮೇಲೂ ಗುರು–ಶಿಷ್ಯರ ಸ್ನೇಹ ಬೆಳೆಯಿತು. ಸುಮಾರು ಕಾಲು ಶತಮಾನ ದಾಟಿದ ಮೇಲೆ ಆ ಇಬ್ಬರೂ ಜೊತೆಯಲ್ಲಿ ದುಡಿದು ಒಂದು ಮೆಡಿಕಲ್ ಕಾಲೇಜನ್ನೇ ಕಟ್ಟಿದರು.

*    *    *    *    *

ಖ್ಯಾತ ಸಾಹಿತಿ ಹಾಗೂ ವ್ಯಾಯಾಮ ಪಟು ಕೆ. ವಿ. ಅಯ್ಯರ್, "ಕಿವಿ ಮುಚ್ಚಿಕೊಳ್ಳಿ" ಎಂದು ಮುಗುಳ್ನಕ್ಕ ಡಾ. ಶಿವರಾಮ್ ಅವರಿಗೆ ತಿಳಿಸಿ, ಈ ಕೆಳಗಿನ ಒಂದು ಸಂಗತಿ ಹೇಳಿದರು. ಕಿಕ್ಕಿರಿದು ತುಂಬಿದ್ದ ಸಮಾರಂಭದಲ್ಲಿ [illegible] ಕುಳಿತಿದ್ದ ಸಭಿಕರು ಕಿವಿಗೊಟ್ಟು ಕೇಳಿದರು.

"ಒಂದು ಸಹಸ್ರ ಗಾಡಿ ತುಂಬಿ ಕಳುಹಿಸಿ", ಎಂದು ಭೃತ್ಯನಿಗೆ ನುಡಿದನಂತೆ. ಬತ್ತಿದ ನದಿಯಲ್ಲಿ ಗಾಡಿಗಳು ದಾಟುತ್ತಿದ್ದಾಗ ಇದ್ದಕ್ಕಿದ್ದಂತೆ ಮಹಾಪೂರ ಬಂತು. ಧಾನ್ಯ ರಾಶಿ ನೀರು ಪಾಲು. ಸಹಾಯ ಪಡೆದವನು ಮರಳಿ ಬಂದು ಕುಬೇರನಿಗೆ ವಿವರಿಸಿದಾಗ ಆತ ಅಂದನಂತೆ: "ಇನ್ನೊಂದು ಸಹಸ್ರ ಗಾಡಿ ಕಟ್ಟಿಸಿಕೊಂಡು ಹೋಗಿ........"

* * * * *

ದೊಡ್ಡ ವ್ಯಕ್ತಿ ಎನ್ನಲು ಇಷ್ಟು ಸಾಲದೆ?

ಆ ವ್ಯಕ್ತಿತ್ವದ ಹಿರಿತನಕ್ಕೆ ಮೆರಗು ದೊರೆತಿರುವುದು ಅವರು ಕನ್ನಡದ ಶ್ರೇಷ್ಠ ನಗೆಬರೆಹಗಾರರು ಎಂಬ ಕಾರಣದಿಂದ.

ಲೋಕಸಾಹಿತ್ಯದ ಅಮರರು ಕೆಲವರು ವೈದ್ಯರಾಗಿದ್ದುಕೊಂಡೋ ವೈದ್ಯಕೀಯ ಶಿಕ್ಷಣದ ಅನಂತರವೋ ಪದಬ್ರಹ್ಮರಾದವರು. ರಾ. ಶಿ. ಯವರದು ಅಂತಹ ಶ್ರೇಣಿ.

ಬದುಕು ದೊಡ್ಡದು, ಎಂದೇ ಬರವಣಿಗೆಯೂ ದೊಡ್ಡದು. ಇದು ಹಾಸ್ಯ–ಕೈಲಾಸ್ಯ. ಖ್ಯಾತ ವೈದ್ಯರು. ಕೈಗುಣವೆನ್ನುವುದೆ? ನಾಲಗೆ ಗುಣ ಎನ್ನುವುದೆ? ಏನನ್ನು ತಾನೇ ಸಾಧಿಸಲಾರದು ನಗೆ?

ಅದರೆ, ನಗೆಯೊಂದು ಕವಚ. ವಾಸ್ತವವಾಗಿ, ನಗೆಯ ರಕ್ಷಾಕವಚವಿರುವವನಿಗೆ ಬೇರೆ ಯಾವ ತಾಯಿತವೂ ಬೇಡ.

ಸಣ್ಣಪುಟ್ಟ ಸಾಧನೆಗಳ ಜನ ಆಕಾಶ ನೋಡುತ್ತ ನಡೆಯುತ್ತಾರೆ. ತುಂಬು ಜೀವನದ ಅರ್ಥ ಕಂಡವರು ವಿನಮ್ರರಲ್ಲಿ ವಿನಮ್ರರಾಗಿರುತ್ತಾರೆ. ಈ ಹೃದಯ ವೈಶಾಲ್ಯ ಸೌಂದರ್ಯೋಪಾಸಕರಿಗೆ, ಜಿಜ್ಞಾಸುಗಳಿಗೆ ಚೇತೋಹಾರಿ. ರಾಶಿ, ವಾಸ್ತವವಾಗಿಯೂ ಅಗುಳಲ್ಲ, ಕಾಳಲ್ಲ – ರಾಶಿಯೇ.

* * * * *

ಚಿರಜವ್ವನಿಕೆಯ 'ಕೊರವಂಜಿ'ಯನ್ನು ನಾಡಿಗೆ ಕೊಟ್ಟವರು ಶಿವರಾಮ್.

ಅಂಥವರಿಗೆ 'ನಗೆಸಂಪದ'ವೆಂಬ ಬೃಹತ್ ಗ್ರಂಥವನ್ನು– ನೂರೈವತ್ತು ಜನ ಹಿಂದಿನ ಇಂದಿನ ಲೇಖಕರು ನೀಡಿದ ಹಾಸ್ಯ ಬರೆಹಗಳ ರಸಾಯನವನ್ನು– ಸೂರ್ಯನಾರಾಯಣ ಚಡಗರ ನೇತೃತ್ವದಲ್ಲಿ ನಂದನ ಪ್ರಕಾಶನದವರು ಮೊನ್ನೆ ಅರ್ಪಿಸಿದರು ರಾಜರತ್ನರ ಪೌರೋಹಿತ್ಯದಲ್ಲಿ. ಸ್ವತಃ ಲೇಖಕರಾದ ಚಡಗರದು ಪ್ರಶಂಸನೀಯ ಸಾಧನೆ. ಅದನ್ನು ರಾಶಿಯವರಿಗೆ ಅರ್ಪಿಸಿದ್ದರ ಔಚಿತ್ಯದ ಬಗೆಗಂತೂ ಬೇರೆ ಮಾತಿಲ್ಲ.

ಬೆಂಗಳೂರಿನ ನಾಗರಿಕರ ಪಾಲಿಗೆ ಈ ತೆರನಾದ ಸನ್ಮಾನಗಳೆಂದರೆ ಇಷ್ಟ. ಕಾರಂತ, ಅನಕೃ, ರಾಶಿ–ಮುಂದೆ ಯಾರ ಸರದಿ? ಎಂದು ಕೇಳುವಷ್ಟು ಕುತೂಹಲ.

ರಾಶಿ ಮಾತನಾಡುವಾಗ ಒಮ್ಮೆ ಅಂದರು: 'ನಗೆಗನ್ನಡಂ ಗೆಲ್ಗೆ!' ಅತ್ಯಂತ ಅನುಭವಿ, ಹಿಂಸೆಗಳ ಜಗತ್ತಿನಲ್ಲಿ ಮಾರ್ಗದರ್ಶಕವಾದ ಘೋಷಣೆ ಇದು: 'ನಗೆಗನ್ನಡಂ ಗೆಲ್ಗೆ!'

೨೦–೭–೧೯೬೯

ಗುಣಗಳಿಗಾಗಿ. ಅವರದು ಹಲವು ಸಾಧನೆಗಳ ಬದುಕು. ಆ ಸಾಧನೆಗಳಲ್ಲಿ ಹಿರಿದಾದದ್ದು ಅನಾವೃತವೆನ್ನಿಸುವಂಥ ಸಾಹಿತ್ಯೋಪಾಸನೆ – ಕನ್ನಡ ಸರಸ್ವತಿಯ ಆರಾಧನೆ.

ಒಂದು ರಾಜ್ಯದ ಶ್ರೇಷ್ಠ ನ್ಯಾಯಾಧೀಶರಿಗೂ ಆ ನಾಡಿನ ಕವಿಶ್ರೇಷ್ಠರಿಗೂ ಗಾಢ ಸ್ನೇಹ – ಎಂದರೆ, ಅದೊಂದು ಕೌತುಕದ ಸಂಭವ. ಹೊಂಬೇಗೌಡರಿಗೂ ಕುವೆಂಪು ಅವರಿಗೂ ಇದ್ದಂತಹ ಆತ್ಮೀಯ ಬಾಂಧವ್ಯ ಆ ಬಗೆಯದು. ವಾಸ್ತವವಾಗಿ ಅದು ಇಬ್ಬರು ವ್ಯಕ್ತಿಗಳ ನಡುವೆ ಇದ್ದ ಮೈತ್ರಿಯಲ್ಲ. ಸರಸ್ವತಿಯ ಹಿರಿಮೆಯ ಇಂಚರ ಹೊಳೆಯಾಗಿ ಹರಿದು ಅವರಿಬ್ಬರನ್ನು ಸುತ್ತುವರಿಯಿತೆನ್ನಬಹುದು; ಅಗೋಚರದ ಎಳೆಯಾಗಿ ಪಾಶಪಟ್ಟು ಅವರನ್ನು ಬಿಗಿಯಿತೆನ್ನಬಹುದು. ಕುವೆಂಪು ಅವರಲ್ಲಿ ಹೊಂಬೇಗೌಡರು ಕಂಡುದು ಸಾರಸ್ವತ ಸಂಪತ್ತಿನ ಅಧಿದೇವತೆಯನ್ನು. ಆ ಮೂರ್ತಿಯ ಬಗೆಗೆ ಅವರದು ಭಕ್ತಿ, ಆದರ, ಪ್ರೇಮ ಎಲ್ಲವೂ.

ಐವತ್ತು ವರ್ಷಗಳಿಗೂ ಹಿಂದಿನ ಮಾತು. ಆಗ ಪುಟ್ಟಪ್ಪ, ಹೊಂಬೇಗೌಡ ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳು. ಶಿಷ್ಯ ಶಿರೋಮಣಿಯ ಕವಿತೆಯ ದಾರಿ ನೋಡುತ್ತ ಆಚಾರ್ಯ ಎ. ಆರ್. ಕೃಷ್ಣಶಾಸ್ತ್ರಿಗಳು 'ಪ್ರಬುದ್ಧ ಕರ್ನಾಟಕ'ದ ಪ್ರಕಟಣೆಯನ್ನೇ ತಡೆಹಿಡಿದರೆ, ವಿದ್ಯಾರ್ಥಿ ಹೊಂಬೇಗೌಡರು ಸಂಚಿಕೆಯ ಲೇಖನಗಳ ಕರಡನ್ನು ತಿದ್ದುತ್ತಿದ್ದರು.

ಅಂದಿನವೇ ನಿಷ್ಠೆ – ಶ್ರದ್ಧೆ – ಇಂದಿನವರೆಗೂ. ಮಹಾಕವಿ ಕುವೆಂಪು ವಿರಚಿತ 'ಶ್ರೀ ರಾಮಾಯಣದರ್ಶನಂ' ಹೊಂಬೇಗೌಡರ ಪಾರಾಯಣ ಗ್ರಂಥ. ಆ ಕಾವ್ಯದ, ಇತರ ಅನೇಕ ಕವಿತೆಗಳ, ನಾಟಕಗಳ ಸಾಲುಗಳೆಲ್ಲ ಅವರಿಗೆ ಕಂಠಪಾಠ.

* * * * *

ಕುವೆಂಪು ಅವರ ಬಾಲ್ಯ ಸ್ನೇಹಿತರಾದ – ಜೊತೆಯಲ್ಲಿ ಬಣ್ಣ ಹಚ್ಚಿಕೊಂಡು ರಂಗದ ಮೇಲೆ ಮೆರೆದಿದ್ದ – ಭೂಪಾಳಂ ಪುಟ್ಟನಂಜಪ್ಪ ಮತ್ತು ಬಿ. ಕೃಷ್ಣ ವಿನೂತನ ಸಾಹಸವೊಂದಕ್ಕೆ ಕೈ ಇಕ್ಕಿದರು. ಅದು ಕುವೆಂಪು ವಿರಚಿತ ನಾಟಕಗಳನ್ನೆಲ್ಲ ನಾಟ್ಯ ವಿಲಾಸಿಗಳ ನೆರವಿನಿಂದ ಪ್ರದರ್ಶಿಸುವ ಯೋಜನೆ. 'ಕುವೆಂಪು ನಾಟಕೋತ್ಸವ' ಎಂದು ಮಹಾಕವಿಯೇ ಹೆಸರಿಟ್ಟರು. ಈ ಸಮಿತಿಗೆ ಯಾರು ಅಧ್ಯಕ್ಷರಾಗಬೇಕು? ಕವಿಗೆ ಅತ್ಯಂತ ಇಷ್ಟದವರಾದ ನ್ಯಾಯಮೂರ್ತಿ ಹೊಂಬೇಗೌಡರಲ್ಲದೆ ಬೇರೆ ಯಾರು? ಸಂಘಟಕರು ಹೋಗಿ ಕೇಳಿದರು, ಏನನ್ನುವರೋ ಎಂದು ಸಂಕೋಚಪಡುತ್ತ. ದೊರೆತುದು ಬರಿಯ ಒಪ್ಪಿಗೆ ಮಾತ್ರವಲ್ಲ, ಉತ್ತೇಜನದ ನುಡಿ. ಈ ನ್ಯಾಯಮೂರ್ತಿ ಎಂದೂ ಉತ್ಸವಮೂರ್ತಿಯಾಗಲಿಲ್ಲ. ಅವರು ವಹಿಸಿದ್ದು ಸಕ್ರಿಯ ಪಾತ್ರ. ನಾಟಕದ ಸಭೆಯೇ ಇರಲಿ, ಕಲಾವಿದರ ಸಭೆ ಸಮಾರಂಭಗಳೇ ಇರಲಿ, ಹೊಂಬೇಗೌಡರು ಬರುತ್ತಿದ್ದರು. ನಾಟಕಗಳು ನಡೆದಷ್ಟು ದಿನ ಪ್ರತಿ ಸಂಜೆಯೂ ರವೀಂದ್ರ ಕಲಾಕ್ಷೇತ್ರದಲ್ಲಿ

ತಾವೂ ಕನ್ನಡದ ಪ್ರಾಚಾರ್ಯರಾಗಬಹುದಿತ್ತು. ಅನೇಕ ಗ್ರಂಥಗಳ ಕರ್ತೃವಾಗ ಬಹುದಿತ್ತು. ಆದರೆ ಅವರು ನ್ಯಾಯಶಾಸ್ತ್ರದ ಅಧ್ಯಯನ ಕೈಗೊಂಡರು.

ವಕೀಲಿ ವೃತ್ತಿ, ಹಳೆಯ ಮೈಸೂರಿನ ಪ್ರಜಾಪ್ರತಿನಿಧಿ ಸಭೆಯ ಸದಸ್ಯತ್ವ, ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯತ್ವ, ಸಾರ್ವಜನಿಕ ಸೇವಾ ಆಯೋಗ ದಲ್ಲಿ ಸದಸ್ಯನಾಗಿ ದುಡಿಮೆ, ನ್ಯಾಯಮೂರ್ತಿಯ ಹುದ್ದೆ, ಬಳಿಕ ಮುಖ್ಯ ನ್ಯಾಯಾ ಧೀಶನಾಗಿ ಸುದೀರ್ಘ ಸೇವೆ........

ನ್ಯಾಯ ಒಂದೇ ಅಲ್ಲದೆ ಬೇರೆಯೂ ಮುಖಗಳಿದ್ದ ಬದುಕು ಅವರದು. ಅದು, ಕಾವ್ಯದ ಆರಾಧನೆಯಿಂದ ಸುಸಂಸ್ಕೃತವಾದ ಜೀವ.

೧೭-೮-೧೯೬೯

# ಪಂಚ ನದಿಗಳ ನಾವಿಕ

"ಅಮೆರಿಕದ ಒಂದು ಪತ್ರಿಕೆ ಭಾರಿ ಸಂಭಾವನೆ ನೀಡಿ ನಿಮ್ಮ ಕಾದಂಬರಿಯ ಆಂಗ್ಲಾನುವಾದವನ್ನು ಧಾರಾವಾಹಿ ಪ್ರಕಟಣೆಗೋಸ್ಕರ ಸ್ವೀಕರಿಸುತ್ತದೆ ಎಂದಿಟ್ಟುಕೊಳ್ಳಿ. ಅಥವಾ ಹಾಲಿವುಡ್ ಚಿತ್ರ ನಿರ್ಮಾಣ ಸಂಸ್ಥೆಯೊಂದು ದೊಡ್ಡ ಮೊತ್ತವನ್ನು ಕೊಟ್ಟು ನಿಮ್ಮದೊಂದು ಕತೆಯನ್ನು ಚಿತ್ರೀಕರಣಕ್ಕೋಸ್ಕರ ಪಡೆಯುತ್ತದೆ ಎಂದು ಭಾವಿಸಿಕೊಳ್ಳಿ. ಆಗ, ಈಗಿರುವ ಹುದ್ದೆಯನ್ನು ಬಿಟ್ಟು ನಿಮ್ಮ ಪೂರ್ಣ ಸಮಯವನ್ನು ಬರವಣಿಗೆಗಾಗಿಯೇ ಮೀಸಲಿಡುತ್ತೀರಾ?"

ತಕ್ಷಣ ತಡವಿಲ್ಲದೆ ಉತ್ತರ ಬಂತು:

"ಅವೆಲ್ಲ ಯಾಕೆ, ದಿಲ್ಲಿಯಲ್ಲಿ ಎರಡಂತಸ್ತಿನ ಒಂದು ಮನೆ ಕಟ್ಟಿಸಿದರೆ ಸಾಕು. ಕೆಳಗೆ ವಾಸಕ್ಕೆ, ಮೇಲಿನದು ಬಾಡಿಗೆಗೆ. ಉದ್ಯೋಗ ಬಿಟ್ಟು ಬರವಣಿಗೆಯಲ್ಲೇ ನಿರತನಾಗ್ತೇನೆ."

ಮತ್ತೂ ಒಂದು ಮಾತು ನಾನು ತಿಳಿಯುವುದು ಬೇಕು ಎಂದು ಅವರು ಮುಂದುವರಿಸಿದರು:

"ಇನ್ನು ಉಳಿದಿರುವ ವೇಳೆಯಿಲ್ಲ ನನಗೆ ಬೇಕು, ನನ್ನ ಬರವಣಿಗೆಗೆ."

ಗುರುಮುಖ್ ಸಿಂಗ್ ಜೀತರ ವಯಸ್ಸು ೪೬–೪೭. ಅವರೂ ಕಾಲಯಂತ್ರ ಮುಳ್ಳುಗಳ ಮೇಲೆಯೇ ಗಮನ. ಈ ಪಂಜಾಬೀ ಲೇಖಕರ ಈವರೆಗಿನ ಬರವಣಿಗೆಯೇನೂ ಕಡಿಮೆಯಲ್ಲ. ಎರಡು ವಿಮರ್ಶಾತ್ಮಕ ಗ್ರಂಥಗಳು; ನಾಲ್ಕು ಸಣ್ಣ ಕತೆಗಳ ಸಂಕಲನ; ಒಂದು ಕಾದಂಬರಿ; ಮೂರು ಅನುವಾದಿತ ಕಾದಂಬರಿಗಳು; ಆಧುನಿಕ ಭಾರತೀಯ ಕಥೆಗಳ ಒಂದು ಸಂಕಲನ... ...ಈಗ ಬರೆಯುತ್ತಿರುವುದು ಹೊಸತೊಂದು ಕಾದಂಬರಿಯನ್ನು........

ಮುಂದೆ ಎಲ್ಲ ವೇಳೆಯೂ ಬರವಣಿಗೆಗೇ ಮೀಸಲು ಎಂದಾದರೆ ಇವರ ಸೃಜನ ನದಿಗಳಲ್ಲಿ ಮಹಾಪೂರ ಬರುತ್ತದೆ.

* * * * *

ಗುರುಮುಖ್ ಸಿಂಗ್ ಜೀತ್ ಒಂದು ದೃಷ್ಟಿಯಲ್ಲಿ ಪಂಜಾಬಿ. ("ಐದು ನದಿಗಳ ಕಾರಣದಿಂದ ಬಂದಿರುವ ಹೆಸರು ಪಂಜಾಬ್. ವಿಭಜನೆಯಾದ ಮೇಲೆ ಉಳಿದಿರುವ ನದಿಗಳು ಎರಡೇ. ವಾಸ್ತವವಾಗಿ ಆ ಪ್ರದೇಶ ಈಗ ದೋಆಬ್. ಆದರೆ ನನ್ನನ್ನ ದೋಆಬಿ ಎಂದು ಕರೆದುಕೊಳ್ಳುತ್ತಿಲ್ಲ!") ಇನ್ನೊಂದು ದೃಷ್ಟಿಯಲ್ಲಿ ಅವರು

ಭಾರತೀಯ. ಯಾಕೆಂದರೆ ತಮ್ಮ ಭಾಷೆಗೆ ಅವರು ಅನುವಾದಿಸಿರುವ ಎರಡು ಕೃತಿಗಳು ಮಲೆಯಾಳಂ ಭಾಷೆಯವು – (ಶಿವಶಂಕರ ಪಿಳ್ಳೆಯವರ 'ಎರಡು ಸೇರು ಅಕ್ಕಿ' ಮತ್ತು 'ಚೆಮ್ಮೀನ್') ಇನ್ನೊಂದು ಮರಾಠಿಯದು (ಅನಂತ ಗೋಪಾಲ ಶೇವಡೆಯವರ 'ಜ್ವಾಲಾಮುಖಿ'). ಅಲ್ಲದೆ, ರಕ್ಷಣಾ ಖಾತೆಯಲ್ಲಿರುವ ಅವರ ಉದ್ಯೋಗ ದೇಶದ ನಾಲ್ಕು ಮೂಲೆಗಳಿಗೆ ಅವರನ್ನು ಒಯ್ಯುತ್ತದೆ. ಹಾಗೆ ತಾವು ಕಂಡ ಹೊಸ ಹೊಸ ಬದುಕಿನ ಹಿನ್ನೆಲೆಯಲ್ಲಿ ಕತೆಗಳನ್ನು ಅವರು ಬರೆಯುತ್ತಾರೆ.

೧೯೪೭ ರ ಅನಂತರದ ಈಚೆಗಿನ ಪೀಳಿಗೆಯ ಬರೆಹಗಾರರು ಜೀತ್. ಈ ಕತೆಗಾರನಿಗೆ ಪ್ರಕಾಶನ ಲೋಕದಲ್ಲಿ ಆದ ಅನುಭವ ವಿಚಿತ್ರ ರೀತಿಯದು. ನಮ್ಮಲ್ಲಿ ಹಲವರು ಬಲ್ಲರು: ಪ್ರತೀಕ ಮೊದಲಿಸಿಕೊಳ್ಳಲೆಂದು ಸರಸ್ವತಿಯು ದೇಗುಲದ ಬಾಗಿಲು ತಟ್ಟಿದಾಗ ಪ್ರಕಾಶಕ ಪೂಜಾರಿ ಕೇಳುವ ಪ್ರಶ್ನೆ–'ಕಾದಂಬರಿ ಏನಾದರೂ ಬರೆದಿದ್ದೀರಾ?' ಜೀತ್‌ಗೆ ಕೇಳಿ ಬಂದ ವಾಣಿ ಬೇರೆ: 'ವಿಮರ್ಶಾತ್ಮಕ ಗ್ರಂಥ ಬರೆದು ಕೊಡಿ, ಪ್ರಕಟಿಸ್ತೇವೆ.'

ಪಂಜಾಬಿನ ಅಗ್ರ ಕವಯಿತ್ರಿ, ಅಮೃತ ಪ್ರೀತಮ್. ಅವರ ಕಾವ್ಯದ ಕಲೆ ಜೀತ್ ಕೃತಿಗೆ ವಸ್ತು. ರಾಜ್ಯಶಾಸ್ತ್ರದಲ್ಲಿ ಪಡೆದ ಎಂ. ಎ. ಪದವಿಗೂ ಆಯ್ದುಕೊಂಡ ವಸ್ತುವಿಗೂ ಸಂಬಂಧವಿಲ್ಲದಿದ್ದರೇನಂತೆ? ಜೀತರ ಕೆಲಸ ಸಮರ್ಪಕವಾಗಿತ್ತು. ಅದು ಅವರಿಗೆ ಕೀರ್ತಿ ತಂದಿತು.

*          *          *          *          *

ಆ ವಿಮರ್ಶಾ ಕೃತಿಯೂ ಅನಂತರದ 'ಸಮಕಾಲೀನ ಪಂಜಾಬಿ ಕತೆಗಳು' ಪುಸ್ತಕವೂ ಎಷ್ಟು ಸಮರ್ಪಕವಾಗಿದ್ದುವೆಂದರೆ, ಜೀತ್ ಒಬ್ಬ ಕತೆಗಾರ - ಕಾದಂಬರಿಕಾರ ಎಂಬುದನ್ನೇ ಅನೇಕರು ಅಲ್ಲಗಳೆದರು. ವಿಮರ್ಶಕ ಎಂದೇ ಅವರನ್ನು ಸಂಬೋಧಿಸತೊಡಗಿದರು.

"ಇದರಿಂದ ಗಾಬರಿಯಾಗಿ, ವಿಮರ್ಶಾತ್ಮಕ ಬರವಣಿಗೆಯನ್ನು ಸಂಪೂರ್ಣ ಬಿಟ್ಟುಬಿಟ್ಟಿದ್ದೇನೆ. ಸೃಜನಶೀಲ ಕೃತಿ ರಚನೆಯೊಂದರಲ್ಲೇ ನಿರತನಾಗಿದ್ದೇನೆ."

*          *          *          *          *

"ಸಿಗರೇಟು ಕೊಡಲೆ?"

"ಬೇಡಿ. ನಿಮಗೆ ಗೊತ್ತಿಲ್ಲವೇನೊ? ಸಿಕ್ಖರು ಹೊಗೆ ಹಿಡಿಯಬಾರದು. ಸೇದುವವರೂ ಇದ್ದಾರೆ ಎಂದಿಟ್ಟುಕೊಳ್ಳಿ. ಆದರೆ ಬಹಿರಂಗವಾಗಿ ಸೇದೋದಿಲ್ಲ, ಅಷ್ಟೆ."

ನಿಷ್ಠಾವಂತ ಸಿಕ್ಖ. ಆದರೆ ಇಂತಹ ನಿಷ್ಠೆ, ಮನಸ್ಸಿನ ಗವಾಕ್ಷಿಗಳನ್ನು ಮುಚ್ಚಲು ಕಾರಣವಾಗಬೇಕು ಎಂದಿಲ್ಲ. ಉದಾಹರಣೆಗೆ, ತಮ್ಮ ಭಾಷೆಯ ಬಗೆಗೆ ಅವರ ಅಭಿಪ್ರಾಯ –

"ಪಂಜಾಬಿ ಭಾಷೆಯನ್ನು ಗುರುಮುಖಿ ಎಂದು ಕರೆಯಬಾರದಾಗಿತ್ತು. ಗುರುಮುಖಿ ಎಂದರೆ ಗುರುವಿನ ಮುಖದಿಂದ ಬಂದದ್ದು. ಅದು ಸರಿಯಲ್ಲ. ಪಂಜಾಬಿ ಭಾಷೆ ಇತ್ತೀಚಿನದಲ್ಲ. ಇದರ ಮೂಲ ಸಂಸ್ಕೃತ. ಅದರ ಆಧುನಿಕ ರೂಪವೇ ಪಂಜಾಬಿ."

ತಮ್ಮ ಭಾಷೆಯ ಬಗೆಗೆ ಅವರಿಗೆ ಅಭಿಮಾನ. ಆ ಕಾರಣದಿಂದಲೇ ಇತರ ಎಲ್ಲ ಭಾಷೆಗಳ ವಿಷಯದಲ್ಲೂ ಅವರಿಗೆ ಗೌರವ.

ಮೊದಲು (ಮೊಗಲರ ಕಾಲದಿಂದ ಎನ್ನಿ) ಉರ್ದೂ ಭಾಷೆಯಲ್ಲೇ ಅಲ್ಲಿನ ಸಾಹಿತ್ಯ ಸೃಷ್ಟಿಯಾಗುತ್ತಿತ್ತು. ಹಿಂದೂಗಳೂ ಉರ್ದುವಿನಲ್ಲೇ ಬರೆಯುತ್ತಿದ್ದರು. ಚಿಕ್ಕವರಿದ್ದಾಗ ಜೀತ್ ಕಲಿತುದೂ ಉರ್ದೂವನ್ನೇ. ಕ್ರಮೇಣ ಹಿಂದಿಯ ಬಳಕೆ ಆರಂಭವಾಯಿತು. ಭಾಷೆಗಳ ಪುನರುದ್ದೀಪನ ಯಜ್ಞದಲ್ಲಿ ಗುರುಮುಖಿ ಲಿಪಿ ಮೆರೆಯತೊಡಗಿತು.

ಮತ್ತೆ ಮೊನ್ನೆ ಪಂಜಾಬು ಎರಡು ರಾಜ್ಯಗಳಾಗಿ ಒಡೆಯಿತಲ್ಲ? ಈ ಅವಳಿ ಸೃಷ್ಟಿ ಸರಿಯೋ ತಪ್ಪೋ ಆ ಮಾತು ಬೇರೆ. ಆಡಳಿತದಲ್ಲಿ ಪಂಜಾಬಿ ಭಾಷೆಗೆ ಮಹತ್ವ ಪ್ರಾಪ್ತವಾಗಿದೆ. ಅದರ ಫಲವಾಗಿ ಹೆಚ್ಚು ಹೆಚ್ಚು ಜನ ಆ ಲಿಪಿಯ – ಭಾಷೆಯ – ಬಳಕೆಯಲ್ಲಿ ಆಸಕ್ತಿ ತೋರುತ್ತಿದ್ದಾರೆ. ಸಾಹಿತ್ಯ ಕೃತಿಗಳ ಮಾರಾಟವೂ ಹೆಚ್ಚುವ ಲಕ್ಷಣಗಳು ಕಂಡುಬರುತ್ತಿವೆ.

(ಕನ್ನಡಿಗರು ಯೋಚಿಸಬೇಕಾದ ಅಂಶ ಇಲ್ಲಿದೆ. ನೂತನ ರಾಜ್ಯದ ಉದಯವಾಗಿ ಹನ್ನೆರಡು ವರ್ಷಗಳಾದರೂ ಕನ್ನಡ ಸಾಹಿತ್ಯದ ಸ್ಥಿತಿಗಳಲ್ಲಿ – ಸೃಷ್ಟಿ, ಪ್ರಕಟಣೆ, ವಿಕ್ರಯ – ತೀವ್ರ ಸುಧಾರಣೆಯೇನೂ ಆಗಿಲ್ಲ. ಯಾಕೆ? ಕನ್ನಡಕ್ಕಿನ್ನೂ ರಾಜಮನ್ನಣೆ ದೊರೆಯದಿರುವುದೇ ಇದಕ್ಕೆ ಕಾರಣ. ಸಾಂಸ್ಕೃತಿಕ ಚಳುವಳಿಯ ಸಾಧನೆಗೆ ಒಂದು ಸೀಮೆ ಇದೆ. ಭಾಷೆಗೆ ಆಡಳಿತದಲ್ಲಿ ಅಧಿಕೃತ ಸ್ಥಾನ ದೊರೆತಾಗ, ಶಾಲೆ – ಕಾಲೇಜು – ವಿಶ್ವವಿದ್ಯಾಲಯಗಳಲ್ಲಿ ಅದಕ್ಕೆ ಅಗ್ರಮಾನ್ಯತೆ ಸಂದಾಗ ಆಗುವ ಸಾಂಸ್ಕೃತಿಕ ಕ್ರಾಂತಿಯ ಸ್ವರೂಪವೇ ಬೇರೆ. ನಿತ್ಯ ಜೀವನದ ಅವಿಭಾಜ್ಯ ಅಂಗವಾಗುವ ಭಾಷಾಪ್ರೇಮ, ಸಾಹಿತ್ಯ ಬೆಳವಣಿಗೆಗೊಂದು ವಿಶಿಷ್ಟ ಟಾನಿಕ್ಕು.)

* * * * *

ಸ್ವಪ್ರಯತ್ನ, ಸ್ವಂತಿಕೆ, ಊರ್ಧ್ವಮುಖಿಯಾದ ದೃಷ್ಟಿ – ಇವೆಲ್ಲ ಗುರುಮುಖ್ ಸಿಂಗ್ ಜೀತರಿಗೆ ಪಂಜಾಬಿ ಸಾಹಿತ್ಯದಲ್ಲಿ ಒಳ್ಳೆಯ ಸ್ಥಾನವನ್ನು ದೊರಕಿಸಿಕೊಟ್ಟಿವೆ.

ಐದು ನದಿಗಳ ನಾವಿಕ. ತೆಪ್ಪವನ್ನು ಅಲ್ಲೇ ತೇಲಿಸುವ ಬಯಕೆ ಅವರಿಗಿಲ್ಲ. ಬೇರೆ ನೀರು, ಬೇರೆ ಆಳ ಅವರಿಗಿಷ್ಟ.

ಬೆಂಗಳೂರಿಗೆ ಬಂದವರು ಒಂದು ದಿನದ ಮಟ್ಟಿಗೆ ಮೈಸೂರಿಗೂ ಹೋಗಿ ಬಂದರು. ಕಾವೇರಿ ಕನ್ನಡ. ತಮ್ಮ ಸಾಹಿತ್ಯದ ಬಗೆಗೆ ಜೀತ್ ಹೇಳುವುದನ್ನು ಕೇಳಿದರೆ ದೇಶದ ಎಲ್ಲ ಭಾಷೆಗಳ ಕಥೆಯೂ ಒಂದೇ ಎನಿಸುತ್ತದೆ. ಎಲ್ಲ ನದಿಗಳೂ ಪವಿತ್ರವೇ; ಎಲ್ಲ ನದಿಗಳೂ ಮಲಿನವೇ. ಎಲ್ಲ ನಾವೆಗಳು ಚಲಿಸುವ ರೀತಿಯೂ ಒಂದೇ ...

೨೪–೮–೧೯೬೯

# ಇಂದಿಗೂ ಒಬ್ಬನೇ ದಿನಕರ

'ಶ್ರೀ'ಯವರು ಸಾರಿದಂತೆ ಕೊನೆಗೆ ನಿಲ್ಲುವುದು ಅಭಿಮಾನವಲ್ಲ, ಸತ್ಯ.

ನಿನ್ನೆ ರಾತ್ರಿ ಓದಿದ 'ಹೂಗೊಂಚಲು' ಕವನ ಸಂಗ್ರಹದ ಪ್ರಸ್ತಾವನೆಯ ಕೊನೆಯಲ್ಲಿದೆ ಮೇಲಿನ ವಾಕ್ಯ.

'ಹೂಗೊಂಚಲು' ಕೃತಿಗೆ ಮಾತ್ರವಲ್ಲ, ಅವರ ಕವಿ ದಿನಕರರಿಗೂ ಅನ್ವಯಿಸುವ ಮಾತು ಇದು.

ದಿನಕರ ದೇಸಾಯರ ಅಭಿಮಾನಿಗಳ ಸಂಖ್ಯೆ ದೊಡ್ಡದು. ರಾಷ್ಟ್ರದ ಹತ್ತು ಕಡೆಗಳಲ್ಲೂ ಅವರನ್ನು ಎಣಿಸಬಹುದು. ಆದರೆ ಈ ಅಭಿಮಾನಕ್ಕಿಂತಲೂ ಹಿರಿದು, ದಿನಕರರನ್ನು ಕುರಿತ ಸತ್ಯ.

* * * * *

ಆ ಸತ್ಯ ಯಾವುದು ? ಯೌವನದಲ್ಲಿ ಎದೆಗೆ ಆನಿಸಿಕೊಂಡ ಆದರ್ಶವನ್ನು ಅರುವತ್ತು ದಾಟುವ ವೇಳೆಗೂ ಜ್ವಲಂತವಾಗಿ ಉಳಿಸಿಕೊಂಡಿರುವುದು. ಅಂಕೋಲಾ, ಕಾರವಾರ, ಬೆಂಗಳೂರು, ಮೈಸೂರು, ಮುಂಬಯಿಗಳಲ್ಲಿ ವಿದ್ಯಾರ್ಥಿಯಾಗಿ ಕನವರಿಸಿದ ದಿನಕರ ಇಂದಿಗೂ ಕನಸುಗಾರನೇ. ಈತ ಮಾನವೀಯತೆಯ ಪರಮೋಚ್ಚ ಆರಾಧಕ. ಜನಸೇವೆಯಲ್ಲಿ ಜೀವ ತೇಯುವುದೇ ಇವರ ಧರ್ಮ.

ಗೋಖಲೆಯವರ ಭಾರತ ಸೇವಕ ಸಮಾಜ ಒಂದು ಕಾಲದಲ್ಲಿ ಭಾರತೀಯ ಸಮಾಜದಲ್ಲಿ ತನಗೋಸ್ಕರ ವಿಶಿಷ್ಟ ಸ್ಥಾನವನ್ನು ರೂಪಿಸಿಕೊಂಡಿತು. ಹಲವಾರು ಅವಸ್ಥಾಂತರಗಳನ್ನು ದಾಟಿ ಬಂದಿರುವ ಭಾರತದಲ್ಲಿ ಆ ಸಂಸ್ಥೆಯೀಗ ನಿನ್ನೆಯ ರಮ್ಯ ಕಥೆ. ಆದರೆ ಇಂದಿಗೂ ಆ ಕಥೆಯನ್ನು ಹೇಳುವವರುಂಟು, ಕೇಳುವವರುಂಟು. ಅದು ಸಾಧ್ಯವಾಗಿರುವುದು ಹೃದಯನಾಥ ಕುಂಜ್ರು, ದಿನಕರ ದೇಸಾಯಿ ಇಂತಹ ಕೆಲವರ ನಿಷ್ಕಾಮ ಕರ್ಮದಿಂದ.

ಸಾರ್ವಜನಿಕ ಕ್ಷೇತ್ರದಲ್ಲಿ ಗಳಿಸಿದ ಹಿರಿಮೆಯ ಬೆಂಬಲದಿಂದ ದಿನಕರ ದೇಸಾಯರು ವೈಯಕ್ತಿಕ ಸುಖ ಸಂತೋಷಗಳನ್ನು ಸುಲಭವಾಗಿ ಗಳಿಸಬಹುದಿತ್ತು. ಆದರೆ ಆ ಅಯಸ್ಕಾಂತವನ್ನು ದೂರ ತಳ್ಳಿರುವ ಧೀಮಂತಿಕೆ ಇವರದು.

ಅಭಿಮಾನಕ್ಕಿಂತ ಮಿಗಿಲಾದುದು ಈ ಸತ್ಯ. ಇದು ಸಾವಿಲ್ಲದ್ದು.

* * * * *

ಈಗ್ಗೆ ಮೂವತ್ತು ಮೂವತ್ತೈದು ವರ್ಷಗಳಿಗೆ ಹಿಂದಿನ ಮಾತು. ಕಾಂತನು

ಶಿಕ್ಷಣ ಕೇಂದ್ರ ಮತ್ತು ಒಂದು ಹಾಸ್ಟೆಲ್........ಎರಡು ದವಾಖಾನೆಗಳು....ಒಂದು ಮುದ್ರಣಾಲಯ....ಜಿಲ್ಲೆಯಲ್ಲಿ ಅತ್ಯಧಿಕ ಪ್ರಸಾರ ಪಡೆದಿರುವ ಟ್ರಸ್ಟಿನ ಮುಖಪತ್ರವಾದ 'ಜನಸೇವಕ'...."

ಬಯಲಲ್ಲಿ ನಿಂತ ಶ್ರೀಸಾಮಾನ್ಯನಿಗೆ ಇದು ಸಹ್ಯಾದ್ರಿಯ ಕೋಡುಗಲ್ಲು.

*　　　*　　　*　　　*　　　*

ಕನ್ನಡದ ಈ ಬರೆಹಗಾರ ಪದ್ಯ ಗದ್ಯಗಳೆರಡರಲ್ಲೂ ಕೃಷಿ ಮಾಡಿದ್ದಾರೆ.

ನವ್ಯ ಜೀವನದಯ್ಯ,
ಭವ್ಯ ಶ್ರೀಕಂಠಯ್ಯ,
ನಿನ್ನ ನುಡಿ ಅರವಿಂದ,
ಮುತ್ತು, ಮಾಣಿಕ, ಚೆಂದ.

ತಮ್ಮ ಗುರು ಬಿ. ಎಂ. ಶ್ರೀಯವರನ್ನು ಕುರಿತು ದಿನಕರ ಬರೆದಿರುವುದು ಇದು.

ದಿನಕರರ ದೃಷ್ಟಿಯಲ್ಲಿ 'ಸರ್ವಜ್ಞ ಚುಟುಕಗಳ ಸಾರ್ವಭೌಮ.' 'ಸರ್ವಜ್ಞನ ವಿಡಂಬನವಾಗಲಿ ಶೈಲಿಯಾಗಲಿ ನನಗೆ ಸಾಧ್ಯವಿಲ್ಲ' ಎನ್ನುವರಾದರೂ ಆ ಕ್ಷೇತ್ರದಲ್ಲಿ ದಿನಕರರ ಸಾಧನೆ ಅಸಾಧಾರಣವಾದದ್ದು.

ಕವಿ ವಿನಾಯಕರೆಂದಿದ್ದಾರೆ :

"ಕನ್ನಡಕ್ಕೆ ಇಂದಿಗೂ ಒಬ್ಬನೇ ದಿನಕರ. ಅವರಂತೆ ಇನ್ನಾರೂ ಹಾಡಿಯೇ ಇಲ್ಲ...."

....ದಿನಕರರಂಥ ಬುದ್ಧಿಜೀವಿ ಆಧುನಿಕ ರಾಜಕಾರಣಿಯಾದಾಗ ಏನಾಗುತ್ತದೆ? ಲೋಕಸಭಾ ಚುನಾವಣೆಯ ವೇಳೆ ಅನಿವಾರ್ಯವಾಗಿ ಅವರ ಚುಟುಕ ಸಾಹಿತ್ಯ ಬೀದಿಗಿಳಿಯಿತು. 'ಸಮರದಲ್ಲೂ ಪ್ರೇಮದಲ್ಲೂ ಏನು ಮಾಡಿದರೂ ಸಾಧು'.

ಇಂದಿಗೂ ದಿನಕರರ ಸಮಗ್ರ ವ್ಯಕ್ತಿತ್ವಕ್ಕೆ ಆಧುನಿಕ ರಾಜಕಾರಣ ಕಿಲುಬಾಗಿ ನಿಂತಿದೆ.

*　　　*　　　*　　　*

ಅಂದ ಚಂದವಿಲ್ಲದ, ರೈತಸಭೆಯ ನೋಟೀಸಿನಂತಹ, ಆಮಂತ್ರಣ ಪತ್ರಿಕೆ, ೬೦ ನೆಯ ಹುಟ್ಟು ಹಬ್ಬದ ಸಭೆಗೆ. ಈ ಸರಳತೆಯೇ ಒಂದು ಗೌರವ. ಸ್ವತಃ ದಿನಕರರು ಸಭೆಯಲ್ಲಿರಲಿಲ್ಲ. ಊರಿನಲ್ಲಿಯೇ ಇರಲಿಲ್ಲ. ವ್ಯಕ್ತಿತ್ವ ಥಳಥಳಿಸುವುದು ಇಂಥ ಘಳಿಗೆಯಲ್ಲೇ. 'ದಿನಕರ ಒಬ್ಬನೇ' ಎಂಬ ಮಾತು ಮಾರ್ಮೊಳಗುವುದೂ ಇಂತಹ ವರ್ತನೆಯಿಂದಲೇ.

೨೧–೯–೧೯೬೯

# ಮಾನಾಚೌ ಸೀಮೋಲ್ಲಂಘನ

ಬೆಂಗಳೂರಿನಿಂದ ಹೊರಟು ಮೈಸೂರಿನ ದಾರಿಯಾಗಿ ಬರುವ ಬಸ್ಸು. ವಾರಕ್ಕೊಮ್ಮೆ ಅದು ಹಲವಾರು ಸಾಕ್ಷರರಿಗೆ – ವಿದ್ಯಾವಂತರಿಗೆ – ಪ್ರಿಯವಾದ ಒಂದು ಕಟ್ಟನ್ನು ತರುತ್ತಿತ್ತು. ಆ ಕಟ್ಟಿನಲ್ಲಿರುತ್ತಿದ್ದುದು ಬಿ. ಎಸ್. ಗುಪ್ತರ 'ಪ್ರಜಾಮತ.' ತೆರೆದರೆ ಇನ್ನೂ ಆರದ ಮಸಿ. ತುಸು ಮಾದಕವೆನಿಸುವ ವಾಸನೆ. ಕೆಲವರು ಮೊದಲು ಓದುತ್ತಿದ್ದುದು 'ವಾರದ ಭವಿಷ್ಯ'ವನ್ನು. (ಈಗ ಆ ವಾಚಕರ ಮಕ್ಕಳು ಅದನ್ನೇ ಓದುತ್ತಿರಬಹುದು.) ಬೇರೆ ಕೆಲವರಿಗೆ 'ಪಾಪಪೂರಿತ ಪಟ್ಟಣಗಳು' ಇಷ್ಟ. ಕತೆ, ಕಲೆ – ಮತ್ತೆ ಕೆಲವರಿಗೆ. ಭಾವೋದ್ರೇಗವನ್ನುಂಟುಮಾಡುತ್ತಿದ್ದ ರಾಜಕೀಯ ಬರೆವಣಿಗೆ ಉಳಿದವರಿಗೆ. ಅಂತೂ ಆರಂಭದಿಂದ ಅಂತ್ಯದ ತನಕ ಪಾರಾಯಣ.

ಅದರಲ್ಲಿ ಒಂದು ಹೆಸರು ನನಗೆ ಮೆಚ್ಚುಗೆಯಾಗಿತ್ತು. ಸಾಧಾರಣವಾಗಿ ಲೇಖನಗಳ ಕೊನೆಯಲ್ಲಿರುತ್ತಿದ್ದ ಸಂಕೇತಾಕ್ಷರಗಳು – ಮಾ. ನಾ. ಚೌ. ಅವುಗಳ ವಿಶಾಲ ರೂಪವೇನು ? ಎಂಬ ಕುತೂಹಲ. ವೆಂಕಟಾಚಾರ್ಯರ ಬಂಗಾಳಿ ಕಾದಂಬರಿಗಳನ್ನು ಓದಿದುದರ ಪ್ರಭಾವವಿರಬೇಕು : 'ಚೌ' ಎಂದರೆ 'ಚೌಧುರಿ' ಎಂಬ ಊಹೆ ನನ್ನದು. ಅದೇ ಸರಿ ಎಂಬ ನಿರ್ಧಾರಕ್ಕೆ ಬಂದು, ಎಲ್ಲ ಬಲ್ಲವನಂತೆ ಇತರರಿಗೂ ಹಾಗೆಯೇ ಹೇಳುತ್ತಿದ್ದೆ. ಚೌಧುರಿ ಸ್ವಾರಸ್ಯದ ಮುಂದೆ 'ಮಾ. ನಾ.' ಏನೆಂಬುದಕ್ಕೆ ಮಹತ್ವವಿರಲಿಲ್ಲ.

ವರ್ಷಗಳೇ ಕಳೆದಿರಬೇಕು ಕಲ್ಪನೆ ಭೂಮಿಗಿಳಿದಾಗ. ಬೆಂಗಳೂರಿಗೆ ಬಂದ ನನ್ನನ್ನು ಅಡ್ಡ ಪಂಚೆ - ಜುಬ್ಬಗಳ ಸ್ಫುರದ್ರೂಪಿಯಾದ ಒಬ್ಬ ವ್ಯಕ್ತಿಗೆ ಪರಿಚಯ ಮಾಡಿಕೊಟ್ಟರು. ಕೋಟೆಯ ಆವರಣವೋ, ಅಸಕೃ ಮನೆಯೋ ಯಾವುದೋ ಇರಬೇಕು. ಚೌಡಪ್ಪ ! ನನ್ನ ಚೌಧುರಿ ಕೈ ಕೊಟ್ಟಿದ್ದರು !

* * * * *

ಸರಳತೆಯಲ್ಲಿ ಸೊಗಸು. ಪ್ರತಿಯೊಂದೂ ಚೊಕ್ಕ. ಸ್ನೇಹಪರ. ಒಳ್ಳೆಯ ಮಾತುಗಾರ. ಸಂಪ್ರದಾಯದ ಹಿರಿಮೆಯಿಂದ ಆಧುನಿಕತೆಯ ಅರಿವಿನ ತನಕ ನಿತ್ಯ ಜ್ಞಾನಾರ್ಜನೆಯ ವ್ರತಧಾರಿಯಾದವರು.

ಕಳೆದ ಎರಡು ತಲೆಮಾರುಗಳ ನಮ್ಮ ಬುದ್ಧಿಜೀವಿಗಳಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಅಗ್ನಿಕುಂಡದ ಸುತ್ತಲೂ ಮೈ ಕಾಯಿಸಿಕೊಂಡವರು ಹಲವರು. ಕೆಲವರು ಪತಂಗಗಳಂತೆ ಮೆರೆದು ಮಾಯವಾದರೆ, ಬೇರೆ ಕೆಲವರು ಮೈ ಕೊಡವಿ ಶುಚಿ ನೀರಿನಲ್ಲಿ

ಮಿಂದು ಬದುಕಿನ ಹೊಸದೊಂದು ಅರ್ಥಪೂರ್ಣ ಅಧ್ಯಾಯವನ್ನು ಆರಂಭಿಸಿದರು. ಅಂಥ ವ್ಯಕ್ತಿ ಚೌಡಪ್ಪ.

ಬಾಲ್ಯದಲ್ಲೇ ಬರೆಹದ ಗೀಳು ಅಂಟಿದವರು ಕಡೆಯವರೆಗೂ ಲೇಖನಿಯ ಭಾರ ಹೊರುತ್ತಾರೆ. ಓದುಬರೆಹದ ಹವ್ಯಾಸವೇ ಅವರ ಸರ್ವಸ್ವ. ಚೌಡಪ್ಪ ಅಂತಹ ಶ್ರೀಮಂತ.

*　　　*　　　*　　　*　　　*

ಕನ್ನಡದಲ್ಲಿ ಸ್ನೇಹಪರತೆಗೆ ಇರುವ ಇನ್ನೊಂದು ಹೆಸರು – ಅ ನ ಕೃ. ನಾಡಿನ ಉದ್ದಗಲದಲ್ಲಿ ಅ ನ ಕೃರ ಹಾಗೆ ಅಸಂಖ್ಯ ಸ್ನೇಹಿತರನ್ನು ಪಡೆದವರು ಬೇರೆ ಯಾರೂ ಇಲ್ಲ. ಅವರ ಸ್ನೇಹವರ್ತುಲದಲ್ಲಿ ಬೆರೆತವರು ನಾನಾ ಕಾರಣಗಳಿಗಾಗಿ ದೂರ ಸರಿದಿರಬಹುದು. ಆದರೂ ಅ ನ ಕೃ ಬಡವಾಗುವುದಿಲ್ಲ. ತೆರವಾದ ಸ್ಥಾನಗಳು ಸುಲಭವಾಗಿ ತುಂಬಿಕೊಳ್ಳುತ್ತವೆ.

ಅ ನ ಕೃ ಕೆಲ ನಿಷ್ಠಾವಂತ ಮಿತ್ರರನ್ನು ಪಡೆದಿರುವ ಪುಣ್ಯಶಾಲಿ. ಆ ಬಗೆಯ ನಿಷ್ಠೆಯನ್ನು ಅವರಲ್ಲಿ ತೋರಿರುವ ಸಹೃದಯ ಮಾನಾಚೌ. ಅ ನ ಕೃರ ಮೇಲೆ ಈ ಗೆಳೆಯ ಪ್ರಭಾವ ಬೀರಲು ಸಮರ್ಥರಾಗದೇ ಹೋಗಿರಬಹುದು. ಆದರೂ ಮಾನಾಚೌ ತೋರಿರುವುದು ಹಿರಿಯಣ್ಣನ ಬಗೆಗೆ ತುಸು ಕಿರಿಯನ ಅನನ್ಯ ವಾತ್ಸಲ್ಯ. ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖರ ಬಗೆಗೆ ಬರೆಯುವ ಇತಿಹಾಸಕಾರ ಈ ಬಗೆಯ ಅನ್ಯೋನ್ಯತೆಯನ್ನು ಅಪರೂಪ ವಸ್ತು ಎಂದು ಬಣ್ಣಿಸದೆ ಇರಲಾರ. ಸಂಕಟದಲ್ಲೂ ಸಂತೋಷದಲ್ಲೂ ಹಿರಿಯ ಮಿತ್ರನ ಅನುವರ್ತಿಯಾಗಿ ನಿಂತ ಹೆಗ್ಗಳಿಕೆ ಚೌಡಪ್ಪನವರದು.

ಇಂಥ ಮಿತ್ರರಲ್ಲೂ ಒಂದು ವ್ಯತ್ಯಾಸವನ್ನು ಗಮನಿಸಬಹುದು. ಅ ನ ಕೃ ಪಾಲಿಗೆ ಸ್ನೇಹವೆಂದರೆ ಅವರ ಪಾರಮ್ಯವೇ ಬೇಕು. ದ್ವೇಷ ಹುಟ್ಟಿತೋ, ಅವರದು ಕಡುಹಗೆಯ ಪಾತ್ರ. ಮಾನಾಚೌ ಹಾಗಲ್ಲ. ವೈರಿ ಎಂಬ ಪದ ಅವರಿಗೆ ದೂರ. ಎಷ್ಟೇ ಕಟುವಾಗಿ ಚೌಡಪ್ಪನವರು ಒಬ್ಬರನ್ನು ಟೀಕಿಸಲಿ, ಮರುಕ್ಷಣವೇ ಅವರೊಂದಿಗೆ ಕಾಫಿ ಸ್ವೀಕರಿಸದಿದ್ದರೆ ಅವರಿಗೆ ಸಮಾಧಾನವಿಲ್ಲ.

*　　　*　　　*　　　*　　　*

ಕನ್ನಡದಲ್ಲಿ ಸಣ್ಣ ಕತೆಗಳನ್ನು ಬರೆಯತೊಡಗಿದ ಅನೇಕರಿಗೆ ಯೋಗ್ಯ ವೇದಿಕೆಯನ್ನು ಒದಗಿಸಿದ ಪತ್ರಿಕೆಯೊಂದಿತ್ತು. ಮಾಸಿಕ. ‘ಕಥಾಂಜಲಿ.’ ಅಂಥ ಪತ್ರಿಕೆಗೆ ಸಂಪಾದಕರಾಗಿದ್ದ ಪ್ರಮುಖರಲ್ಲಿ ಮಾನಾಚೌ ಒಬ್ಬರು. ಅಲ್ಲಿಂದ ಆರಂಭವಾಯಿತು ಅವರ ಪತ್ರಿಕಾವೃತ್ತಿ. ಮುಂದೆ ‘ಪ್ರಜಾಮತ’ದಲ್ಲೂ ಸಂಪಾದಕ ಮಂಡಲದಲ್ಲಿ ಮುಖ್ಯರಾಗಿ ಅವರು ದುಡಿದರು.

ಆ ಕಾಲದ ಪತ್ರಿಕೋದ್ಯಮದ ಕಲ್ಪನೆಯೇ ರೋಮಾಂಚಕಾರಿ. ವೇತನ,

ತುಟ್ಟಿಭತ್ತೆ, ಪ್ರಾವಿಡೆಂಟ್ ಫಂಡ್, ಗ್ರಾಚ್ಯುಟಿ, ಗಳಿಸಿದ ರಜೆ – ಈ ಪದಗಳೇ ಆಗಿನ್ನೂ ಹುಟ್ಟಿರಲಿಲ್ಲ. ಪತ್ರಿಕೆಗಳನ್ನು ನಡೆಸುತ್ತಿದ್ದವರೂ ಗಮನಾರ್ಹ ಪ್ರಮಾಣದಲ್ಲಿ ನೋಟುಗಳನ್ನು ಕಂಡವರಲ್ಲ. ಆಗ, ವಾರಕ್ಕೊಮ್ಮೆ ಕೆಲವು ರೂಪಾಯಿ ಗಳನ್ನು ಮಾಲಿಕ-ಸಂಪಾದಕರಿಂದ ಪಡೆಯುತ್ತಿದ್ದವರೂ ಇದ್ದರು. ಐದು ರೂಪಾಯಿ ಗಳನ್ನೋ ಹತ್ತು ರೂಪಾಯಿಗಳನ್ನೋ ಪಡೆದು, ಜೇಬಿನಲ್ಲಿರಿಸಿ, ಎದೆಯುಬ್ಬಿಸಿ ಕೊಳ್ಳುವವರೂ ಇದ್ದರು.

ಅಂಥ ದಿನಗಳಿಗೂ ಚೌ ಅಪರಿಚಿತರಲ್ಲ. ಆಗಲೂ ಅವರು ಸ್ಥಿತಪ್ರಜ್ಞ. ಮುಂದೆ ನೂರುಗಟ್ಟಲೆ ಸಂಪಾದಿಸಿದಾಗಲೂ ಅದೇ ಮನೋವೃತ್ತಿ.

* * * * *

ಹಲವು ಪತ್ರಿಕೆಗಳಲ್ಲಿ ದುಡಿಮೆ. ಪತ್ರಿಕೋದ್ಯಮದ ಜತೆಗೆ ಸಾಹಿತ್ಯ ಕೃತಿಗಳ ರಚನೆ. ('ಚಂದ್ರಗುಪ್ತ', 'ಕುಂತಿ', 'ಶ್ರೀಕೃಷ್ಣ ಭೂಪಾಲ'.) ಆಧುನಿಕ ಸಂಪರ್ಕ ಮಾಧ್ಯಮವಾದ ರೇಡಿಯೋ ಪ್ರಸಾರದೊಡನೆ ಸರಸ.

ಆ ಸರಸದಲ್ಲಿ ಅವರು ತೋರಿದ ಪ್ರಾವೀಣ್ಯ ಆಕಾಶವಾಣಿ ನಿಲಯದ ಆಸರೆಗೆ ಅವರನ್ನು ತಂದುಬಿಟ್ಟಿತು.

ಸಾಧಾರಣವಾಗಿ ಆಕಾಶವಾಣಿಯಂತಹ ಸರಕಾರೀ ವ್ಯವಸ್ಥೆಯಲ್ಲಿ ಎಂಥ ಕಲಾ ವಂತಿಕೆಯೂ ಗೊಗ್ಗರವಾಗಬೇಕು. ಅಂಥ ಪರಿಸ್ಥಿತಿಯಲ್ಲೂ ತಮ್ಮ ವೈಶಿಷ್ಟ್ಯವನ್ನು ಉಳಿಸಿಕೊಂಡವರು ಚೌ.

ಅವರಿಗೀಗ ಅರುವತ್ತು ತುಂಬಿದೆ. ಭಾರತೀಯ ಜೀವನದಲ್ಲಿ ಈ ಅರುವತ್ತಕ್ಕೆ ಒಂದು ಮಹತ್ವ. ಸಾಧಕ ಸೀಮೋಲ್ಲಂಘನ ಮಾಡಿದ ಹಾಗೆ. ಹಿರಿಯರ ಶ್ರೇಣಿಗೆ ಮಾನಾಚೌ ಈಗ ಸೇರಿದ ಹಾಗಾಯಿತು.

೫-೧೦-೧೯೬೯

# ಕಿಞ್ಞಣ್ಣನಿಂದು ಹಿರಿಯಣ್ಣ

ಸ್ಮೃತಿಯ ಓಣಿಯಲ್ಲಿ ಹಿಂದಕ್ಕೆ ದೂರಕ್ಕೆ ಕಣ್ಣು ಹಾಯಿಸಿದಾಗ!

ಮಂಗಳೂರಿನ ರಥ ಬೀದಿ. 'ಸ್ವದೇಶಾಭಿಮಾನಿ' ವಾರಪತ್ರಿಕೆಯ ಕಾರ್ಯಾಲಯ.

"ಕಿಞ್ಞಣ್ಣ ರೈಗಳನ್ನು ನೋಡಬೇಕಿತ್ತು."

ಹೊರಗೆ ಕುಳಿತಿದ್ದವರು ಒಳಗಡೆ ಬೊಟ್ಟು ಮಾಡಿದರು.

ಪುಸ್ತಕವೋ, ಹಸ್ತಪ್ರತಿಯೋ, ಪತ್ರಿಕೆಯೋ – ಓದುತ್ತಿದ್ದ ಯುವಕ ತಲೆ ಎತ್ತಿದರು. ಆಕರ್ಷಕ ನೀಳ ಮುಖದಲ್ಲಿ ಕಣ್ಣುಗಳಿಗೇ ಪ್ರಾಧಾನ್ಯ.

ಹೆಸರು ಹೇಳಿದೆ.

"ಓ ನೀವೊ?"

ತುಟಿಗಳಲ್ಲಿ ದೊಡ್ಡ ಮಂದಹಾಸ.

ಬರೆವಣಿಗೆಯ ಮೂಲಕ ಅವರು ನನಗೆ ಪರಿಚಿತರು. ಅದೇ ರೀತಿ ಸ್ವಲ್ಪ ಮಟ್ಟಿಗೆ ನಾನೂ ಅವರಿಗೆ ಪರಿಚಿತ.

ಕುಶಲ ಮಾತುಕತೆಯ ಚುಟುಕು ಪೀಠಿಕೆಯ ಬಳಿಕ ನೇರವಾಗಿ ವಿಷಯ ಪ್ರವೇಶ.

ಕಯ್ಯಾರ ಕಿಞ್ಞಣ್ಣ ರೈ ಕೇಳಿದರು:

"ಏನು ಮಾಡಬೇಕೂಂತಿದ್ದೀರಿ?"

"ಪತ್ರಿಕೋದ್ಯಮ...."

ನಯ ನವುರಿನ ಯಾವ ಅಲಂಕಾರವೂ ಇಲ್ಲದೆ ಅವರು ತಮ್ಮ ಸಲಹೆ ನೀಡಿದರು: ಪತ್ರಿಕೋದ್ಯಮದಿಂದ ಪ್ರಯೋಜನವಿಲ್ಲ; ಯಾವುದಾದರೂ ಶಾಲೆಯಲ್ಲಿ ಉಪಾಧ್ಯಾಯನಾಗುವುದು ಮೇಲು.

ಸ್ವತಃ ರೂಪಿಸಿಕೊಂಡ ಆದರ್ಶ, ಸಾಲದುದಕ್ಕೆ ಹಟಮಾರಿತನ – ಇವೆರಡರ ಗುಂಗಿನಲ್ಲಿದ್ದ ನನಗೆ ಕಯ್ಯಾರರ ಹಿತನುಡಿ ಹೇಗೆ ಮೆಚ್ಚುಗೆಯಾಗಬೇಕು?

"ಇಲ್ಲ. ಈ ವೃತ್ತಿಯೇ ನನಗೆ ಸರಿ ಎಂದು ಭಾವಿಸಿದ್ದೇನೆ," ಎಂತಲೋ ಏನೋ ಹೇಳಿದ ಹಾಗೆ ನೆನಪು.

* * * * *

ಮುಂದೆ ಕಿರಿಯ ವೃತ್ತಿಬಾಂಧವನನ್ನು ಕಯ್ಯಾರರು ನಡೆಸಿಕೊಂಡ ರೀತಿ ಅಪರ

ಆಳ ವಿಸ್ತಾರಗಳನ್ನು ಸದಾ ಬಯಸುವ ಎತ್ತರದ ವ್ಯಕ್ತಿತ್ವದ ಸತ್ತ್ವಯುತ ಪ್ರಭಾವಳಿ ಸುಲಭವಾಗಿ ರೂಪುಗೊಳ್ಳುತ್ತದೆ. ಅವರ ಭಾವರಾಗಗಳು ಹತ್ತಿರವಿದ್ದವರ ಪಾಲಿಗೆ ಅಂಟುಜಾಡ್ಯವಾಗುತ್ತದೆ. ಕಾಸರಗೋಡು ತಾಲೂಕಿನ ಪೆರಡಾಲದಲ್ಲಿರುವ ನವಜೀವನ ಪ್ರೌಢಶಾಲೆಯಲ್ಲಿ ಅಧ್ಯಾಪಕರಾಗಿದ್ದುಕೊಂಡು, ಮೂರು ದಿಕ್ಕುಗಳಲ್ಲಿ ಕಯ್ಯಾರರು ಬೆಳೆದಿದ್ದಾರೆ, ಇತರರನ್ನು ಬೆಳೆಸಿದ್ದಾರೆ: ವಿದ್ಯಾದಾನ, ಸಾಹಿತ್ಯ ರಚನೆ, ಸಮಾಜಸೇವೆ. ಈ ಮೂರು ಕ್ಷೇತ್ರಗಳಲ್ಲೂ ಔನ್ನತ್ಯವನ್ನು ಅವರು ಸಾಧಿಸಿದ್ದಾರೆ.

ಈ ವರ್ಷ ನವಜೀವನ ಪ್ರೌಢಶಾಲೆ ತನ್ನ ಬೆಳ್ಳಿಯ ಹಬ್ಬವನ್ನು ಆಚರಿಸಿತು. ಕಯ್ಯಾರರ ಪಾಲಿಗೂ ಅಧ್ಯಾಪಕ ವೃತ್ತಿಯ ರಜತೋತ್ಸವ.

* * * * *

ನಿಷ್ಠಾವಂತ ರಾಷ್ಟ್ರೀಯವಾದಿಯಾದ ಈ ಕವಿಗೆ ಅಪಾರ ದುಃಖವನ್ನು ಉಂಟುಮಾಡಿರುವ ಘಟನೆಯೆಂದರೆ, ರಾಜ್ಯ ಪುನರ್ಘಟನಾ ಆಯೋಗ ಕಾಸರಗೋಡನ್ನು ಕತ್ತರಿಸಿ ಕೇರಳಕ್ಕೆ ಅಂಟಿಸಿದ್ದು. ಕವಿ ಮಂಜೇಶ್ವರ ಗೋವಿಂದ ಪೈಗಳಿಗೆ ಆ ಕೊರಗು ಇಳಿವಯಸ್ಸಿನ ಒಡನಾಡಿಯಾಯಿತು. ಕಯ್ಯಾರರಿಗೋ ಅದು ದೀರ್ಘಾವಧಿಯ ವ್ಯಥೆ.

ಕನ್ನಡ ಜನಮನದಲ್ಲಿ ಸ್ಥಿರವಾದ ಸ್ಥಾನ ತಮಗಿದೆ ಎಂದು ಕಯ್ಯಾರರು ಸಮಾಧಾನ ಪಡಬಹುದು. ಅವರ 'ಶ್ರೀಮುಖ', 'ಪುನರ್ನವ', 'ರಕ್ತರಾಶಿ'- ಸಂಕಲನಗಳಾಗಲೀ ಕೆಲವು ಸಂಪುಟಗಳಷ್ಟಾಗಬಲ್ಲ ಬಿಡಿ ಬರೆವಣಿಗೆಯಾಗಲೀ ಆಸಕ್ತ ಓದುಗರನ್ನು ಗಳಿಸಿವೆ. ರಾಜ್ಯಪ್ರಶಸ್ತಿಗಳು ಅವರಿಗೆ ಸಂದಿವೆ. ಅದಕ್ಕೂ ಮಿಗಿಲಾದ ಪ್ರಜಾಮನ್ನಣೆ ಅವರಿಗೆ ದೊರೆತಿದೆ. 'ಆದರ್ಶ ಅಧ್ಯಾಪಕ' ರಾಷ್ಟ್ರ ಪ್ರಶಸ್ತಿ ಈ ಸಲ ಅವರಿಗೆ ಲಭಿಸಿದೆ.

ಎಷ್ಟೋ ವರ್ಷಗಳ ಹಿಂದೆ ದಕ್ಷಿಣ ಕನ್ನಡದ ಹೊರಗಿನ ಕನ್ನಡಿಗರಿಗೆ ಕಿಞ್ಞಣ್ಣ ರೈಯವರ ಹೆಸರನ್ನು ಉಚ್ಚರಿಸುವುದೇ ಕಷ್ಟವಾಗುತ್ತಿತ್ತು. ಈಗ ಆ ಪರಿಸ್ಥಿತಿ ಇಲ್ಲದಿರುವುದೇ ಅವರ ವ್ಯಕ್ತಿತ್ವದ ಬೆಳವಣಿಗೆಗೆ ಸಾಕ್ಷಿಯಂತೆ. ಕಿರಿಯ ಅಣ್ಣ ಕಿಞ್ಞಣ್ಣರೀಗ ಕನ್ನಡದ ಪಾಲಿಗೆ ಹಿರಿಯಣ್ಣನೇ ಆಗಿದ್ದಾರೆ.

೧೨-೧೦-೧೯೬೯

# ಕುಲಪತಿ ದೇಜಗೌ

ಇಂದು ರಾಜ್ಯೋತ್ಸವ. ರಾಜ್ಯದ ರಾಜಧಾನಿಯಲ್ಲಿ ಸಂಭ್ರಮದ ಆಚರಣೆ.

ಅದೇ ವೇಳೆಯಲ್ಲಿ, ಸಾಂಸ್ಕೃತಿಕ ರಾಜಧಾನಿಯಾದ ಮೈಸೂರಿನಲ್ಲೂ ಒಂದು ವಿಶೇಷ ಪ್ರಸಂಗ. ಅಲ್ಲಿ ಕನ್ನಡಕಲಿ ದೇಜಗೌರಿಂದ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಯಾಗಿ ಅಧಿಕಾರ ಸ್ವೀಕಾರ.

ಈ ತನಕ ಆ ಸ್ಥಾನದಲ್ಲಿದ್ದ ಡಾ. ಶ್ರೀಮಾಲಿ ಕಾಶಿ ವಿಶ್ವವಿದ್ಯಾಲಯದ ಕುಲಪತಿಯಾಗಿ ನೇಮಕಗೊಂಡು ಮೈಸೂರಿನ ಹುದ್ದೆಯನ್ನು ಅಕ್ಟೋಬರ್ ೩೧ ರಂದು ಬಿಟ್ಟುಕೊಟ್ಟರು. ನವೆಂಬರ್ ೧ ರಂದು ಹೊಸಬರು ಅಧಿಕಾರ ಸ್ವೀಕರಿಸಬೇಕಾದುದು ಸಹಜವೇ. ಆ ದಿನ ಕನ್ನಡ ರಾಜ್ಯೋತ್ಸವವೂ ಆಗಿರುವುದು ಕಾಕತಾಳೀಯ ಎನ್ನೋಣವೆ? ಇರಬಹುದು. ಆದರೂ ಹೀಗೆ ಇದು ಕೂಡಿಬಂದಿರುವುದು ಮಹತ್ವಪೂರ್ಣವೂ ಹೌದು.

ಕನ್ನಡದ ದಿಗ್ಗಜ, ದೇಜಗೌ. ಅವರು ಕಾಡಿನಿಂದ ನಾಡಿಗೆ ಬಂದರು. ರೋಮಾಂಚಕಾರಿಯಾದ ರೀತಿಯಲ್ಲಿ........

ವಿಜಯದಶಮಿ ಮೊನ್ನೆ ಕಳೆಯಿತು. ಆದರೆ, ಕನ್ನಡ ಸರಸ್ವತಿಯ ಸನ್ನಿಧಿಯಲ್ಲಿ ಈ ದಿನ ಆಯುಧಪೂಜೆ. ಪೂಜೆ ಬುಲ್‌ಡೋಜರಿಗೆ. ಆರತಿ, ಅಣಿಯಾಗುವ ರಥವನ್ನು ಏರುವ ಸಾರಥಿಗೆ.

* * * * *

ಕಳೆದ ಹದಿನೈದು ವರ್ಷಗಳ ಅವಧಿಯಲ್ಲಿ ದೇಜಗೌ ಮಾರ್ಗಕ್ರಮಣವನ್ನು ಕಂಡವರಿಗೆ ಅನಿಸಿತ್ತು, – ವಿಶ್ವವಿದ್ಯಾನಿಲಯದ ಹಿರಿಯ ಅಧಿಕಾರಪೀಠವನ್ನು ಇವರು ಏರುವುದು ಖಚಿತ, ಎಂದು. ಬದುಕಿನ ಹೋರಾಟದಲ್ಲಿ ನೂರು ಗೆಲುವುಗಳನ್ನು ಪಡೆದ ಜವರೇಗೌಡರಿಗೂ ಆ ಗುರಿ ಸ್ಪಷ್ಟವಾಗಿದ್ದಿರಬಹುದು. ಆದರೆ ಅದು 'ನಾಳೆ' ಯದಾಗಿ ಉಳಿದಿತ್ತು. ಆ 'ನಾಳೆ' ಇಂದೇ ಆದುದು ಒಂದು ಅನಿರೀಕ್ಷಿತ ಘಟನೆ.

ಕೇಂದ್ರದಲ್ಲಿ ವಿದ್ಯಾಸಚಿವರಾಗಿ ಕಾರ್ಯನಿರ್ವಹಿಸಿದ್ದ ಡಾ. ಕನ್ಹಯಲಾಲ್ ಶ್ರೀಮಾಲಿಯವರು, ಡಾ. ಪಣಿಕ್ಕರರ ಅಕಾಲಮರಣದ ಬಳಿಕ ಕುಲಪತಿಯಾಗಿ ಮೈಸೂರಿಗೆ ಬಂದರು. 'ಹೊರಗಿನವರನ್ನು' ಮೈಸೂರು ಎಂದೂ ಇಷ್ಟಪಟ್ಟುದಿಲ್ಲ. ಶ್ರೀಮಾಲಿ ಯಶಸ್ವಿಯಾಗುವರೋ ಇಲ್ಲವೋ ಎಂದು ಕುತೂಹಲದಿಂದ ನಿರೀಕ್ಷಿಸಿದವರು ಬಹಳ ಜನ. ಆರು ತಿಂಗಳು ಶ್ರೀಮಾಲಿ ನೆಲಕ್ಕಾಗಿ ತಡವರಿಸಿದರು. ಪಾಪ

ಗಳು ಭಗ್ನವಾಗಿ ನಿಂತಾಗ ಅವರು ಶ್ರೀಮಾಲಿಯಪ್ಪನಾಗಿದ್ದರು. ಸಮಾಲೋಚನೆ ಸಲಹೆಗಳಿಗೆ ದೇಜಗೌರಂಥ ದಕ್ಷರು ದೊರೆತು ಅವರು ಸುಪ್ರೈವಿ ಎನಿಸಿಕೊಂಡರು. ಮೂರು ವರ್ಷಗಳ ಅವಧಿ ಮುಂದುವರಿಯಿತು. ಕಾಶಿಯ ಕರೆ ಬರದೇ ಇದ್ದಿದ್ದರೆ ಆರು ವರ್ಷಗಳ ಅವಧಿಯನ್ನೂ ಅವರು ಪೂರೈಸುತ್ತಿದ್ದರು.

ಆ ಕರೆ ಇದ್ದಕ್ಕಿದ್ದಂತೆ ಮೈಸೂರಿನ ಮುಂದೆ ಹೊಸ ಪ್ರಶ್ನೆಯನ್ನು ತಂದಿಟ್ಟಿತು. ಮುಂದಿನ ಕುಲಪತಿ ಯಾರು? ಮತ್ತೆ 'ಹೊರಗಿನವರೇ' ಬರಬೇಕೆ? ಸಮರ್ಥರು ನಮ್ಮಲ್ಲೇ ಇಲ್ಲವೆ?

ಶಾಂತ ಪರಿಸ್ಥಿತಿಯಲ್ಲಿ ಆಗಬೇಕಾದ ತೀರ್ಮಾನ, ಬೆಂಗಳೂರಿನ ವಿದ್ಯಾರ್ಥಿ ಗಲಭೆಗಳ ಕಾರಣದಿಂದ, ವಕ್ರ ಸವಾಲಾಯಿತು. ಉತ್ತರ ಕರ್ನಾಟಕ - ಹಳೆಯ ಮೈಸೂರು ರಾಜಕೀಯ ಗದ್ದಲದ ಹಿಮ್ಮೇಳ ಬೇರೆ. ಈ ವಿಕ್ಷಿಪ್ತ ಪರಿಸ್ಥಿತಿಯಲ್ಲಿ ಕುಲಪತಿಯ ನೇಮಕ ತಡವಾಗುವಂತೆ ಕಂಡು, ಇಲ್ಲದ ಪ್ರಪಂಚನೆಗೆ ಎಡೆಕೊಟ್ಟಿತು.

ಕೃಷಿ ವಿಶ್ವವಿದ್ಯಾಲಯವನ್ನೂ ಒಳಗೊಂಡು ಮೈಸೂರು ರಾಜ್ಯದಲ್ಲಿ ನಾಲ್ಕು ವಿಶ್ವವಿದ್ಯಾನಿಲಯಗಳಿವೆ. ಕುಲಪತಿಯನ್ನು ಗೊತ್ತುಮಾಡುವುದಕ್ಕೆ ಸಂಬಂಧಿಸಿ ಏಕರೂಪತೆ ಇಲ್ಲ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಮತವಿತ್ತು ಆರಿಸುತ್ತಾರೆ; ಬೆಂಗಳೂರಿನಲ್ಲಿ ಸಿಂಡಿಕೇಟು ಸೂಚಿಸಿದ ಮೂವರು ಕಲೆತು, ಅವರು ಸೂಚಿಸುವ ಮೂರು ಹೆಸರುಗಳಲ್ಲಿ ಒಂದಕ್ಕೆ ಮಹಾಕುಲಪತಿ (ಸರಕಾರದ ಸಲಹೆಯ ಮೇರೆಗೆ) ಅಂಗೀಕಾರವೀಯುತ್ತಾರೆ. ಮೈಸೂರಿನಲ್ಲಿ ನೇರವಾಗಿ ಮಹಾಕುಲಪತಿಯೇ (ಸರಕಾರದ ಸೂಚನೆಯಂತೆ) ನೇಮಿಸುತ್ತಾರೆ.

ರಾಜ್ಯದ ನಾಯಕರು ಎಷ್ಟು ಸಮರ್ಥರು, ನಿಷ್ಪಕ್ಷಪಾತಿಗಳು, ಒಮ್ಮನಸ್ಸಿನವರು ಎನ್ನುವುದಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗೆ ಸಂಬಂಧಿಸಿ ಅವರು ಕೈಕೊಂಡ ತೀರ್ಮಾನವೇ ನಿದರ್ಶನ. ವಿದ್ಯಾಸಚಿವ ಶಂಕರಗೌಡರು ಸೂಚಿಸಿದ ಹೆಸರೂ ಮುಖ್ಯಮಂತ್ರಿ ವೀರೇಂದ್ರಪಾಟೀಲರು ಯೋಚಿಸಿದ ಹೆಸರೂ ಒಂದೇ. ರಾಜ್ಯದ ಹಿರಿಯ ನಾಯಕ ನಿಜಲಿಂಗಪ್ಪನವರಿಗೆ ಒಪ್ಪಿಗೆಯಾದುದೂ ಅದೇ ಹೆಸರು. ಉಳಿದ ನಾಯಕರಿಗೂ ಆ ಹೆಸರು ಇಷ್ಟವೇ.

ಹೀಗೆ ನೂತನ ರಾಜ್ಯಪಾಲ (ಮಹಾಕುಲಪತಿ) ಧರ್ಮವೀರರು ಈ ರಾಜ್ಯದಲ್ಲಿ ಮೊದಲ ಸಹಿ ಹಾಕಿದುದು ದೇಜಗೌರನ್ನು ಕುಲಪತಿಯಾಗಿ ನೇಮಿಸಿದ ಪತ್ರಕ್ಕೆ.

* * * * *

ಒಂದಲ್ಲ ಹಲವು ಕಾರಣಗಳಿಗಾಗಿ ವಿಶ್ವವಿದ್ಯಾನಿಲಯದ ಉನ್ನತ ಸ್ಥಾನಕ್ಕೆ ದೇಜಗೌ ಅತ್ಯಂತ ಅರ್ಹರು. ಕುವೆಂಪು ಗರಡಿಯಲ್ಲಿ ಪಳಗಿ ಹಿರಿಯ ವಸ್ತಾದಿಯಾದ ದೇಜಗೌ ಉದಾತ್ತ ಪರಂಪರೆಯ ವಾರಸುದಾರರು, ಶ್ರೇಷ್ಠ ಪ್ರಾಧ್ಯಾಪಕರು. ಮಾನಸಗಂಗೋತ್ರಿಯ ನಿರ್ಮಾಪಕ ಪ್ರಮುಖರಲ್ಲಿ ಆಡಳಿತಾಧಿಕಾರಿಯಾಗಿ ಅನುಭವ

# ಹಿರಿಯರಿಗೆ ಪ್ರಭುತ್ವ ಸನ್ಮಾನ

ಸನ್ಮಾನ – ಸತ್ಕಾರಗಳು ಎಂದರೆ ಒಂದು ಬಗೆಯ ಅಂಕ. ಅದರಲ್ಲೂ ಪ್ರಭುತ್ವ ನೀಡುವ ಸನ್ಮಾನವೆಂದರೆ ಹಣೆಯಲ್ಲಿ ನೆರಿಗೆ. ಇದಕ್ಕೆ ಕಾರಣವಿಷ್ಟೆ: ಎಷ್ಟೋ ಸಲ ಇಂಥ ಸನ್ಮಾನಗಳು ಹೊಗಳಿ ಹೊನ್ನಶೂಲಕ್ಕೇರಿಸುವ ನಾಟಕಗಳಾಗುತ್ತವೆ; ಹಲ್ಲು ಕಿಸಿದು ಗೌರವ ಪಡೆಯುವ ಪ್ರಹಸನಗಳಾಗುತ್ತವೆ. ಪರಿಣಾಮವಾಗಿ ರೂಪುಗೊಳ್ಳುವುದು. ಒಂದು ರೀತಿಯ ವರ್ಗ; ಸಾಹಿತ್ಯ – ಸಂಸ್ಕೃತಿ – ಕಲೆಗಳ ಲೋಕದಲ್ಲಿ ಸಾಗುತ್ತದೆ, ಈ ವರ್ಗದ ಮೆರವಣಿಗೆ.

ಆದರೆ ಕೆಲವೊಮ್ಮೆ ಇಂಥ ಪರಿಸ್ಥಿತಿಗೆ ಅಪವಾದಗಳಿರುವುದುಂಟು. ಅದು ಅತ್ಯಂತ ಅರ್ಹರಾದವರಿಗೆ ಗೌರವ ಸಂದಾಗ. ಸನ್ಮಾನ, ಬಯಸದೆ ಬಂದಾಗ. ಅಂತಹ ವ್ಯಕ್ತಿಯನ್ನು ಆದರಿಸಿದವರೇ ಆ ಕಾರ್ಯ ನೆನೆದು ಕೃತಾರ್ಥರಾದೆವು ಎಂದು ಕೊಳ್ಳುತ್ತಾರೆ.

ಇತ್ತೀಚಿನ ಅಂತಹ ಒಂದು ಪ್ರಸಂಗ ಕನ್ನಡದ ಹಿರಿಯ ಪತ್ರಿಕಾಕರ್ತರಿಬ್ಬರಿಗೆ ಕನ್ನಡ ರಾಜ್ಯೋತ್ಸವದ ಸಂದರ್ಭದಲ್ಲಿ ಸಂದ ಗೌರವ. ಒಬ್ಬರು 'ತಾಯಿನಾಡು' ಪತ್ರಿಕೆಯ ಸಂಸ್ಥಾಪಕ ಸಂಪಾದಕರು; ಇನ್ನೊಬ್ಬರು, 'ಕರ್ಮವೀರ'ದ ಸಂಪಾದಕ ಹ. ರಾ. ಪುರೋಹಿತರು.

ಈ ಇಬ್ಬರು ಸಕ್ರಿಯರಾಗಿ ಪತ್ರಿಕಾರಂಗದಲ್ಲಿ ಈಗ ಇಲ್ಲ. ಆದರೂ ಅವರ ಬರವಣಿಗೆ ನಿಂತಿಲ್ಲ. ಇಳಿವಯಸ್ಸಿನ ತೊಂದರೆಗಳನ್ನು ಗಮನಿಸದೆ ರಾಮಯ್ಯನವರು ಇತ್ತೀಚೆಗೆ, ಕನ್ನಡ ಪತ್ರಿಕಾಲೋಕದ ಪಿತಾಮಹ ತಾತಯ್ಯನವರನ್ನು ಕುರಿತು ಒಂದು ಅಮೂಲ್ಯ ಪುಸ್ತಕವನ್ನು ಬರೆದು ಮುಗಿಸಿದರು. ವೃದ್ಧಾಪ್ಯವನ್ನು ಗಣನೆಗೆ ತೆಗೆದುಕೊಳ್ಳದೆ ಪುರೋಹಿತರು, ಯುವಕರ ಉತ್ಸಾಹದಿಂದ, ಇಂದಿಗೂ ಲೇಖನ ಕಾರ್ಯದಲ್ಲಿ ನಿರತರು. ಸ್ವಾತಂತ್ರ್ಯ ಸಂಗ್ರಾಮದಲ್ಲಂತೂ ಇಬ್ಬರೂ ಭಾಗಿಗಳೇ; ಬದುಕಿನ ಕಹಿಯನ್ನು ಸಾಕಷ್ಟು ಉಂಡವರೇ.

ಮುದುಕರಾದೆವು. ಜೀವನನಾಟಕದಲ್ಲಿ ಇನ್ನು ಅಭಿನಯಿಸಲಾರೆವು ಎಂದು ನೇಪಥ್ಯಕ್ಕೆ ಸರಿಯುವವರು ಬಹಳ ಜನ. ದಶಕದಶಕಗಳ ಕಾಲ ಜನಾದರಣೀಯ ರಾಗಿದ್ದು, ಅದೇ ರೀತಿ ಕೊನೆಯ ಗಂಟೆ ಬಾರಿಸುವವರೆಗೂ ಮೆರೆಯುತ್ತ ಹೋಗುವವರು ಕೆಲವೇ ಮಂದಿ. ಈ ಅಲ್ಪ ಸಂಖ್ಯಾತರ ಪಂಗಡಕ್ಕೆ ಸೇರಿದವರು – ರಾಮಯ್ಯನವರು ಹಾಗೂ ಪುರೋಹಿತರು.

ಶಾಸ್ತ್ರವನ್ನು ಓದುತ್ತಿದ್ದ ಅವರಣ್ಣ ಟಿ. ಬಿ. ಪುರೋಹಿತರು ಗಾಂಧಿಜಿಯ ಕರೆಗೆ ಓಗೊಟ್ಟು ಲಾ ಕಾಲೇಜಿನಿಂದ ಹೊರಬಂದರು; ತಿರುಗಿ ಅತ್ತ ನೋಡಲಿಲ್ಲ. ತಮ್ಮ ಶಿಕ್ಷಣಕ್ಕೆ ನಡುವೆ ವ್ಯತ್ಯಯ ಒದಗಿದರೂ ಮುಂದೆ ಓದು ಮುಂದುವರಿಸಿ ಎಂ. ಎ. ಪದವೀಧರರಾದರು. ಅಷ್ಟಾದರೂ ಯುವಕ ಪುರೋಹಿತ ಬಯಸಿದ್ದು ಬರವಣಿಗೆಯ ದುಡಿಮೆಯನ್ನು. ಇಬ್ಬರು ಸೋದರರೂ ಸೇವಾಕೈಂಕರ್ಯವನ್ನು ಕೈಕೊಂಡುದು ಲೋಕಶಿಕ್ಷಣ ಟ್ರಸ್ಟಿನಲ್ಲಿ, 'ಸಂಯುಕ್ತ ಕರ್ನಾಟಕ'ದಲ್ಲಿ, 'ಕರ್ಮವೀರ'ದಲ್ಲಿ. ಒಬ್ಬರು ದಕ್ಷ ಮ್ಯಾನೇಜರರಾಗಿ ಆ ಸಂಸ್ಥೆಯನ್ನು ಕಷ್ಟದ ದಿನಗಳಲ್ಲಿ ಕಟ್ಟಿದರು. ಇನ್ನೊಬ್ಬರು 'ಕರ್ಮವೀರ'ದ ಸಂಪಾದಕರಾಗಿ ಕನ್ನಡ ಪತ್ರಿಕೋದ್ಯಮದ ಉಜ್ವಲ ಅಧ್ಯಾಯವನ್ನು ಬರೆದರು.

* * * * *

ಸ್ವಾತಂತ್ರ್ಯ ಪ್ರಾಪ್ತಿಯಾದ ಮೇಲೆ ಕನ್ನಡ ಪತ್ರಿಕೋದ್ಯಮ ತನ್ನ ಉಡುಗೆ ಬದಲಿಸಬೇಕಾಯಿತು. ಹೊಸ ಕರ್ತವ್ಯ, ಹೊಸ ಹೊಣೆ. ಪ್ರಜೆಗಳಿಗೂ ಅವರ ಸರಕಾರಕ್ಕೂ ನಡುವಿನ 'ಮಾತು'ಗಾರ, ಭಾಷ್ಯಕಾರ ಈ ಪತ್ರಿಕೋದ್ಯೋಗಿ. ಅನ್ಯಾಯವನ್ನು ಎದುರಿಸಬೇಕಾದಾಗ ಹೋರಾಟಗಾರನ 'ಗಂಟಲು' ಕೂಡಾ.

ರಾಮಯ್ಯನವರ 'ತಾಯಿನಾಡು' ಸುದೀರ್ಘವಾದ ಒಂದು ಅಧ್ಯಾಯವನ್ನು ಮುಗಿಸಿ ಹಸ್ತಾಂತರಗೊಂಡುದು, ಐತಿಹಾಸಿಕ ಬೆಳವಣಿಗೆ. 'ಸಂಯುಕ್ತ ಕರ್ನಾಟಕ'ದಂಥ ಪತ್ರಿಕೆಗಳು ಹೊಸ ಆಹ್ವಾನವನ್ನು ಎದುರಿಸಲು ಸಿದ್ಧವಾದುದೂ ಅದೇ ಕಾರಣದಿಂದ. ಹೊಸದಾಗಿ ಪತ್ರಿಕೆಗಳು ಹುಟ್ಟಿದುದೂ ನೂತನ ಅವಶ್ಯಕತೆಗಳ ಪೂರೈಕೆಗಾಗಿಯೇ.

ಈ ಬದಲಾವಣೆ ಅತ್ಯಂತ ಸಹಜ – ಸ್ವಾಭಾವಿಕ ಎನ್ನುವಂತೆ ವರ್ತಿಸಿದ ಹಿರಿಯ ಪತ್ರಿಕೋದ್ಯಮಿ ಪುರೋಹಿತರು. ಹಿಂದಿನದೇ ನೇರ ನುಡಿ, ನಡೆ. ಉದಾತ್ತ ಮೌಲ್ಯಗಳಿಗೆ ನಿಷ್ಠೆ. ಹೊಸ ಪರಿಸರದ ಹೊಸ ಸಂಕೇತಗಳನ್ನು ಸ್ಪಷ್ಟವಾಗಿ ಅರಿತು ವರ್ತಿಸುವ ಸಾಮರ್ಥ್ಯ. ಇಂಥದಕ್ಕೆ ಶ್ರೇಷ್ಠ ನಿದರ್ಶನವಾಗಿ ಹೇಳಬಹುದಾದ ಹೆಸರು– ಹ. ರಾ. ಪುರೋಹಿತ.

ರಾಮಯ್ಯನವರಾಗಲೀ ಪುರೋಹಿತರಾಗಲೀ ಪ್ರಭುತ್ವದ ಸನ್ಮಾನ ದೊರೆಯಿತೆಂದು ದೊಡ್ಡವರಾಗಿಲ್ಲ. ಕನ್ನಡ ಪತ್ರಿಕೋದ್ಯಮದ ಇತಿಹಾಸದಲ್ಲಿ ಸ್ಥಾನ ದೊರಕಿಸಿಕೊಂಡು ಇವರಾಗಲೀ ಬಲು ದೊಡ್ಡವರಾಗಿದ್ದಾರೆ. ಬದಲು ಈ ಹಿರಿಯರಿಗೆ ಆರತಿ ಬೆಳಗಿದೆನೆಂದು ಸರಕಾರೀ ಸನ್ಮಾನದ ಬೆಲೆ ಈಗ ಹೆಚ್ಚಿದೆ.

೧೬–೧೧–೧೯೬೯

ನಾಳೆ ಬೆಳಗ್ಗೆ ಪತ್ರಿಕೆ ನೋಡಿದರಾಯಿತು. ಭಾಷಣದ ಸಾರ ಅಚ್ಚಿರುತ್ತದೆ. ವರದಿ ತಪ್ಪಾಗಿದ್ದರೆ? ಎರಡು ಮೂರು ಪತ್ರಿಕೆ ನೋಡಬಹುದು.

*     *     *     *     *

ಸಂಜೆ ರವೀಂದ್ರ ಕಲಾಕ್ಷೇತ್ರದಲ್ಲಿ 'ಆಖ್ರಿ ಶಮಾ' ನಾಟಕ, ಉರ್ದು ಭಾಷೆಯಲ್ಲಿ. ಕಾಲವಾಗಿ ನೂರು ವರ್ಷ ಸಂದ ಕವಿ ಘಾಲಿಬನನ್ನು ಕುರಿತದ್ದು. ಘಾಲಿಬ್ ಪಾತ್ರದಲ್ಲಿ ಬಲರಾಜ ಸಾಹ್ನಿ. ಪಾತ್ರವರ್ಗದಲ್ಲಿ ಹಿಂದೂಗಳು, ಮುಸಲ್ಮಾನರು. ಮುಂಬಯಿಯ ಜನತಾ ರಂಗಭೂಮಿಯವರ ಅಭಿನಯ.

ಆರಂಭವಾಗಬೇಕು. ಆದರೆ ಸಭಾಂಗಣದಲ್ಲಿದ್ದವರು ಬರೇ ಅರುವತ್ತೆಂಟು ಜನ. ನಿಮಿಷಗಳು ಕಳೆದುವು. ಒಬ್ಬೊಬ್ಬರಾಗಿ, ಇಬ್ಬಿಬ್ಬರಾಗಿ ಬಂದರು. ಭವನ ಸ್ವಲ್ಪ ಸ್ವಲ್ಪವೇ ತುಂಬಿಕೊಂಡಿತು. ದೀಪ ಆರಿಸುವ ಹೊತ್ತು. ಒಂದು ಗುಂಪು ಒಳಕ್ಕೆ ಬಂತು.

ಎಂತಹ ಸಮುದಾಯದಲ್ಲೂ ಎದ್ದು ಕಾಣಿಸುವ ಮಹಾನುಭಾವ. ಎಂಬತ್ತಾಯಿತೆ? ಎಂಥ ಧೀರ ನಡಿಗೆ! ಮುಖ್ಯಮಂತ್ರಿ ವೀರೇಂದ್ರ ಪಾಟೀಲರು ಅವರ ಕೈ ಹಿಡಿದಿದ್ದರೊ?– ಅವರು ಮೊಮ್ಮಗನ ಕೈ ಹಿಡಿದಿದ್ದರೊ?

ಎದೆಗುಂಡಿಗೆ ಹಕ್ಕಿ ಕುಪ್ಪಳಿಸಿತು.

ಇವಲ್ಲವೆ ಅದೃಷ್ಟ?

ನನ್ನ ಆಸೆ ಪೂರೈಸಲೆಂದೇ ಬಾದ್‌ಷಾಖಾನ್ ನಾಟಕ ಮಂದಿರಕ್ಕೆ ಬಂದರೇನೊ. ಅವರು ದೇವರ ಸೇವಕ. ನಾನು? ಪ್ರಾಯಶಃ ನಮ್ಮಿಬ್ಬರಿಂದಲೂ ಒಬ್ಬರೇ ದೇವರು ಸೇವೆ ಪಡೆಯುತ್ತಿರುವನೇನೊ ...

ನೂರು ವರ್ಷಗಳ ಹಿಂದಿನ ಭಾರತದ ದೃಶ್ಯಾವಳಿಯಲ್ಲಿ ಕೆಲವನ್ನು ನೋಡಿ ಬಾದ್‌ಷಾಖಾನ್ ಎದ್ದುಬಿಟ್ಟರು, ಸಭಾಂಗಣದ ನಡುಗತ್ತಲಲ್ಲಿ, ಹೊರಟುಹೋದರು, 'ಮೊಮ್ಮಗನ'ನ ಕೈ ಹಿಡಿದುಕೊಂಡು.

ಕಡೆಯವರೆಗೂ ನಾಟಕ ನೋಡುವಂತಿರಲಿಲ್ಲ ಬಾದ್‌ಷಾಖಾನರು. ಮುಂದಿನ ಕಾರ್ಯಕ್ರಮಗಳು ಅವರಿಗಾಗಿ ಅತಿಥಿ ಭವನದಲ್ಲಿ ಕಾದಿದ್ದುವು....

*     *     *     *     *

ಬೆಂಗಳೂರಿನಿಂದ ಮೈಸೂರಿಗೆ ಮಾರನೆಯ ದಿನ ಪಯಣ. ದಾರಿಯುದ್ದಕ್ಕೂ ಗಡಿನಾಡಿನ ಗಾಂಧಿಗೆ ಹಾರತುರಾಯಿ ಹಾರಗಳು. ಜನತೆಗೆ ಬೇಕಾಗಿದ್ದುದು ದಂತಕಥಾನಾಯಕನ ದರ್ಶನ. ಹೂವು ಒಪ್ಪಿಸಿದರಾಯಿತು ಅವರ ಕೆಲಸ. ಯಾರಿಗೆ ಬೇಕು ಹಿತೋಪದೇಶ?

ಜನ ತಮ್ಮ ಮಾತನ್ನು ಆಲಿಸುತ್ತಾರೆ; ಮಾತಿನ ಪರಿಣಾಮ ಅವರ ಮೇಲಾಗುತ್ತದೆ – ಎಂಬ ಭ್ರಮೆ ಅಬ್ದುಲ್ ಗಫಾರ್ ಖಾನರಿಗೆ! ಮಾತಿಗೆ ಕಿವಿಗೊಡುವ ಔದಾರ್ಯವಿಲ್ಲ ಜನರಿಗೆ!

# ತತ್ತ್ವವೇತ್ತ ಯಾಮುನಾಚಾರ್ಯ

ರಾತ್ರಿ ಟೆಲಿಫೋನ್ ಸದ್ದುಮಾಡಿತು. " ದ್ವಾರಕಿ ಮಾತಾಡ್ತಿರೋದು. ಯಾಮುನಾಚಾರ್ರು ಹೋಗ್ಬಿಟ್ರು...."

" ಓ ದೇವರೇ ! "

....ವೃದ್ಧಾಪ್ಯ ನಿಜ. ಒಮ್ಮೆ ಮರಳಿಸಿದ ಹೃದಯಾಘಾತ ಕೆಂಪು ನಿಶಾನೆಯನ್ನು ಬೀಸಿಯೂ ಇತ್ತು. ಆದರೂ ಅಪಾರ ನಷ್ಟ ಎನ್ನುವುದು ಇಂಥವರ ನಿಧನಕ್ಕೇ ಅಲ್ಲವೆ ? ಆರೋಗ್ಯ ನೆರವಾಗಿದ್ದರೆ ಶತಾಯುವಾಗಬಹುದಿತ್ತು. ವಿಚಾರ ವಿಸ್ತೃತಿಗಳಿಗೆಲ್ಲ ಮಾತು ಬರೆಹಗಳ ರೂಪ ಕೊಡಬಹುದಾಗಿತ್ತು. ಅದೆಷ್ಟು ಗ್ರಂಥಗಳು ಸಿದ್ಧವಾಗುತ್ತಿದ್ದುವೊ !

ನಿನ್ನೆ ಮೊನ್ನೆ ಎನ್ನುವ ಹಾಗಿದೆ ಅವರನ್ನು ಕೊನೆಯ ಬಾರಿಗೆ ಕಂಡುದು. ಕಿರಿಯರ ವಿಶ್ವಕೋಶವಾದ ಜ್ಞಾನಗಂಗೋತ್ರಿಯ ಕೆಲಸ ಆರಂಭವಾದಂದಿನಿಂದ ಪ್ರೊ. ಯಾಮುನಾಚಾರ್ಯರನ್ನು ಆಗಾಗ ನೆನೆಸಿಕೊಳ್ಳುತ್ತಿದ್ದೆವು. ಧರ್ಮ, ತತ್ತ್ವಜ್ಞಾನಗಳಿಗೆ ಸಂಬಂಧಿಸಿದ ಲೇಖನಗಳಲ್ಲಿ ಕೆಲವನ್ನು ಆಚಾರ್ಯರಿಗೆ ತೋರಿಸಬೇಕು, ಅವರ ಅಭಿಪ್ರಾಯ ಪಡೆಯಬೇಕು. ಎಂದುಕೊಂಡಿದ್ದೆವು.

ಅಷ್ಟರಲ್ಲಿ, ಕನ್ನಡ ರಾಜ್ಯೋದಯದ ಸಂದರ್ಭದಲ್ಲಿ ಪಾರಿತೋಷಕ ಪಡೆಯಲು ಆಚಾರ್ಯರು ಬೆಂಗಳೂರಿಗೆ ಬಂದಿದ್ದಾರೆ ಎಂಬ ಸುದ್ದಿ ಬಂತು. ಜಯನಗರದಲ್ಲಿ ತಮ್ಮ ಬಂಧುವಿನ ಮನೆಯಲ್ಲಿ ಅವರ ವಸತಿ. ಜ್ಞಾನಗಂಗೋತ್ರಿಯ ಆಡಳಿತಾಧಿಕಾರಿ ರಂಗರಾಜ ಐಯಂಗಾರ್ಯರೂ ನಾನೂ ಅಲ್ಲಿಗೆ ಹೋಗಿ, ಕಾರ್ಯಾಲಯಕ್ಕೆ ಭೇಟಿ ನೀಡುವಂತೆ ಆಮಂತ್ರಣವಿತ್ತೆವು.

ಆಚಾರ್ಯರು ಬಂದರು. ಮಹಡಿ ಹತ್ತುವುದಕ್ಕಾಗುವುದಿಲ್ಲ ಎಂದು ಅವರಿಗೆ ಆತಂಕ. ಎದೆಗುಂಡಿಗೆಗೆ ಶ್ರಮವಾಗುತ್ತದೆನ್ನುವ ಕಾತರ. ಶೇಷಗಿರಿರಾಯರು ಸಂಪಾದಕವರ್ಗದ ಸದಸ್ಯರನ್ನು ಕೆಳಗೇ ಕರೆದುಕೊಂಡು ಬಂದರು.

ಆಚಾರ್ಯರು ನಮ್ಮೊಡನಿದ್ದುದು ಸುಮಾರು ಒಂದು ಘಂಟೆಯ ಕಾಲ. ನಾವು ಮುಂದಿಟ್ಟ ಕೆಲ ಸಂದೇಹಗಳು, ಅವರು ನೀಡಿದ ವಿವರಣೆ, ಮೈಯೆಲ್ಲ ಕಿವಿಯಾಗಿ ಸಂಪಾದಕವರ್ಗದವರು ಕುಳಿತುದು – ಇದೆಲ್ಲ ಒಂದು ಅಪೂರ್ವ ಅನುಭವ. ದೇವರು, ಅವತಾರ, ಅರಿಸ್ಟಾಟಲ್, ಪ್ಲೇಟೊ ಈ ಎಲ್ಲ ಲೇಖನಗಳು ಸಿದ್ಧವಾಗಿದ್ದುವು. ಬರವಣಿಗೆಯಲ್ಲಿ ನಾವು ಅನುಸರಿಸಿದ ವಿಧಾನ ಸರಿ ಎಂದು ತಿಳಿದಾಗ ಒಂದು ಬಗೆಯ ಸಂತೋಷ.

ಗಾಂಧಿ ಪ್ರತಿಷ್ಠಾನದವರು ಆಚಾರ್ಯರಿಗೆ ಕರೆ ನೀಡಿದ್ದು ಅತ್ಯಂತ ಸಹಜವಾದ ಘಟನೆ. ಗಾಂಧಿ ಕೃತಿಗಳನ್ನು ಕನ್ನಡಕ್ಕೆ ತರುವ ಕಾರ್ಯಕ್ಕೆ ಯಾಮುನಾಚಾರ್ಯರು ಸಂಪಾದಕರಾದರು.

ಅನಂತರ ಅಮೆರಿಕದ ಪ್ರವಾಸ ಒದಗಿಬಂತು. ಅವರ ಉಪನ್ಯಾಸ ಕೇಳಿದವರೆಲ್ಲ "ಮತ್ತೊಮ್ಮೆ ಬನ್ನಿ, ಇಲ್ಲಿಯೇ ಇದ್ದುಬಿಡಿ" ಎಂದು ಮುಂಬಾಲು ಬಿದ್ದವರೇ. ಆದರೆ ಅಸ್ವಾಸ್ಥ್ಯ ಅದಕ್ಕೆ ಅವಕಾಶವೀಯಲಿಲ್ಲ.

* * * * *

ಆಚಾರ್ಯರೊಡನೆ ಸಮೀಪ ಸಂಪರ್ಕ ಹೊಂದಿದ್ದ ಜಿ. ವಿ. ನಾರಾಯಣಸ್ವಾಮಿ ತಮ್ಮದೊಂದು ಲೇಖನದಲ್ಲಿ, ಆಚಾರ್ಯರಿಗೆ ಪ್ರಿಯವಾಗಿದ್ದ ಎರಡು ಶ್ಲೋಕಗಳನ್ನು ಉದ್ಧರಿಸಿದ್ದಾರೆ.

"ಈತ ನಮ್ಮವ, ಅವನು ನಮ್ಮವನಲ್ಲ ಎಂದು ಪರಿಗಣಿಸುವುದು ಅಲ್ಪಮತಿಗಳ ಚಟವಾಗಿದೆ. ಉದಾರ ಚರಿತರಾದವರಿಗೆ ಇಡಿಯ ಮಾನವಕುಲ ಒಂದು ಕುಟುಂಬ."

"ರುಚಿಯ ವೈಚಿತ್ರ್ಯ ಅಲ್ಲಗಳೆಯುವಂಥದಲ್ಲ. ರುಚಿಗೆ ತಕ್ಕಂತೆ ಪಂಥಗಳು, ದಾರಿಗಳು ಕಂಗೊಳಿಸುತ್ತಿವೆ. ಆದರೂ ಎಲ್ಲವೂ ಹೋಗಿ ಮುಟ್ಟುವ ಗಮ್ಯ, ಗುರಿ, ಸಮುದ್ರದಂತೆ ಒಂದೇ."

ಅವರೆಂಥ ಹಿರಿಯ ಜೀವವಾಗಿದ್ದರು ಎನ್ನುವುದಕ್ಕೆ ಮೇಲಿನ ಉಲ್ಲೇಖಗಳು ಸಾಕ್ಷಿಯಾಗಿವೆ.

* * * * *

'ಜ್ಞಾನಗಂಗೋತ್ರಿ'ಯ ಏಳು ಸಂಪುಟಗಳ ರೂಪುರೇಷೆಗಳ ಪರಿಪತ್ರ ಕಳುಹಿಸುತ್ತ ಪ್ರೊ. ಯಾಮುನಾಚಾರ್ಯರಿಗೆ ನಾವು ಬರೆದೆವು.

ಉತ್ತರ ಇವತ್ತು ಬರುತ್ತದೆ. ನಾಳೆ ಬರಬಹುದು – ಎಂದು ನಮ್ಮ ಎಣಿಕೆ.

ಒಂದು ವಾರ ಕಳೆಯಿತೆಂದು, ಬರಲಿಲ್ಲ ಎಂಬ ಕಸಿವಿಸಿ.

ನೆರವೇರಿಸಲಾಗದ ಕೆಲಸಕ್ಕೆ ಒಪ್ಪಿಕೊಳ್ಳುವುದು ಬೇಡ – ಎಂದುಕೊಂಡರೇನೊ.

೧೮–೧–೧೯೭೦

# ಡಾ. ಅ. ನ. ಕೃ.

ಮಾನಸಗಂಗೋತ್ರಿಯ ರಮಣೀಯ ಆವರಣ. ವಿಶ್ವವಿದ್ಯಾನಿಲಯದ ಐವತ್ತನೆಯ ಘಟಿಕೋತ್ಸವ.

ಬಯಲು ಮಂಟಪದಲ್ಲಿ ಕಿಕ್ಕಿರಿದ ಜನಸ್ತೋಮದ ಮುಂದೆ ಕನ್ನಡದ ಆರು ವ್ಯಕ್ತಿಗಳು ಐವರಿಗೆ ಗೌರವ ಪದವಿ ಪ್ರದಾನ.

ಎಸ್. ವಿ. ರಂಗಣ್ಣ.

ಅ. ನ. ಕೃ.

ಗುಬ್ಬಿ ವೀರಣ್ಣ.

ಕೆ. ಎಲ್. ಶ್ರೀಮಾಲಿ.

ಗೋಪಾಲ ಐಯಂಗಾರ್.

ಡಿ. ಎಲ್. ನರಸಿಂಹಾಚಾರ್.

ವಿಜ್ಞಾನಿ ಐಯಂಗಾರ್ಯರು ಪಡೆದಿರುವ ಪದವಿಗಳು ಹಲವಾರು. ಆದರೂ ಒಂದು ಕಾಲದಲ್ಲಿ ತನ್ನಲ್ಲೇ ವಿದ್ಯಾರ್ಥಿಯಾಗಿದ್ದ ವ್ಯಕ್ತಿಗೆ ವಿಶ್ವವಿದ್ಯಾನಿಲಯದ ವಿಶೇಷ ಗೌರವ. ರಂಗಣ್ಣನವರು, ಡಿ. ಎಲ್. ಎನ್.? ತಾವೇ ಅದೆಷ್ಟೋ 'ಡಾಕ್ಟರು'ಗಳನ್ನು ಅಣಿಗೊಳಿಸಿದ ಹಿರಿಯರು. ಶಿಕ್ಷಣಕ್ಷೇತ್ರದ ಗೌರವಾನ್ವಿತರು. ಶ್ರೀಮಾಲಿಯವರಂತೂ ಶ್ರೇಷ್ಠ ಕುಲಪತಿಯಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸೇವೆ ಸಲ್ಲಿಸಿದವರು. ನಾಟಕರತ್ನ ವೀರಣ್ಣನವರು ಸಮಾಜದ ಪ್ರಿಯರು. ಈಗ ಡಾಕ್ಟರ್ ಪಾತ್ರ. ಸೇವೆಗೆ ಸಂದ ಮನ್ನಣೆ. ಅನಕೃ ವಿಷಯದಲ್ಲಂತೂ ಪ್ರಶಸ್ತಿ ನೀಡಿಕೆ ಅತ್ಯಂತ ವೈಶಿಷ್ಟ್ಯಪೂರ್ಣ.

* * * * *

ಮೈಸೂರಿನಿಂದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕ ಡಾ. ಮಾನಪ್ಪ ನಾಯಕರು ಬಂದಿದ್ದರು. ಅವರೂ ನಾನೂ ವಿಶ್ವೇಶ್ವರಪುರಕ್ಕೆ ಹೊರಟೆವು.

ಬಾಗಿಲಿಗೆ ಬಂದವರು ಸನಾತನ ಕಲಾಕ್ಷೇತ್ರದ ಕೌಶಿಕ್. ಅವರ ಹಿಂದೆಯೇ ಕಾಣಿಸಿಕೊಂಡರು ಅ. ನ. ಕೃ.

"ಬನ್ನಿ, ಮಾನಪ್ಪ."

ಆತ್ಮೀಯ ಕಣ್ಣನೋಟದಿಂದ ನನಗೂ ಕರೆ.

ಔಪಚಾರಿಕ ಅಭಿನಂದನೆ ಬಳಿಕ [illegible].

ಲೆಕ್ಕಕ್ಕೆ ಸಿಗದಷ್ಟು – ಲಕ್ಷಗಟ್ಟಲೆ – ಪದಗಳು ಸೃಷ್ಟಿಯಾದ ಕೊಠಡಿ. ಅನಕೃ ಬಂಧುಗಳಾಗಿ ಅಲ್ಲಿಗೆ ಬಂದವರ ಸಂಖ್ಯೆ ಅದೆಷ್ಟು ಸಹಸ್ರವೊ!

ತಮ್ಮ ವಿದ್ಯಾರ್ಥಿದೆಸೆಯಲ್ಲಿ ಅನ್ನಪೂರ್ಣ ಗೃಹದ ಆತಿಥ್ಯದ ಸವಿ ಉಂಡವರು ನಾಯಕ್. ಆಗಿನ ನೆನಪುಗಳು ಅವರನ್ನು ಕಾಡಿರಬೇಕು. ನನಗೂ ಅಷ್ಟೆ. ಇಪ್ಪತ್ತೈದು ವರ್ಷಗಳಿಗೆ ಹಿಂದೆ ಅದೇ ಕೊಠಡಿಯಲ್ಲಿ ಅನಕೃ ಜತೆ ಕುಳಿತು ಎಷ್ಟೋ ವಿಷಯ ಮಾತನಾಡಿದ್ದೆ. ಮತ್ತೆ ಅನುಭವ ಆಗದೆ ಇದ್ದರೂ ಆ ನೆನಪು ನಿತ್ಯ ಹಸುರು.

ಆ ಬೆಳಗ್ಗೆ ದಿನಪತ್ರಿಕೆಗಳು ದಪ್ಪಕ್ಷರಗಳಲ್ಲಿ ಅಚ್ಚು ಹಾಕಿದ್ದುವು; ಅನಕೃ ಡಾಕ್ಟರಾಗಲಿರುವ ಸುದ್ದಿಯನ್ನು ಸಾರಿದ್ದುವು. ನಾಯಕರಿಗೆ ಕಳುಹಲೆಂದು ಶಿಷ್ಟಾಚಾರದ ತಂತಿಯನ್ನು ಬರೆದು ಇಟ್ಟಿದ್ದರು ಅನಕೃ. ಆ ಹಾಳೆಯನ್ನು ನಾಯಕರ ಕೈಗೆ ಕೊಟ್ಟರು.

ಅನಾರೋಗ್ಯ ಕಾಡಬಹುದು, ಯೌವನ ಅಣಕಿಸಬಹುದು. ಆದರೆ ಬರವಣಿಗೆ ನೇರ. ಅಕ್ಷರಗಳಲ್ಲಿ ಅದೇ ಕಸುವು, ಅದೇ ಮೋಡಿ.

* * * * *

ತಾನು ಜನ್ಮವೆತ್ತಿದ ನಾಡಿಗೆ ಒಬ್ಬ ಸಾಹಿತಿ, ಕಲಾವಿದ – ಶ್ರೀಸಾಮಾನ್ಯ ಕೂಡಾ – ಸಲ್ಲಿಸಬೇಕಾದ ಸೇವೆಯುಂಟು. ಋಣ ತೀರಿಕೆ ಎನ್ನಬಹುದು ಬೇಕಾದರೆ. ಅದನ್ನು ಎಷ್ಟು ಘನತರವಾಗಿ ಮಾಡಿದ್ದಾರೆ ಅನಕೃ! ಒಬ್ಬ ಕೃಷ್ಣರಾಯರು ಸಲ್ಲಿಸಿರುವುದು ನೂರು ಸಾಹಿತಿಗಳ, ನೂರು ಕಲಾವಿದರ, ನೂರು ಜನ ನಾಡುಕಟ್ಟುವವರ ಸಾಲವನ್ನು. ಒಂದು ಜೀವಮಾನದಲ್ಲೇ ಮಾಡಿರುವುದು ಹಲವು ಜನ್ಮಗಳ ಕೆಲಸ.

ಅ. ನ. ಕೃಷ್ಣರಾಯರ ಹಲವು ಸಾಧನೆಗಳಲ್ಲಿ ಅತ್ಯಂತ ಶ್ರೇಷ್ಠವಾದುದು ಯಾವುದು? ತನ್ನತನದ ಅರಿವನ್ನು ಕನ್ನಡ ಜನತೆಯಲ್ಲಿ ಮೂಡಿಸಿದ್ದು. ಸತ್ತವರಂತೆ ಬಿದ್ದಿದ್ದ ಕನ್ನಡ ಜನ ಅನಕೃ ವಾಣಿಯನ್ನು ಕೇಳಿ ಚೇತರಿಸಿಕೊಂಡರು. ಹಲವು ಆಡಳಿತಗಳಲ್ಲಿ ನಾಡು ಹಂಚಿಹೋಗಿದ್ದ ವೇಳೆಯಲ್ಲೂ, ಕನ್ನಡಿಗರೆಲ್ಲ ಒಂದೇ ನೆಲದ ಮಕ್ಕಳೆಂಬ ಭಾವನೆಯನ್ನು ರೂಪಿಸಿದರು. ವಾಚನಾಭಿರುಚಿಯನ್ನು ಕನ್ನಡ ಜನರಲ್ಲಿ ಉಂಟುಮಾಡಿದ ವೆಂಕಟಾಚಾರ್ಯ, ಗಳಗನಾಥರ ಸಾಲಿನಲ್ಲಿ ನಿಲ್ಲುವ ಹೆಸರು ಅನಕೃ. ಅವರು ಕಣ್ಣಾಡಿಸಿದ ಲೇಖನಿ, ಸಂದರ್ಶಿಸಿದ ಕುಂಚ ಹೊಸ ಸೃಷ್ಟಿಗೆ ಕಾರಣವಾದುವು. ಅವರ ಭುಜವನ್ನೇರಿ "ಇನ್ನೂ ದೂರ ಕಾಣಿಸುತ್ತಿದೆ" ಎಂದು ನುಡಿದವರು ಎಷ್ಟು ಜನ! ಸರಸ್ವತಿಯ ಅನುಗ್ರಹದ ಜೊತೆ ಅವರ ಒಂದು ಪ್ರೋತ್ಸಾಹದ ನುಡಿಗೆ.

ಸರ್ವೋದಯದ ತಂಗಾಳಿ ಹೂಬಿಸಿಲುಗಳಲ್ಲಿ ಗರಿಗೆದರಿದ ನಾಡಿನ ಹತ್ತು ಮೂಲೆಗಳ ನೂರು ಹಕ್ಕಿಗಳಿಗೆ 'ಅನುಭವ ಮಂಟಪ'ವಾಯಿತು ಅನಕೃ ಮನೆ.

* * * * *

ವಿಮರ್ಶಕರು ನುಡಿಯಬಹುದು:

"ಅನಕೃ ಬರೆದುದೆಲ್ಲ ಶ್ರೇಷ್ಠ ಸಾಹಿತ್ಯವಲ್ಲ."

ನಿಜವಾದ ಮಾತೇ. ಆದರೆ ಬರೆದುದೆಲ್ಲವೂ ಶ್ರೇಷ್ಠವಾಗಿರುವ ಸಾಹಿತಿ ಈ ಲೋಕದಲ್ಲಿ ಯಾರಿದ್ದಾರೆ? ಒಂದು ಕೃತಿ ಇರಬಹುದು, ಹತ್ತು ಇರಬಹುದು – ಶ್ರೇಷ್ಠ ಸಾಹಿತ್ಯವನ್ನು ಲೇಖಕನೊಬ್ಬ ರಚಿಸಿದ್ದಾನೆ ಎನ್ನುವುದೇ ಹೆಗ್ಗಳಿಕೆಯ ಅಂಶ.

ವಾಸ್ತವ ಸಂಗತಿಯೆಂದರೆ, ಅನಕೃ ಹಿರಿಮೆಗೆ ಕಾರಣ ಅವರ ಬರೆವಣಿಗೆ ಮಾತ್ರವಲ್ಲ. ಅದು, ಅವರ ಒಟ್ಟು ಕಾಯಕ; ಬೇರೆ ತೂಕಗಳನ್ನು ಖಚಿತಪಡಿಸಲಾರದಂಥ ಸಾಧನೆ.

ಅನಕೃರಿಂದ ಸಾಹಿತ್ಯ ಜನಪ್ರಿಯವಾಯಿತು. ಅವರ ಕಣ್ಗಾವಲಿನಲ್ಲಿ ಹಲವಾರು ಯುವಕ ಲೇಖಕರು ಉತ್ತಮ ಕತೆಗಾರರಾದರು, ಕಾದಂಬರಿಕಾರರಾದರು. ಕಲಾವಿದರು, ಚಿತ್ರಕಾರರು, ಸಂಗೀತಗಾರರು, ನಟರು ಬೆಳಕಿಗೆ ಬಂದರು. ಜಾತಿಯ ಕೋಟೆಗಳು ಪಾಳುಬಿದ್ದುವು. ಕುರುಡು ಸಂಪ್ರದಾಯಗಳು ಬಿಲ ಸೇರಿದುವು. ಏಕೀಕೃತ ನಾಡಿನ ಚಿತ್ರ ಸ್ಫುಟವಾಯಿತು.

* * * * *

ಆಶ್ಚರ್ಯದ ಸಂಗತಿಯೆಂದರೆ ನವಕರ್ನಾಟಕದ ಈ ಶಿಲ್ಪಿಪ್ರಮುಖನಿಗೆ ಯೋಗ್ಯ ಗೌರವ ಈ ವರೆಗೂ ಸಂದುದಿಲ್ಲ. 'ಸಮಾಜದ ಕಟ್ಟುಕಟ್ಟಳೆ'ಗಳನ್ನು ನಿಷ್ಠೆಯಿಂದ ಪಾಲಿಸದಿರುವುದು ಕೆಲವರ ದೃಷ್ಟಿಯಲ್ಲಿ 'ಅಪರಾಧ'ವಾಗಿ ಕಾಣಿಸಬಹುದು. ಆದರೆ, ಅದೇ ಹಿಮಾಲಯ ಎನ್ನುವುದು ಎಷ್ಟರ ಮಟ್ಟಿಗೆ ಸರಿ? ಈ ಮಡಿವಂತಿಕೆಯ ಅರ್ಥವಾದರೂ ಏನು? ಸಾಹಿತ್ಯ ಅಕಾಡೆಮಿಯ ಪಾರಿತೋಷಕವೂ ಅನಕೃಗೆ ಇಲ್ಲ ಎಂದರೆ, ನಾಡಿನ ಹೊರಗೂ ಅವರನ್ನು ಬಲ್ಲ ಅಸಂಖ್ಯ ಭಾರತೀಯರಿಗೆ ಏನು ಸಮಾಧಾನ ತಾನೆ ಹೇಳಬಹುದು?

ಈ ಹಿನ್ನೆಲೆಯಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಗುಣಗ್ರಾಹಿಯಾಯಿತೆನ್ನುವುದು ಸಂತೋಷದ ಸಂಗತಿ. ಇದಕ್ಕಾಗಿ, ಗುಣಶೋಧನೆಯೇ ಹಿರಿಯ ಗುಣವಾಗುಳ್ಳ, ದೇಜಗೌ ಕುಲಪತಿಯಾಗಿರುವುದನ್ನೆ ವಿಶ್ವವಿದ್ಯಾನಿಲಯವೂ ಕಾಯುತ್ತಿತ್ತೇನೊ.

* * * * *

ಕನ್ನಡ ಮನಮನೆಗಳಲ್ಲಿ ಅನಕೃ ಮೂರಕ್ಷರ ಚಿರಸ್ಥಾನಗಳಿಸಿ ಬಹಳ ಕಾಲವಾಯಿತು. ಇನ್ನು ನಾಲ್ಕಕ್ಷರಗಳಿಗೆ ಅಲ್ಲಿ ನೆಲೆ, ಡಾ. ಅನಕೃ.

೧–೨–೧೯೭೦



# ರಸ ಋಷಿ - ಡಿ. ವಿ. ಜಿ.

ಪತ್ರಿಕಾ ಸಂಪಾದಕರು, ಅದೆಲ್ಲಿಯೋ ಲೆಕ್ಕ ತಪ್ಪಿ, ತೊಂಬತ್ತು ವರ್ಷ ಎಂದು ಬರೆದರು. ಸನ್ಮಾನ ಸಮಿತಿಯವರು, ಹುಟ್ಟುಹಬ್ಬ ಎಂಬತ್ತನೆಯದು ಎಂದರು. ಬಿಡಿ, ಬಿಡಿ. ನೂರೇ ಎನ್ನಬಹುದು ಬೇಕಾದರೆ. ಒಂದು ಶತಮಾನದ ಅವಧಿಯಾದರೂ ಬೇಡವೆ ಅಷ್ಟೊಂದು ಸಾಧನೆಗಳಿಗೆ? ಅಲ್ಲವೆ, ಹೆಚ್ಚು ಹೇಳಿದೊಡನೆ ಕ್ಷಯಿಸುವ ಆಯುಸ್ಸೆ ಅದು? ಅದು ಗುಂಡು – ಕಲ್ಲು ಗುಂಡು. ನೂರಿಪ್ಪತ್ತು ವರ್ಷಗಳಾದರೂ ಬಾಳುವ ಹಿರಿಯ, ಡಿ. ವಿ. ಜಿ........

ಹತ್ತು ವರ್ಷಗಳಿಗೆ ಹಿಂದೆ, ಗುಂಡಪ್ಪನವರಿಗೆ ಗೌರವ ಡಾಕ್ಟರೇಟ್ ದೊರೆತ ಸಂದರ್ಭ. ಅಭಿನಂದನೆ ಸಲ್ಲಿಸಿ ಅವರಿಗೆ ಈ ಲೇಖಕ ಕಾಗದ ಬರೆದ.

ಅಂಥವು ನೂರಾರು ಬಂದಿರಬೇಕು. ಪ್ರತಿಯೊಬ್ಬರಿಗೂ ಮಾರೋಲೆ ಬರೆಯುವುದು ಕಷ್ಟಸಾಧ್ಯ.

ಆದರೂ ಡಿ. ವಿ. ಜಿ. ಯವರಿಂದ ಸುದೀರ್ಘ ಪತ್ರ ಬಂತು. ಅದು ಪದವಿ ಮೀಮಾಂಸೆ: ವಯಸ್ಸು ಎಪ್ಪತ್ತಾಯ್ತು. ಇಂಥ ಪದವಿ ಬಂದರೆಷ್ಟು? ಬರದಿದ್ದರೆಷ್ಟು? ಬಂಡೆಯ ಮೇಲೆ ನೀರು ಸುರಿದ ಹಾಗೆ ಅಲ್ಲವೆ?....

ತಲೆದೂಗುವಂತಿತ್ತು ಆ ವಾದಸರಣಿ.

* * * * *

ರಾಜ್ಯದ ಮುಖ್ಯಮಂತ್ರಿಯೇ ಮೊನ್ನೆ ಒಂದು ವಿಷಯವನ್ನು ಬಹಿರಂಗಪಡಿಸಿದರು. ಕೇಂದ್ರ ಸರಕಾರ ನೀಡಲು ಬಂದ 'ಪದ್ಮಭೂಷಣ' ತಮಗೆ ಬೇಡ, ಕ್ಷಮಿಸಿ, ಎಂದರಂತೆ ಡಿ. ವಿ. ಜಿ. ಒಂದು ಪದ್ಮಶ್ರೀಯಾದರೂ ದೊರೆತರೆ ಸಾಕು ಎಂದು ಸ್ವತಂತ್ರ ಭಾರತದ ಪ್ರತಿಷ್ಠಿತರು ಬಾಯಿಬಿಡುವ ಈ ಕಾಲದಲ್ಲಿ ಇಂಥ ವೈರಾಗ್ಯ? ಡಿ. ವಿ. ಜಿ.ಗೇ ಭೂಷಣ ಈ ನಿಲುವು.

ಆದರೆ ಸಾಹಿತ್ಯ ಅಕಾಡೆಮಿ, ಗೀತೆಯನ್ನು ಕುರಿತ ಅವರ ಕೃತಿಯನ್ನು ಹೆಸರಿಸಿ ಪಾರಿತೋಷಕ ನೀಡಿದಾಗ, 'ಒಲ್ಲೆ' ಎನ್ನಲಿಲ್ಲ ಅವರು. ಮನೆಬಾಗಿಲಿಗೇ ಅದನ್ನು ತರಿಸಿಕೊಂಡರು.

ಒತ್ತಟ್ಟಿಗೆ ಶಿಕ್ಷಣ – ಸಾಹಿತ್ಯ. ಇನ್ನೊತ್ತಟ್ಟಿಗೆ ಪ್ರಭುತ್ವ ಮರ್ಯಾದೆ. ಇವೆರಡನ್ನೂ ಒಂದೇ ಬಗೆಯಾಗಿ ನೋಡುವುದಿಲ್ಲ ಡಿ. ವಿ. ಜಿ. ಆ ಗೌರವಕ್ಕೆ 'ಸೈ'. ಇದಕ್ಕೆ 'ಊಹೂಂ.'

ರೂಢವಾಗದೆ, ಗ್ರೀಕ್ ತತ್ತ್ವಜ್ಞಾನಿಗಳ ನೆಲೆಯಲ್ಲಿ ಡಿವಿಜಿ ನಿಂತುದಕ್ಕೆ ಕಾರಣ, ಅವರು ರೂಢಿಸಿಕೊಂಡ ಸಂಸ್ಕಾರ, ಬೆಳೆಸಿದ ಸಾಹಿತ್ಯದ ಒಲವು, ಅವರ ಸೌಂದರ್ಯೋಪಾಸನೆ.

*　　*　　*　　*　　*

ಮಿತಭಾಷಿಯಲ್ಲ ಡಿ. ವಿ. ಜಿ. ದಾರಿ ಹೋಗುವವರನ್ನೂ ಕರೆದು ಮಾತನಾಡಿಸುವಂಥ ವಾಚಾಳಿ. ಇತರರ ಭಾವವಿಚಾರಗಳೊಡನೆ ಸಂಗಮವ ಸಾಧಿಸುವುದೇ ಅವರ ಬಯಕೆ.

ಜನಪ್ರಿಯತೆ? ಈ ಮಾದಕ ದ್ರವ್ಯವನ್ನು ಗಳಿಸಲು ಯತ್ನಿಸಿದ ಜೀವ ಅದಲ್ಲ. ಇತರರಿಗೆ ಅಪಥ್ಯ ಎನ್ನುವ ಕಾರಣದಿಂದ ತಮ್ಮ ಅಭಿಪ್ರಾಯಗಳ ಮಂಡನೆಗೆ ಹಿಂಜರಿದವರಲ್ಲ. ಯೌವನದಲ್ಲೂ ಅಷ್ಟೆ; ಇಳಿವಯಸ್ಸಿನಲ್ಲೂ ಅಷ್ಟೆ. 'ಕರ್ನಾಟಕ' ಎಂಬ ದ್ವೈಸಾಪ್ತಾಹಿಕವನ್ನು ನಡೆಸಿದ ವ್ಯಕ್ತಿ, ಮುಂದೆ ಕರ್ನಾಟಕ ಪ್ರಾಂತ ರಚನೆಯನ್ನು ವಿರೋಧಿಸಿದ್ದ. ಅಭಿವ್ಯಕ್ತಿಗೆ ವಿಚಾರಗಳ ಪ್ರತಿಪಾದನೆಗೆ ಕನ್ನಡ ಅತ್ಯಂತ ಸಮರ್ಥ ಭಾಷೆ ಎಂದು ಸ್ವತಃ ತೋರಿಸಿಕೊಟ್ಟೂ, ಕನ್ನಡದ ಕಸುವಿನ ಬಗೆಗೆ ಆತಂಕ ತೋರಿದ್ದು– ವಿಪರ್ಯಾಸವೆನಿಸಬಹುದು. ಆದರೆ ಡಿ. ವಿ. ಜಿ. ಪಾಲಿಗೆ ಅದು ಅವರು ಕಂಡ ಸತ್ಯ.

ಈ ಗೋಖಲೆ ಭಕ್ತನ ಶಿಷ್ಯರ ಸಂಖ್ಯೆ ದೊಡ್ಡದು. ಪ್ರಾಧ್ಯಾಪಕರು, ಪತ್ರಿಕಾಕರ್ತರು, ರಾಜಕಾರಣಿಗಳು, ಬರೆಹಗಾರರು, ಸಂಗೀತಜ್ಞರು – ಬೆರಗುಗೊಳಿಸುವಂಥ ವೈವಿಧ್ಯ ಇದು.

ಸಮರ್ಪಿತ ಬದುಕು. ೯೦,೦೦೦ ರೂಪಾಯಿಗಳನ್ನು ಸಂಗ್ರಹಿಸಿಕೊಟ್ಟರೂ ಅದು ಸೇರಲು ಅವರು ಕಟ್ಟಿದ ಗೋಖಲೆ ಸಾರ್ವಜನಿಕ ಸಂಸ್ಥೆಗೆ. (ಇನ್ನು ಗೋಖಲೆ–ಡಿವಿಜಿ ಸಾರ್ವಜನಿಕ ಸಂಸ್ಥೆ ಎನ್ನುವುದೇ ಮೇಲು.)

*　　*　　*　　*　　*

ಮಿತ್ರರೊಬ್ಬರು ಮೊನ್ನೆ ತಮ್ಮ ಹೊಸ ಪುಸ್ತಕವನ್ನು ಡಿ. ವಿ. ಜಿ.ಗೆ ಕೊಟ್ಟರು. ಕೃತಿಯ ಆರಂಭದಲ್ಲಿ ವಸ್ತುವಿನ ಬಗೆಗೆ ಹಲವರು ವ್ಯಕ್ತಪಡಿಸಿದ ಅಭಿಪ್ರಾಯಗಳ ಮಂಥನವಿತ್ತು–

ಡಿವಿಜಿ ಅಂದರು: “ಇದು ಸರಿಯಷ್ಟೆ. ಅವರು ಹೇಳಿದ್ದಾಯ್ತು. ನೀವೇನು ಹೇಳ್ತೀರಿ?”

ನೀವೇನು ಹೇಳುತ್ತೀರಿ? – ಇದು ಡಿವಿಜಿ ಸೂತ್ರ ಪ್ರಶ್ನೆ.

೮–೩–೧೯೭೦

# ಅಸಾಧಾರಣ ಚೇತನ - ರಸೆಲ್

೧೯೭೦ ನೆಯ ಉತ್ತರಾರ್ಧ. (ಅಕ್ಟೋಬರ್ ಇಲ್ಲವೆ ನವೆಂಬರ್.) ಟೋಕಿಯೊ ನಗರ. ಅಲ್ಲಿನ ನಾಗರಿಕರಿಗೆ ಸಡಗರವೋ ಸಡಗರ. ವಿಶ್ವದ ಹತ್ತು ಮೂಲೆಗಳಿಂದ ಧರ್ಮಗುರುಗಳೂ ತತ್ತ್ವವೇತ್ತರೂ ಆಗಮಿಸುತ್ತಿದ್ದಾರೆ. ಜಾಗತಿಕ ಸರ್ವಧರ್ಮ ಸಮ್ಮೇಳನ ನಡೆಯಲು ಎಲ್ಲ ಸಿದ್ಧತೆಗಳೂ ಆಗಿವೆ.

ಪಶ್ಚಿಮ ದಿಕ್ಕಿನಿಂದ ಬರುವ ಒಂದು ವಿಮಾನ. ಪ್ರತಿಷ್ಠಿತರ ಇರುವೆ ಸಾಲು ಇಳಿಯುತ್ತದೆ. ಕೊನೆಯಲ್ಲಿ ಕಾಣಿಸಿಕೊಳ್ಳಬೇಕಾದ ಒಬ್ಬ ವಿಭೂತಿ ಪುರುಷ ಮಾತ್ರ ಅಲ್ಲಿಲ್ಲ.

ಆತ ತೊಂಭತ್ತರ ತರುಣ ಬರ್ಟ್ರೆಂಡ್ ರಸೆಲ್. ಸಮಾರಂಭದ ಸೂತ್ರಧಾರ. ಅಂಥ ಸಮ್ಮೇಳನ ನಡೆಯಬೇಕೆಂದು ಕರೆ ನೀಡಿದ ವ್ಯಕ್ತಿ.

* * * * *

ಲೋಕದ ಅಸಂಖ್ಯ ಪತ್ರಿಕೆಗಳಿಗೆ ಕೈಕೊಟ್ಟಿದ್ದರು ರಸೆಲ್. ತೀರಿಕೊಂಡರು ಗ್ರಾಮೀಣ ವಸತಿಯಲ್ಲಿ, ನಡುವಿರುಳು ದಾಟಿದ ಮೇಲೆ. ಮುಂಜಾವದವರೆಗೂ ಸುದ್ದಿಯನ್ನು ಮುಚ್ಚಿಟ್ಟರು. ಬದುಕಿನುದ್ದಕ್ಕೂ ಹೋರಾಡಿದ ವ್ಯಕ್ತಿ ಈ ಸಲವೂ ಸೋಲಿನ ರೆಪ್ಪೆ ತೆರೆಯಬಹುದು ಎಂದುಕೊಂಡಿದ್ದರೇನೊ. ಬೆಳಗ್ಗೆ ಪತ್ರಿಕೆಗಳಲ್ಲಿ ಪ್ರಸ್ತಾಪವಿಲ್ಲ. ಆದರೆ ರೇಡಿಯೊ, ತಾನೂ ಸುದ್ದಿಯ ವಾಹಕ – ಎಂದಿತು.

“ವಿಶ್ವವಿಖ್ಯಾತ ತತ್ತ್ವಜ್ಞಾನಿ ಬರ್ಟ್ರೆಂಡ್ ರಸೆಲ್‌ರು ಈ ಬೆಳಗ್ಗೆ ನಿಧನರಾದರು”.

ವಿಷಾದಿಸುತ್ತೇವೆ – ಎಂದು ಆ ಅಶರೀರವಾಣಿ ನುಡಿಯುವಂತಿಲ್ಲ. ರಾಜತಾಂತ್ರಿಕ ಶಿಷ್ಟಾಚಾರದ ಅಡ್ಡಿ ಅದಕ್ಕೆ. ರಾಷ್ಟ್ರದ ಅಧ್ಯಕ್ಷನೊ, ಪ್ರಧಾನಿಯೊ, ಮತ್ತಾವುದೇ ಆಧಾರಸ್ತಂಭವೋ ಕಳಚಿದರೆ ಮಾತ್ರ ವಿಷಾದ.

ಪಾಪ! ರಸೆಲರೇನು ಬ್ರಿಟಿಷ್ ಸಾಮ್ರಾಜ್ಯದ ಮುಕುಟವಾಗಿದ್ದರೆ? ಬ್ರಿಟಿಷ್‌ದ್ವೀಪದ ಪ್ರಧಾನಿಯಾಗಿದ್ದರೆ?

ಜಗದ್ವಂದ್ಯ ಎಂದ ಮಾತ್ರಕ್ಕೆ ಸುದ್ದಿ ಹೇಳುವಾತ ಶೋಕಿಸಬೇಕೆ?

ಅವರ ಭಾವನೆ ಏನೇ ಇರಲಿ. ನಮಗೊ?

ಜಗತ್ತೇ ಸೂತಕದ ಮನೆ. ಕುಟುಂಬದ ಹಿರಿಯನೊಬ್ಬನನ್ನು ಕಳೆದುಕೊಂಡ ಅನುಭವ.

ಅಂಥವೇ ಇನ್ನೊಂದು ಅಸಾಧಾರಣ ಚೇತನ ಈ ಲೋಕವನ್ನು [illegible] ನಿಲ್ಲುವ ಕೊರಗು ಇದಲ್ಲ.

* * * * *

ಒಂದು ಚಿತ್ರ :

ಇಡಿಯ ಸಂಪ್ರದಾಯವಾದಿ ಅಮೆರಿಕ (ಆ ದೇಶವೂ ಮೂವತ್ತು ವರ್ಷಗಳಿಗೆ ಹಿಂದೆ ಸಂಪ್ರದಾಯವಾದಿಯಾಗಿತ್ತು ಎಂದರೆ ಆಶ್ಚರ್ಯವೆನಿಸೀತು.) ಅರಚುತ್ತಿದೆ:

“ ಈ ಅನೀತಿಯ ಪ್ರವಾದಿಯನ್ನು ಹೊರಹಾಕಿ.”

ಪ್ರಾಧ್ಯಾಪಕವೃತ್ತಿ ಕೈಗೊಂಡು ಆ ದೇಶಕ್ಕೆ ಹೋದ ಆಂಗ್ಲ ಬರ್ಟ್ರಂಡ್ ರಸೆಲ್ ಕಿರಿಚಾಟಗಳಿಗೆ ಮಣಿಯದೆ, ‘ಬಂದ ದಾರಿಗೆ ಸುಂಕವಿಲ್ಲ’ ಎಂದರು.

ಅದಕ್ಕೂ ಇಪ್ಪತ್ತು ವರ್ಷಗಳಿಗೆ ಹಿಂದೆ. ಇಂಗ್ಲೆಂಡಿನ ಸೆರೆಮನೆ. ಅಲ್ಲೊಬ್ಬ ನಡುವಯಸ್ಸಿಗೆ ಕಾಲಿಡುತ್ತಿರುವ ಕೈದಿ. ಗ್ರಂಥರಚನೆಯಲ್ಲಿ ನಿರತನಾಗಿದ್ದಾನೆ. ಸೆರೆಮನೆಯ ಶಿಕ್ಷೆ ಯಾವ ಅಪರಾಧಕ್ಕೆ? ‘ಯುದ್ಧ ಅನ್ಯಾಯ’ ಎಂದು ಸಾರಿದುದಕ್ಕೆ!

ಇತ್ತೀಚೆಗೆ. ಲಂಡನಿನ ರಸ್ತೆ. ಅಲ್ಲಿ ಸತ್ಯಾಗ್ರಹಿಯಾಗಿದ್ದಾನೆ ಒಬ್ಬ ಮುದುಕ. ಅದು ನೂರು ಜನರ ದಳ. ಅವರೆಲ್ಲ ಲೋಕದ ಮನಸ್ಸಾಕ್ಷಿಯ ಧರ್ಮದರ್ಶಿಗಳು. ಪರಿಚಿತವಾದ ಆರೋಪ: ‘ವಾಹನ ಸಂಚಾರಕ್ಕೆ ಅಡ್ಡಿ ಮಾಡುತ್ತಿದ್ದಾರೆ.’ ಜಗತ್ತಿನ ಮನೆಗೆ ಬೆಂಕಿಯಿಟ್ಟು ಛಾವಣಿಯ ಬೊಂಬುಗಳು ಚಿಟಿಲ್ ಚಿಟಿಲೆನ್ನುತ್ತಿದ್ದರೂ ವಾಹನಗಳು ಸಂಚರಿಸಲೇಬೇಕು. (ದಾರಿ ಬಿಡಿ ! ದಾರಿ ಬಿಡಿ !) ಕುಳಿತಿದ್ದ ವೃದ್ಧನನ್ನು ಪೋಲೀಸರು ಮೆಲ್ಲನೆ ಹಿಡಿದು ನಿಲ್ಲಿಸಿ ಕಾರಾಗೃಹಕ್ಕೆ ಕರೆದೊಯ್ಯುತ್ತಾರೆ. ಐವತ್ತು ವರ್ಷಗಳಿಗೂ ಮೇಲಾಗಿತ್ತು ಆ ಸೆರೆಮನೆ ಅವನನ್ನು ಕಂಡು. ಅದು ನವವಧುವಿನಂತೆ ನಾಚಿತು, ಆಲಿಂಗನಕ್ಕೆಂದು ಬಂದ ಪ್ರಿಯತಮ ರಸೆಲರನ್ನು ನೋಡಿ.

ಇನ್ನೊಂದು ಚಿತ್ರ:

ಮೂವತ್ತರ ವಯಸ್ಸಿನಲ್ಲಿ ಗಣಿತಶಾಸ್ತ್ರಜ್ಞ, ಐವತ್ತರ ವೇಳೆಯಲ್ಲಿ ತತ್ತ್ವವೇತ್ತ, ಎಂಬತ್ತರ ವಯಸ್ಸಿನಲ್ಲಿ ಪ್ರವಾದಿ, ಸಂತ.

ಯಾವ ಹೆಸರಿನಿಂದ ಬೇಕಾದರೂ ಅವರನ್ನು ಕರೆಯಬಹುದು: ಸಮಾಜ ಶಾಸ್ತ್ರಜ್ಞ, ಇತಿಹಾಸಕಾರ, ಶಾಂತಿವಾದಿ.

ಅವರು ಬರೆದುದನ್ನು ಲೋಕ ಓದಿತು.

* * * * *

ವಾಸ್ತವವಾಗಿ ಮೇಲಿನ ಎರಡು ಚಿತ್ರಗಳೂ ಒಂದೇ ಆದುದು, ಆಧುನಿಕ ಜಗತ್ತಿನ ವಿಸ್ಮಯಗಳಲ್ಲೊಂದು. ರಸೆಲರಿಗೆ ನುಡಿಗೆ – ನಡತೆ ಬರಹ ಒಂದೇ.

ಅದನ್ನು ಒಪ್ಪದವರ ಸಂಖ್ಯೆ ಸಣ್ಣದಾಗಿಲ್ಲ. ಅಮೆರಿಕದ ಒಂದು ವಿಶ್ವ ಕೋಶದ ಪ್ರಕಾರ ರಸೆಲ್ ಎಂಬ ಸಾಧಾರಣ ವ್ಯಕ್ತಿ ಗತಕಾಲದ [illegible]. [illegible]

# ಮುದ್ದಣಂಗೇತಕೆ ಬೇರೆ ಸ್ಮಾರಕಂ?

ಕೃತಿರಚನೆಯಾಗಿ ಎಪ್ಪತ್ತೈದು ವರ್ಷಗಳಾದ ಮೇಲೂ ಅದನ್ನು ಕುರಿತು ಜನ ಮಾತನಾಡುತ್ತಾರೆ. 'ಕೋಗಿಲೆ'ಯೆಂದೋ 'ಮುಂಗೋಳಿ' ಎಂದೋ ಆ ಕವಿಯನ್ನು ಕರೆಯುತ್ತಾರೆ. ಭಾಷೆಯ, ಸಾಹಿತ್ಯದ ವಿದ್ಯಾರ್ಥಿಗಳು ಆ ಕೃತಿಯನ್ನು ಅಭ್ಯಸಿಸುತ್ತಾರೆ. ವರುಷಕ್ಕೊಮ್ಮೆ ಆ ಕವಿಯ ಹೆಸರಿನಲ್ಲಿ ಹೊಸ ಸಮಾರಂಭ ಏರ್ಪಡಿಸುತ್ತಾರೆ.

ಕಾಲದ ಪರೀಕ್ಷೆಯಲ್ಲಿ ಆತ ಗೆದ್ದ ಎನ್ನುವುದಕ್ಕೆ ಬೇರೆ ನಿದರ್ಶನ ಬೇಡ.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಇದೀಗ ಪ್ರಕಟಿಸಿರುವ 'ಮುದ್ದಣ' ಗ್ರಂಥವನ್ನೋದಿದಾಗ, ಸಹೃದಯರಿಂದ ಹೊರಡಬಹುದಾದ ಉದ್ಗಾರ ಇದು:

" ಧನ್ಯ-ಮುದ್ದಣ!"

ಆ ಕವಿಯ ಅಕಾಲ ಮರಣ ಕನ್ನಡ ಸರಸ್ವತಿಗೆ ನುಂಗಲಾರದ ತುತ್ತು ಎನ್ನೋಣ. ಕಾಲಾಂತರವಾದ ಮೇಲೆ ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘ ಮುದ್ದಣ ಪ್ರಶಸ್ತಿ ಗ್ರಂಥವನ್ನು ಪ್ರಕಟಿಸಿ, ಕನ್ನಡ ಸಾಹಿತ್ಯ ವಿಮರ್ಶೆಯನ್ನು ತೊಟ್ಟಿಲಲ್ಲಿಟ್ಟು ತೂಗಿತು.

ಅದಾಗಿ ನಾಲ್ವತ್ತೈದು ವರ್ಷಗಳಾಗುವ ಹೊತ್ತಿಗೆ ಪ್ರಕಟವಾಗಿದೆ 'ಮುದ್ದಣ' ಗ್ರಂಥ. ನಡುವೆಯನ್ನೂ ಬರಿದಾಗಿ ಬಿಟ್ಟಿಲ್ಲ. ಇದೂ ಗುಣಗ್ರಾಹಿಯಾದ ರಸದೃಷ್ಟಿಯೇ.

* * * * *

ದೇಜಗೌ ಪರಂಪರೆಯನ್ನು ಮುಂದುವರಿಸುತ್ತಿರುವ ಹಾ. ಮಾ. ನಾಯಕರ ಆಡಳಿತದಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸುತ್ತಿರುವ ಮೊದಲ ಪುಸ್ತಕ 'ಮುದ್ದಣ' ಎನ್ನುವುದೊಂದು ವಿಶೇಷವೇ.

ಇಂಥ ಸಂಕಲನದಲ್ಲಿ ಕಾಣುವುದು, ಯಾವುದೂ ವ್ಯರ್ಥವಾಗಬಾರದು ಎನ್ನುವ ತವಕ. ಈ ಕೆಲ ವರ್ಷಗಳಿಂದ ಮೈಸೂರಿನಲ್ಲಿ ರೂಪುಗೊಂಡಿರುವ ವಿಧಾನ ಇದು. ಪತ್ರಿಕೆಗಳವರಲಿ, ಗೋಷ್ಠಿಯವರಲಿ, ಮಂಡನೆ-ಜಿಜ್ಞಾಸೆಗಳಲ್ಲಿ ಬಂದುದೆ ಅಷ್ಟಾಗಬೇಕು. ಇಂದಿನವರಿಗೂ ನಾಳೆಯವರಿಗೂ ಅದು ಉಪಯುಕ್ತವಾಗಬೇಕು. ಗಾಳಿಗೆ ನಾಲ್ಕು ಮಾತುಗಳನ್ನು ತೂರಿ, ದಾರಿ ಹಾಕಿಸಿಕೊಂಡು ಹೋದಾಗುವ ಕಾಲ ಕಳೆಯಿತು. ಆಡಿದುದು ದಾಖಲೆಯಾಗುತ್ತದೆ ಎನ್ನುವುದನ್ನು ಗಮನದಲ್ಲಿಟ್ಟೇ ಬಾಯಿ ತೆರೆಯಬೇಕು. ಮಾತಿಗೆ ತೂಕಬರುವುದು ಈ ಪ್ರವೃತ್ತಿಯಿಂದಲೇ.

ಡಾ. ರಂಗಣ್ಣನವರಲ್ಲಿ ಹಾಗೆಂದು ಬಿನ್ನವಿಸಿಕೊಳ್ಳೋಣ. ಒಪ್ಪಿದರೆ ಸಂತೋಷವೇ !

*　　　*　　　*　　　*　　　*

ಮನೋರಮೆಯ ಮೆಚ್ಚುಗೆಯಿಂದಲೇ ತೃಪ್ತಿಪಡೆದ ಮುದ್ದಣ – ಸಪ್ತಾಕ್ಷರಿ ಮಂತ್ರ ಜಪಿಸಿದ ಬಡ ಕಬ್ಬಿಗ.

ಆದರೂ ಸಾಮಾಜಿಕರಿಗೆ ಏನೋ ಬೇಗುದಿ. ಸಂಧಿಕಾಲದ ಆ ಸಾಹಿತಿಗೆ ದೊರೆ ಮನೆಯ ರನ್ನದ ಕಡಗವೂ ಸಿಗಲಿಲ್ಲ; ಪ್ರಜಾಪ್ರಭುತ್ವ ಪಾರಿತೋಷಕಗಳೂ ಇರಲಿಲ್ಲ. ಈಗಲಾದರೂ ಒಂದು ಸ್ಮಾರಕ ರಚಿಸಬಹುದಲ್ಲ ?

ಮುದ್ದಣ ಹುಟ್ಟಿದ ನಂದಳಿಕೆಗೆ ಒಳ್ಳೆಯ ದಾರಿ ? ವಾಚನಾಲಯ – ಗ್ರಂಥ ಭಾಂಡಾರ ? ಯಾರಾದರೂ ಮುಖಂಡರನ್ನು ಸಂಪಾದಿಸಿ ಧಾರಾಳವಾಗಿ ಇಷ್ಟು ಕೆಲಸ ಮಾಡಬಹುದು.

ಹರಿದಾಸಭಟ್ಟರ ವಿಚಾರಶ್ರೇಣಿ ಬೇರೆ. "....ಚರ್ಚೆಗಳು, ವಿಮರ್ಶನಗೋಷ್ಠಿ, ಉಪನ್ಯಾಸಗಳು, ಮುದ್ದಣನ ಗ್ರಂಥಗಳ ಪಠನ – ಇವೇ ಕವಿ ಮೆಚ್ಚುವ ಸ್ಮಾರಕಗಳು ಎಂದು ನನ್ನ ಭಾವನೆ....ಹುಟ್ಟಿದ ನೂರು ವರ್ಷಗಳ ತರುವಾಯ, ತೀರಿಕೊಂಡ ಎರಡು ತಲೆಮಾರಿನ ಅನಂತರವೂ ಕನ್ನಡದ ಜನರು ಒಂದೆಡೆ ಸೇರಿ ಕವಿಯನ್ನು, ಕವಿಯ ಕೃತಿಗಳನ್ನು ನೆನೆಸಿಕೊಳ್ಳುವುದಾದರೆ ಅದೇ ಉತ್ತಮ ಸ್ಮಾರಕವೆಂದು ನಾವು ತಿಳಿಯ ಬಾರದೇಕೆ ?"

ಪಲ್ಲವಿ ನುಡಿಯಬಹುದು :

" ಮುದ್ದಣಂಗೇತಕೆ ಬೇರೆ ಸ್ಮಾರಕಂ ?"

೨೨–೨–೧೯೭೦

ಇದರಲ್ಲಿರುವ ಶುಭಾಶಂಸೆಯ ಸಂದೇಶಗಳನ್ನೂ ಲೇಖನಗಳನ್ನೂ ಓದುವುದೊಂದು ಸಾಹಿತ್ಯಕ ಅನುಭವ. ಇಲ್ಲಿ ಲಕ್ಷ್ಯವಾಗುವುದು ಮುನ್ನುಡಿಕರ್ತರ ಒಡನಾಟ.

"ಜನಕ್ಕೆ ಸಾಮಾನ್ಯವಾಗಿ ಅರ್ಥವಾಗುವುದು ದರ್ಪ, ಅಹಂಕಾರ; ಕೇಡು ಮಾಡುವ ಶಕ್ತಿಯಿದ್ದಷ್ಟು ಆ ವ್ಯಕ್ತಿಯ ಬಗೆಗಿನ ಆದರ – ಗೌರವ ಹೆಚ್ಚು. ಮಾರಿ ಮಸಣಿಯ ರೌದ್ರಶಕ್ತಿಯ ಪೂಜೆಯಲ್ಲಿ 'ದೇವತ್ವ' ಕಾಣುತ್ತಿರುವ ಜನಸಮುದಾಯಗಳ ಮಧ್ಯದಲ್ಲಿ ಗ್ರಂಥಕಾರರ ಜೀವನತತ್ವದೊಳಗಿನ ಸೃಷ್ಟಿಶಕ್ತಿಯ ಅರ್ಥ ಯಾರಿಗೆ ತಾನೆ ಆಗಬೇಕು?"

– ಇದು ಶಂ. ಬಾ. ಜೋಶಿಯವರ ಚಾಟಿ ನುಡಿ. ಪೂಜೆಗೊಳ್ಳುತ್ತಿರುವವರನ್ನು ಕೆಳಕ್ಕೆ ಎಳೆದು ಕೆನ್ನೆಗೆ ಬಿಗಿದ ಏಟು. ಇದು ಇಲ್ಲಿಗಲ್ಲ, ಅಲ್ಲಿಗಲ್ಲ – ಇಡಿಯ ಜಗತ್ತಿಗೂ ಸದಾ ಕಾಲಕ್ಕೂ ಸಂಬಂಧಿಸಿದ ಕಟು ಸತ್ಯ.

ಈ ಸತ್ಯದ ಬೆಳಕಿನಲ್ಲಿ ಕಂಡಾಗಲೇ ಸಣ್ಣಕ್ಕಪ್ಪನವರು, ಎತ್ತರದ ವ್ಯಕ್ತಿತ್ವವನ್ನೂ ಮೀರಿ ಎಂಟೆಸೆಯ ಪರವನ್ನೂ ದಾಟಿ, ಭವ್ಯಾಕಾರ ತಳೆಯುತ್ತಾರೆ.

*    *    *    *    *

ಅಂಥ ಎರಡು ಕವನ ಸಂಕಲನಗಳನ್ನು ಹೊತ್ತು ತಂದಿವೆ. 'ಪ್ರಕೃತಿ-ಪ್ರೀತಿ', 'ಪ್ರೀತಿ – ಶೋಧನೆ.' ಮುಗಿಲಿನ ಎದೆಯನ್ನು ಗ್ರಂಥಕಾರರು ಅತ್ತಿತ್ತ ಕಂಡ ನೋಟಗಳೇ ಭಾವುಕ ಜೀವದ ಸ್ಪಂದನ....

....ಪುಟಗಳನ್ನು ತಿರುವಿದಾಗ 'ಅಜ್ಞಾತ ಹಕ್ಕಿಯ ಶಿಳ್ಳು' ಕರ್ಣಭೇರಿಯನ್ನು ಇರಿಯಿತು.

ಹೊಡೆ ಶಿಳ್ಳನು ಹೊಡೆ ಹೊಡೆ ಶಿಳ್ಳು
ಬಡವರು ಬಲ್ಲಿದರಾಗುವರೆಂಬ
ಬಡವರು ಕಡು ದೊರೆಯಾಗುವರೆಂಬ
ಬಡವರು ಪೊಡವಿಯ ಗುಡಿಗಳು ಎಂಬ
ಬಡವರೆ ಭಾಗ್ಯವಿಧಾತರು ಎಂಬ
ಪಡೆ ಸಿದ್ಧಿಯ ಪಡೆ ಪಡೆ ಸಿದ್ಧಿಯ ಪಡೆ
ಅದುವೆ ಪೊಡವಿಯ ಹುಟ್ಟು
ಅದುವೇ ಪೊಡವಿಯ ಮಟ್ಟು
ಅದುವೇ ಪೊಡವಿಯ ಗುಟ್ಟು!!

೧೯೫೫ ರಲ್ಲಿ ಬರೆದುದು. ಆಗ ಸಣ್ಣಕ್ಕಪ್ಪನವರಿಗೆ ಎಪ್ಪತ್ತು ವರ್ಷ ವಯಸ್ಸು. ಆಗಿನ ಝೇಂಕಾರ ಇದು. ಕೊತ ಕೊತ ಕುದಿಯುವ ಪವಿತ್ರ ಸಂಕಟ.

ಶಿರ ಬಾಗಿಸಬೇಕು ಈ ಕರ್ಮಯೋಗಿಗೆ ಅನಿಸುತ್ತದೆ.

*    *    *    *    *

ಹಳೆಯ ಕಾಲದ್ದು ಸರಕಾರದ ಅಧಿಕಾರಿಯಾಗಿದ್ದಾಗಲೂ ತಮ್ಮ ಉಡುಪನ್ನು ಸ್ವಾತಂತ್ರ್ಯಯೋಧರಾಗುವಂತೆ ಸಣ್ಣಪ್ಪನವರು ಮಾರ್ಪಡಿಸುತ್ತಿದ್ದರಂತೆ ದೂರದಿಂದ ಬರೆದ ಪತ್ರಗಳಲ್ಲಿ. 'ಪ್ರಾಣ ಹೋದರೂ ಚಿಂತೆಯಿಲ್ಲ, ಅಮೃತ ಕಾರ್ಯ ಉಳಿವುದು ಕೀರ್ತಿ' ಎನ್ನುತ್ತಿದ್ದರಂತೆ.

ಹೀಗೆ ಗೋಪ್ಯವಾಗಿ ರಾಷ್ಟ್ರದ ಸೇವೆ ಸಲ್ಲಿಸಿದವರು ಹಲವರು. ಆದರೆ ಸ್ವತಃ ತಾವೂ ರಣರಂಗಕ್ಕೆ ಧುಮುಕಿದವರು ಕೆಲವೇ ಮಂದಿ. ಗಾಂವಕಾರರು ಉದ್ಯೋಗದಿಂದ ನಿವೃತ್ತರಾದೊಡನೆಯೇ, ಮಾಡದೇ ಉಳಿದಿದ್ದ ಒಂದು ಕೆಲಸಕ್ಕಾಗಿ ಮುಂದಾದರು. ಸ್ವಾತಂತ್ರ್ಯ ಸೇನೆಯ ಸಮವಸ್ತ್ರ ಧರಿಸಿದರು.

* * * * *

ರವೀಂದ್ರರು ಕಿರಿಯರಾಗಿದ್ದಾಗ ಕಾರವಾರದಲ್ಲಿದ್ದರು. ಪಡುವಣದ ಕಡಲ ತೆರೆಗಳೂ ವನಸಿರಿಯೂ ಎಳೆಯ ಕವಿಗೆ ಸ್ಫೂರ್ತಿ ಹುಟ್ಟಲು ಕಾರಣವಾದುವೆಂದು ಧಾರಾಳವಾಗಿ ಹೇಳಬಹುದು.

ಅನಂತರದ ಪೀಳಿಗೆಯ ಸಣ್ಣಪ್ಪ ಬೆಳೆದುದೂ ಅದೇ ಬಗೆಯ ಸೃಷ್ಟಿಯ ಪರಿಸರದಲ್ಲಿ. ಠಾಕೂರರು ಗಾಂವಕಾರರಿಗೆ ಪ್ರಿಯರಾದ ಕವಿಯಾದುದು ಆಶ್ಚರ್ಯದ ಸಂಗತಿಯಲ್ಲ. 'ಗೀತಾಂಜಲಿ'ಯ ಕನ್ನಡ ರೂಪವನ್ನು ನಾಡ ಜನಕ್ಕೆ ಅವರು ನೀಡಿದುದು ಅತ್ಯಂತ ಸಹಜವಾದದ್ದು.

ಸಮರ್ಪಿತ ಭಾವದ ಈ ಕವಿ ಇನ್ನೊಂದು ಕೃತಿಯ ಪುನಸ್ಸೃಷ್ಟಿಯನ್ನು ಅದ್ಭುತ ರೀತಿಯಲ್ಲಿ ಸಾಧಿಸಿದರೆನ್ನುವುದು ಕನ್ನಡ ನುಡಿಗೆ ಹೆಗ್ಗಳಿಕೆಯ ಮಾತು.

" ಸಣ್ಣಪ್ಪನೆಂದು ಕರೆಯುವುದೊಂದು ತಪ್ಪು
ದೊಡ್ಡಪ್ಪನೆಂದು ಕರೆದರೆ ಮಾತ್ರ ಒಪ್ಪು
ನಿನ್ನ ದೊಡ್ಡಸ್ತನಕೆ ತಲೆಬಾಗಿ ನಾವು
ನಮಿಸುವೆವು ನಿನ್ನ ಕೈಯೊಳಗಿಟ್ಟು ಹೂವು "

— ಇದು ದಿನಕರ ದೇಸಾಯರ ಕಾಣ್ಕೆ 'ಉತ್ತರ ಕನ್ನಡದ ಕುಲಪ್ರದೀಪ'ನಿಗೆ. ಅವರೊಂದಿಗೆ ಎಲ್ಲ ಕನ್ನಡಿಗರೂ 'ನಮನ' ಎನ್ನಬಹುದು.

೧೫-೩-೧೯೭೦

# ಪುರಸ್ಕೃತ ತಿಪ್ಪೇರುದ್ರಸ್ವಾಮಿ

"ಕರ್ನಾಟಕ ಸಂಸ್ಕೃತಿಯ ಭವ್ಯ ಪರಂಪರೆಯನ್ನು ಪೋಷಿಸುತ್ತಾ ಅದರ ಅಜೇಯ ಅದಮ್ಯ ದಿವ್ಯಶಕ್ತಿ ಸಂವರ್ಧನೆಗೆ ಕಾರಣರಾಗಿ ಜೀವನದ ನೂರಾರು ರಂಗಗಳಲ್ಲಿ ದುಡಿದ ದಾರ್ಶನಿಕರು, ಕವಿಗಳು, ಸಾಧಕರು, ಸಂತರು, ಚಿತ್ರಶಿಲ್ಪಗಾಯನನರ್ತನಾದಿ ಕಲಾವಿದರು, ನಾಡನ್ನು ಕಟ್ಟಿದ ವೀರರು, ಯೋಧರು, ದಾನಿಗಳು, ಧರ್ಮ ಸಮನ್ವಯ ಧೀರರು, ಹಿರಿಯರು, ಕಿರಿಯರು, ಪ್ರಖ್ಯಾತರು, ಅಖ್ಯಾತರು - ಈ ಎಲ್ಲ ಪುಣ್ಯ ಚೇತನಗಳ ಸಂಸ್ಮರಣೆಗಾಗಿ ಈ ಕೃತಿ ಅರ್ಪಿತ."

ಎಂಥ ದರ್ಶನ! ಕೃತಿಯ ಭವ್ಯತೆಗೆ ಇಣುಕು ಕಿಂಡಿ ಅರ್ಪಣೆಯ ಈ ನುಡಿ. ಎಂಟು ವರ್ಷಗಳ ಕಾಲ ಕೃತಿ ರಚಿಸುತ್ತ ಅವರಿಗೆ ಆಗಿರುವ ಅಪೂರ್ವ ಅನುಭವದ– ಪರಿಚಯದ – ಸಾರಸಂಗ್ರಹ ಅದು.

ಕೃತಿಗಷ್ಟೇ ಅಲ್ಲ, ಕರ್ತೃವಿನ ವ್ಯಕ್ತಿತ್ವಕ್ಕೂ ಆ ಅರ್ಪಣೆ ದರ್ಪಣ.

* * * * *

ಫೆಬ್ರವರಿ ೨೭ ರ ಶುಕ್ರವಾರ. ಕನ್ನಡ ವಿಶ್ವಕೋಶದ ಸಭೆ ಮುಗಿಸಿ, ಅಧ್ಯಯನ ಸಂಸ್ಥೆಯ ನಿರ್ದೇಶಕ ನಾಯಕರ ಕಚೇರಿಯಲ್ಲಿ ಕುಳಿತಿದ್ದೆ. ಸಾಹಿತ್ಯ ಸಲ್ಲಾಪ.

"ಇವತ್ತು ಅಕಾಡಮಿ ಪ್ರಶಸ್ತಿ ಜಾಹೀರು ಮಾಡುತ್ತಾರೆ," ಎಂದರು ಡಾ. ನಾಯಕರು.

ಮತಗಟ್ಟೆಯಲ್ಲಿ ನನ್ನ ಪುಸ್ತಕದ ಪೆಟ್ಟಿಗೆಯಂತೂ ಇಲ್ಲ! ನಿರ್ಲಿಪ್ತನಾಗಿ, "ಹೌದೆ?" ಎಂದೆ.

ಆದರೂ ಕುತೂಹಲ ಮೊಳೆಯಿತು. ಯಾವ ಒಳ್ಳೆಯ ಪುಸ್ತಕಕ್ಕಾಗಿ ಈ ಸಲ ಪುರಸ್ಕಾರ?

ಡಾ. ತಿಪ್ಪೇರುದ್ರಸ್ವಾಮಿ ಎಂದಿನಂತೆ ಹಸನ್ಮುಖಿಯಾಗಿ ಒಳಗೆ ಬಂದರು. ಜುಬ್ಬ ಪಾಯಜಾಮುಗಳ ಈ ತೆಳ್ಳಗಿನ ವ್ಯಕ್ತಿಗೆ ನಗೆಯೊಂದು ಬಂಡವಾಳ. ಹದಿನೇಳು ವರ್ಷ ಆಗುತ್ತಾ ಬಂತು ಅವರ ಪಚಯವಾಗಿ. ನನಗೆ ಗೊತ್ತಿರುವುದು ನಗುನಗುತ್ತಿರುವ ತಿಪ್ಪೇರುದ್ರಸ್ವಾಮಿಯವರೊಬ್ಬರೇ.

ಜ್ಞಾನಗಂಗೋತ್ರಿಯ ಮಾದರಿ ಪುಟಗಳಿದ್ದುವು. ತೋರಿಸಿದೆ.

ಪ್ರತಿಕ್ರಿಯೆ ಮೆಚ್ಚುಗೆಯ ಮಾತು. ಅದು ಅವರ ಗುಣ. ಒಳ್ಳೆಯ ಮಾತು ಆಡುವುದರಲ್ಲಿ ಅವರು ಕೊಡುಗೈ ಸ್ವಾಮಿ.

ಅವರ ಮುಂದೂ ಮಾಸಪ್ಪನವರು ಅಕಾಡಮಿ ಪ್ರಶಸ್ತಿಯ ಮಾತು ಎತ್ತಿದರು. ಒಂದು ಕ್ಷಣ ತಿಪ್ಪೇರುದ್ರಸ್ವಾಮಿಯವರ ಮುಗುಳು ನಗೆ ಮಾಯವಾಯಿತೇನೋ. ಆತಂಕ? "ಪ್ರಸಾರಾಂಗಕ್ಕೆ ಹೋಗಿ ಬರ್ತೇನೆ," ಎಂದು ಎದ್ದರು.

ನನಗೆ 'ಕರ್ಣಾಟಕ ಸಂಸ್ಕೃತಿ ಸಮೀಕ್ಷೆ'ಯ ನೆನಪಾಯಿತು.

ಸಂಜೆ ಬೆಂಗಳೂರಿಗೆ ಬಂದೆ. ರಾತ್ರಿ ಹಿಂದಿಯಲ್ಲಿ ಸುದ್ದಿ ಬಂತು. ಸಂತೋಷಪಟ್ಟೆ. ಅದಕ್ಕಿಂತ ಹೆಚ್ಚು ಚೆನ್ನಾಗಿ ಅರ್ಥವಾಗುವ ಇಂಗ್ಲಿಷಿನಲ್ಲಿ ಕೇಳೋಣವೆಂದು ಕುಳಿತೆ.

ಇಪ್ಪತ್ತು ವರ್ಷಗಳಿಂದ ವಾರ್ತೆ ಓದುವ ಮಹಾನುಭಾವ ಸಾಹಿತ್ಯ ಅಕಾಡಮಿ ಪಾರಿತೋಷಕದ ಮೊತ್ತ ೫೦೦೦ ರೂಪಾಯಿ ಎನ್ನಬೇಕೆ? ಐವತ್ತು ಎನ್ನಬಹುದಾಗಿತ್ತಲ್ಲ? ಇವರ ದೃಷ್ಟಿಯಲ್ಲಿ ಸಾಹಿತ್ಯ ಕೃತಿಗೆ ಬೆಲೆ ಇಲ್ಲ....

ಹೆಸರನ್ನು ಆದಷ್ಟು ಸರಿಯಾಗಿಯೇ ಉಚ್ಚರಿಸಿತು ಆ ಧ್ವನಿ. ಡಾಕ್ಟರ್ ತಿಪ್ಪೇರುದ್ರಸ್ವಾಮಿ.

ಬೆಳಗ್ಗೆ ಕಂಡುದು, ಆಡಿದುದು, ನೆನಪಾಯಿತು; ಸಂತೋಷವಾಯಿತು.

* * * * *

ಮಾಸ್ಕೋದಿಂದ ಕನ್ನಡ ಕಲಿತ ಅಲ್ಲಿನ ಪ್ರಜೆಯೊಬ್ಬರು ಕೆಲ ತಿಂಗಳ ಹಿಂದೆ ಕಾಗದ ಬರೆದು, ಕನ್ನಡ ಜನಪದ, ಸಂಸ್ಕೃತಿ, ಸಾಹಿತ್ಯಗಳ ಅಧ್ಯಯನಕ್ಕೆ ನೆರವಾಗುವ ಎರಡು ಮೂರು ಪುಸ್ತಕಗಳನ್ನು ಕಳುಹಿಸುತ್ತೀರಾ ಎಂದು ಕೇಳಿದ್ದರು. ನನಗೆ ಮೊದಲು ಹೊಳೆದ ಪುಸ್ತಕ 'ಕರ್ಣಾಟಕ ಸಂಸ್ಕೃತಿ ಸಮೀಕ್ಷೆ.' ನನ್ನದೇ ಹಣದಿಂದ ಕೊಳ್ಳಬೇಕು–ರೂಬಲ್ ಅಲ್ಲ,–ರೂಪಾಯಿ. ಕಣ್ಣು ಮುಚ್ಚಿ, ಸಮೀಕ್ಷೆಯನ್ನೂ ಇನ್ನೆರಡನ್ನೂ ಆರಿಸಿ, 'ಬಿಲ್ ಮಾಡಿ' ಎಂದೆ ಅಂಗಡಿಯವರಿಗೆ.

ಇದು ತಿಳಿದು ಪ್ರಕಾಶಕ ಡಿ. ವಿ. ಕೆ. ಮೂರ್ತಿ ನನಗೊಂದು ಪ್ರತಿ ಕೊಟ್ಟರು. ಉಚಿತವಾಗಿ ಬೇಡ – ಎಂದರೂ ಕೇಳಲಿಲ್ಲ.

ಒಂದು ಕೃತಿಗೆ ಪಾರಿತೋಷಕ ಬಂದೊಡನೆ ಹುಟ್ಟಿಕೊಳ್ಳುತ್ತದೆ, "ನಿಮ್ಮಲ್ಲಿ ಆ ಪುಸ್ತಕ ಇದೆಯೆ?" ಎಂದು ಕೇಳುವವರ ತಂಡ. ಆದರೆ ನನ್ನ ಪ್ರತಿಯು ಪೈಯೋ ಅದಕ್ಕೂ ಮೊದಲೇ ಮಾಸಿದೆ, ಹಲವರು ಕೈಯಾಡಿಸಿ. ಆದರೆ ಇಂಥ ಕೊಳೆ ಕೊಳೆಯಲ್ಲವಲ್ಲ. ಪುಸ್ತಕದ ಕಪಾಟಿಗೆ ಈಗ ತುಸು ಜಂಬ.

* * * * *

ತಿಪ್ಪೇರುದ್ರಸ್ವಾಮಿಯವರದು ಪ್ರೇಮ ವಿವಾಹ. (ಅವರ ಶ್ರೀಮತಿಯವರು ದಯವಿಟ್ಟು ಕ್ಷಮಿಸಬೇಕು.) ಅವರನ್ನು ಹೆತ್ತವರು, ಮಗ ಔಷಧಿಕೊಡುವ ಡಾಕ್ಟರಾಗಬೇಕು ಎಂದಿದ್ದರು. ಆದರೆ ಪ್ರಾಪ್ತವಯಸ್ಕನ ಒಲವು ಸಾಹಿತ್ಯದತ್ತ. ಆ ಪೀಳಿಗೆಯವರಿಗೆಲ್ಲ ಕುವೆಂಪು ಆಯಸ್ಕಾಂತ. ತಿಪ್ಪೇರುದ್ರಸ್ವಾಮಿ ತಾನೊಲಿದ ಕನ್ಯೆಯ ಕೈ ಹಿಡಿದರು. ಬಹಿಷ್ಕೃತರಾಗಲಿಲ್ಲ. ಪುರಸ್ಕೃತರಾದರು.

'ಶರಣರ ಅನುಭಾವ ಸಾಹಿತ್ಯ' ಮಹಾಪ್ರಬಂಧಕ್ಕೆ ಅವರಿಗೆ ಡಾಕ್ಟರೇಟ್ ದೊರೆಯಿತು. ಅಧ್ಯಾಪಕ ವೃತ್ತಿ, ಬರೆಯುವ ಪ್ರವೃತ್ತಿ. ಮೈಸೂರು ವಿಶ್ವವಿದ್ಯಾನಿಲಯದ ಮಾನಸ ಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಅವರೀಗ ರೀಡರ್. ಪ್ರಾಧ್ಯಾಪಕ ಸ್ಥಾನ ಮುಂದಿನ ಹಂತ.

ವಿದ್ವಾಂಸರು. ಆದರೂ ಸೃಜನ ಸಾಹಿತ್ಯ ಇಷ್ಟ. ಬಸವೇಶ್ವರರನ್ನು, ಅವರ ಸಮಕಾಲೀನರನ್ನು ಕುರಿತು ಕಾದಂಬರಿ ಮಾಲೆ ರಚಿಸಲು ತಿಪ್ಪೇರುದ್ರಸ್ವಾಮಿ ಬಯಸಿದರು. ಪೂರ್ವಸಿದ್ಧತೆಯಾಗಿ ಆ ಕಾಲದ ಇತಿಹಾಸದ ಅಧ್ಯಯನ ಮಾಡುತ್ತಿದ್ದಂತೆ ನಾಡಿನ ಸಂಸ್ಕೃತಿ ಸಮೀಕ್ಷೆಯ ಹೊಳಹು ಅವರಿಗೆ ಮೂಡಿತು. ಪರಿಣಾಮ – ಉದ್ಗ್ರಂಥವಾದ 'ಕರ್ಣಾಟಕ ಸಂಸ್ಕೃತಿ ಸಮೀಕ್ಷೆ.'

* * * * *

ತಮ್ಮ ಕೃತಿಯನ್ನು ಕುರಿತು ಅವರು ಹೇಳಿರುವ ಮಾತನ್ನು ಇಲ್ಲಿ ಉಲ್ಲೇಖಿಸಬೇಕು.

"ಕರ್ಣಾಟಕ ಸಂಸ್ಕೃತಿ, ಕಾಲದಿಂದ ಮತ್ತು ಸತ್ವದಿಂದ....ಸನಾತನ; ಆದರೆ ಅದರ ಚೇತನ ನಿತ್ಯನೂತನ. ಇಂದಿಗೂ ಹೊಸ ಹೊಸ ಬಿಳಲುಗಳು ಬೇರೂರಿ ಬೆಳೆಯುತ್ತಿವೆ; ಟಿಸಿಲುಗಳು ಕುಡಿಯೊಡೆದು ಹೂವುಗಳು ಅರಳುತ್ತಿವೆ. ನಿರಂತರವಾಗಿ ಬೆಳೆದು ಬಂದ ಪರಂಪರೆಯಿಂದ ಅದು ಪೋಷಿತವಾಗುತ್ತಿದೆ. ಇದುವರೆಗಿನ ಸಮೀಕ್ಷೆ ಈ ಪರಂಪರೆಯನ್ನು ಚಿತ್ರಿಸುವ ಒಂದು ಸಣ್ಣ ಪ್ರಯತ್ನ ಮಾತ್ರ."

ಇದು ಸುಸಂಸ್ಕೃತರ ಭಾಷೆ. ಪ್ರಯತ್ನ ಸಣ್ಣದಲ್ಲ, ದೊಡ್ಡದು. ಅವರಿಗೆ ದೊರೆತಿರುವುದು ಅಪಾರ ಯಶಸ್ಸು.

೨೨–೨–೧೯೭೦

# ಇನ್ನಿಲ್ಲದ ಸುಬೋಧ ತಿಲಕ

ಮೊನ್ನೆ ಮೊನ್ನೆ. ಕೃಷ್ಣರಾವ್ ಉದ್ಯಾನದಿಂದ ಲಾಲ್‌ಬಾಗಿನ ಕಡೆಗೆ ಬರುತ್ತಿದ್ದರು. ನಿಧಾನದ ನಡಿಗೆ ಎನ್ನುವಂತಿಲ್ಲ. ವಿರಾಮವಾಗಿ ಗಾಳಿಗೆ ಮೈಯೊಡ್ಡಿ ಎಂದೂ ನಡೆದ ವ್ಯಕ್ತಿಯಲ್ಲ.

ಅವರನ್ನು ನಾನು ಬಲ್ಲೆ. ನನ್ನನ್ನೂ ಅವರು ಬಲ್ಲರು, ಕೇಳಿಕೆಯಿಂದ. ಮುಖ ಪರಿಚಯ ಸಾಲದು.

ಗುರುತು ಹಿಡಿಯುವ ಸಂಭವವಿಲ್ಲ. ನನ್ನ ಪಾಡಿಗೆ ನಾನು ಹೋಗಬಹುದು. ಅವರ ಪಾಡಿಗೆ ಅವರು.

ಆದರೆ ಕೈಗಳ ಸದುಪಯೋಗವಾಗುವ ಅವಕಾಶವನ್ನು ಬಿಟ್ಟುಕೊಡಲೆ ?

“ ನಮಸ್ಕಾರ,” ಎಂದೆ, ಕೈಜೋಡಿಸಿ, ಮೈಯನ್ನು ತುಸು ಬಾಗಿಸಿ.

ಅವರೂ ಮುಗುಳುನಗೆ ಸೂಸಿ “ ನಮಸ್ಕಾರ ” ಎಂದರು. ಕಣ್ಣುಗಳಲ್ಲಿ ಮಾತ್ರ ‘ ಯಾರೊ ತಿಳಿಯಲಿಲ್ಲ ’ ಎನ್ನುವ ಭಾವವಿತ್ತು.

ಅವರು ಮುಂದೆ ಹೋದರು, ನಾನು ಎದುರು ದಿಕ್ಕಿಗೆ ಸಾಗಿದೆ.

ಐವತ್ತರ ಹುಮ್ಮಸಿನಿಂದ ಓಡಾಡುತ್ತಿದ್ದ ಎಂಬತ್ತರ ಜೀವ. ತುಂಬು ಬಾಳು. ನೋಡಿದಾಗ, ಗೌರವ ಸಲ್ಲಿಸಬೇಕು ಎಂಬ ಬಯಕೆಯಾಗುವುದು ಸಹಜ.

ಇನ್ನೊಮ್ಮೆ ಅದೇ ದಾರಿಯಲ್ಲಿ ನಾನು ಹೋಗಬಹುದು. ಆದರೆ ಅವರು ಸಿಗಲಾರರು.

ಕನ್ನಡ ನಾಡಿನಲ್ಲಿ ಶುಚಿಗೆ ರುಚಿಗೆ ಸಂಸ್ಕಾರಕ್ಕೆ ದೃಷ್ಟಾಂತವಾಗಿದ್ದು, ವ್ಯಕ್ತಿ ಶಕ್ತಿಯಾಗಿ ಮೆರೆದ ಸುಬೋಧ ರಾಮರಾಯರು ಇನ್ನಿಲ್ಲ.

* * * * *

ಸಾಹಿತ್ಯ ರಚನೆ. ರಾಷ್ಟ್ರನಿರ್ಮಾಣದ ಹಂಬಲದಿಂದ ಪ್ರೇರಿತವಾದ ಬರೆವಣಿಗೆ. ದಾಸ ಸಾಹಿತ್ಯದ ಸಂಪಾದನೆ, ಪರಿಷ್ಕರಣ. ತಮ್ಮ ಹೆಸರಿಗೂ ಮನೆತನಕ್ಕೂ ಅಂಟುವಂತೆ ಘನೀಭವಿಸಿದ ಸುಬೋಧ ಮಾಸಿಕದ ಸಂಪಾದಕತ್ವ. ಶ್ರದ್ಧೆ, ಅಚ್ಚುಕಟ್ಟುತನ, ನಿಷ್ಠೆ.

ಇತರ ಎಲ್ಲರಿಗಿಂತಲೂ ಎಷ್ಟೊಂದು ಭಿನ್ನ ಆ ವ್ಯಕ್ತಿತ್ವ! ಇನ್ನೊಬ್ಬರಿರಲಿಲ್ಲ ಅಂಥವರು. ಮುಂದೆ ಇರುವರೋ ಇಲ್ಲವೋ ಹೇಳುವುದು ಕಷ್ಟ.

ಐವತ್ತು ವರ್ಷಗಳ ಅವಧಿಯಲ್ಲಿ ೧೫೦ ಪುಸ್ತಕಗಳನ್ನು ಸುಬೋಧ ರಾಮ

ರಾಯರು ಬರೆದರು. ವೃದ್ಧಾಪ್ಯದಲ್ಲೂ ಅವರ ವೇಳೆ ಬರವಣಿಗೆಗೆ ಮೀಸಲಾಗಿತ್ತು. ತತ್ತ್ವಜ್ಞಾನಿಗಳು, ವೀರರು, ಧರ್ಮಗುರುಗಳು, ಸಾಹಿತಿಗಳು ಇವರೆಲ್ಲರ ಬಗೆಗೂ ರಾಮರಾಯರ ಪುಸ್ತಕಗಳು ಹೊರಬಿದ್ದುವು. ಎರಡು ಮೂರು ಶತಮಾನಗಳ ಕಾಲ ರಾಷ್ಟ್ರೀಯ ಮನೋವೃತ್ತಿಯ ಪ್ರತಿಯೊಬ್ಬ ಕನ್ನಡಿಗನೂ ಆ ಕೃತಿಗಳನ್ನು ಓದುತ್ತಿದ್ದ; ಓದಿ ಪ್ರಯೋಜನ ಪಡೆಯುತ್ತಿದ್ದ.

ಅಸಾಧಾರಣವಾಗಿದ್ದುವು ಅವರ ಗ್ರಹಣ ಶಕ್ತಿ, ವಿವೇಚನಾ ಸಾಮರ್ಥ್ಯ.

ಅವರ ಪುಸ್ತಿಕೆಗಳು ಶ್ರೀಸಾಮಾನ್ಯರ ಕೈಗೆಟಕಿ, ಕರ್ತೃ ಸುಬೋಧ ರಾಮ ರಾಯರು ಮನೆಮಾತಾದುದರಲ್ಲಿ ಏನಾಶ್ಚರ್ಯ ?

*　　*　　*　　*　　*

ತಮ್ಮ ವಾಙ್ಮಯ ಸೃಷ್ಟಿಯನ್ನು ಕುರಿತು ಸುಬೋಧ ರಾಮರಾಯರೇ ಹೇಳಿ ಕೊಂಡಿರುವ ನುಡಿ ಸ್ಮರಣಯೋಗ್ಯವಾಗಿದೆ.

“ ಜನಾಂಗ ವಿದ್ಯಾಭ್ಯಾಸಕ್ಕೆ ನನ್ನ ಯೋಗ್ಯತಾನುಸಾರ ಅಳಿಲು ಭಕ್ತಿ – ಮಳಲ ಸೇವೆಯನ್ನು ಗ್ರಂಥಮಾಲೆಯ ಮೂಲಕ ಮಾಡಲು ಸಾಧ್ಯವೇ ಎಂದು ಯೋಚಿಸಿದೆನು. ಅಜೀರ್ಣರಾದವರಿಗೆ ಮೃಷ್ಟಾನ್ನವನ್ನು ಕೊಡುವ ಬೀಗರ ಔತಣದ ಕಾರ್ಯವು ಒಂದೆಡೆ ನಡೆಯುತ್ತಿರಲು ಹಸಿದು ಕಂಗಾಲಾದ ಬಡವನಿಗೆ ಒಂದು ತುತ್ತು ಹಿಟ್ಟು ಕೊಡುವ ಈ ಕಾರ್ಯ ನಡೆಯತಕ್ಕದು ಅವಶ್ಯಕವೆಂದೂ ಅದಕ್ಕೆ ಸ್ವಲ್ಪ ಬೆಲೆಯ ಈ ಪುಸ್ತಕಗಳ ಪ್ರಚಾರವನ್ನು ಹೆಚ್ಚಿಸುವುದು ಮುಖ್ಯ ಕರ್ತವ್ಯವೆಂದೂ ನಿರ್ಧರಿಸ ಲಾಯಿತು. ಹೀಗೆ ಗ್ರಂಥಮಾಲೆಯು ಸಾರ್ವಜನಿಕ ಸಾಹಿತ್ಯವಾಗಿ ಜನಾಂಗ ವಿದ್ಯಾಭ್ಯಾಸಕ್ಕೆ (Education of masses) ಸಹಾಯಕವಾಗಬೇಕೆಂಬುದೇ ನನ್ನ ಆಂತರ್ಯ ಆಕಾಂಕ್ಷೆಯಾಗಿದ್ದಿತು.”

ಇದು ಯಾವುದೋ ಬೇರೆ ಯುಗದ ಮಾತು ಎನ್ನಿಸುವಂತಿದೆ, ಈ ಹಣಗುಣ ಸಮಾಜದಲ್ಲಿ. ಇಂದಿನ ವಾತಾವರಣಕ್ಕಿಂತ ತೀರಾ ಭಿನ್ನ ಅಂದಿನದು. ಸುಬೋಧ ರಾಮರಾಯರಂಥ ವ್ಯಕ್ತಿ ರೂಪುಗೊಳ್ಳುವುದು ಆ ಕಾಲಾವಧಿಯಲ್ಲಿ ಮಾತ್ರ ಸಾಧ್ಯ ವಿತ್ತು.

*　　*　　*　　*　　*

ನಾಲ್ವತ್ತು ವರ್ಷಗಳ ಹಿಂದೆ ಒಂದು ದಿನ. ರಾಷ್ಟ್ರೀಯ ಹೋರಾಟದಿಂದ ದೇಶವೆಲ್ಲ ತಪ್ತವಾಗಿದ್ದ ಕಾಲ. ಮಿಲಿಟರಿ ಟ್ರಕ್ಕೊಂದು ರಾಮರಾಯರ ಮನೆಯ ಹತ್ತಿರ ಬಂದು ನಿಂತಿತು. ಸೈನಿಕರು ಕೆಳಕ್ಕೆ ಧುಮುಕಿದರು.

ಅಕ್ಕಪಕ್ಕದ ಎಲ್ಲ ಕಿವಿಗಳಲ್ಲೂ ಮೊರೆದುದು ಅಪಾಯದ ಘಂಟೆಯೇ.

ಸಿಕ್ಖ ಅಧಿಕಾರಿ ಕೆಳಗಿಳಿದು ಕೇಳಿದ :

“ ರಾಮರಾಯರು ಅನ್ನೋರ ಮನೆ ಯಾವುದು ? ”

ನಾಲ್ವತ್ತರ ಹರೆಯದ ರಾಮರಾಯರು ಹೊರಬಂದರು.

"ನಾನೇ. ಏನಾಗಬೇಕು?"

ಅಧಿಕಾರಿ ಜೇಬಿನಿಂದ ಒಂದು ಪುಸ್ತಿಕೆ ಹೊರತೆಗೆದ.

"ಇದನ್ನು ನೀವೇ ಬರೆದಿರೋ?"

"ಹೌದು, ನಾನೇ."

ಪುಸ್ತಿಕೆಯ ಹೆಸರು 'ಗುರು ಗೋವಿಂದ ಸಿಂಗ್'. ಮತೀಯ ಭಾವನೆಗಳಿಗೆ ಏನಾದರೂ ಅಪಚಾರವಾಗಿದ್ದರೆ?

ಇಲ್ಲ, ಅಪ್ಯಗಲವಾಯಿತು ಅಧಿಕಾರಿಯ ಮುಖ.

ತನ್ನ ಬಲವಾದ ಅಂಗೈಯಿಂದ ಆತ ಬರೆಹಗಾರನನ್ನು ಅದುಮಿ ಕುಲುಕಿದ.

"ಬಹಳ ಸಂತೋಷವಾಯ್ತು ನಿಮ್ಮನ್ನು ಭೇಟಿಯಾಗಿ! ತುಂಬ ಚೆನ್ನಾಗಿ ಬರೆದಿದ್ದೀರಿ"....

ಇದರ ಫಲಶ್ರುತಿ, ಮಿಲಿಟರಿಯವರ ಅತಿಥಿಯಾಗಿ ಅವರ ಶಿಬಿರಕ್ಕೆ ಭೇಟಿ. ಅಲ್ಲಿ ಯೋಧ ಸಭಾಸದರೆದುರು ಗುರು ಗೋವಿಂದನನ್ನು ಕುರಿತು ಭಾಷಣ.

ಸುಬೋಧ ರಾಮರಾಯರ ದೃಷ್ಟಿಯಲ್ಲಿ ಗುರು ಗೋವಿಂದ, ಮಹಮದ್ ಪೈಗಂಬರ್, ಯೇಸು ಕ್ರಿಸ್ತ, ಬುದ್ಧ, ಮಹಾವೀರ, ಶ್ರೀಕೃಷ್ಣ ಇವರೆಲ್ಲ ಅದ್ವಿತೀಯರೇ.

* * * * *

ಕನ್ನಡದ ಸುಬೋಧ ತಿಲಕವಾಗಿದ್ದರು ರಾಮರಾಯರು. ಇನ್ನು ಕಾಣಿಸುವುದು ಬರಿಯ ಹಣೆ.

೨೯–೩–೧೯೭೦

# ‘ ಒಂದೂರಿನಲ್ಲಿ ಕಾರಂತರು ಅಂತ..........’

ಸಾವಿರಾರು ಕಿರಿಯರು ಹಿರಿಯರು; ಸಾಸಿವೆ ಬಿದ್ದರೆ ಸಪ್ಪಳವಾಗುವ ಮೌನ, ಕತ್ತಲು; ಎಲ್ಲರೂ ನೋಡುತ್ತಿರುವುದು ರಂಗಮಂಟಪವನ್ನು. ಅಲ್ಲಿ ‘ಮಾಯಾ ಲಾಂದ್ರದ ಮಾಂತ್ರಿಕ’ ಅದ್ಭುತ ಲೋಕವನ್ನು ಸೃಷ್ಟಿಸುತ್ತಿದ್ದಾನೆ. ರಂಗಭೂಮಿಯ ಮೇಲೆಲ್ಲ ಹಿಮ, ಹಿಮ, ಹಿಮ. (ಭೂಮಿಯ ಬದುಕಿನಲ್ಲಿ ಹಿಮಾಚ್ಛಾದಿತ ಅವಧಿ? ಅಥವಾ ಧ್ರುವ ಪ್ರದೇಶ? ಎಸ್ಕಿಮೋ ಜನಜೀವನ ದೃಶ್ಯ?) ಎತ್ತ ನೋಡಿದರೂ ಬಿಳುಪು.

ನೋಡುತ್ತಿದ್ದ ಮಕ್ಕಳ ಪಾಲಿಗೆ ಅದೊಂದು ಕನಸು.

ಆಗ ಇದ್ದಕ್ಕಿದ್ದಂತೆ:

“ ಬೆಂಕಿ! ಬೆಂಕಿ!”

“ ಅಯ್ಯೋ! ಬೆಂಕಿ!”

“ ಏಳಿ! ಬೆಂಕಿ ಬಿತ್ತು! ಹೊರಡಿ!”

ಯಾರು ಯಾರದೋ ಕೂಗು. ಓಡಿದ್ದೇ ಓಡಿದ್ದು.

ಹಿಮವೆಂಬ ಭ್ರಮೆ ಹುಟ್ಟಿಸಿದ ಹತ್ತಿಗೆ, ಉರಿಯುತ್ತಿದ್ದ ಬೀಡಿಯದೋ ಸಿಗರೇಟಿನದೋ ಸ್ಪರ್ಶವಾಗಿತ್ತು.

ನಡೆಯುತ್ತಿದ್ದುದು ಮಕ್ಕಳ ಸಮ್ಮೇಳನದ ಮನೋರಂಜನೆಯ ಕಾರ್ಯಕ್ರಮ....

....ಬೆಳಗ್ಗೆ ಎದ್ದಾಗ, ಅಲ್ಲಿ ರಾತ್ರಿ ಏನಾಯಿತೋ ಎಂಬ ಯೋಚನೆ. ಬೇಗನೆ ಶಾಲೆಗೆ ಓಡಿದೆ.

ಬೂದಿಯ ರಾಶಿ ಇರಲಿಲ್ಲ.

ಒಬ್ಬರೆಂದರು:

“ ಬೆಂಕಿ ಆರಿಸಿದ್ರು. ಕಾರಂತರು ಬಿಡ್ತಾರಾ? ಮುಂದಿನ ಕಾರ್ಯಕ್ರಮ ನಡೆದೇ ನಡೆಯಿತು.”

ಆಗ ನನಗೆ ಹತ್ತೋ, ಹನ್ನೊಂದೋ.

* * * * *

ಮುಂದಿನ ವರ್ಷ ಮಕ್ಕಳ ಸಮ್ಮೇಳನಕ್ಕೆ ಪ್ರತಿನಿಧಿಯಾಗಿ ಹೋದೆ. ಸ್ವಾಗತ ಕಚೇರಿಯಲ್ಲಿ ಕಾರಂತರು. ಫೇಟ ಕಿಂದರಿಜೋಗಿ. ನಾವೆಲ್ಲ ಬೊಮ್ಮನಹಳ್ಳಿಯ ಪಿಳ್ಳೆಗಳು. ಅವರ ಜೇಬಿನಲ್ಲೊಂದು ಅಳಿಲು. ಹೊರಗೆ ಬರುತ್ತಿತ್ತು; ಹೆಗಲಿಗೆ

ಏರುತ್ತಿತ್ತು. ಸುತ್ತಲೂ ಚಿಕ್ಕವರ ಕಿಸಿ ಕಿಸಿ ನಗೆ, ಗಿಲಿ ಗಿಲಿ ಸದ್ದು. ಸಮ್ಮೇಳನ ನಡೆಯುತ್ತಿದ್ದ ಸ್ಥಳಕ್ಕೆ ಒಂದು ರೇಡಿಯೋ ಬಂತು. ಪುತ್ತೂರಿನ ಡಾಕ್ಟರರು – ಎಂದರು ಯಾರೋ. ಬಟ್ಟಬಯಲಿನಲ್ಲಿ ಆ ವಿಚಿತ್ರ ವಸ್ತು. ವಾತಾವರಣದಲ್ಲಿಯು ಅಲೆಗಳು ಹಿಡಿದು ತರುವ ಧ್ವನಿಮೇಳ. ಮಕ್ಕಳೆಲ್ಲ ತೆರೆದ ಕಿವಿ, ತೆರೆದ ಬಾಯಿ.

ಅದೊಂದು ಭಾರೀ ಜಾತ್ರೆ.

* * * * *

ಮುಂದಿನ ವರ್ಷ ಎಲ್ಲಿ?

ಉಪಾಧ್ಯಾಯರೆಂದರು :

" ಇನ್ನು ಸಮ್ಮೇಳನವಿಲ್ಲ."

ದಂಗುಬಡೆದುದರ ಮೊದಲ ಅನುಭವ.

" ವಿದ್ಯಾಧಿಕಾರಿಗಳು ವಿರೋಧಿಸಿದ್ದಾರೆ. ಶಾಲೆಯ ಪಠ್ಯಕ್ರಮಕ್ಕೆ ಇದು ಸಂಬಂಧಿಸಿದ್ದಲ್ಲವಂತೆ. ಶಾಲೆ ಇರುವಾಗ ಮಕ್ಕಳು ಹಾಗೆಲ್ಲ ಹೋಗಬಾರದಂತೆ. ಅವರ ಜೊತೆಗೆ ಹೊರಡುವ ಉಪಾಧ್ಯಾಯರಿಗೆ ಆ ದಿನಗಳ ಸಂಬಳ ಕೊಡುವುದಿಲ್ಲವಂತೆ."

ಆದರೆ ದಸರೆಯೊಂದಿತ್ತು. ಅದು ವಿದ್ಯಾಧಿಕಾರಿಗಳ ಅಧಿಕಾರಕ್ಷೇತ್ರಕ್ಕೆ ಹೊರ ತಾದದ್ದು. ಕಾರಂತರು ಸೂತ್ರಧಾರರಾಗಿ ನಡೆಸುತ್ತಿದ್ದ ಅದ್ದೂರಿಯ ನಾಡಹಬ್ಬ.

ಆಗ ಕಾರಂತರ ಬಾಲವನವೊಂದು ಧರ್ಮಶಾಲೆ. ಅವರ ಪುತ್ತೂರು ಸಾರಸ್ವತ ಜೇನುತೊಟ್ಟಿ. ಸಹಧರ್ಮಿಣಿಯ ಮೇಲ್ವಿಚಾರಣೆ, ಕಾರಂತರ ಕಣ್ಗಾಪು. ಎಷ್ಟು ಜನ ಅಲ್ಲಿರುತ್ತಿದ್ದರು – ಬರೆಹಗಾರರು, ಕವಿಗಳು, ಕಲಾವಿದರು!

ಬಿಡುವಿನ ವೇಳೆ ಲೀಲಾ ಕಾರಂತರು ಓದಲು ಒಂದು ಪುಸ್ತಕ ಕೊಟ್ಟರು. 'ಪಾತಾಳದಲ್ಲಿ ಪಾಪಚ್ಚಿ'. ಚಿಕ್ಕವನು ನಿಜ. ಆದರೆ ಪಾಪಚ್ಚಿ ಪುಸ್ತಕ? ಒಂದೇ ಉಸಿರಿಗೆ ಓದಿ, 'ತಕ್ಕೊಳ್ಳಿ', ಎಂದೆ. "ಬೇರೆ ಕೊಡಿ", ಎಂದು ಮಾತು ಸೇರಿಸಿದೆ. "ಓದಿ ಆಯ್ತಾ?" "ಓಹೊ". 'ಉದಯರಾಗ' ಕೊಟ್ಟರು. "ಒಳಗಿದ್ದಾರಲ್ಲ, ಅವರೇ ಬರೆದದ್ದು."

ಒಳಗಿದ್ದವರು : ಕಾರಂತರು, ಅ.ನ.ಕೃ., ವಿ. ಸೀ. ಇನ್ನೂ ಒಬ್ಬಿಬ್ಬರು, ನೆನಪಿಲ್ಲ. ಮಾತುಕತೆ ಊಹಿಸಿಕೊಳ್ಳಬಹುದು, ವಿಷಯದಿಂದ ವಿಷಯಕ್ಕೆ ಹಾರುತ್ತ.....

ಜಗಲಿಯಲ್ಲಿ ಕುಳಿತ ನನಗೋ 'ಉದಯರಾಗ'ದ ಓದು. ಮನಸ್ಸು ಇಲ್ಲಿ, ಕಿವಿ ಅಲ್ಲಿ. ಈಗ ಅನಿಸುತ್ತಿದೆ : ಆ ಕೊಠಡಿಯಿಂದ ತರಂಗ ತರಂಗವಾಗಿ ಬಂದುವೇ ನನ್ನ ಪಾಲಿನ ಉದಯರಾಗ. ಓಹೋ, ಒಪ್ಪಿಕೊಳ್ಳಬಹುದು – ನಾನು ಕಣ್ಣು ತೆರೆದುದು ಆಗಲೇ, ಆಗಲೇ.

* * * * *

ಶಾಲೆಗೆ 'ಕಾಪಿ' ಬರೆದುಕೊಂಡು ಹೋಗಬೇಕು. ಹಸ್ತಾಕ್ಷರ ತಿದ್ದುವುದು ಉದ್ದೇಶ. ಒಂದು ದಿನ 'ಕಾಪಿ' ಪುಸ್ತಕದಲ್ಲಿ 'ಈ ಲೆಕ್ಕಣಿಕೆಗೆ ದಯೆಯಿಲ್ಲ' ಎಂದು ಬರೆದೆ.

ಉಪಾಧ್ಯಾಯರು ಕೇಳಿದರು:

"ಏನಿದು ?"

ಮೌನ.

"ಯಾವುದನ್ನು ನೋಡಿ ಬರೆದದ್ದು?"

"ಕಾರಂತರ ಪುಸ್ತಕ."

"ಹೆಸರು ?"

"ಕನ್ಯಾಬಲಿ."

ಹೊದಿಕೆಯ ಮೇಲಿದ್ದುದು 'ಕನ್ಯಾಬಲಿ' ಅಥವಾ 'ಸೂಳೆಯ ಸಂಸಾರ.' ಅದರ ಮುನ್ನುಡಿಯಲ್ಲಿತ್ತು ಆ ವಾಕ್ಯ: 'ಈ ಲೆಕ್ಕಣಿಕೆಗೆ ದಯೆಯಿಲ್ಲ.'

ಏನನ್ನೂ ಹೇಳಲಿಲ್ಲ ಉಪಾಧ್ಯಾಯರು.

* * * * *

ನೆನಪುಗಳು ನೂರು. ಎಷ್ಟು ಬೇಕಾದರೂ ಬರೆಯಬಹುದು.

ಆದರೆ ಆ ಎಲ್ಲ ಪದರಾಶಿಯಿಂದ ಹೊರಡುವ ಧ್ವನಿ ಒಂದೇ.

ನಾಡಿನ ನವೋದಯದ ವೇಳೆಯಲ್ಲಿ ಕಾರಂತರು ಹೇಮಂತನಾದರು, ವಸಂತನಾದರು. ಕಹಿ ಸಿಹಿ ಅನುಭವಗಳ ಅಕ್ಷಯಪಾತ್ರೆಯನ್ನು ದೊರಕಿಸಿಕೊಂಡು ನಳನಾದರು. ಜ್ಞಾನದ ಅಡುಗೆ ತಾವೂ ಉಂಡರು. ಇತರ ಎಲ್ಲರಿಗೂ ಉಣಬಡಿಸಿದರು. ತಾವು ನೋಡನೋಡುತ್ತಲಿದ್ದಂತೆಯೇ, ಮನೆ ಮಾತಾದರು. ಅವಸ್ಥಾಂತರಗಳನ್ನು ದಾಟುವ ವೇಳೆಗೆ ದಂತಕಥೆಯಾದರು.

ಕೆಲ ತಲೆಮಾರುಗಳ ಬಳಿಕ ಯಾರಾದರೂ ಖಂಡಿತ ಕತೆ ಹೇಳುತ್ತಾರೆ:

"ನಮ್ಮ ಮುತ್ತಾತನ ತಾತನ ಕಾಲದಲ್ಲಿ ಒಂದೂರಲ್ಲಿ ಕಾರಂತರು ಅಂತ ಒಬ್ಬರಿದ್ದರಂತೆ....."

೫-೪-೧೯೭೦

# ಮಹಾ ಅರ್ಚಕ - ಆರ್. ಸಿ.

ಹನ್ನೆರಡು ವರ್ಷಗಳ ಹಿಂದಿನ ಮಾತು. ಧಾರವಾಡದ ಸುಭಾಷ್ ರಸ್ತೆ. ಬಸ್ ನಿಲ್ದಾಣದ ಎದುರು ದ. ಬಾ. ಕುಲಕರ್ಣಿಯವರ ಪುಸ್ತಕದ ಅಂಗಡಿ. ಆ ರಸ್ತೆಯಲ್ಲಿ ಬರುವ ಅಕ್ಷರಭಕ್ತರಿಗೆ ಅದೊಂದು ಕಟ್ಟೆ. ನಿಲ್ದಾಣದತ್ತ ದೃಷ್ಟಿ ಹಾಯಿಸಿದರೆ, ಹತ್ತು ಊರುಗಳಿಗೆ ಹೋಗುವ, ಅಲ್ಲಿಂದ ಬರುವ, ಜನರನ್ನೆಲ್ಲ ಕಾಣಬಹುದು. ಸಂತೆಯ ಗಜಿಬಿಜಿಗಿಂತ ಈ ಚಲನೆಯ ನೋಟ ಹೆಚ್ಚು ಸ್ವಾರಸ್ಯಕರ.

ಆ ಜನರ ನಡುವಿನಿಂದ ಗ್ರಾಹಕರನ್ನು ನಿರೀಕ್ಷಿಸದೆ ಇದ್ದರೂ, ಸ್ವತಃ ದ. ಬಾ. ಆ ಕಡೆ ಆಗಾಗ್ಗೆ ನೋಡುತ್ತಿದ್ದರು. ನಿಲ್ದಾಣದ ಆವರಣದಿಂದ ಅನಿರೀಕ್ಷಿತವಾಗಿ ಪರಿಚಿತರು ಯಾರಾದರೂ ಹೊರಬೀಳುವರೆಂಬ ಆಶಾವಾದಿ ಆ ಮನುಷ್ಯ.

ಕೆಲ ನಿಮಿಷಗಳ ಮಾತು, ಕೆಲ ನಿಮಿಷಗಳ ಮೌನ. ಮಧ್ಯೆ ಚಹಾ, ಅಡಿಕೆ ಚೂರು.

"ಆರ್. ಸಿ."

ಇದ್ದಕ್ಕಿದ್ದಂತೆ ನುಡಿದರು ದ. ಬಾ.... ಅವರ ದೃಷ್ಟಿಯನ್ನು ನನ್ನ ದೃಷ್ಟಿ ಅತ್ಯಂತ ಕುತೂಹಲದಿಂದ ಹಿಂಬಾಲಿಸಿತು. ಕೇಳಿಕೆಯಿಂದ ಅವರು ನನಗೆ ಪರಿಚಿತರು; ನೋಟಕ್ಕೆ ಹೊಸಬರು.

ಪ್ಯಾಂಟು, ಕೋಟು, ತಲೆಯ ಮೇಲೆ ಕ್ಯಾಪು. ಮೈಭಾರದವರು ಕರುಬುವಂಥ ಮಾಟವಾದ ಶರೀರ. ಯುವಕ. ಕೈಯಲ್ಲೊಂದು ಚೀಲ. (ಹತ್ತಿರದ ಊರಿನ ಪ್ರವಾಸ ಮುಗಿಸಿ ಬಂದಿರಬೇಕು.) ಗದ್ದಲದ ನಡುವೆಯೂ ಏಕಾಂಗಿಯಾದ ಪಥಿಕ - ಡಾ. ಆರ್. ಸಿ. ಹಿರೇಮಠ್.

ವಿಶ್ವವಿದ್ಯಾಲಯದ ಕ್ಯಾಂಪಸ್‌ನ ತಮ್ಮ ನಿವಾಸಕ್ಕೆ ಹೋಗುವ ಅವಸರ. ದಾರಿಯ ಮೇಲೆ ನೇರದೃಷ್ಟಿಯಿಟ್ಟು ಅವರು ಸಾಗಿದ್ದರು.

ದ. ಬಾ., ಡಾ. ಆರ್. ಸಿ. ಯವರ ಬಾಲ್ಯದ ಕತೆ ಹೇಳಿದರು. ಕಷ್ಟಪಟ್ಟು ವಿದ್ಯಾರ್ಜನೆ ಮಾಡಿ, ಸ್ವಸಾಮರ್ಥ್ಯದಿಂದ ಮೇಲಣ ಹಂತವನ್ನು ಮುಟ್ಟಿದ ಆರ್. ಸಿ. ಯವರ ಬಗೆಗೆ ದ. ಬಾ. ಗೆ ಅಪಾರ ಗೌರವ.

ತೀ.ನಂ.ಶ್ರೀ.ಯವರ ಉತ್ತರಾಧಿಕಾರಿಯಾಗಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡದ ಆಚಾರ್ಯಪಟ್ಟವನ್ನೇರಿದ ಆರ್. ಸಿ. ಯವರನ್ನು ಮೊದಲ ಸಲ ನಾನು ಕಂಡುದು ಆ ರೀತಿ.

* * * * *

ಕನ್ನಡದ ಒಕ್ಕಲುತನ ಕ್ಷೇತ್ರದಲ್ಲಿ ಹಿರಿಯ ಸಾಧಕನಾಗಿ ಆರ್. ಸಿ. ಹಿರೇಮಠರು ರೂಪುಗೊಂಡದ್ದು ಕಳೆದ ಒಂದು ದಶಕದಲ್ಲಿ.

ಉತ್ತರ ಕರ್ನಾಟಕದ ಪಾಲಿಗೆ ಅದೊಂದು ಸ್ವರ್ಣದಶಕ. ದಾದಾಸಾಹೇಬ ಪಾವಟೆಯವರು ಕುಲಪತಿಯಾಗಿ, ಸದಾಶಿವ ಒಡೆಯರು ಕುಲಸಚಿವರಾಗಿ, ಪವಾಡ ಎನ್ನಿಸುವ ರೀತಿಯಲ್ಲಿ ವಿದ್ಯಾಕೇಂದ್ರವನ್ನು ಕಟ್ಟಿದರು. ಅದು ಬೆಟ್ಟದ ಮೇಲಿನ ಸರಸ್ವತೀ ಗೃಹ. ಅವಿದ್ಯೆಯ ವನ್ಯಮೃಗಗಳು ಅಂಜಿ ದಿಕ್ಕಾಪಾಲಾದುವು. ಆ ಮಂದಿರ ಅಪೂರ್ವವೆನಿಸಿದ್ದು, ಆರ್. ಸಿ. ಮಹಾ ಅರ್ಚಕನಾದುದರಿಂದ. ಅಲ್ಲಿ ನಡೆಯುತ್ತ ಬಂದಿರುವ ವಿದ್ವತ್ತಿನ ನಿತ್ಯ ಆರಾಧನೆ, ಸುಸಂಸ್ಕೃತರೆಲ್ಲ ಹೆಮ್ಮೆಪಡುವಂಥದು.

ಹಿಂತಿರುಗಿ ನೋಡಿದಾಗ ಒಂದು ಸತ್ಯ ಕಣ್ಣಿಗೆ ಕಟ್ಟುತ್ತದೆ. ನೂತನ ರಾಜ್ಯ ರಚನೆಯಿಂದ ಉತ್ತರಕರ್ನಾಟಕಕ್ಕೆ ಲಾಭವಾಯಿತೊ ಇಲ್ಲವೊ – ಕರ್ನಾಟಕ ವಿಶ್ವವಿದ್ಯಾಲಯದ ಸ್ಥಾಪನೆಯಿಂದಲಂತೂ ನಾಡಿನ ಆ ಭಾಗದ ರೂಪವೇ ಬದಲಾಯಿತು. ಹಾಗೆ ಹೊಸರೂಪ ನೀಡಿದ ಶಿಲ್ಪಿಗಳು ವಂದ್ಯರು. ಅಂಥ ವಂದ್ಯರಲ್ಲಿ ಅಗ್ರಶ್ರೇಣಿಯ ಪೂಜೆಗೆ ಅರ್ಹರು, ಆರ್. ಸಿ.

* * * * *

ಹಲವು ವ್ಯಾಸಂಗಗಳ ಮನೆಯಾದ ವಿಶ್ವವಿದ್ಯಾನಿಲಯದಲ್ಲಿ, ನಮ್ಮ ವಿಶ್ವವಿದ್ಯಾಲಯಗಳಲ್ಲಿ, ಕನ್ನಡ ಹಿರಿಯ ಮುತ್ತೈದೆಯಾಗಿರುವುದು ಈಚಿನ ಬೆಳವಣಿಗೆ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಅದನ್ನು ಆಗಗೊಳಿಸಿರುವವರು ಡಾ. ಆರ್. ಸಿ.....

ಹತ್ತು ವರ್ಷಗಳ ಅನಂತರ, ಇತ್ತೀಚೆಗೆ, ಕಿರಿಯ ಮಹಾಬಲೇಶ್ವರದ ಗುಡ್ಡವನ್ನು ಹತ್ತಿದಾಗ ನಾನು ಕಂಡ ನೋಟ ಎಂದೂ ಮರೆಯಲಾಗದ್ದು. ಕನ್ನಡದ ವಿಭಾಗ ಇಲ್ಲಿ ಮಹಾಗತಿ. ಅಧ್ಯಾಪನ, ಅಧ್ಯಯನ, ಸಂಶೋಧನ – ಈ ಕ್ಷೇತ್ರಗಳ ವೈಜ್ಞಾನಿಕ ರೀತಿ, ಅಚ್ಚುಕಟ್ಟುತನ, ಒಪ್ಪ ಓರಣ – ಎಲ್ಲವೂ ಅವುಗಳ ಕೈವಾರಿಗೆ ಕನ್ನಡಿ. ನೂತನ ಕನ್ನಡ ಅಧ್ಯಯನ ಕೇಂದ್ರ, ಆರ್. ಸಿ. ಯವರ ಕರ್ತೃತ್ವ ಶಕ್ತಿಗೆ ಪ್ರತೀಕ. ಇಲ್ಲಿ ಎಣಿಕೆಗೆ ಸಿಗದಂತೆ ಪ್ರಕಟವಾಗುತ್ತಿರುವ ಗ್ರಂಥಗಳು, ನಾಡನ್ನು ಬೆಳಗುವ ಸಾಲುದೀಪಗಳು.

* * * * *

ಆರ್. ಸಿ. ಭಾಷಾವಿಜ್ಞಾನ ಪಾರಂಗತರು. ಈ ಪಂಡಿತವಕ್ಕಿ ಕವಿಯೂ ಆಗಿರುವುದು ಒಂದು ವಿಸ್ಮಯ.

ಐವತ್ತನ್ನು ಮುಟ್ಟಿರುವ ಸ್ವತಂತ್ರ – ಸಂಪಾದಿತ ಗ್ರಂಥಗಳು ಅವರ ಬಿಡುವಿಲ್ಲದ ದುಡಿಮೆಯ ಫಲ........

'ಪಥಿಕ'ನಾಗಿ ಆರ್. ಸಿ. ಯವರನ್ನು ಕಂಡ ಮೇಲೆ, ಮನೆಯಲ್ಲೇ ಒಮ್ಮೆ ಅವರನ್ನು ಭೇಟಿಮಾಡಿದೆ. ಹಬ್ಬದ ದಿನ. ಹೋಳಿಗೆ ತಿನಿಸು. ಅವರ ಶಿಷ್ಟಾಚಾರ

ಸಂಪನ್ನತೆಗೆ ಯಾರಾದರೂ ಮಾರುಹೋಗಬೇಕು. ಬದುಕಿನುದ್ದಕ್ಕೂ ಚೇತನಮೂಲ ವಾಗಬಲ್ಲ ಅವರ 'ಮಗುತನ'ವನ್ನು ಕಂಡು ಸಂತೋಷಪಟ್ಟೆ.

ಮತ್ತೊಮ್ಮೆ ಆರ್. ಸಿ. ಯವರನ್ನು ನಾನು ಕಂಡುದು 'ಪಥಿಕ'ನಾಗಿ, ರೈಲು ನಿಲ್ದಾಣದಲ್ಲಿ. ತಮ್ಮ ಸಹಾಯಕ ಡಾ. ಸುಂಕಾಪುರರ ಜತೆ ಅವರು ಉಗಿಬಂಡಿಯ ದಾರಿ ನೋಡುತ್ತ ನಿಂತಿದ್ದರು. ಅಮೆರಿಕ ಪ್ರಯಾಣದ ಪೂರ್ವಭಾವಿ ಸಿದ್ಧತೆಗಾಗಿ ರಾಜಧಾನಿಗೆ ಅವರು ಹೊರಟಿದ್ದರು.

ಮುಂದೆ ಈ ಪಥಿಕ ತಮ್ಮ ನಾಡಿನಲ್ಲೇ ಒಂದು ರೈಲುದುರಂತದಿಂದ ಕೂದಲು ಕೊಂಕದೆ ಹೊರಬಂದರು. ಅಪಘಡ ಸಂಭವಿಸಿದಾಗ ಅವರು 'ಬಸವಪುರಾಣ'ವನ್ನು ಓದುತ್ತಲಿದ್ದರು.

ಕನ್ನಡಕಲಿ ದೇಜಗೌಗೆ ಐವತ್ತಾಯಿತೆಂದು ಧಾರವಾಡದ ಮಿತ್ರರು ಸತ್ಕಾರ ಸಮಾರಂಭ ಏರ್ಪಡಿಸಿದಾಗ ಆರ್. ಸಿ. ಯವರನ್ನು ಹತ್ತಿರದಿಂದ ಅರಿತೆ. ಆಗ ಅವರು ಹೊರಸೂಸಿದ ಕೆಳೆತನ– ಮಾನವೀಯತೆ – ಸಂಸ್ಕಾರ ಅಪ್ರತಿಮವಾಗಿದ್ದುವು.

* * * * *

ಈಗ ಆರ್. ಸಿ. ಗೆ ಐವತ್ತು ತುಂಬಿದೆ ಕನ್ನಡದ ಈ ಸುಪುತ್ರನಿಂದ, ದಿಕ್ಪಾಲಕ ನಿಂದ, ಮುಂದಿನ ದಶಕಗಳಲ್ಲಿ ಇನ್ನೂ ಹೆಚ್ಚಿನ ಸೇವೆ ಲಭ್ಯವಾಗಲಿ – ಎಂಬುದು ಕನ್ನಡಿಗರೆಲ್ಲರ ಹಾರೈಕೆ.

೧೨–೪–೧೯೭೦

# ಗಿರಿ ಹತ್ತಿ ವರ ಬೇಡುವ ಅಚ್ಚಪ್ಪ

ತೆರೆದ ಬಾಗಿಲು. ಒಳಕ್ಕೆ ಯಾರೋ ಬಂದಂತಾಯಿತೆಂದು ತಲೆ ಎತ್ತಿದೆ.

"ಬನ್ನಿ."

ಅಪರಿಚಿತರು.

"ಕೂತ್ಕೊಳ್ಳಿ."

"ನಾನು ಅಚ್ಚಪ್ಪ."

"ಓ! ಗ್ರಂಥಸ್ಥ ಗಾದೆಗಳ ಅಚ್ಚಪ್ಪನವರು!"

ಕಂಕುಳಲ್ಲಿ ಚೀಲ. ಅದರ ತುಂಬ ಪುಸ್ತಕಗಳು. ಚೀಲಕ್ಕಿಂತ ಹೆಚ್ಚು ಭಾರವಾದ ಹೃದಯ. ದಾರಿಹೋಕ ಯಾರದ್ದೋ ಮನೆಯ ಪಾವಟಿಗೆಯ ಮೇಲೆ ದಣಿವಾರಿಸುವಂತೆ ಅಚ್ಚಪ್ಪ ಕುಳಿತರು.

"ನಿಮ್ಮನ್ನು ನೋಡಿರಲಿಲ್ಲ. ಸಂತೋಷವಾಯಿತು," ಎಂದೆ.

ನಾನೂ ಹಾಗೇನೇ–ಎನ್ನುವ ಶಿಷ್ಟಾಚಾರದ ಯಾವ ಮಾತೂ ಇಲ್ಲ. ಅವರು ಸುಮ್ಮನಿದ್ದರು. ಮಾತು ಹೊರಬರಲಾಗದೆ ವಿಲಿವಿಲಿ ಎಂದಂತೆ ಕಂಡಿತು.

ಕೇಳಿದೆ :

"ಪುಸ್ತಕ ಚೆನ್ನಾಗಿ ಮಾರಾಟವಾಗ್ತಿದೆಯೇ?"

ಅವರು ನಿಟ್ಟುಸಿರು ಬಿಟ್ಟರು.

* * * * *

ತಮ್ಮ ಗ್ರಂಥವನ್ನು ಕುರಿತು ಪೀಠಿಕೆಯಲ್ಲಿ "ಇದೊಂದು ಮೇರು ಕೃತಿ" ಎಂದು ತಾವೇ ಆತ್ಮವಿಶ್ವಾಸದಿಂದ ಹೇಳಿಕೊಂಡ ವಿದ್ವಾಂಸರು ಅಚ್ಚಪ್ಪ. ಹಲವು ಸಹಸ್ರ ರೂಪಾಯಿ ವೆಚ್ಚಮಾಡಿ ತಾವೇ ಪ್ರಕಟಿಸಿದ ಎದೆಗಾರ.

ಅವರಿಗೆ ಹೆಸರು ತಂದ 'ಕನ್ನಡ ಗಾದೆಗಳು' (೧೯೪೪) ಪುಸ್ತಕದ ಬಗೆಗೆ ಪ್ರಸ್ತಾಪಿಸಿದೆ.

"ಅದನ್ನು ನೋಡಿಲ್ಲ. ಪ್ರತಿಗಳಿಲ್ಲವೆ?"

"ಎರಡನೇ ಆವೃತ್ತಿಯ ಪ್ರತಿಗಳೂ ಮುಗಿದುವು. ಮತ್ತೆ ಮುದ್ರಿಸಬೇಕು. ಹಣವಿಲ್ಲ. 'ಗ್ರಂಥಸ್ಥ ಗಾದೆಗಳು' ಗ್ರಂಥದ ಮುದ್ರಣ ವೆಚ್ಚವನ್ನೇ ಸಂದಾಯಮಾಡಲಾಗದೆ ...."

ಅಸಾಧಾರಣ ವ್ಯಕ್ತಿ ಅಚ್ಚಪ್ಪ. ಪದವೀಧರನಾಗುವ ತನಕ ಕಾಯದೆ ಕಾಲೇಜು ಬಿಟ್ಟರು, ಮೂವತ್ತು ವರ್ಷಗಳ ಹಿಂದೆ. ಗಾದೆಗಳ ಬೆನ್ನಟ್ಟಿದರು. ಜೀವನೋಪಾಯಕ್ಕೆಂದು ಉದ್ಯೋಗಿಯಾದರು. ಅದು ಸರಿಹೋಗದೆ ರಾಜಿನಾಮೆ ಇತ್ತರು. ಗ್ರಂಥಕೀಟವಾದರು. ತಾವು ಕಷ್ಟಪಟ್ಟರು; ತಮ್ಮ ಮಡದಿಮಕ್ಕಳಿಗೂ ಅದನ್ನೇ ನೀಡಿದರು. ಮಹತ್ಸಾಧನೆಯ ಪರಿಚಿತ ಮುಳ್ಳುದಾರಿಯನ್ನು ತುಳಿದರು. ದೂರವನ್ನಳೆದು ಹರದಾರಿ ಕಂಬಗಳನ್ನು ನೆಟ್ಟರು. ಬೆವರು ಹೊಳೆಯಾಯಿತು. ಚಪ್ಪಲಿ, ಪಾದ ಎರಡೂ ಸವೆದುವು.

"ನೀವು ಕೊಡಗಿನವರು ಅಂದ್ಕೊಂಡಿದ್ದೆ. ಯಾವೂರು?"

"ಮೈಸೂರಿನ ಹತ್ತಿರ. ಹೊಸ ಅಗ್ರಹಾರ."

ಹೊಸ ಅಗ್ರಹಾರದ ಸುಬ್ಬಯ್ಯ ಅಚ್ಚಪ್ಪನವರು ಗ್ರಂಥಲೋಕದ ಗೊಂಡಾರಣ್ಯವನ್ನು ಹೊಕ್ಕುದು ವಿಚಿತ್ರ ರೀತಿಯಲ್ಲಿ. ಮಂಡ್ಯದಲ್ಲೊಮ್ಮೆ ಮಾಸ್ತಿ ಭಾಷಣ ಮಾಡುತ್ತಿದ್ದರು. ಅಲ್ಲಿದ್ದರು ಅಚ್ಚಪ್ಪ. ಯುವಕನ ಒಲವನ್ನು ಗುರುತಿಸಿದ ಹಿರಿಯಣ್ಣ ಬೆನ್ನು ತಟ್ಟಿ, "ನಮ್ಮ ಜನಗಳಿಗೆ ಗಾದೆಗಳ ಪರಿಚಯ ಮಾಡಿಕೊಡಿ," ಎಂದರು. ಪರಿಣಾಮ – ೧೪೨ ಪುಟಗಳ 'ಕನ್ನಡ ಗಾದೆಗಳು' ಪುಸ್ತಕ.

ಇಂಟರ್‌ಮೀಡಿಯೆಟ್‌ನಲ್ಲಿ ಅಚ್ಚಪ್ಪನವರಿಗೆ ಪಾಠ ಹೇಳಿದ ರಾಜರತ್ನಂ, ಹೊಸ ಪ್ರಕಟಣೆಯಾದ 'ಗ್ರಂಥಸ್ಥ ಗಾದೆಗಳು' ಕೃತಿಗೆ ತಾವು ಬರೆದಿರುವ ಮುನ್ನುಡಿಯಲ್ಲಿ ಮೇಲಿನ ಘಟನೆಯನ್ನು ಪ್ರಸ್ತಾಪಿಸಿ,

"ದೈವ ಯಾವ ಹೊತ್ತಿನಲ್ಲಿ ಯಾರಿಂದ ಯಾವ ಕೆಲಸ ಮಾಡಿಸುತ್ತದೋ!"– ಎಂದಿದ್ದಾರೆ.

ಕನ್ನಡ ಕವಿ – ವಿದ್ವಾಂಸ – ಅಧ್ಯಾಪಕ ವರದರಾಜರಾಯರು 'ಗ್ರಂಥಸ್ಥ ಗಾದೆಗಳು' ಕೃತಿಯನ್ನು ಕುರಿತು ಬರೆಯುತ್ತ,

"ಪ್ರಾಸಂಗಿಕವಾಗಿ ನಾನು ಆಡಿದ ಒಂದು ಮಾತನ್ನು ಗ್ರಹಿಸಿ, ಇಂಥ ಉಪಯುಕ್ತವಾದ ಕೆಲಸವನ್ನು ನಿರ್ವಹಿಸಿ, ಕೃತಾರ್ಥರಾದ ನನ್ನ ಮಿತ್ರರನ್ನು ನಾನು ವಿಶೇಷವಾಗಿ ಅಭಿನಂದಿಸುತ್ತೇನೆ,"

—ಎಂದು ಹೇಳಿದ್ದಾರೆ.

* * * * *

ಡಿ. ಎಲ್. ಎನ್., ತೀ. ನಂ. ಶ್ರೀ., ದೇ. ಜ. ಗೌ. — ಹೀಗೆ ಹಲವರ ಪ್ರಮಾಣಪತ್ರಗಳು ಅಚ್ಚಪ್ಪನವರಿಗೆ ದೊರೆತಿವೆ.

ತ. ಸು. ಶಾಮರಾಯರ ದೃಷ್ಟಿಯಲ್ಲಿ ಈ ಗ್ರಂಥ, "ಕನ್ನಡಿಗರ ನಾಗರಿಕತೆ, ಸಂಸ್ಕೃತಿಗೆ ತೋರ್‌ಬೆರಳು."

ಪರಮೇಶ್ವರಭಟ್ಟರಿಗೆ, "ವಿದ್ಯಾರ್ಥಿಯಾಗಿದ್ದ ದಿನಗಳಲ್ಲಿ ಅವರಲ್ಲಿ ಯಾವ

ಶ್ರದ್ಧೆ, ಉತ್ಸಾಹ, ಕಾರ್ಯಾಸಕ್ತಿ, ವ್ಯಾಸಂಗಪ್ರೇಮ ಕಾಣಬರುತ್ತಿದ್ದುವೋ ಆ ಕಲ್ಯಾಣಗುಣಗಳು ಇವತ್ತಿಗೂ ಅವರಲ್ಲಿ ಕಾಣಬರುತ್ತಿರುವುದು," ಸಂತೋಷ ಉಂಟು ಮಾಡಿದೆ.

ಡಾ. ಶ್ರೀಕಂಠಶಾಸ್ತ್ರಿಯವರ ದೃಷ್ಟಿಯಲ್ಲಿ "ಈ ಬೃಹದ್ಗ್ರಂಥದ ರಚನೆ ಸಾಹಸ ಕಾರ್ಯ."

'ಕವಿರಾಜಮಾರ್ಗ'ದಿಂದ ಆರಂಭವಾಗಿ 'ರಾಮಾಶ್ವಮೇಧ'ದ ತನಕ ಒಂದು ಸಾವಿರ ವರ್ಷಗಳ ಹಳಗನ್ನಡ-ನಡುಗನ್ನಡ ಸಾಹಿತ್ಯ ಕೃತಿಗಳನ್ನು ಅವಲೋಕಿಸಿ ಅಭ್ಯಸಿಸಿ ಆಯ್ದ ಹತ್ತುಸಾವಿರ ನುಡಿಮುತ್ತುಗಳ ಅಪೂರ್ವಸಂಗ್ರಹ 'ಗ್ರಂಥಸ್ಥ ಗಾದೆಗಳು.' ಗಾದೆ ಪದವನ್ನು ಇಲ್ಲಿ ತುಸು ಹಿಗ್ಗಿಸಬೇಕು. 'ಜನೋಕ್ತಿ, ಗಾದೆ; ಅರ್ಥವತ್ತಾದ ಕವಿವಚನ, ಸೂಕ್ತಿಸುಧೆ.'

* * * * *

ಗ್ರಂಥದ ಕೊನೆಯಲ್ಲಿ, ಅರ್ಥಮಾಡಿಕೊಳ್ಳಲು ಸಹಕಾರಿಯಾಗಲೆಂದು 'ಶಬ್ದ ಕೋಶ'ವಿದೆ. ಆ ಪುಟಗಳನ್ನೋದಿ ಕನ್ನಡ ಪ್ರೇಮಿಗೆ, ಎಷ್ಟೊಂದು ಒಳ್ಳೆಯ ಪದಗಳು ಬಳಕೆ ತಪ್ಪಿ ನಷ್ಟವಾಗಿವೆಯಲ್ಲ ಎಂದು ಸಂಕಟವಾಗಬಹುದು. ಅವನ್ನು ಮತ್ತೆ ಪ್ರಯೋಗಿಸುವ ಮನಸ್ಸಾಗಬಹುದು.

ಉದಾಹರಣೆಗೆ :

ಎಕ್ಕಸಕ್ಕ – ಯದ್ವಾ ತದ್ವಾ; ಎಡೆಗಟ್ಟು – ನಿಯಮ, ನಿರ್ಬಂಧ, ಅಡ್ಡಿ; ಎಡೆಯ – ಮೂರ್ಖ; ಅಗಡು – ದುಷ್ಟ, ಕ್ರೂರ, ಕ್ಷುದ್ರ, ಹೀನ; ಕರಕರೆ – ತೊಂದರೆ........

ಕಾವ್ಯಾಭ್ಯಾಸಿಗಳು, ಭಾಷಾಭ್ಯಾಸಿಗಳು ಎಲ್ಲರಿಗೂ ಈ ಗ್ರಂಥ ಉಪಯುಕ್ತ ವೆನಿಸುವುದರಲ್ಲಿ ಯಾವ ಸಂದೇಹವೂ ಇಲ್ಲ.

* * * * *

ಅಷ್ಟದಳಾಕೃತಿಯ ೬೫೦ ಪುಟಗಳು. ಮಂಗಳೂರು ಮುದ್ರಣ. ಬೆಲೆ ಐವತ್ತು ರೂಪಾಯಿ. ಆಯುಸ್ಸಿನ ಕಾಲು ಭಾಗದ ದುಡಿಮೆಗೆ ಈ ಬೆಲೆ ಕಡಮೆಯೇ.

ಆದರೆ ಕೊಳ್ಳುವವರು ಯಾರು ?

ಸಾರ್ವಜನಿಕ ಗ್ರಂಥಾಲಯಗಳು ? ಕಾಲೇಜು ಹೈಸ್ಕೂಲುಗಳ ಗ್ರಂಥ ಭಂಡಾರ ಗಳು ? ಕೊಳ್ಳುವ ಸಾಮರ್ಥ್ಯವುಳ್ಳ ಉಳ್ಳವರು ? ಪ್ರಕಟಿಸಿರುವ ಎರಡು ಸಾವಿರ ಪ್ರತಿ ಗಳು ಕರಗಿದುವೆಂದರೆ ಗಾದೆ ಅಚ್ಚಪ್ಪನವರು ಪುನರ್ಜನ್ಮ ಪಡೆದ ಹಾಗೆ.

ಅಚ್ಚಪ್ಪನವರ ಇನ್ನೊಂದು ಪುಸ್ತಕವಿದೆ – ಇಂಗ್ಲಿಷಿನಲ್ಲಿ. The Way to Success and Happiness, ಆರಿಸಿ ಪೋಣಿಸಿದ್ದು. ಸರಸ್ವತಿಯು ಈ ಹೂಗಾರನ ಪಾಲಿಗೆ ಯಶಸ್ಸು ನಿಜ; ಸುಖ ಸುಳ್ಳು.

'ವೇದ ಸುಳ್ಳಾದರೂ ಗಾದೆ ಸುಳ್ಳಾಗದು.' ಉದ್ಗ್ರಂಥ ಬರೆದರೂ ಉಪವಾಸ ತಪ್ಪದು.

ಈಗ ಅಜ್ಜಪ್ಪನವರು ಗಿರಿ ಹತ್ತಿ ವರ ಬೇಡುತ್ತಿದ್ದಾರೆ: "ಕನ್ನಡ ಬಂಧುಗಳು ಈ ಗ್ರಂಥ ಕೊಳ್ಳುವಂತೆ ಮಾಡಯ್ಯ ತಂದೆ!"

೧೯-೪-೧೯೭೦

# ಆನೆಯ ಮೇಲೆ ಅಂಬಾರಿ

ಮಕ್ಕಳಿಗೆ ದಸರೆಯ ರಜೆ. ದೊಡ್ಡವಳಿಗೆ ಹೊತ್ತು ಕಳೆಯುವುದು ಹೇಗೆ ಎಂಬ ಚಿಂತೆ. ಚಿಕ್ಕವಳಿಗೆ ಶಾಲೆಯ ಬದಲು ಮನೆಯಲ್ಲಿ ಆಟ. (ಏನೇನೋ ತಿನಿಸುಗಳ ನೆನಪು.)

ಪತ್ರಿಕೆಯೋದುವುದನ್ನು ಅಭ್ಯಾಸಮಾಡಿರುವ ತೇಜಸ್ವಿನಿ ಕೇಳುತ್ತಾಳೆ :

" ಇಲ್ಲಿ ಇರುವ ಸುದ್ದಿ ಓದಿದೀಯಾ ? "

" ಏನು ? "

" ಚಾಮುಂಡಿ ಬೆಟ್ಟದ ಮೇಲೆ WELCOME ಅಂತ ವಿದ್ಯುತ್ತಿನ ಅಕ್ಷರಗಳಲ್ಲಿ ಬರೆಯುತ್ತಾರಂತೆ. ಮೈಸೂರು ತಲಪೋಕ್ಕೆ ಮುಂಚೆಯೇ, ಎಷ್ಟೋ ಮೈಲುಗಳ ದೂರದಿಂದಲೇ, ಅದು ಕಾಣಿಸುತ್ತದಂತೆ. ಗುಡ್ಡದ ಬುಡದಿಂದ ೭೦೦ ಅಡಿ ಎತ್ತರದಲ್ಲಿ ಇರುತ್ತದಂತೆ. ಆ ಒಂದು ಪದದ ಅಗಲ ೨೫೦ ಅಡಿಗಳಂತೆ. ಒಂದೊಂದು ಅಕ್ಷರವೂ ೩೦ ಅಡಿ ಎತ್ತರವಂತೆ. ಅಕ್ಷರಗಳ ಮಧ್ಯೆ ೧೨ ಅಡಿ ಸ್ಥಳವಿರುತ್ತದಂತೆ. ಅಬ್ಬ !........ಹೋಗಿ ನೋಡಬಹುದು, ಅಲ್ಲವಾ ? "

" ಬಿಡುವಾದರೆ ಹೋಗಬಹುದು."

– ಹಾರಿಕೆಯ ಉತ್ತರ.

ಆಟದ ನಡುವಿನಿಂದ ಅಕ್ಕನ ಮಾತನ್ನು ಆಲಿಸಿದ ಕಿರಿಯವಳು ಧ್ವನಿ ಕೂಡಿಸುತ್ತಾಳೆ :

" ಹೋಗೋಣ ? "

ತಪ್ಪಿಸಿಕೊಳ್ಳುವುದು ಇನ್ನು ಕಷ್ಟ.

ಮನೆಯೊಕೆಗೂ ತಿರುಗಾಡಿಕೊಂಡು ಬಂದರಾದೀತೆಂಬ ಬಯಕೆ.

ಇಷ್ಟಾದಮೇಲೆ, ' ಕೆಲಸ ಮಾಡಿ ಮಾಡಿ ಬೇಸರ ; ಒಂದೆರಡು ದಿನ ರಾಜಧಾನಿಯಿಂದ ತಪ್ಪಿಸಿಕೊಂಡು ಹೋಗುವುದೇ ಸರಿ '– ಎಂದು ಮನೆಯಾತನಿಗೆ ಅನಿಸುವುದು ಸಹಜವಷ್ಟೆ ?

* * * * *

ಅದೇನು ಹುಚ್ಚೋ ಏನೋ. ಪರಂಪರೆಯಿಂದ ಬಂದದ್ದು. ರಕ್ತಗತ. ದಸರಾ ಎಂದೊಡನೆ – ನಾಡಹಬ್ಬವೆಂದೊಡನೆ – ನಮ್ಮ ಜನರಲ್ಲಿ ಸಣ್ಣ ಪ್ರಮಾಣದ

ಪುಲಕವೇಳುತ್ತವೆ. ಮೈಸೂರು ನಗರದ ಜನರಂತೂ, ದಸರೆ ಎನ್ನುವುದು ಇಡೀ ವರ್ಷದ ಸಂಭ್ರಮ ಸಡಗರಗಳ ಸಾರಸಂಗ್ರಹ ಎನ್ನುವಂತೆ ವರ್ತಿಸುತ್ತಾರೆ. ವಸ್ತುಪ್ರದರ್ಶನ, ಸಂಜೆಯ ಮೆರೆದಾಟ, ವಿದ್ಯುದ್ದೀಪಗಳ ಅಲಂಕಾರ, ಎಲ್ಲಿ ನೋಡಿದರೂ ಜನ, ಜನ, ಜನ. ಉಪಾಹಾರ ಮಂದಿರಗಳು, ವಸತಿಗೃಹಗಳು, ನೂರು ಬಗೆಯ ಅಂಗಡಿಗಳು – ಇವರಿಗೆಲ್ಲ ಇಡೀ ವರ್ಷದ ವ್ಯಾಪಾರ ನವರಾತ್ರಿಯ ನವಹಗಲುಗಳಲ್ಲೇ.

ಮೈಸೂರಿನ ದಸರೆಗೆ ದೇಶದ ಎಲ್ಲ ಭಾಗಗಳಿಂದ ಜನ ಬರುತ್ತಾರೆ. ಒಂದು ಲಕ್ಷ ಜನಸಂಖ್ಯೆಯ ನಗರ ಅದರ ಎರಡರಷ್ಟು ಅತಿಥಿಗಳಿಗೆ ಸ್ವಾಗತ ನೀಡಿ ಕುಯ್ಯೋ ಮುರ್ರೋ ಎನ್ನುತ್ತದೆ. ‘ದಸರೆ ಬಂದಾಗ ಮನೆಯನ್ನು ಅತಿಥಿಗಳಿಗೆ ಬಿಟ್ಟುಕೊಟ್ಟು ನಾವು ಬೇರೆ ಊರಿಗೆ ಹೋಗ್ತೀವಿ!’ ಇದು ಮೈಸೂರು ನಗರದ ನಿವಾಸಿಗಳ ವಿನೋದದ ಮಾತು.

ಊಟಕ್ಕೆ ಕ್ಯೂ, ತಿಂಡಿಗೆ ಕ್ಯೂ, ಸ್ನಾನಕ್ಕೆ ಕ್ಯೂ, ಕುಡಿಯುವ ನೀರಿಗೆ ಕ್ಯೂ. ಆರೋಗ್ಯಕರವಾದದ್ದು, ಸ್ವಚ್ಛವಾದದ್ದು ದೊರೆತರೆ ಪ್ರವಾಸಿಗರ ಅದೃಷ್ಟ.

ವಿಜಯನಗರದ ನಾಡಹಬ್ಬ ಮೈಸೂರಿನ ಯದುವಂಶಕ್ಕೆ ಬಳುವಳಿಯಾಗಿ ಬಂದದ್ದು. ಇದು ಇತಿಹಾಸಕ್ಕೆ ಸಂಬಂಧಿಸಿದ ಮಾತು. ಜನಸಾಮಾನ್ಯರಿಗೆ ಅದರ ಲ್ಲೇನು ಆಸಕ್ತಿ? ಹಿಂದಿನ ತಲೆಮಾರಿನಲ್ಲಿ ಹೇಗಿತ್ತೆಂಬುದನ್ನು ತಿಳಿಯುವ ಕುತೂಹಲವೂ ಈಗಿನ ತಲೆಮಾರಿನವರಿಗಿಲ್ಲ. ವಾಸ್ತವ ಸಂಗತಿಯೆಂದರೆ, ಜನ ಇಂದಿನ ಪರಿಸ್ಥಿತಿಯಲ್ಲಿ ಬದುಕುತ್ತಿರುವುದು ದಿನದಿಂದ ದಿನಕ್ಕೆ, ತಿಂಗಳಿನಿಂದ ತಿಂಗಳಿಗೆ, ವರ್ಷದಿಂದ ವರ್ಷಕ್ಕೆ. ಇಂಥದರಲ್ಲಿ ನಿತ್ಯ ಜೀವನಕ್ಕಿಂತ ಭಿನ್ನವಾದ ಬದುಕು ಕೆಲ ದಿನಗಳ ಮಟ್ಟಿಗಾದರೂ ದೊರೆತರೆ ನಾಗರಿಕ ಸಂತೃಪ್ತ.

* * * * *

ಪ್ರಜಾಪ್ರಭುತ್ವ ಸಮಾಜ ವ್ಯವಸ್ಥೆಯಲ್ಲಿ ಮಹಾರಾಜರ ಸ್ಥಾನವೇನು? ಅವರೂ ಒಬ್ಬ ಸತ್ಪ್ರಜೆ. ಮತಚಲಾಯಿಸುವ ಹಕ್ಕುಳ್ಳವರು. ವಿಜಯದಶಮಿಯ ದಿನ ಬಂಗಾರದ ಪೋಷಾಕು ತೊಟ್ಟು ಮಹಾರಾಜರನ್ನು ಅಲಂಕೃತ ಆನೆಯ ಮೇಲಣ ಅಂಬಾರಿಯಲ್ಲಿ ಮೆರವಣಿಗೆ ಮಾಡಿಸಿ, ಆ ವೆಚ್ಚವನ್ನು ಸರಕಾರ ತನ್ನ ಬೊಕ್ಕಸದಿಂದ ತುಂಬುವ ಅರ್ಥವೇನು? ಇದು ಸ್ವಾತಂತ್ರ್ಯೋತ್ತರ ಭಾರತದಲ್ಲಿನ ವಿರೋಧಾಭಾಸಗಳಲ್ಲಿ ಒಂದು.

ಈಗ ಜಂಬೂಸವಾರಿಯೇ ಇಲ್ಲದ ವಿಜಯದಶಮಿಯನ್ನು ಕಲ್ಪಿಸಿಕೊಳ್ಳಿ. ಪ್ರವಾಸಿಗರು ಬೇಗನೆ ಮೈಸೂರನ್ನು ಮರೆತುಬಿಡುತ್ತಾರೆ! ದೊರೆಯ ಮೆರವಣಿಗೆ ಇಲ್ಲದ ದಸರೆ, ದಸರೆಯೇ ಅಲ್ಲ.

ಬನ್ನಿಮಂಟಪಕ್ಕೆ ಹೋಗಿಬರುವ ವೆಚ್ಚವನ್ನು ಅರಮನೆ ನಿರ್ವಹಿಸಬೇಕು – ಎಂದು ಸರಕಾರ ತಿಳಿಸಲಿ. ಅಂಥ ಮೆರವಣಿಗೆಯ ಗೋಜಿಗೇ ಮಹಾರಾಜರು

ಹೋಗುವುದಿಲ್ಲ. ಖಾಸಗಿಯಾಗಿ ಕಾರಿನಲ್ಲಿ ಹೋಗಿ ಬರುತ್ತಾರೆ. ಮಹಾಜನರು ನಿರಾಶರಾಗುತ್ತಾರೆ.

*    *    *    *    *

ಭಾರತೀಯ ಮಹಾರಾಜರನ್ನು, ಹಾವಾಡಿಗರನ್ನು, ಹಸ್ತಸಾಮುದ್ರಿಕವವರನ್ನು, ಮಾಯಾವಿಗಳನ್ನು ಇಲ್ಲಿ ಕಾಣಲು ವಿದೇಶೀ ಪ್ರೇಕ್ಷಕರು ಬಯಸುತ್ತಾರೆ. ಅಂಥವರು ಮೈಸೂರು ದಸರೆಯಿಂದ, ವಿಶೇಷವಾಗಿ ವಿಜಯದಶಮಿಯ ಕಾರ್ಯಕ್ರಮಗಳಿಂದ, ಸ್ವಾಭಾವಿಕವಾಗಿಯೇ ಆಕರ್ಷಿತರಾಗುತ್ತಾರೆ.

ಇಲ್ಲಿ ಅವರು ಕಾಣುವುದು ತಮ್ಮ ಜೀವನಕ್ಕಿಂತ ಭಿನ್ನವಾದುದನ್ನು, ಅದ್ಭುತವಾದುದನ್ನು, ರಮ್ಯವಾದುದನ್ನು.

ಹೀಗೆ ಸಂತೃಪ್ತನಾದ ಪ್ರವಾಸಿ, ನಮ್ಮ ನಾಡಿನ ಪುಕ್ಕಟ್ ಪ್ರಚಾರಕನಾಗುತ್ತಾನೆ. ಅವನೊಬ್ಬನ ಮಾತು ಕೇಳಿ ಮುಂದಿನ ವರ್ಷ ಸಹಸ್ರ ಜನ ಪ್ರವಾಸಿಗರು ಬರುತ್ತಾರೆ.

ಬಹಳ ಅಮೂಲ್ಯವಾಗಿರುವ ವಿದೇಶೀ ವಿನಿಮಯವನ್ನು ದೇಶ ಗಳಿಸುತ್ತದೆ.

*    *    *    *    *

ಸಂಜೆ ಮಗಳು ಮತ್ತೆ ಕೇಳುತ್ತಾಳೆ :

" WELCOME ನೋಡೋವಕ್ಕೆ ಹೋಗುತ್ತೇವೆ, ತಾನೆ ? "

ಓರಗೆಯವರೆದುರು ತನ್ನ ರಜಾದಿನಗಳ ಮಜಾ ಪ್ರವಾಸದ ಹಂಚಿಕೆಯನ್ನು ಪ್ರಕಟಿಸುವ ಆತುರ ಅವಳಿಗೆ.

ಹುಬ್ಬು ಗಂಟಿಕ್ಕುವ ಹಾಗಿಲ್ಲ. ಮುಗುಳು ನಕ್ಕರೆ, ಗೆದ್ದೆನೆಂದು ಚಪ್ಪಾಳೆ ತಟ್ಟುತ್ತಾಳೆ. ಮೌನ ? ಮಕ್ಕಳ ನಿಘಂಟಿನಲ್ಲಿ ಅದರ ಅರ್ಥ, ಪೂರ್ಣಸಮ್ಮತಿ !

೮-೧೦-೧೯೬೭

# ನಾಳೆ ಮತ್ತು ಇವತ್ತು

ದೃಷ್ಟಿ ಹರಿಯುವವರೆಗೂ ತುಂಗಭದ್ರೆಯದು ಮೈತೊಳೆಯುವ ನಾಡು. ಕೆಳಗೆ ನಿಂತು ಮೇಲೆ ನೋಡಬೇಕು. ಅದು ಎತ್ತರದ ಭಾರೀ ಜಲಾಶಯ. ಬಾಗಿಲುಗಳಿಂದ ಭೋರ್ಗರೆಯುತ್ತ ಧುಮ್ಮಿಕ್ಕುವ ನೀರು ಈ ಕಡೆಗೆ. ಸ್ವಲ್ಪ ಪ್ರಮಾಣದ ವಿದ್ಯುಚ್ಛಕ್ತಿಯ ಉತ್ಪಾದನೆ ಒಂದೆಡೆಗೆ. ಸುತ್ತಲೂ ನಾಲ್ಕುನೂರು ಎಕರೆ ಸ್ಥಳದಲ್ಲಿಂದು ಅದ್ಭುತ ಪುಷ್ಪೋದ್ಯಾನ. ಇದು ಬೃಂದಾವನದ ಪ್ರತಿರೂಪವಲ್ಲ. ಜಪಾನೀ ಮಾದರಿಯ ಹೂದೋಟ. ಈ ಕಮಾನುಗಳು, ಪುಟ್ಟ ಸೇತುವೆಗಳು, ಮಂಟಪಗಳು, ಗೋಪುರಗಳು – ಇವೆಲ್ಲವೂ ಜಪಾನಿನ ಕೊಡುಗೆ. ಆ ದೇಶದಲ್ಲೇ ಇವು ತಯಾರಾದುವು.

ದೂರದಲ್ಲಿ ವಿಜಯನಗರದ ರಾಜಧಾನಿಯ ಭಗ್ನಾವಶೇಷಗಳು ನಮ್ಮನ್ನು ಕೂಗಿ ಕರೆಯುತ್ತವೆ.

ಹತ್ತಿರದಲ್ಲೇ ಒಂದೆಡೆಯಿಂದ ಹೆಲಿಕಾಪ್ಟರನ್ನೇರಿ ಕರ್ನಾಟಕದರ್ಶನದ ಪ್ರವಾಸವನ್ನು ನಾವು ಮುಂದುವರಿಸಬಹುದು....

....ಮಲೆನಾಡಿನ ಭಾರೀ ಕಣಿವೆ ಯೋಜನೆಯಾದ ಶರಾವತಿ. ಉಡುಪು ಕಳಚಿ ಬಿಳಿಯ ನೊರೆಯಾಗಿ ಮೋಡವಾಗಿ ಆವಿಯಾಗಿ ಕೆಳಕ್ಕೆ ಧುಮುಕುತ್ತಿರುವೆನೆಂದು ನದಿಗೆ ಜಂಭ. ಇಲ್ಲಿ ಬೆಳಕಿನ ಬೆಳುದಿಂಗಳು ಚೆಲ್ಲಿಕೊಂಡಿದೆ. ಇದು ವಿವಿಧ ವರ್ಣಗಳ ಪ್ರಭಾವಳಿ. ಮೈಸೂರು ಬಂಗಲೆಯಿಂದ ಬೊಂಬಾಯಿ ಬಂಗಲೆಗೆ (ಹತ್ತು ವರ್ಷಗಳಿಗೂ ಹಿಂದಿನ ಹೆಸರು ಇದು) ಬಳ್ಳಿದಾರಿ. ಪುಟ್ಟ ತೊಟ್ಟಿಲು ಪೆಟ್ಟಿಗೆಯನ್ನು ಬಳ್ಳಿಗೆ ಕಟ್ಟಿದ್ದಾರೆ. ನಾವು ಆ ತೊಟ್ಟಿಲಲ್ಲಿ ಕುಳಿತುಕೊಳ್ಳಬೇಕು. ಅದು ಇನ್ನೊಂದು ದಡದಾಚೆಗಿನ ಎತ್ತರಕ್ಕೆ ಸರಿಯುತ್ತದೆ. ಅಲ್ಲಿ ಇಳಿದು, ಚಹಾ ಸ್ವೀಕರಿಸಿ, ಮತ್ತೆ ಪೆಟ್ಟಿಗೆಯನ್ನೇರಿ ಮೈಸೂರು ಬಂಗಲೆಗೆ ಮರಳುತ್ತೇವೆ.

ಲಿಂಗನಮಕ್ಕಿ ತಲಕಳಲೆ ಜಲಾಶಯಗಳ ಬಳಿಯಲ್ಲಿ ಈಜುವ ಕೊಳಗಳು, ದೋಣಿ ಕ್ಲಬ್ಬುಗಳು.

ಭದ್ರಾ ನದಿಯಾಚೆಗೆ ಲಕ್ಕವಳ್ಳಿಯ ಬಳಿ ಸಂರಕ್ಷಿತ ವನ್ಯಮೃಗಗಳ ಕಾನನ. ಅಣೆಕಟ್ಟು ನಿರ್ಮಾಣಕಾರ್ಯ ಪೂರ್ಣವಾಗಿ ೨೮,೦೦೦ ಎಕರೆಗಳಷ್ಟು ಪ್ರದೇಶ ನೀರಿನ ಕೆಳಗೆ ಮುಳುಗಿವೆ. ಭದ್ರೆಯಲ್ಲಿ ಮೊಸಳೆಗಳಿವೆ. ಜಲಾಶಯ ಬಯಸುವ ಕ್ರೂರ ಮೃಗಗಳಿಗೆ ಇದೊಳ್ಳೆಯ ತಾಣ. ದಟ್ಟಡವಿಯೂ ಆಳವಾದ ನೀರೂ ಜೊತೆಯಾಗಿರುವ ಪ್ರದೇಶ ವನ್ಯಮೃಗಗಳ ಸಂರಕ್ಷಿತ ಅರಣ್ಯವಾಗಲು ಅತ್ಯುತ್ತಮ ಸ್ಥಳ. ಹುಲಿ

ಗಳು, ಆನೆಗಳು, ಕಾಡುಕೋಣಗಳು, ಜಿಂಕೆಗಳು – ಇವೆಲ್ಲವೂ ಇಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಈಗಾಗಲೇ ದೊರಕುತ್ತವೆ. ಮುಳುಗಡೆಯಾದ ಪ್ರದೇಶದಲ್ಲಿ ದ್ವೀಪಗಳಿವೆ. ಆ ದ್ವೀಪಗಳಲ್ಲೆಲ್ಲ ಹಕ್ಕಿಗಳು ನೆಲೆ ನಿಲ್ಲಬಹುದು....

....ಅಲ್ಲಿಂದ ಹೆಲಿಕಾಪ್ಟರು ಬಾಬಾಬುಡನ್‌ಗಿರಿಯನ್ನು ಬಳಸಿ ಕಾಫಿ ತೋಟಗಳನ್ನು ಕಂಡು ಬೇಲೂರು ಚೆನ್ನಕೇಶವನೆದುರು ಬಂದಿಳಿಯುತ್ತದೆ. ಅಂತಃಪುರ ಗೀತೆಯ ಶಿಲಾಬಾಲಿಕೆಯರು ಸ್ವಾಗತ ಬಯಸುತ್ತಾರೆ.

* * * * *

ಮೇಲಿನ ಚಿತ್ರ ನಾಳೆಗೆ ಸಂಬಂಧಿಸಿದ್ದು. ಈ ಸಾಧನೆಗೆ ಹಣ ಬೇಕು. ಜಲಾಶಯಗಳಿಗಾಗಿ, ವಿದ್ಯುದಾಲಯಗಳಿಗಾಗಿ ಹಣ ವೆಚ್ಚಮಾಡುವಾಗ ಅವರ ನೂರರಲ್ಲಿ ಒಂದು ಭಾಗವನ್ನು ಪ್ರದೇಶದ ಆಕರ್ಷಣೆಯನ್ನು ಹೆಚ್ಚಿಸಲು ಬಳಸಬೇಕು – ಎಂದು ಸರಕಾರ ನಿರ್ಧರಿಸುವುದಂತೆ.

ಇದು ಒಳ್ಳೆಯ ಹಂಚಿಕೆ. ಮೇಲಿನ ಮೂರು ಕೇಂದ್ರಗಳಲ್ಲಿ ಮಾತ್ರವಲ್ಲ, ಕೃಷ್ಣಾ – ಕಾಳಿ ಮತ್ತಿತರ ಯೋಜನೆಗಳಿಗೆ ಸಂಬಂಧಿಸಿಯೂ ನೂರರಲ್ಲಿ ಒಂದರಷ್ಟು ವೆಚ್ಚವನ್ನು ಸೌಂದರ್ಯವರ್ಧನೆಗಾಗಿ ಮೀಸಲಿಟ್ಟರೆ, ಮುಂದಿನ ಪೀಳಿಗೆ ಈಗಿನವನ್ನು ಕೃತಜ್ಞತೆಯಿಂದ ಸ್ಮರಿಸುವುದು.

* * * * *

ಆ ನಾಳೆಯಿಂದ ಇವತ್ತಿಗೆ ಬಂದೆನೋ ಮನಸ್ಸು ಸ್ವಲ್ಪ ಕಹಿಯಾಗದಿರದು.

ಕಿರಿಯರ ಒತ್ತಾಯಕ್ಕೆ ಮೈಸೂರಿಗೆ ಹೋದಾಗ ಆಗಿನ್ನೂ ದಸರೆಯ ಹೂಬಿಸಿಲು. ವಿಜಯದಶಮಿಗೆ ಏಳು ದಿನಗಳಿದ್ದುವು. ಹೂಬಿಸಿಲಾದರೂ ಏನಂತೆ? ಚುರುಕು ಮುಟ್ಟಿಸಲು ಇಷ್ಟೇ ಸಾಕು ಎನ್ನುವ ಹಾಗಿತ್ತು.

ನಿತ್ಯಕ್ಕಿಂತ ಹೆಚ್ಚು ಗದ್ದಲ. ಅಧಿಕ ಸಂಖ್ಯೆಯಲ್ಲಿ ವಾಹನಗಳು. ಬಹಳ ಸಂಖ್ಯೆಯಲ್ಲಿ ಜನರು. ಎಡಕ್ಕೂ ತಿರುಗುವಂತಿಲ್ಲ. ಬಲಕ್ಕೂ ತಿರುಗುವಂತಿಲ್ಲ. ಒಬ್ಬರ ಬೆನ್ನಿಗೊಬ್ಬರು ಅಂಟಿಕೊಂಡು ಮುಂದೆ ಸಾಗಬೇಕು.

ಆರಂಭದಲ್ಲೇ ಹಾಗಾದರೆ ದಸರೆಯ ಮಟಮಟ ಮಧ್ಯಾಹ್ನದಲ್ಲಿ ಹೇಗೆ ಇದ್ದಿರಬಹುದು?........

ಜಂಬೂಸವಾರಿ ನೋಡಿಕೊಂಡು ಬೆಂಗಳೂರಿಗೆ ಮರಳಿದ ಒಬ್ಬರೆಂದರು:

"ಅಬ್ಬ! ಬದುಕಿ ಬಂದೆವಲ್ಲ!"

ಇದ್ದಕ್ಕಿದ್ದಂತೆ ಪುಟ್ಟದೊಂದು ಊರಿಗೆ ಆರು ಲಕ್ಷ ಜನ ನುಗ್ಗಿದರೆ ಹೇಗಾಗಬೇಡ! ಶಿಸ್ತು ವ್ಯವಸ್ಥೆಗಳು ಅನೇಕ ಕಡೆ ಮುರಿದು ಬಿದ್ದುದರಲ್ಲಿ ಏನಾಶ್ಚರ್ಯ? ನೂಕು ನುಗ್ಗಲಿನಲ್ಲಿ ಹೆಂಗಸರು ಮಕ್ಕಳು ಮುದುಕರು – ದೇಹದಾರ್ಢ್ಯವಿದ್ದವರು ಕೂಡಾ – ಅಪ್ಪಚ್ಚಿಯಾಗಲಿಲ್ಲವಲ್ಲ, ಪ್ರಾಣ ಕಳೆದುಕೊಳ್ಳಲಿಲ್ಲವಲ್ಲ! ಅದೇ ದೊಡ್ಡ ಸಂಗತಿ!

ಒಬ್ಬರಂತೂ ಸೀಳಮೋರೆ ಮಾಡಿ ತಲೆಯಲ್ಲಾಡಿಸಿ ಅಂದರು :

"ಇದೇ ರೀತಿ ಎಂದಾದರೆ ಮುಂದೆ ದಸರಾ ನಡೆಸೋದು ಕಷ್ಟ. ಕಟ್ಟಡಗಳೆಲ್ಲ ಹಳೆಯದಾಗುತ್ತ ಬರುತ್ತಿವೆ. ಮೆರವಣಿಗೆ ನೋಡುವ ಜನರ ಭಾರವನ್ನು ಅವು ತಡೆಯೋದು ಸಂಶಯ. ಆಹಾರ ಪಾನೀಯಗಳ ವಿಷಯ....ಪ್ರಸ್ತಾಪಮಾಡದಿರುವುದೇ ಒಳ್ಳೇದು. ಕಾಲರಾ ಗೀಲರಾಗಳಿಗೆ ಮೈಸೂರು ತವರುಮನೆಯಾಗಬಹುದು."

ಪರಿಹಾರ ?

ಕುಂಭಮೇಳವನ್ನು ನೋಡಿಬಂದವರೊಬ್ಬರು ಅಂದರು :

"ಇನ್ನೂ ಉತ್ತಮ ಸಂಘಟನೆಯೇ ಪರಿಹಾರ. ನಗರದ ಸುತ್ತಲೂ ಶಿಬಿರಗಳನ್ನು ರಚಿಸಬೇಕು. ನಗರದ ಒಳಗೆ ಜನರ ಸಮ್ಮರ್ದ ಕಡಮೆಯಾಗುವಂತೆ ಮಾಡಬೇಕು."

ಇನ್ನೊಬ್ಬರೆಂದರು :

"ಎರಡು ವರ್ಷಕ್ಕಿಂತ ಹಳೆಯದಾದ ವಾಹನಗಳನ್ನು ಮೈಸೂರಿಗೆ ನೂರು ಮೈಲು ದೂರದಲ್ಲೇ ತಡೆದು ನಿಲ್ಲಿಸಬೇಕು. ಏನಿದ್ದರೂ ಹೊಚ್ಚಹೊಸ ಕಾರುಗಳೇ ಸರಿ. ಕ್ಯೂ ರೇಸಿನಲ್ಲಿ ಹಳೆಯ ಕಾರು ಕುಂಟಿದರೆ ಉಳಿದವರ ಗತಿ ಏನು ?"

ಮತ್ತೊಬ್ಬರೆಂದರು :

"ಐದುನೂರು ವರ್ಷಗಳಿಗೆ ಹಿಂದೆ ಇದ್ದಂತೆ ಬರಿ ಪಾದಯಾತ್ರೆಯೇ ಮೇಲು."

ಆನೆ, ಒಂಟೆ, ಕುದುರೆ, ಯಾತ್ರಿಕ. ವರ್ಷದಲ್ಲಿ ಹತ್ತು ದಿನ ಇಷ್ಟೇ ಸಾಕು. ಒಂದು ಬದಲಾವಣೆ! ಯಾಕಾಗಬಾರದು ?

೨೯-೧೦-೧೯೬೭

## “ . . . .ನನಗೆ ತಿಳಿಯದು ”

ಮೆಹರ್‌ಚಂದ್ ಮಹಾಜನರು ಬೆಂಗಳೂರಿಗೆ ಬಂದದ್ದು ಕಳೆದ ಬೇಸಗೆಯಲ್ಲಿ, ಕಾವು ಏರುವುದಕ್ಕೆ ಮುನ್ನ. ಕಪ್ಪು ಬಾವುಟ, ಮತಪ್ರದರ್ಶನ, ಘೋಷಣೆಗಳಿಲ್ಲದ ವಾತಾವರಣ ಕಂಡು ತುಸು ಆಶ್ಚರ್ಯವೆನಿಸಿರಬೇಕು. ಇದು ಕನ್ನಡಿಗರ ಪರಂಪರಾನುಗತ ಸೌಜನ್ಯ ಎಂದು ಅವರು ಅರ್ಥಮಾಡಿಕೊಂಡಿರಲಾರರು. ಬದಲು, ವಸ್ತುನಿಷ್ಠರಾಗಿ, ನೆರೆನಾಡಿನ ಪ್ರಚಲಿತ ಮನೋಭಾವಕ್ಕಿಂತ ಇಲ್ಲಿನದು ಭಿನ್ನ ಎಂದಷ್ಟೇ ಗುರುತಿಸಿರಬಹುದು.

ಅವರ ಮುಂದೆ ಸಾಕ್ಷ್ಯ ನೀಡಲು ನಿರ್ಧರಿಸಿದಾಗ, ಅವರ ರೀತಿ ನೀತಿಗಳ ಪರಿಚಯವಿದ್ದ ಒಬ್ಬರು ಎಚ್ಚರಿಸಿದರು :

“ ಹೆದರಿಕೆ ಹುಟ್ಟಿಸ್ತಾರೆ. ಕೆದಕುವ ಪ್ರಶ್ನೆ ಕೇಳ್ತಾರೆ.”

ನ್ಯಾಯಸ್ಥಾನದಂತಹ ವಾತಾವರಣ. ಮೊದಲ ನೋಟಕ್ಕೆ ವಯಸ್ಸು ಇಂತಿಷ್ಟೇ ಎಂದು ಹೇಳಲು ಬಾರದ ವೃದ್ಧರು. ಒಂಟಿ ಪೀಠದ ಮೇಲೆ ಆಸೀನರಾಗಿದ್ದರು. ಭೋಜನಾನಂತರದ ವಿಶ್ರಾಂತಿಯನ್ನು, ಕೈಕೊಂಡಿರುವ ಕೆಲಸದ ಕಾರಣದಿಂದ ತ್ಯಾಗ ಮಾಡಿದ್ದೇನೆ ಎನ್ನುವಂತಿತ್ತು ಮುಖಭಾವ. ಮುಗುಳು ನಗೆಯ ಸೌಜನ್ಯ. ಎದುರು ಕುಳಿತುಕೊಳ್ಳಲು ಕೈ ಸನ್ನೆ.

ನಾನು ಸಲ್ಲಿಸಿದ ಮನವಿ ಪತ್ರದ ಮೇಲೆ ಅವರ ದೃಷ್ಟಿ ಹರಿಯಿತು. ಮಗ್ಗುಲಲ್ಲಿದ್ದ ಶೀಘ್ರಲಿಪಿಕಾರ ಬರೆದುಕೊಳ್ಳಲೆಂದು, ಓದುತ್ತಲಿದ್ದಂತೆ ಮುಖ್ಯಾಂಶಗಳನ್ನು ಗಟ್ಟಿಯಾಗಿ ಉಚ್ಚರಿಸುತ್ತ ಸಾಗಿದರು. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಭಾಷಾವಾರು ಪ್ರಾಂತರಚನೆ ತಂದೊಡ್ಡಿದ ಅನರ್ಥ ಪರಂಪರೆಗಳನ್ನು ಕುರಿತ ಪೀಠಿಕೆ ಸ್ವಾರಸ್ಯಕರವಾಗಿ (ಭಿನ್ನವಾಗಿ) ಅವರಿಗೆ ಕಂಡಿರಬೇಕು. ಭಾರತದ ಒಳಸಕಾಶೆಯನ್ನು ಸುಸಂಘಟಿತ ರಾಜ್ಯ ವ್ಯವಸ್ಥೆಯ ಆಧಾರದ ಮೇಲೆ ಈಗಲೇ ಪುನಃ ಬರೆಯುವುದಾಗದಿದ್ದರೆ, ‘ ಗಡಿ ’ಗಳಲ್ಲಿ ಕಂಡು ಬರುತ್ತಿರುವ ಉರಿಯನ್ನು ಆರಿಸುವುದಕ್ಕಾದರೂ ಕನ್ನಡಿಗರು ತಳೆದಿರುವ ನ್ಯಾಯಬದ್ಧ ನಿಲುವನ್ನು ಒಪ್ಪಬೇಕೆಂಬ ಅಂಶವನ್ನು ಅವರು ಗಮನವಿಟ್ಟು ಓದಿದರು.

ಮನವಿಯ ಕೊನೆಯ ವಾಕ್ಯವನ್ನು ಕಂಡಾಗ ಒಂದು ಕ್ಷಣ ಅವರು ಅಂತರ್ಮುಖಿಯಾದಂತೆ ಕಂಡಿತು.

* * * * *

ಒಂದು ವರ್ಷದ ಹಿಂದೆ ಮಹಾರಾಷ್ಟ್ರ – ಮೈಸೂರು, ಮೈಸೂರು – ಕೇರಳ ಗಡಿ ವಿವಾದಗಳ ಪರಿಶೀಲನೆಗೆ ಶ್ರೇಷ್ಠ ನ್ಯಾಯಸ್ಥಾನದ ನಿವೃತ್ತ ಮುಖ್ಯ ನ್ಯಾಯಾಧೀಶ ಮಹಾಜನರ ಏಕ ಸದಸ್ಯ ಆಯೋಗ ನೇಮಕಗೊಂಡಾಗ, ಅಂತಹ ಆಯೋಗಕ್ಕಾಗಿ ಪಟ್ಟುಹಿಡಿದಿದ್ದ ಮಹಾರಾಷ್ಟ್ರ ಸಮಾಧಾನದ ಉಸಿರು ಬಿಟ್ಟಿತು. ಸ್ವಲ್ಪ ಕಸಿವಿಸಿ ಕಂಡುಬಂದುದು ಮೈಸೂರಿನಲ್ಲೇ. ಆರಂಭದಲ್ಲಿ, ತ್ರಿಮೂರ್ತಿಗಳ ಆಯೋಗವಿದ್ದರೆ ಮೇಲಲ್ಲವೆ ?–ಎಂದು ಅಲ್ಲಿ ಇಲ್ಲಿ ಕೇಳಲಾಗಿತ್ತು. ಮಹಾಜನರ ಹೆಸರು ಪ್ರಕಟವಾದ ಮೇಲೆ, ಯಾರೊ ? ಏನು ಕಥೆಯೊ ? ಚವ್ಹಾಣರು ಅವರ ಮೇಲೆ ಪ್ರಭಾವ ಬೀರಿದರೆ ಏನು ಗತಿ ? ಎಂಬ ಅಸ್ಪಷ್ಟ ಗೊಣಗಾಟವೂ ಇತ್ತು. ಆಯೋಗದ ಕೆಲಸ ಆರಂಭವಾದ ಮೇಲೆ, "ಎಂದಾದರೂ ಬಗೆಹರಿಯಬೇಕಾದ ಸಮಸ್ಯೆ. ಆಗಲಿ, ಬಂದುದೆಲ್ಲಾ ಬರಲಿ," ಎನ್ನುವ ಭಾವನೆ ನೆಲೆಸಿತು.

ಆ ಬಗೆಯ ವಿವಂಚನೆ ಅಸಗತ್ಯ ಎನಿಸಿದ್ದು ಮಹಾಜನರ ವ್ಯಕ್ತಿತ್ವದ ಪರಿಚಯ ವಿದ್ದವರಿಗೆ ಮಾತ್ರ.

*   *   *   *   *

ರಾಷ್ಟ್ರದ ಇತಿಹಾಸದ ಕೆಲವು ತಿರುವುಗಳಲ್ಲಿ ಮಹತ್ವದ ಪಾತ್ರವಹಿಸಿದ ವ್ಯಕ್ತಿ, ಮಹಾಜನ್. ೧೯೪೬ರಲ್ಲಿ ನಾವಿಕರ ಬಂಡಾಯವಾದಾಗ 'ಬಂಡಾಯ ಆಯೋಗ' ದಲ್ಲಿ ಅವರು ಸದಸ್ಯರಾಗಿದ್ದರು. ೧೯೪೭ರಲ್ಲೂ ದೇಶದ ವಿಭಜನೆಯಾದಾಗ ಪಂಜಾಬು ಗಡಿ ಆಯೋಗದಲ್ಲೂ ಅವರು ಸದಸ್ಯರಾಗಿದ್ದರು. ೧೯೪೭–೪೮ರಲ್ಲಿ ಜಮ್ಮು–ಕಾಶ್ಮೀರ ಗಳಲ್ಲಿ ಮಹಾರಾಜ ಹರಿಸಿಂಗರು ಅಧಿಕಾರದಲ್ಲಿದ್ದಾಗ ಮಹಾಜನರು ಮುಖ್ಯಮಂತ್ರಿ ಯಾಗಿದ್ದರು. ಕಾಶ್ಮೀರ ಭಾರತದೊಂದಿಗೆ ಸೇರ್ಪಡೆಯಾದದ್ದು ಅವರ ಕಾಲದಲ್ಲೇ.

೧೯೧೩ರಲ್ಲಿ – ತಮ್ಮ ೨೩ನೆಯ ವಯಸ್ಸಿನಲ್ಲಿ – ಮಹಾಜನರು ಕಾಂಗ್ರಾ ಜಿಲ್ಲೆಯ ಧರಮ್‌ಶಾಲಾ ಊರಿನಲ್ಲಿ ವಕೀಲವೃತ್ತಿ ಕೈಗೊಂಡರು. ಮುಂದೆ ೧೯೫೪ರಲ್ಲಿ ಶ್ರೇಷ್ಠ ನ್ಯಾಯಸ್ಥಾನದ ಮುಖ್ಯ ನ್ಯಾಯಾಧೀಶರೆಂದು ನೇಮಕವಾದರು.

[ನ್ಯಾಯಶಾಸ್ತ್ರವಲ್ಲದೆ ಅವರ ಇತರ ಆಸಕ್ತಿಗಳೆಂದರೆ ಶಿಕ್ಷಣ, ಬ್ಯಾಂಕಿಂಗ್, ತೋಟಗಾರಿಕೆ ; ತಮ್ಮ ಜಿಲ್ಲೆಯಾದ ಕಾಂಗ್ರಾದಲ್ಲಿ ಅವರಿಗೆ ಹಣ್ಣಿನ ತೋಪುಗಳಿವೆ.]

ಮಹಾಜನ್ ಜಡ ನ್ಯಾಯವಾದಿಯಲ್ಲ. ಚಿಂತನಪರವ್ಯಕ್ತಿ. ದೇಶದ ಆಗು ಹೋಗುಗಳ ಬಗೆಗೆ ತಮ್ಮ ಅಭಿಪ್ರಾಯಗಳನ್ನು – ಅವು ಎಷ್ಟೇ ಅಪ್ರಿಯವಾಗಿರಲಿ – ವ್ಯಕ್ತಪಡಿಸಲು ಹಿಂಜರಿಯುವವರಲ್ಲ.

ಅವರಿಗೀಗ ವಯಸ್ಸು ಎಪ್ಪತ್ತೇಳು.

*   *   *   *   *

ಛಿದ್ರೀಕರಿಸುವ ಶಕ್ತಿಗಳಿಗೆ ಭಾರತ ರಾಜ್ಯಾಂಗದ ಸಂಯೋಜಿತ ಸ್ವರೂಪ ಉತ್ತೇಜನವೀಯುತ್ತದೆ – ಎಂಬುದು ಮಹಾಜನರ ಅಭಿಪ್ರಾಯ.

ಸ್ವಲ್ಪ ಕಾಲದ ಹಿಂದೆ ಅವರು ಬರೆದರು :

"ಪ್ರತಿಯೊಬ್ಬನೂ ತನ್ನ ರಾಜ್ಯಕ್ಕಷ್ಟೇ ವಿಧೇಯನಾಗಿದ್ದ, ಭಾಷಾ ಗಡಿಗಳಿದ್ದ, ಪ್ರತ್ಯೇಕ ರಾಜ್ಯಗಳ ಗತಕಾಲಕ್ಕೆ ನಮ್ಮನ್ನು ಒಯ್ಯುವ ಪ್ರವೃತ್ತಿ ರಾಜ್ಯಾಂಗದಲ್ಲಿದೆ."

ಅವರು ಸೂಚಿಸಿದ ಪರಿಹಾರ :

"ಏಕೀಕೃತವಾದ ರಾಜ್ಯಾಂಗ. ಪ್ರತ್ಯಪ್ರತ್ಯೇಕ ರಾಜ್ಯಗಳಾಗಿ ದೇಶ ಒಡೆದು ಹೋಗುವುದರ ವಿರುದ್ಧ ಇದೊಂದೇ ರಕ್ಷೆ."

ಭಾಷಾವಾರು ಪ್ರಾಂತಗಳಿಗೆ ಸಂಬಂಧಿಸಿ ಮಹಾಜನರ ನಿಲುವನ್ನು ಸುದ್ದಿಗಾರರೊಬ್ಬರು ಅವರೊಡನೆ ಬೆಂಗಳೂರಿನಲ್ಲಿ ಪ್ರಸ್ತಾಪಿಸಿದರು.

ಅದಕ್ಕೆ ನ್ಯಾಯವಾದಿ ಮಹಾಜನರೆಂದರು :

"ನನ್ನ ಅಭಿಪ್ರಾಯಗಳಿಗೂ ಈ ವಿವಾದ ತನಿಖೆಯ ವ್ಯಾಪ್ತಿಗೂ ಸಂಬಂಧವಿಲ್ಲ."

* * * * *

ನಾನು ಸಲ್ಲಿಸಿದ ಮನವಿಯ ಕೊನೆಯ ವಾಕ್ಯ ಹೀಗಿತ್ತು :

"ಭಾವೀ ಪೀಳಿಗೆಗಳು ತಮ್ಮನ್ನು ಕೃತಜ್ಞತೆಯಿಂದ ಸ್ಮರಿಸುವಂತೆ ಈ ವಿವಾದಗಳನ್ನು ತಾವು ಬಗೆಹರಿಸುವಿರೆಂದು ನಾನು ಭರವಸೆ ಹೊಂದಿದ್ದೇನೆ."

ಅದನ್ನೋದಿದ ಮಹಾಜನರ ಹುಬ್ಬುಗಳು ಹೌದೋ ಅಲ್ಲವೋ ಎನ್ನುವಂತೆ ಆಕುಂಚನಗೊಂಡಂತಾಯಿತು. ಅವರೆಂದರು :

"ಭಾವೀ ಪೀಳಿಗೆಗಳು ಕೃತಜ್ಞತೆಯಿಂದ ನನ್ನನ್ನು ಸ್ಮರಿಸುವರೋ ಇಲ್ಲವೋ ನನಗೆ ತಿಳಿಯದು."

೫-೧೧-೧೯೬೭

# ದೀಪಾವಳಿಗೆ ಮುನ್ನ

ಬೆಳಗ್ಗೆ ಕಂಡ ಒಂದು ದೃಶ್ಯ ಮತ್ತೆ ಮತ್ತೆ ಕಣ್ಣಿಗೆ ಕಟ್ಟುತ್ತಿದೆ.

ಆಗಿನ್ನೂ ಏಳೂನಾಲ್ವತ್ತೈದು. ಮಕ್ಕಳನ್ನು ಶಾಲೆಯ ಬಳಿ ಬಿಟ್ಟು ಬರಲೆಂದು ಹೊರಟಿದ್ದೆ. ಬಸ್ ನಿಲ್ದಾಣ ಬರುವವರೆಗೂ ರಸ್ತೆ ನಿರ್ಜನ.

ಒಂದು ತಿರುವಿನಲ್ಲಿ ಜನರದೊಂದು ಗುಂಪನ್ನು ಕಂಡೆ. ಒಬ್ಬ ಮೋಟರ್ ಸೈಕಲ್ ಸವಾರನನ್ನು ತಡೆಹಿಡಿದು ಸುತ್ತುವರಿದಿದ್ದರು. ಏನೋ ವಾಗ್ವಾದ ನಡೆದಂತಿತ್ತು.

ಆ ಕ್ಷಣವೇ ಎಲ್ಲ ಸ್ಪಷ್ಟವಾಯಿತು. ಮೋಟರ್ ಸೈಕಲ್ ಸವಾರ ಮಿಲಿಟರಿಯವನು. ಆ ಜನ ನಗರದ ಸಾರಿಗೆ ಸಂಸ್ಥೆಯ ಬಸ್ ಚಾಲಕರು. ಆತನೂ ಅವರೂ ಹೊರಟಿದ್ದುದು ನಮ್ಮ ಮನೆಯ ಹಿಂಬದಿಯಲ್ಲಿದ್ದ ಸರಕಾರೀ ಬಸ್ಸುಗಳ ತಂಗುಮನೆಗೆ. ಹಿಂದಿನಿಂದ ಬರುತಿದ್ದ ಸವಾರನನ್ನು, ನಡೆಯುತ್ತ ಸಾಗಿದ್ದ ಚಾಲಕರು ತಡೆದು ನಿಲ್ಲಿಸಿದ್ದರು.

ಮಿಲಿಟರಿಯವನು ನೆಲಕ್ಕೆ ಕಾಲುಗಳನ್ನು ಊರಿ ವಾಹನದಿಂದ ಇಳಿಯದೆಯೆ ಮಾತುಗಳಿಂದ ಹಾವಭಾವಗಳಿಂದ ಗುಂಪು ಮನೋಧರ್ಮಕ್ಕೆ ಒಂಟಿದನಿಯ ಪ್ರತಿಭಟನೆ ಸಲ್ಲಿಸುತ್ತಿದ್ದ. ಆ ಬಸ್ ಚಾಲಕರು ನಾಲ್ಕು ದಿನಗಳ ಮುಷ್ಕರ ಮುಗಿಸಿ ಮತ್ತೆ ಕೆಲಸಕ್ಕೆ ಹೊರಟಿದ್ದವರು. ಶಿರಸ್ತ್ರಾಣ ಧರಿಸಿದ್ದ ಹಸುರುಖಾಕಿ ಸಮವಸ್ತ್ರದ ಸವಾರ, ಮುಷ್ಕರದ ವೇಳೆಯಲ್ಲಿ ಬಸ್ಸುಗಳನ್ನು ನಡೆಸಿದ ಮಿಲಿಟರಿ ವಾಹನ ಚಾಲಕರ ತಂಡಕ್ಕೆ ಸೇರಿದವನು. ಅವರಿಗೆ ಇವನ ಮೇಲೆ, ಇವನ ಬಳಗದ ಮೇಲೆ ಕೋಪ. ಅಂಥ ಸನ್ನಿವೇಶದಲ್ಲಿ ವಾಗ್ವಾದ ಘರ್ಷಣೆಯಾಗಿ ಮಾರ್ಪಡಲು ನಿಮಿಷಗಳು ಸಾಕು.

ಒಂದು ಕ್ಷಣ ನಿಂತರೂ ಶಾಲೆಗೆ ತಡವಾಗುತ್ತದೆ. ಹಾಗೆಂದು, ನಡೆಯುತ್ತಿದ್ದುದನ್ನು ಗಣನೆಗೆ ತೆಗೆದುಕೊಳ್ಳದೆ ಧಾವಿಸಿ ಹೋಗುವುದು ಆಗದ ಮಾತು. ನನ್ನ ವಾಹನದ ವೇಗವನ್ನು ನಿಧಾನಗೊಳಿಸಿದೆ. ಉದ್ವಿಗ್ನಗೊಂಡ ಮಿಲಿಟರಿಯವನು ನನ್ನ ಕಡೆಗೆ ನೋಡತೊಡಗಿದ. ಗುಂಪು ಚದರದಿದ್ದರೆ ಇಳಿದು ಮಧ್ಯೆ ಪ್ರವೇಶಿಸಬೇಕಾದ ಪ್ರಸಂಗ.

ಮಕ್ಕಳ ಪುಣ್ಯದಿಂದ ನನ್ನ ವಾಹನವನ್ನು ಕಂಡೊಡನೆ ರಸ್ತೆ ಸಾರಿಗೆ ಚಾಲಕರು ಮೋಟರ್ ಸೈಕಲಿನ ಮೇಲಿದ್ದ ಮಿಲಿಟರಿಯವನಿಂದ ತುಸು ದೂರ ಸರಿದರು. ಮಿಲಿಟರಿಯವನ ವಾಹನ ಶಬ್ದಿಸುತ್ತ ಮುಂದಕ್ಕೆ ಹೊರಟಿತು. ಗಂಟಿಕ್ಕಿದ ಮುಖ ಆತನ ಮನ

ಸ್ಸಿಗೆ ನೋವಾಗಿದೆ ಎನ್ನುತ್ತಿತ್ತು. ನಾವಿದ್ದ ವಾಹನವನ್ನು ದಾಟಿದಾಗ ನಮ್ಮ ಕಡೆ ಗೊಮ್ಮೆ ಆತ ದೃಷ್ಟಿ ಬೀರಿದ. 'ಈ ಜನ ಹೀಗೆ ಮಾಡುವುದು ಸರಿಯೆ?' ಎಂದು ನನ್ನನ್ನು ಕೇಳುವಂತಿತ್ತು ನೋಟ. ಮುಂದೆ ಅರ್ಧ ಕ್ಷಣದಲ್ಲಿ, ರಸ್ತೆಯ ಬದಿಗೆ ಸರಿದು ನಡೆಯತೊಡಗಿದ್ದ ಬಸ್ ಚಾಲಕರ ಗುಂಪನ್ನು ಸಂಧಿಸಿದೆವು. ಆ ಹತ್ತು ಜನ ನಗು ತಿದ್ದರು. ತಮ್ಮ ವರ್ತನೆಯ ಬಗೆಗೆ ಮೆಚ್ಚುಗೆ ನಿರೀಕ್ಷಿಸುವವರಂತೆ ನನ್ನ ಕಡೆಗೆ ನೋಡಿದರು.

ಖಿನ್ನ ಮನಸ್ಸಿನಿಂದ ನಾನು ಮುಂದೆ ಸಾಗಿದೆ.

ನನ್ನ ಹಿರಿಯ ಮಗಳು ಕೇಳಿದಳು :

"ಅದೇನು ?"

* * * * *

ಹೇಳುವಂತಿಲ್ಲ. ಹೇಳದೆ ಇರುವಂತಿಲ್ಲ. ಇದೀಗ ನಮ್ಮ ಪ್ರಚಲಿತ ಸಮಾಜದ ಆಗುಹೋಗುಗಳು.

ನಾಲ್ಕು ದಿನ ಬೆಂಗಳೂರು ನಗರದ ಜನಜೀವನ ಅಸ್ತವ್ಯಸ್ತವಾಯಿತು. ಮೊದಲ ಎರಡು ದಿನಗಳಲ್ಲಂತೂ ಮೂರು ಲಕ್ಷಕ್ಕೂ ಹೆಚ್ಚು ನಾಗರಿಕರು ಅನುಭವಿಸಿದ ಕಷ್ಟ ಹೇಳತೀರದು. ನಗರದ ಜನಸಂಖ್ಯೆಯಲ್ಲಿ ಐದರಲ್ಲಿ ಒಂದು ಭಾಗ ನಿತ್ಯ ವ್ಯವಹಾರದ ಓಡಾಟಕ್ಕೆ ಬಳಸುವುದು ಸರ್ಕಾರಕ್ಕೆ ಸೇರಿದ ಮುನ್ನೂರಕ್ಕು ಹೆಚ್ಚು ಬಸ್ಸುಗಳನ್ನು. ಇವು ಪ್ರತಿನಿತ್ಯ ೬೦೦೦ ಟ್ರಿಪ್ಪುಗಳನ್ನು ಮಾಡುತ್ತವೆ. ೩,೩೧೩ ಕಿಲೋಮಿಟರ್ ದೂರದ ದಾರಿಯನ್ನು ಅನೇಕ ಸಲ ಕ್ರಮಿಸುತ್ತವೆ. ಒಟ್ಟು ೫೫,೭೪೬ ಕಿಲೋ ಮೀಟರ್ ಓಡುತ್ತವೆ. ಖಾಸಗಿ ಉದ್ಯೋಗಿಗಳಿಗೆ, ಸರಕಾರೀ ಕರ್ಮಚಾರಿಗಳಿಗೆ, ವಿದ್ಯಾರ್ಥಿಗಳಿಗೆ, ಮಹಿಳೆಯರಿಗೆ, ಮಕ್ಕಳಿಗೆ ಬಸ್ಸೇ ಅತ್ಯಂತ ಸುಲಭವಾದ ಸಾರಿಗೆ ಸಾಧನ. ನಲ್ಲಿಯಲ್ಲಿ ನೀರು ನಿಲ್ಲುವುದು, ವಿದ್ಯುತ್ತಿನ ಪೂರೈಕೆಗೆ ಭಂಗಬರುವುದು, ರಸ್ತೆಯಿಂದ ಬಸ್ಸುಗಳು ಅದೃಶ್ಯವಾಗುವುದು – ಆಧುನಿಕ ಜೀವನಕ್ರಮದಲ್ಲಿ ಇವೆಲ್ಲ ಉಂಟುಮಾಡುವ ಪರಿಣಾಮ ಒಂದೇ.

ದೀಪಾವಳಿಯ ಉಡುಗೊರೆಯಾಗಿ ತನ್ನ ನೌಕರರಿಗೆ ಒಂದು ತಿಂಗಳ ಬೋನಸ್ ನೀಡಲು ರಾಜ್ಯ ರಸ್ತೆಸಾರಿಗೆ ಮಂಡಳಿ ನಿರ್ಧರಿಸಿದೆ ಎಂಬ ಸುದ್ದಿ ಬಂತು. ಅಂಥ ಬೋನಸ್ ದೊರೆಯದ ಲಕ್ಷಾಂತರ ಮಂದಿ, ಡ್ರೈವರು ಕಂಡಕ್ಟರು ಮತ್ತಿತರರೇ ಭಾಗ್ಯವಂತರು – ಎಂದುಕೊಂಡರು.

ನೌಕರರು ಮಾತ್ರ 'ಇಷ್ಟು ಸಾಲದು' ಎಂದರು. 'ಸಂಸ್ಥೆ ನಷ್ಟದಲ್ಲಿರು ವಾಗಲೂ ಬೆಂಗಳೂರಿನಲ್ಲಿ ರಾಜ್ಯ ಸಾರಿಗೆಯ ನೌಕರರು ಮಿಂಚಿನ ಮುಷ್ಕರ ಹೂಡಿ ದರು. ಇಷ್ಟು ಕೊಟ್ಟಿರುವುದೇ ಪರಮ ಔದಾರ್ಯ' ಎಂದರು ಆಡಳಿತದವರು. ರಾಜ್ಯದ ಹೃದಯದ ಬಡಿತದಲ್ಲಿ ಏರ-ಪೇರಾಯಿತು.

* * * * *

ದಿನವೂ ಲಕ್ಷಾಂತರ ಜನ ಸಂಚಾರ ಮಾಡುವ ನಗರ ಸಾರಿಗೆ ವ್ಯವಸ್ಥೆ ಕುಸಿದು ಬಿದ್ದರೆ ರಾಜ್ಯದ ಬೊಕ್ಕಸಕ್ಕೆ ಎಷ್ಟೊಂದು ನಷ್ಟ !—ಎಂದು ಯಾರಾದರೂ ಉದ್ಗರಿಸಬಹುದು. ಆದರೆ ವಾಸ್ತವವಾಗಿ ನಷ್ಟವಿಲ್ಲ, ಲಾಭವೇ ! ಯಾಕೆ ಅಂದರೆ, ಎಲ್ಲ ಬಸ್ಸುಗಳೂ ಓಡಾಡಿದಾಗ ವರ್ಷಕ್ಕೆ ೨೫ ಲಕ್ಷ ರೂಪಾಯಿ ನಷ್ಟವಾಗುವ ಭಾರೀ ಸಂಸ್ಥೆ ಇದು. ಅಂದರೆ ದಿನಕ್ಕೆ ಸುಮಾರು ೭ ಸಾವಿರ. ಒಂದಷ್ಟು ದಿನ ಮುಷ್ಕರ ನಡೆದರೆ ಪ್ರತಿದಿನವೂ ೭ ಸಾವಿರದಂತೆ ಉಳಿತಾಯವೇ ಅಲ್ಲವೆ ?

ನಷ್ಟವಾಗುತ್ತಿರಲು ಕಾರಣ ? ಅದು ಈ ವ್ಯವಸ್ಥೆಯು ತಳವಿಲ್ಲದ ಆಳದಲ್ಲಿ ಎಲ್ಲಿಯೋ ಸಿಲುಕಿಕೊಂಡಿದೆ. ಅತ್ಯಂತ ದಕ್ಷರು ಪಾತಾಳಗರಡಿ ಹಾಕಿದರೂ ಕಾರಣ ಅದರೊಡನೆ ಕಣ್ಣುಮುಚ್ಚಾಲೆಯಾಡುತ್ತಿದೆ.

* * * * *

ಶ್ರಮಜೀವಿಗಳ ಬಗೆಗೆ ಸಹಾನುಭೂತಿ ಸರ್ವಸಾಧಾರಣ. ಆದರೆ ಈ ಸಾರಿಗೆ ವ್ಯವಸ್ಥೆಯ ಚಾಲಕರು ಚಾಕರರ ವಿಷಯದಲ್ಲಿ ಬಸ್ ಸಂಚಾರಿಗಳಿಗೆ ಸಹಾನುಭೂತಿ ಇಲ್ಲದಿರುವುದು ಸೋಜಿಗದ ಸಂಗತಿ. ಬಹ್ವಂಶ ನೌಕರರು ಉದ್ಧಟತನಕ್ಕೆ ಕುಖ್ಯಾತರು. ಕಂಡಕ್ಟರು ಮೊದಲು ಕಲಕಿ ಕಲುಷಿತಗೊಳಿಸುವ ವಾತಾವರಣ ಬಹಳ ದೂರದ ತನಕ ಹಬ್ಬುತ್ತದೆ, ಎನ್ನುತ್ತಾರೆ.

ಅಕ್ರಮ ರೀತಿಯಲ್ಲಿ ನೌಕರರು ಮುಷ್ಕರ ಹೂಡಿದಾಗ ಸಾರಿಗೆ ಮಂಡಲಿಯ ಮುಖ್ಯ ಆಡಳಿತಾಧಿಕಾರಿಯಾಗಿರುವ ಉಪಾಧ್ಯಕ್ಷ ನರಸಿಂಹಮೂರ್ತಿಯವರು ದಿಟ್ಟತನದಿಂದ ವರ್ತಿಸಿದರು. ಮಿಲಿಟರಿಯ ನೆರವು ಪಡೆದು ಬಸ್ಸುಗಳನ್ನು ಓಡಿಸಿದರು. ಆ ಬಸ್ಸುಗಳು ಸೈನಿಕ ಶಿಸ್ತಿನಿಂದ, ವಾಹನ ಕಾನೂನುಗಳನ್ನು ನಿಷ್ಠೆಯಿಂದ ಪಾಲಿಸಿ, ಚಲಿಸಿದುವು.

ನಾಲ್ಕುದಿನ ಊರು ತುಂಬ ಬರಿಗಾಲಲ್ಲಿ ತಿರುಗಾಡಿದ ಮೇಲೆ ಸಾರಿಗೆ ನೌಕರರು ಮರಳಿ ಬಂದರು.

ನಾಟಕದ ಇನ್ನೊಂದು ಪ್ರದರ್ಶನ ಯಾವತ್ತು ಎಂಬುದನ್ನು ಕಾದು ನೋಡಬೇಕು.

೧೩–೧೧–೧೯೬೭

## ' ನೀವು ಸೋಮಾರಿಗಳು '....

ಎರಡು ಕಾರ್ಯಕ್ರಮಗಳಲ್ಲಿ ನಾನು ಇರಬೇಕಾಗಿತ್ತು. ಮೊದಲೇ ತಿಳಿಯದೆ ನನಗೆ ನಷ್ಟವಾಯಿತು.

ಒಂದು, ಗಾಂಧೀ ಭವನದಲ್ಲಿ ಹ್ಯಾನ್ಸ್ ಎ. ದಬೋರ್ ಅವರ ಉಪ ನ್ಯಾಸ.

ದಿನ ಪತ್ರಿಕೆಗಳಲ್ಲಿ ಪ್ರಕಟವಾದ ಚುಟುಕು ವರದಿಗಳನ್ನೋದಿ ಮೈಗೆ ಚಳಿ ಯಾಯಿತು.

" ನಿಮ್ಮ ಜನ ಸೋಮಾರಿಗಳು. ನೀವು (ಅಗತ್ಯವಿರುವುದಕ್ಕಿಂತಲೂ ಎಷ್ಟೋ) ಹೆಚ್ಚು ನಿದ್ದೆಮಾಡುತ್ತೀರಿ. ನಿಮ್ಮ ಊಟಗಳಿಗೆ ಬಹಳ ಹೊತ್ತು ಹಿಡಿಯುತ್ತದೆ. ಸಿಗರೇಟು ಸೇವನೆಯ ಪರಿಣಾಮುಗಳಂತಹ ಅರ್ಥಹೀನ ವಿಷಯಗಳ ಮೇಲೆ ನೀವು ಗಂಟೆಗಟ್ಟಲೆ ಚರ್ಚಿಸುತ್ತೀರಿ. ಒಟ್ಟನಲ್ಲಿ ಹೇಳುವುದಾದರೆ ಭಾರತೀಯರು ದುರ್ಬಲ ಜನರಂತೆ ಕಂಡು ಬರುತ್ತಾರೆ."

ಭಾರತವನ್ನು ಕುರಿತ ಕ್ಷುದ್ರ ಬಣ್ಣನೆಯಿಂದ ರಾಷ್ಟ್ರೀಯ ಚಳುವಳಿಯನ್ನು ಮತ್ತಷ್ಟು ಕೆರಳಿಸಲು ಕಾರಣಳಾದ ಮಿಸ್ ಮೇಯೋ ಮಾದರಿ ? ಅಥವಾ ಬಿವರ್ಲಿ ನಿಕ್ಲಾಲನ ಅಪರವತಾರ ? ಇಲ್ಲವೆ, ತನ್ನ ಪೂರ್ವಜರ ದೇಶವನ್ನು ಕಂಡು ಕತ್ತಲೆ ಯಲ್ಲಿ ಕಕ್ಕಾವಿಕ್ಕಿಯಾದ ನಯ್‌ಪಾಲ್ ?

ಮೊದಲಿನ ಇಬ್ಬರಿಗೂ ಈ ಜರ್ಮನ್ ಬಾಂಧವನಿಗೂ ಸಂಬಂಧವಿಲ್ಲ. ಈ ದೇಶಕ್ಕೆ ಬಂದು ಉಸಿರು ಕಟ್ಟಿದ ಸಂಕಟಕ್ಕೆ ಗುರಿಯಾದ ನಯ್‌ಪಾಲರಿಗೆ ಇವರನ್ನು ಒಂದು ವೇಳೆ ಹೋಲಿಸಲೂಬಹುದು. ಆದರೆ ಈ ಸಾಮ್ಯ ಸ್ವಲ್ಪ ಮಟ್ಟಿಗೆ ಮಾತ್ರ. ನಮ್ಮನ್ನು ಸೋಮಾರಿಗಳೆಂದು ಕರೆಯುವ ಈ ಮನುಷ್ಯ, ' ಭಾರತವನ್ನು ನನ್ನ ತೌರು ಮನೆಯಾಗಿ ಮಾಡಿಕೊಳ್ಳಬೇಕು ' ಎಂಬ ಅಪೇಕ್ಷೆ ಹೊಂದಿದ್ದಾರೆ. ಇಲ್ಲಿನ ಕತ್ತಲೆ ಯಿಂದ ಬೇರೆ ಕಡೆಯ ಬೆಳಕಿಗೆ ಹೋಗಲು ಅವರು ಇಷ್ಟಪಡುವುದಿಲ್ಲ.

ಹ್ಯಾನ್ಸ್ ಎ. ದಬೋರ್ ಪುಣ್ಯಶಾಲಿ. ಅವರು ಲೇಖಕರಲ್ಲ. ಸಂವೇದನಾ ಪರತೆ ಅವರನ್ನು ತಳ್ಳುವುದು ದುಡಿಮೆಯ ಕಡೆಗೆ. ಅವರು ಸದ್ಯಃ ಇರುವುದು ಸೇವಾ ಗ್ರಾಮದಲ್ಲಿ. ಎಳೆಯ ಯುವಕನಾಗಿ ಹಿಟ್ಲರನ ನಾಜೀವಾದಕ್ಕೆದಿರು ಹೋರಾಡಿದ ದಬೋರ್, ಕಳೆದ ಕಾಲು ಶತಮಾನವನ್ನು ಕಳೆದಿರುವುದು ಯುದ್ಧವಿರೋಧಿಯಾಗಿ, ಶಾಂತಿಯ ಪ್ರತಿಪಾದಕನಾಗಿ, ' ಅಹತ್ಯಾ ' ತತ್ತ್ವಾವಲಂಬಿಯಾಗಿ. ಹತ್ತು ದೇಶ

ಗಳನ್ನು ಸುತ್ತಿರುವ ವ್ಯಕ್ತಿ. ಭಾರತವನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡ ಬೇಕೆಂಬ ಆಸೆ.

ಒಳಗಿನ ಸಂಕಟ ಅವರಿಂದ ಮಾತು ಆಡಿಸುತ್ತದೆ: "ನಿಮ್ಮ ಜನ ಸೋಮಾರಿ ಗಳು........ನೀವು ಹೆಚ್ಚು ನಿದ್ದೆಮಾಡುತ್ತೀರಿ........"

ಈ ದೇಶದಲ್ಲಿ ಅವರು ಇನ್ನೇನು ಕಾಣುತ್ತಿದ್ದಾರೆ?

"ಪ್ರಜಾಪ್ರಭುತ್ವದಲ್ಲಿ ಜನಸಾಮಾನ್ಯರಿಗೆ ಉಪೇಕ್ಷೆ.... ಆಳುವ ವರ್ಗಗಳ ಅಜ್ಞಾನ........"

ಈ ರಾಷ್ಟ್ರದ ಭವಿಷ್ಯದಲ್ಲಿ ಕಂಡುಬರುವುದೇನು?

"ತಮ್ಮ ದೌರ್ಬಲ್ಯದಿಂದ ಜನರು ಚೇತರಿಸಿಕೊಳ್ಳದೇ ಇದ್ದರೆ ಇಲ್ಲಿ ಪ್ರಜಾ ಪ್ರಭುತ್ವ ನಾಶವಾಗುತ್ತದೆ. ಸರ್ವಾಧಿಕಾರ ನೆಲೆಸುತ್ತದೆ."

........ಎದೆ ಕುದಿತದ ಲಾವಾರಸವನ್ನು ಪದಗಳ ರೂಪದಲ್ಲಿ ಹೊರಬಿಡುವ ಈ ಮಹಾನುಭಾವನನ್ನು ಕಂಡು ನಮಿಸಬೇಕು ಎನಿಸುತ್ತಿದೆ.

* * * * *

ನಮನಕ್ಕೆ ಅರ್ಹರಾದ ಇನ್ನೊಬ್ಬರು ವ್ಯಕ್ತಿ, ಮಲ್ಲಾಡಿಹಳ್ಳಿಯ ಶ್ರೀ ರಾಘ ವೇಂದ್ರ ಸ್ವಾಮಿಯವರು. ಮುಕ್ಕಾಲು ಶತಮಾನವಾಗುತ್ತ ಬಂತು ಈ ಭೂಮಿಯ ಮೇಲಣ ಅವರ ಬದುಕಿಗೆ, ಸಾಧನೆ ಸಿದ್ಧಿಗಳಿಗೆ.

'ಹಟ' ಯೋಗಿಯಾದ ಈ ಚಡ್ಡಿ ಸನ್ಯಾಸಿ ಬೆಂಗಳೂರಿಗೆ ಬಂದದ್ದು ಕಹಳೆ ಯೂದಲು; ಕೇಳುವವರ ಕಿವಿಗಳಿಗೆ ತಮ್ಮ ಧ್ವನಿಯನ್ನು ಮುಟ್ಟಿಸಲು. ಪ್ರೇರಣೆ: ತಾವು ರೂಪುಕೊಟ್ಟ ಕನಸನ್ನು ಪಾರಮ್ಯದ ಹಂತಕ್ಕೆ ಒಯ್ಯುವ ಹಂಬಲ. ಸಂದರ್ಭ: ಅವರ ಅನಾಥ ಸೇವಾಶ್ರಮದ ಬೆಳ್ಳಿಯ ಹಬ್ಬದ ಸಿದ್ಧತೆ.

ಹಲವು ಮುಖಗಳನ್ನು ಹೊತ್ತ ವ್ಯಕ್ತಿ ರಾಘವೇಂದ್ರ 'ಸ್ವಾಮಿ'ಯವರು. ಗತ ಕಾಲದಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದ ಯೋಧ; ಯೋಗಾಭ್ಯಾಸಿ; ಸಾಹಿತಿ; ಆಯುರ್ವೇದ ಚಿಕಿತ್ಸಕ; ವಿದ್ಯಾ ತಜ್ಞ....

ಇಪ್ಪತ್ತೈದು ವರ್ಷಗಳಿಗೆ ಹಿಂದೆ ಮಲ್ಲಾಡಿಹಳ್ಳಿ ಕುಗ್ರಾಮವಾಗಿತ್ತು. ಹಲವು ಊರುಗಳನ್ನು ಸುತ್ತಿ ಬಂದ ರಾಘವೇಂದ್ರರಾಯರು ಅಲ್ಲಿ ನೆಲೆನಿಂತರು. ತಿಳಿವಿನ ನಂದಾದೀಪವನ್ನು ಅಲ್ಲಿ ಹಚ್ಚಿದರು. ಸತತ ಪರಿಶ್ರಮದಿಂದ ವಿದ್ಯಾಸಂಸ್ಥೆಗಳನ್ನು ಕಟ್ಟಿದರು. ಆ ಪ್ರದೇಶದ ಸಮಾಜಜೀವನದ ಕೇಂದ್ರವಾಯಿತು ಅವರ ಅನಾಥ ಸೇವಾಶ್ರಮ. ಈ ಎಲ್ಲ ಕಾಯಕಕ್ಕೆ ತಳಹದಿ ಅವರು ಎತ್ತಿದ ತಿರುಪೆ.

ಸರ್ವಶಕ್ತವಾದ ಸರಕಾರ ತನಗೆ ನೆರವಾಗಬೇಕು ಎನ್ನುವ ಆಸೆ ಸ್ವಾಮಿ ಯವರದು. ೧೯೫೭ರಲ್ಲಿ ರಾಜ್ಯಸರಕಾರ ಅವರನ್ನು ಗೌರವಿಸಬಯಸಿದಾಗ, "ನನಗೆ ಗೌರವ ಬೇಡ. ಸಂಸ್ಥೆಗೆ ಮೂರು ಲಕ್ಷ ರೂಪಾಯಿಗಳ ನೆರವು ನೀಡಿ,"

ಎಂದರು. ಸರಕಾರದ ಕಿವಿಗೆ ಅದು ಬೀಳಲಿಲ್ಲ. ೧೯೬೪ರಲ್ಲಿ ಸರಕಾರ ಮತ್ತೊಮ್ಮೆ ರಾಜ್ಯ ಪ್ರಶಸ್ತಿ ನೀಡಲು ಮುಂದಾಯಿತು. ಆಗ ಸ್ವಾಮಿಯವರೆಂದರು : "ನನಗಿದು ಬೇಡ. ಸಂಸ್ಥೆಗೆ ಐದುಲಕ್ಷ ರೂಪಾಯಿ ಕೊಟ್ಟರೆಂದರೆ ನಾನು ಉಪಕೃತ." ಏನೂ ಪ್ರಯೋಜನವಾಗಲಿಲ್ಲ.

ಇಂಥ ನಿರಾಕರಣೆಯ ಪತ್ರಗಳು ಸರಕಾರದ ದಾಖಲೆಗಳಲ್ಲಿ ಹೇಗೆ ಮಾಯ ವಾಗುತ್ತವೋ ಏನು ಕಥೆಯೋ. ಈ ವರ್ಷ ಮತ್ತೊಮ್ಮೆ ಸ್ವಾಮಿಯವರನ್ನು ಗೌರವಿ ಸಲು ಸರಕಾರ ನಿರ್ಧರಿಸಿತು. ಬೇಡ, ಕ್ಷಮಿಸಿ – ಎಂದರು ರಾಘವೇಂದ್ರಸ್ವಾಮಿ ಯವರು.

ಆಶ್ರಮದ ಶೈಕ್ಷಣಿಕ ಮತ್ತಿತರ ಚಟುವಟಿಕೆಗಳ ವಿಸ್ತರಣಕ್ಕೆ ಹಣವನ್ನು, ನಾಲಾ ಪ್ರದೇಶದಲ್ಲಿ ಸಾಕಷ್ಟು ಭೂಮಿಯನ್ನು, ಅವರು ಅಪೇಕ್ಷಿಸುತ್ತಾರೆ. ಮುಂದೆ ಮಲ್ಲಾಡಿಹಳ್ಳಿಯಲ್ಲಿ ಗ್ರಾಮೀಣ ವಿಶ್ವವಿದ್ಯಾಲಯದ ಸ್ಥಾಪನೆ ಸಾಧ್ಯವಾಗಬೇಕು ಎನ್ನುವುದು ಅವರ ಅಭಿಲಾಷೆ.

ಅದಕ್ಕಾಗಿ ಬೆಳ್ಳಿಯ ಹಬ್ಬದ ಸಂದರ್ಭದಲ್ಲಿ ಮಹಾಜನತೆಯಿಂದ ಮೂವತ್ತು ಲಕ್ಷ ರೂಪಾಯಿ ಸಂಗ್ರಹಿಸಲು ತಿರುಕ ಹೊರಟಿದ್ದಾರೆ.

........ನಿಸ್ಸಂದೇಹವಾಗಿಯೂ ಅಸಾಮಾನ್ಯ ವ್ಯಕ್ತಿ. ಭಾರೀ ಕಾದಂಬರಿಯ ನಾಯಕನಾಗಬಲ್ಲ ಸಮರ್ಥ.

೧೯–೧೧–೧೯೬೭

# ಕಾನನದಲ್ಲಿ ವಾಗ್ದೇವಿಯ ಕಾರ್ಯಾಗಾರ

ವೃಷಭಾವತಿ – ಸೊಗಸಾದ ಹೆಸರು. ಈಕೆ ಎತ್ತರದ ಎರಡು ಗುಡ್ಡಗಳ ಮಧ್ಯೆ ಮರಗಿಡಗಳೊಡನೆ ಚಕ್ಕಂದವಾಡುತ್ತ ಹರಿದು ಹೋಗುತ್ತಾಳೆ. ಇವಳನ್ನು ಹುಡುಕುವ ವಯಸ್ಸಲ್ಲ ಇನ್ನೂ.

ವೃಷಭಾವತಿಯ ದಡದಲ್ಲಿ ಒಂದೆಡೆ ದಟ್ಟನೆಯ ಸೃಷ್ಟಿ ಕಾಡು. ಶ್ರೀಗಂಧದ ಮರಗಳು, ಸರುವೆ ಮರಗಳು, ಇನ್ನಿತರ ಬಗೆ ಬಗೆಯ ಸಸ್ಯ ಸಂಪತ್ತು. ದಾರಿ ಬಿಡಿಸಿಕೊಂಡು ಅಣ್ಣಗುಡ್ಡವನ್ನು ಏರಿ ನಿಂತರೆ, ಸೊಗಸಾದ ಗಾಳಿ ಎದೆ ಹಿಗ್ಗಿಸುತ್ತದೆ. ಒಂದೆಡೆ ದೃಷ್ಟಿ ಚಾಚುವವರೆಗೂ ಹಸಿರು. ಇನ್ನೊಂದೆಡೆ ದೂರದಲ್ಲಿ ಕಲ್ಲು ಗಾರೆ ಕೊಳವೆಗಳ ಚಿಕ್ಕ ಲೋಕ. ಅದು ಬೆಂಗಳೂರು. (ಇರುಳಾದರೆ ನೆಲದಲ್ಲಿ ಬಿದ್ದಿರುವ ನಕ್ಷತ್ರರಾಶಿಯನ್ನು ಕಾಣಬಹುದು.)

ಋಷಿಗಳು ಈ ನೆಲವನ್ನು ಹಿಂದೆ ತುಳಿದಿರಬೇಕು. ಕವಿಗಳು ಭಾವಸಮಾಧಿಗಾಗಿ ತಾಣ ಹುಡುಕಿಕೊಂಡು ಪ್ರಾಯಶಃ ಇಲ್ಲಿಗೆ ಬಂದಿರಲಾರರು. ಅಥವಾ ……

ಗತಕಾಲದ ಕಥೆಯನ್ನು ಇದು ಇಂಥದು, ಇದು ಹೀಗೆ ಎಂದು ನಿರ್ಧರಿಸುವುದು ಕಠಿನ, ಸಾಕ್ಷ್ಯಗಳ ಅಭಾವದ ಕಾರಣದಿಂದ. ನಗರದಿಂದ ಆರೇಳು ಮೈಲುಗಳ ದೂರದಲ್ಲಿರುವ ಈ ನೆಲದ ಈಗಿನ ಕಥೆ ರಾಜ್ಯದ ರಾಜಧಾನಿಯಲ್ಲಿ ಮನೆ ಮಾತು. ಇದರ ನಾಳಿನ ಕಥೆ, ಭಾವುಕರ ಪಾಲಿಗೆ ಕಲ್ಪನೆಯ ಬಣ್ಣದ ಹಬ್ಬ.

* * * * *

ಬುಲ್‌ಡೋಜರುಗಳು, ಕ್ರೇನುಗಳು, ಲಾರಿಗಳು, ಜೀಪುಗಳು, ದುಡಿಯುವವರ ಇರುವೆ ಸಾಲುಗಳು. ಇನ್ನು ಕೆಲವೇ ತಿಂಗಳಲ್ಲಿ, ಈ ನಿರ್ಜನ ಪ್ರದೇಶದಲ್ಲಿ, ಶ್ರಮ ಸಂಗೀತ ಧ್ವನಿಸಿ ಪ್ರತಿಧ್ವನಿಸುತ್ತದೆ. (ಅದನ್ನು ಕುರಿತು ಕವಿತೆ ಬರೆಯುವ ಮೊದಲ ಹಕ್ಕು ವಿನಾಯಕರದು.) ಆ ದುಡಿಮೆಯ ಫಲವಾಗಿ ಕಾನನದ ಮಧ್ಯೆ ಊರು ಕಾಣಿಸಿಕೊಳ್ಳುತ್ತದೆ. ಊರಲ್ಲ, ವಾಗ್ದೇವಿಯ ಕಾರ್ಯಾಗಾರ, ನಗರ.

ಇನ್ನು ಐದು ವರ್ಷಗಳೊಳಗೆ ಐದು ಸಾವಿರ ಎಳೆಯರು – ಯುವಕ, ಯುವತಿಯರು ಅನ್ನಿ – ಈ ಸರಸ್ವತಿ ವನದಲ್ಲಿ ವಿದ್ಯಾರ್ಜನೆ ಮಾಡುತ್ತಾರೆ. ವೇಗವಾಗಿ ಚಲಿಸುವ ವಾಹನಗಳು, ಸುಂಯ್‌ಗುಡುವ ಸ್ಕೂಟರುಗಳು, ಟ್ರಿಣ್‌ಗುಟ್ಟುವ ಸೈಕಲ್ಲುಗಳು, ನಗುನಗುತ್ತ ಹರಟುತ್ತ ಸಾಗುವ ಪಾದಚಾರಿಗಳು.

ಸಾಹಿತ್ಯ, ವಿಜ್ಞಾನ, ಶಿಲ್ಪ – ಇವೆಲ್ಲದರ ಬಗೆಗೆ ಉಚ್ಚ ಶಿಕ್ಷಣ, ಸ್ನಾತಕೋತ್ತರ ಶಿಕ್ಷಣ. ಅಲ್ಲಿಯೇ ವಸತಿ, ಅಲ್ಲಿಯೇ ಅಧ್ಯಯನ.

ಇವುಗಳ ಮಧ್ಯೆ ಒಂದು ಗಾಂಧೀಭವನ. ಗತಕಾಲದ ಮಹಾನುಭಾವನನ್ನು ಕುರಿತು ಚಿಂತಿಸಬಯಸುವವರಿಗೆ ಇದು ನೆಲೆ. (ಇನ್ನೊಂದು ಶತಮಾನಮೊಳಗೆ ಕಂಡುಬರುವ ಭಾರೀ ವಿರೋಧಾಭಾಸಕ್ಕೆ ಸಂಕೇತ.)

* * * * *

ಅದು ಬೆಂಗಳೂರು ವಿಶ್ವವಿದ್ಯಾನಿಲಯದ ಕ್ಯಾಂಪಸ್. ಕುಲಪತಿ ಲ್ಯರೋಯಾ ಕನಸು ಕಂಡರು. ಆ ಸ್ಥಾನದಿಂದ ಗೋಕಾಕರು ಅದನ್ನೀಗ ನನಸುಗೊಳಿಸುತ್ತಿದ್ದಾರೆ.

ಗುಡ್ಡ ಕಾಡು ಬಯಲುಗಳ ಮಧ್ಯೆ ಅಲ್ಲಿ ಇಲ್ಲಿ ಹೊಗೆಯಾಡುತ್ತದೆ. ಮಲತಹಳ್ಳಿ, ನಾಗದೇವನಹಳ್ಳಿ, ಕೆಂಚನಹಳ್ಳಿ, ಪಂತರಪಾಳ್ಯ, ನಾಯಂಡನಹಳ್ಳಿ, ನಾಗರಭಾವಿ (ಬಾವಿ ಇರಬಹುದು, ಬಳಕೆ ಮಾತಿನಲ್ಲಿ ಭಾವಿ) ಇವೆಲ್ಲ ಇನ್ನು ಸರಸ್ವತಿಯ ನಾಟ್ಯ ಬಯಲಿನಲ್ಲಿ ಸಮಾವೇಶಗೊಳ್ಳುತ್ತವೆ.

ನಾನ್ನೂರು ಎಕರೆ ಸ್ಥಳ ವಿಶ್ವವಿದ್ಯಾಲಯದ ಸ್ವಾಧೀನಕ್ಕೆ ಬಂದಿದೆ. ಇನ್ನೂ ಮುನ್ನೂರು ಬರಲಿದೆ. ಅಲ್ಲದೆ ೧೦೦೦ ಎಕರೆಗಳನ್ನು – ಕಾದಿರಿಸಿದ ಸ್ಥಳವನ್ನು – ಸರಕಾರ ಕೊಡಲಿದೆ. ಇದೂ ಸಾಲದೆ ಹೋದರೆ ಮತ್ತೂ ಮೈ ಚಾಚಬಹುದು. ಇದೇನೂ ದ್ವೀಪವಲ್ಲ. ಭೋರ್ಗರೆಯುವ ಸಮುದ್ರದ ಅಡ್ಡಿ ಆತಂಕಗಳಿಲ್ಲ.

ಕ್ಯಾಂಪಸ್ ಸಿದ್ಧವಾಗಬೇಕಾದರೆ ಒಟ್ಟು ೧೫ ಕೋಟಿ ರೂಪಾಯಿಗಳಾದರೂ ಬೇಕು. ವರ್ಷಕ್ಕೆ ಸುಮಾರು ಒಂದು ಕೋಟಿ ರೂಪಾಯಿಯಂತೆ ವೆಚ್ಚ. ವಿಲಂಬಕಾರಿಣಿಯಾದ ಕೆಂಪು ಪಟ್ಟಿ ಕಾಲ್ತೊಡಕಾಗದಿದ್ದರೆ, ನಿಶ್ಚಿತ ಅವಧಿಯಲ್ಲೇ ಕೆಲಸ ಮುಗಿಯುವುದು ಸಾಧ್ಯ.

* * * * *

ಆ ಭಾವೀ ಕ್ಯಾಂಪಸಿನ (ಯಾವ ನಗರ? ಯಾರ ಹೆಸರು?) ತಾಣದಲ್ಲಿ ಮೊನ್ನೆ ಸೆನೆಟ್ ಸಭೆ ಜರಗಿತು. ಅದು ಮುಗಿಯುವ ವೇಳೆಗೆ ಲಗ್ಷುರಿ ಬಸ್ಸು ಪತ್ರಿಕಾ ಪ್ರತಿನಿಧಿಗಳನ್ನು ಹೊತ್ತು ತಂದಿತು.

ನೀಲಿ ನಕಾಶೆಯ ಮುಂದೆ ನಿಂತ ಕುಲಪತಿ ನಾಳೆಯ ಕ್ಯಾಂಪಸಿನ ನುಡಿಚಿತ್ರ ನೀಡಿದರು. ಅವರ ವಾಗ್ಝರಿ ಅಭಿಪ್ರಾಯಗಳನ್ನು ನಿರ್ಮಿಸಿತು, ಕಟ್ಟಡಗಳನ್ನು ಕಟ್ಟಿತು, ಗುಡ್ಡದ ಮೇಲಿನ ಕಾಲ್ಪನಿಕ ವಿಶ್ರಾಂತಿ ಗೃಹಕ್ಕೆ ಶ್ರೋತೃಗಳನ್ನು ಒಯ್ದಿತು, ಗ್ರಂಥ ಭಾಂಡಾರದಲ್ಲಿ ಓಡಾಡಿಸಿತು, ಕೊನೆಯದಾಗಿ ಬಯಲು ನಾಟ್ಯಮಂದಿರಕ್ಕೆ ಕರೆತಂದಿತು.

ಸಂಘಟನೆ ಮತ್ತು ಕನವರಿಕೆ. ಕವಿಗೆ ಯಾವುದು ಸುಲಭ? ವಿ. ಕೃ. ಗೋಕಾಕರು ವಿದ್ಯಾಭೂಷಣರು, ಕವಿ–ದಾರ್ಶನಿಕರು; ಆದರೆ ಲೆಕ್ಕ ಕೂಡಿಸುವ ಕಳೆಯುವ, ಮಾಡುವ ಮಾಡಿಸುವ ರಾಜ್ಯಭಾರ ಇವರಿಂದ ಆದೀತೆ?– ಎಂದು ಸಂದೇಹ ವ್ಯಕ್ತ

ಪಡಿಸಿದವರಿದ್ದರು. ಅಂಥವರ ಶಂಕೆ ಎಂದೋ ಪರಿಹಾರವಾಗಿದೆ. 'ಈ ಗೋಕಾಕರು ಹಲವು ಅಂಶಗಳುಳ್ಳ ಸಮಗ್ರ ಮಾನವ' ಎಂದು ಅವರು ಒಪ್ಪಿದ್ದಾರೆ. ವಾಸ್ತವವಾಗಿ, ಕಟ್ಟುವ ಕೆಲಸವನ್ನು ಹಲವು ಸಲ ಮಾಡಿರುವ ಅನುಭವಿ ಗೋಕಾಕರು. ಅವರ ನಿರ್ಮಾಣ ಸಾಮರ್ಥ್ಯಕ್ಕೆ ಅವರ ವ್ಯವಸ್ಥಿತ ಜೀವನ ಸಾಕ್ಷಿ.

ಅಲ್ಲದೆ, ರಿಜಿಸ್ಟ್ರಾರ್ ಮಲ್ಲಿಕಾರ್ಜುನಪ್ಪನವರು ಎಲ್ಲ ನರನಾಡಿಗಳನ್ನೂ ಬಲ್ಲ ಧನ್ವಂತರಿ. ಮೈಸೂರು ವಿಶ್ವವಿದ್ಯಾಲಯದ ಕಾರ್ಯನಿರ್ವಹಣೆಯ ಒಸ್ನೆಲೆ. ಬೆಂಗಳೂರು ವಿಶ್ವವಿದ್ಯಾಲಯದ ಹುಟ್ಟಿನಿಂದಲೂ ಅದರೊಡನೆ ಅವರು ಸಾಧಿಸಿರುವ ಸಾಮರಸ್ಯ, ಕಾಠಿನ್ಯಕ್ಕೂ ಸೌಜನ್ಯ ಲೇಪಿಸಬಲ್ಲ ಕೌಶಲ ಅವರನ್ನು ವಿದ್ಯಾರಂಗದ ದಕ್ಷ ದಂಡನಾಯಕನಾಗಿ ಮಾಡಿವೆ.

* * * * *

ನಿಸರ್ಗದ ಮಡಿಲಿನಿಂದ ಮರಳಿ ಬರುತ್ತ ಲೆಕ್ಕ ಹಾಕಿದೆ: ಮಕ್ಕಳು ದೊಡ್ಡವರಾಗುವ ವೇಳೆಗೆ ಈ ಕಾಡು ಊರಾಗುತ್ತದೆ. ಅವರಿಗೆ ಅಲ್ಲಿಯೇ ಶಿಕ್ಷಣ. ವೃಷಭಾವತಿಯಲ್ಲಿ ಪಾದಗಳನ್ನು ತೋಯಿಸಿಕೊಳ್ಳುವ ಹೊಸ ಜನಾಂಗದವರು ಅವರು. ಆ ವಾಗ್ದೇವಿಯ ಕಾರಾಗಾರದ ಮೂಸೆಯಲ್ಲಿ ರೂಪುಗೊಂಡು ಬದುಕನ್ನು ಇದಿರಿಸಲು ಅವರು ಅಲ್ಲಿಂದ ಇಳಿದು ಬರಬೇಕು.

೧೦–೧೨–೧೯೬೭

# ' ಕಾಮಸೂತ್ರ 'ದ ದೇಶ

ಪ್ರೊ.—ರವರು ತಮಗೆ ಆದ ಅನುಭವವನ್ನು ಈ ಬೆಳಗ್ಗೆ ಬಣ್ಣಿಸಿದರು. ಕಳೆದ ವಾರ ಅವರ ಮನೆಯಲ್ಲಿ ನಡೆದ ಕೌಟುಂಬಿಕ ಸಮಾರಂಭಕ್ಕೆ ಸಂಬಂಧಿಸಿ ಏಳೆಂಟು ನೂರು ಜನ ಮಿತ್ರರಿಗೆ ಆಮಂತ್ರಣ ಪತ್ರಿಕೆಯನ್ನು ಅವರು ಕಳುಹಿಸಿದ್ದರು. ಅದಕ್ಕಾಗಿ ಹಳೆಯ ಕಡತಗಳನ್ನು ಹೊರತೆಗೆದು ಪತ್ರಗಳಿಂದಲೋ ಪಟ್ಟಿಯಿಂದಲೋ ವಿಳಾಸಗಳನ್ನು ಆಯ್ದು ಜೋಡಿಸಿದ್ದರು. ಹಿಂದೆ ಅವರ ವಿದ್ಯಾರ್ಥಿಗಳಾಗಿದ್ದು ಉದ್ಯೋಗದಲ್ಲಿದ್ದವರು; ಕಿರಿಯರಾಗಿದ್ದು ಬೆಳೆದು ಸಂಸಾರಿಗರಾದವರು; ದೂರ ದೂರದ ಊರುಗಳಲ್ಲಿ ನೆಲೆಸಿದವರು.

ಅವರೆಲ್ಲ ಸಮಾರಂಭಕ್ಕೆ ಬರುತ್ತಾರೆಂದು ಪ್ರೊ.-ರವರು ನಿರೀಕ್ಷಿಸಿರಲಿಲ್ಲ. ಮೈತ್ರಿ ವಲಯದ ಎಲ್ಲ ನಕ್ಷತ್ರಗಳಿಗೆ ಸಂದೇಶ ತಲಪಿಸುವುದು ತನ್ನ ಕರ್ತವ್ಯ ಎಂದು ಅವರು ತಿಳಿದಿದ್ದರು. ಶುಭಾಶಯಗಳು ಆಮಂತ್ರಿತರಿಂದ ಬಂದಾಗ ಅವರಿಗೆ ಸಂತೋಷವಾಯಿತು. ಆದರೆ ಆ ಸಂತೋಷದ ಜತೆಯಲ್ಲೇ........

ಕೆಲವು ಆಮಂತ್ರಣಪತ್ರಿಕೆಗಳು ಮರಳಿ ಬಂದಿದ್ದುವು. ಅವುಗಳಲ್ಲಿ ಕೆಲವು 'ವಿಳಾಸದಾರರು ಸಿಗಲಿಲ್ಲ' ಎಂದು ಚಿತ್ತು ಮೋರೆ ಹಾಕಿದ್ದರೆ, ಇನ್ನು ಕೆಲವು ಬೇರೆಯೇ ಬಗೆಯ ವರದಿ ನೀಡಿದ್ದುವು: 'ಅಮೆರಿಕದಲ್ಲಿದ್ದಾರೆ,' 'ಕೆನಡಾದಲ್ಲಿದ್ದಾರೆ,' 'ಯುರೋಪಿನಲ್ಲಿದ್ದಾರೆ,' 'ವಿದೇಶದಲ್ಲಿದ್ದಾರೆ....'

ಪ್ರಾಧ್ಯಾಪಕರಿಗೆ ಆಶ್ಚರ್ಯ. "ನನಗೆ ಬೇಕಾದ ಇಷ್ಟೊಂದು ಜನ ವಿದೇಶಗಳಿಗೆ ಹೋಗಿರುತ್ತಾರೆ ಅಂತ ನಾನು ಭಾವಿಸಿಯೇ ಇರಲಿಲ್ಲ."

* * * * *

ಆ ಪ್ರಾಧ್ಯಾಪಕರು ಮೂವತ್ತು ನಾಲ್ವತ್ತು ವರ್ಷಗಳಿಗೆ ಹಿಂದೆ ವಿದೇಶಕ್ಕೆ ಹೋದದ್ದು ಸಾಗರದ ಮೇಲೆ ತೇಲಿಕೊಂಡು. ಆ ದೂರದೇಶದಲ್ಲಿ ಇದ್ದಷ್ಟು ವರ್ಷಗಳೂ ಇನ್ನೊಂದು ಕನ್ನಡ ಪ್ರಾಣಿಯನ್ನು ಅವರು ಕಂಡವರಲ್ಲ. ಭಾರತೀಯರು ಇನ್ನೂ ಮೂವರಿದ್ದರು, ದೇಶದ ಬೇರೆ ಬೇರೆ ಭಾಗಗಳಿಂದ ಬಂದವರು. ಈ 'ವಿದೇಶೀಯ'ರನ್ನು ಅಲ್ಲಿನವರು ಪರಿಗಣಿಸುತ್ತಿದ್ದುದು ಭಾರತೀಯರೆಂದು. 'ನಮ್ಮ ನಡೆ ನುಡಿಗಳಿಂದ ಇಡಿಯ ಭಾರತದ ಬಗೆಗೇ ಇವರು ತೀರ್ಪು ಕೊಡುತ್ತಾರೆ' ಎಂಬ ಹೊಣೆಗಾರಿಕೆಯ ಅರಿವು ಇಲ್ಲಿಂದ ಹೋದವರಿಗೆ ಇರುತ್ತಿತ್ತು.

ಈಗ ಹಾಗಲ್ಲ. ಕನ್ನಡಿಗರಿಗೆ, ಈ ದೇಶದ ಇನ್ನಿತರ ಭಾಷಾ ಬಾಂಧವರಿಗೆ, ಜಗತ್ತು ಚಿಕ್ಕದಾಗಿದೆ. ಸ್ವಾತಂತ್ರ್ಯಪ್ರಾಪ್ತಿಯಾದ ಮೇಲೆ ವಿದೇಶಗಳಿಗೆ ಹೋಗಿ ಬರುವವರ ಸಂಖ್ಯೆ ಹೆಚ್ಚಿದೆ. ಸ್ವಾತಂತ್ರ್ಯ ದೊರೆಯದೆ ಇದ್ದಾಗಲೂ ದೇಶಾಂತರ ಪ್ರವಾಸಿಗರು ಕಡಮೆಯಾಗುತ್ತಿರಲಿಲ್ಲ. ಕಳೆದ ಘೋರ ಯುದ್ಧಾನಂತರ ದೇಶ ಯಾವುದು? ವಿದೇಶ ಯಾವುದು? ಎಂಬುದನ್ನು ಬೇರ್ಪಾಟು ಮಾಡಿ ಹೇಳುವುದು ಕಷ್ಟ.

ದೂರ ಯಾನಕ್ಕೆಂದು ಬೆಂಗಳೂರು ಬಿಡುವವರು, ರೆಕ್ಕೆ ಬಿಚ್ಚಿ ಇಲ್ಲಿಂದ ಮೇಲೇರುವ ಪ್ರತಿಯೊಂದು ವಿಮಾನದಲ್ಲೂ ಇದ್ದೇ ಇರುತ್ತಾರೆ. ಅವರ ಆಧುನಿಕ ಪ್ರಯಾಣ ಪರಿಕರಗಳನ್ನು ತೆರೆದು ನೋಡಿದರೆ, ತೀರ ಪರಿಚಿತವಾದ ಕೆಲ ವಸ್ತುಗಳನ್ನು ಕಾಣಬಹುದು : ಊದುಕಡ್ಡಿ, ಉಪ್ಪಿನಕಾಯಿ, ಚಟ್ನಿಪುಡಿ, ಗಂಧದ ಮರದ ಸಣ್ಣ ಪುಟ್ಟ ಸಾಮಗ್ರಿಗಳು........

ಅಧ್ಯಯನ, ವಿಹಾರ, ವ್ಯವಹಾರ — ವಿದೇಶ ಪ್ರವಾಸಕ್ಕೆ ಬೇರೆ ಬೇರೆ ಕಾರಣಗಳಿರಬಹುದು. ಹೋಗಿ ಬಂದವರಿಗೆ ಆಗುವ ಲಾಭ ಸ್ವಲ್ಪವಲ್ಲ. ಹಾಗೆ ನೋಡಿದರೆ ಈ ಲಾಭ ಏಕಮುಖವೂ ಅಲ್ಲ. ನಮ್ಮವರ ತಿಂಗಳ ಅಥವಾ ವರ್ಷದ ವಾಸ್ತವ್ಯದಿಂದ ಅಲ್ಲಿನವರಿಗೆ ಒಂದಿಷ್ಟಾದರೂ ಲಾಭವಾಗಲೇಬೇಕು.

ಗಡಿ ದಾಟಿ ಹೋಗುವ ಪ್ರತಿಯೊಬ್ಬನೂ ಈ ದೇಶದ ರಾಯಭಾರಿ – ಎನ್ನುವುದು ಮೇಲಿನ ಅರ್ಥದಲ್ಲಿ.

* * * * *

ಭಾರತದ ಬಗ್ಗೆ ವಿದೇಶೀಯರಲ್ಲಿ ತಿಳಿವಳಿಕೆಯೂ ಇದೆ, ಅಜ್ಞಾನವೂ ಇದೆ. ತಿಳಿವಳಿಕೆ ಸೀಮಿತವಾಗಿರುವುದು ಅಲ್ಪ ಸಂಖ್ಯಾಕರಿಗೆ, ಎರಡನೆಯದು ಉಳಿದೆಲ್ಲರಿಗೆ.

ಪ್ಯಾರಿಸಿಗೆ ಹೋದ ರಂಗರಾಯರು ಬರೆದ ಕಾಗದದಿಂದ ಕೆಲ ಅಂಶಗಳನ್ನು ಉಲ್ಲೇಖಿಸಬಹುದು :

“ನಾನು ಈ ನಗರವನ್ನು ತಲುಪಿದ ಪ್ರಥಮ ದಿನವೇ ಒಂದು ಪುಸ್ತಕದಂಗಡಿಗೆ ಭೇಟಿ ನೀಡುವ ಅವಕಾಶ ಲಭಿಸಿತು. ‘ಕಾಮಸೂತ್ರ’ದ ಹೊರತಾಗಿ ಭಾರತದ ಅಥವಾ ಭಾರತವನ್ನು ಕುರಿತ ಒಂದು ಪುಸ್ತಕವೂ ಅಲ್ಲಿರಲಿಲ್ಲ. ‘ಕಾಮಸೂತ್ರ’ ಕಣ್ಣಿಗೆ ಬೀಳುವಂತೆ ಪ್ರದರ್ಶಿತವಾಗಿದೆ. ಅದು ಬಹಳ ಜನಪ್ರಿಯವಾದ ಭಾರತೀಯ ಪುಸ್ತಕ ಎಂದು ನನಗೆ ಹೇಳಿದರು.

“ಏಷ್ಯವನ್ನು ಕುರಿತು ಸಭೆಗಳೂ ಚರ್ಚೆಗಳೂ ಇಲ್ಲಿ ನಡೆದಾಗ ಚೀನಾ, ಜಪಾನುಗಳನ್ನು ಕುರಿತ ಮಾತುಗಳಷ್ಟೇ ಕೇಳಿಸುತ್ತವೆ. ಉಪನ್ಯಾಸಕಾರರು ಭಾರತದ ಪ್ರಸ್ತಾಪ ಮಾಡಿದರೆ ಅದು, ಅಲ್ಲಿನ ಕ್ಷಾಮ ದಾರಿದ್ರ್ಯಗಳಿಗೆ ಸಂಬಂಧಿಸಿ ಮಾತ್ರ. ಯೋಗವನ್ನು ಕುರಿತು ಚರ್ಚೆಯಾದಾಗಲೂ ಅದನ್ನೊಂದು ದೈಹಿಕ ಸಾಧನೆಯೆಂದು ಪರಿಗಣಿಸುತ್ತಾರೆ; ಭಾರತೀಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ಅದನ್ನು ಕಾಣುವುದಿಲ್ಲ.

"ಹಲವರು ನನ್ನನ್ನು ಹಾವಾಡಿಗರ ವಿಷಯ, ಚೂಪುಮೊಳೆಗಳ ಮಂಚದ ಮೇಲೆ ಮಲಗುವ ನಗ್ನ ಸಾಧುಗಳ ವಿಷಯ ಕೇಳಿದರು. 'ತಮ್ಮ ಅಧ್ಯಕ್ಷ ಮುಸಲ್ಮಾನನಾಗಿರುವುದು ಭಾರತೀಯರಿಗೆ ಇಷ್ಟವಿಲ್ಲ ಅಲ್ಲವೆ?' ಎಂದು ಅಲ್ಲಿರುವ ಮೊರೊಕ್ಕೋ ವಿದ್ಯಾರ್ಥಿಯೊಬ್ಬ ನನ್ನನ್ನು ಕೇಳಿದ.

"ಫ್ರಾನ್ಸಿನ ಪ್ರಖ್ಯಾತ ಸಂಸ್ಥೆಯೊಂದು ಒಂದು ನಿಘಂಟನ್ನು ಪ್ರಕಟಿಸಿದೆ. ಅದರಲ್ಲಿ ಜಗತ್ತಿನ ಪ್ರಮುಖ ದೇಶಗಳ ಪಟ್ಟಿಯಿದೆ. ಆ ಪಟ್ಟಿಯಲ್ಲಿ ಇರಾನು, ಕೊರಿಯಾಗಳಿವೆ. ಆದರೆ ಭಾರತದ ಹೆಸರಿಲ್ಲ."

ಸ್ವತಂತ್ರ ಭಾರತಕ್ಕೆ ಇಪ್ಪತ್ತು ವರ್ಷ ವಯಸ್ಸಾದರೂ ಶೈಶವದ ತೊಂದರೆಗಳು ಅದನ್ನಿನ್ನೂ ಕಾಡುತ್ತಿರುವಂತಿದೆ. ಅಥವಾ, ಬೇಜವಾಬುದಾರಿತನದ ಕಾಯಿಲೆಯಿಂದ ಅದು ನರಳುತ್ತಿದೆ ಎನ್ನಬಹುದು. ಫ್ರಾನ್ಸಿನಲ್ಲಿ ಎಲ್ಲಿ ಹೋದರೂ ಚೀನಾ–ಭಾರತ ಘರ್ಷಣೆ ವಿವಾದಗಳಿಗೆ ಸಂಬಂಧಿಸಿ ಚೀನಾ ಪ್ರಕಟಿಸಿದ ಪುಸ್ತಕಗಳು ಸಿಗುತ್ತವಂತೆ; ಭಾರತದ ಸರಕಾರೀ ಸಾಹಿತ್ಯ ಎಲ್ಲಿಯೂ ಇಲ್ಲವಂತೆ. ಸರಕಾರ ಈ ದಿಕ್ಕಿನಲ್ಲಿ ಮಾಡಬೇಕಾದ ಕೆಲಸ ಅಪೇಕ್ಷಿತ ಪ್ರಮಾಣದಲ್ಲಿ ಆಗುತ್ತಿಲ್ಲ ಎನ್ನುವುದಕ್ಕೆ ಇದೊಂದು ಉದಾಹರಣೆ.

ಈ ಕಾರಣದಿಂದ ಹೊರ ಹೋಗುವ ಪ್ರತಿಯೊಬ್ಬ ಸ್ವತಂತ್ರ ಭಾರತೀಯ ಸಾಂಸ್ಕೃತಿಕ ರಾಯಭಾರಿಯೂ ಆಗಬೇಕಾಗಿದೆ, ರಾಜಕೀಯ ಪ್ರತಿನಿಧಿಯೂ ಆಗಬೇಕಾಗಿದೆ.

........ವಿದೇಶಗಳಲ್ಲಿರುವ ತಮ್ಮ ವಿದ್ಯಾರ್ಥಿಗಳೆಲ್ಲ ಈ ವಿಷಯದಲ್ಲಿ ಸತ್ಕಾರ್ಯ ಪ್ರವೃತ್ತರಾಗುತ್ತಾರೆ, ಎಂದು ಪ್ರೊ. –ರವರಿಗೆ ನಂಬಿಕೆ.

೩೧–೧೨–೧೯೬೭

# 'ಪ್ರೊವಿಸೊ!' 'ಅಟೆನ್ಸಿಂಯೋ!'

ನನ್ನ ಬಾಲ್ಯದ ಆಸೆಗಳ ತಂತು ಸಂಸಾರದೊಡನೆ ಹೆಣೆದುಕೊಂಡಿರಬೇಕು – ಸಮುದ್ರ ಎಂದರೆ ನಮಗೆಲ್ಲ ಹಿಗ್ಗು. ಕಾರವಾರದ ಪ್ರಶಾಂತ ಕಡಲು, ಮದರಾಸು ಮಹಾಬಲಿಪುರಗಳ ಬಿರುಸು ಅಲೆಗಳು – ಸಾಗರವನ್ನು ವಿವಿಧ ಭಂಗಿಗಳಲ್ಲಿ ಎಷ್ಟು ಕಂಡರೂ ಮಕ್ಕಳಿಗೆ ತೃಪ್ತಿ ಇಲ್ಲ. ಮಡಿಕೇರಿಗೆ ಒಮ್ಮೆ ಹೊರಟಾಗಲೂ ದೊಡ್ಡವಳು ಕೇಳಿದ್ದಳು: "ಅಲ್ಲಿ ಸಮುದ್ರ ಇದೆಯಾ?"

ವರುಷಕ್ಕೊಮ್ಮೆ – ಸಾಧ್ಯವಾದರೆ ಎರಡು ಬಾರಿ – ನಾಲ್ಕಾರು ದಿನಗಳ ಮಟ್ಟಿಗಾದರೂ ಬೆಂಗಳೂರು ಬಿಟ್ಟು ದೂರ ಹೋಗುವುದು ರೂಢಿ. ಶಾಲೆಯನ್ನು ರಜೆಗೆಂದು ಮುಚ್ಚುವುದಕ್ಕೆ ಮುಂಚೆಯೇ ಮಕ್ಕಳು ಹೇಳಿದರು: "ಎಲ್ಲಿಗೆ ಹೋಗೋಣ?"

"ಗೋವೆಗೆ, ಅಲ್ಲಿ ಸಮುದ್ರ ಇದೆ", ಎಂದೆ.

ಗೋವಾ ನಮಗೆಲ್ಲ ಹೊಸದು. ಹದಿನಾರು ವರ್ಷಗಳಿಗೆ ಹಿಂದೆ ಆ ವಿದೇಶ ಪ್ರಯಾಣ ನಾನು ಮಾಡಬೇಕಾಗಿತ್ತು – ಒಂಟಿಯಾಗಿ. ಸ್ವಲ್ಪದರಲ್ಲೇ ತಪ್ಪಿ ಹೋಯಿತು.

ಈಗ ಪ್ರವಾಸ ಕೈಕೊಂಡ ನಾವು ಕನ್ನಡದ ಮೈಲುಕಲ್ಲುಗಳಾಚೆ ಕಂಡುದು ಹೊಸ ಆಶ್ರಮ ಆರಂಭಿಸಿದ್ದ ಭಾರತೀಯ ಗೋವೆಯನ್ನು.

* * * * *

ಪಶ್ಚಿಮದ ಕಿರಿದು ಪಟ್ಟಿಯನ್ನು ಪೀಠಭೂಮಿಯವರ ದೃಷ್ಟಿಯಿಂದ ಮರೆಮಾಚುವ ಸಹ್ಯಾದ್ರಿಯ ಭವ್ಯತೆಗೆ ಸಾಟಿಯಿಲ್ಲ. ಮಹಾರಾಷ್ಟ್ರವೊ, ಮೈಸೂರೊ, ಕೇರಳವೊ ಯಾವ ಎಡೆಯಲ್ಲಿ ಕೆಳಕ್ಕಿಳಿಯ ಹೊರಟರೂ ಏಕಪ್ರಕಾರವಾದ ರಮಣೀಯತೆ. ಇದು, ಮನುಷ್ಯ ಅದೆಷ್ಟು ಮುಟ್ಟಿದರೂ ಮೈಕೊಡವಿಕೊಳ್ಳುವ ಚಿರಜವ್ವನೆಯಾದ ನಿಸರ್ಗ. ಸುತ್ತಿ ಸುತ್ತಿ ಸುತ್ತಿ ಪಶ್ಚಿಮಕ್ಕೆ ಸಾಗುವ ಕಿರಿದಾದ ಕಪ್ಪುಗೆರೆ. ಎಡಕ್ಕೊಮ್ಮೆ ಬಲಕ್ಕೊಮ್ಮೆ ಪ್ರಪಾತ. ಎದುರಿನಲ್ಲಿ ಯಾವ ತಿರುವಿನಲ್ಲಿ ಯಾವ ಗಾಡಿಯೊ? ಪ್ರತಿ ಕ್ಷಣವೂ ನಮ್ಮ ಇರವನ್ನು ಸಾರುತ್ತ ಹೆಜ್ಜೆ ಸಾಗಬೇಕು. ವೇಗವೆಲ್ಲ ಬಯಲಿಗಿಳಿದ ಮೇಲೆಯೇ.

ಕಂಡ ದೃಶ್ಯಗಳನ್ನು ನೆನಪಿಟ್ಟು ಬಣ್ಣ ಬಳಿಯುವ ಆಸೆ ದೊಡ್ಡವಳಿಗೆ. ದಟ್ಟನೆಯ ಕಾಡನ್ನು ಏರಿಳಿತ ತಿರುವುಗಳನ್ನು ಕಂಡು ಚಿಕ್ಕವಳಿಗೆ ಅಳುಕು. "ನಿದ್ದೆ ಮಾಡು" ಎಂದರೆ "ಒಲ್ಲೆ". ಒಳಗಿನ ದುಗುಡವನ್ನಂತೂ ಒಪ್ಪಿಕೊಳ್ಳುವಂತಿಲ್ಲ.

ಅದಕ್ಕೇ ಪ್ರಶ್ನೆ: "ಗೋವಾ ಯಾವಾಗ ಬರುತ್ತೆ?" ಪಣಜಿ ತಲಪುವವರೆಗೂ ಅದೇ ಹಾಡು. ಜನರಾಶಿ ಜಲರಾಶಿಗಳನ್ನು ಕಂಡ ಮೇಲಷ್ಟೇ ಸಮಾಧಾನ.

ನಾವೆಲ್ಲರೂ ಸಹ್ಯಾದ್ರಿಯ ತಳದಲ್ಲಿನ ಪಾಪಚ್ಚಿಗಳು. ನಿಂತು ನಿಂತು ದಾರಿ ಕೇಳಿಕೊಂಡು ಹೋಗಬೇಕು. ಪರಿಚಿತರು ಗೊತ್ತುಪಡಿಸಿದ್ದುದು ಮಿರ್‌ಮಾರ್ ದಂಡೆಗೆ ಸಮೀಪವಿದ್ದ ಹೋಟೆಲನ್ನು. ಮಕ್ಕಳಿಗೆ ಖುಶಿ. ಅದರಿಂದ ಹೆತ್ತವರಿಗೆ ಅರ್ಧ ಬಳಲಿಕೆ ಕಡಮೆ ಆದ ಹಾಗೆ.

ಆ ಸಂಜೆಯಿಂದ ಎರಡು ದಿನ ಕಳೆದು ಊರಿನ ದಾರಿ ಹಿಡಿಯುವವರೆಗೂ ಮಕ್ಕಳು ಕಪ್ಪೆಚಿಪ್ಪು ಆರಿಸಿದ್ದೇ ಆರಿಸಿದ್ದು; ನಾವು ಗಂಟು ಕಟ್ಟಿ ಜೋಪಾನ ಮಾಡಿದ್ದೇ ಮಾಡಿದ್ದು.

ಪಣಜಿಯಲ್ಲಿದ್ದುಕೊಂಡೇ ನಾವು ಹಳೆಯ ಗೋವೆಗೆ ಹೋಗಿ ಝೇವಿಯರ್ ಇಗರ್ಜಿ ನೋಡಿದೆವು. ಪೊಂಡಾಗೆ ಮುಂದುವರಿದು ಮಂಗೇಶಿ ಶಾಂತದುರ್ಗಾ ದೇವಾಲಯಗಳನ್ನು ಕಂಡೆವು. ಮಡಗಾಂವಿಗೆ ಸಾಗಿ ಕೋಲ್ವಾದಂಡೆಯಲ್ಲಿ ಓಡಾಡಿದೆವು. (ವಿದೇಶೀಯ ಹಿಪ್ಪಿಗಳು – ಮೈ ಬಿಟ್ಟ ಹೆಂಗಸರೂ ಸೀಳಗೂದಲ ಗಂಡಸರೂ – ಅಲ್ಲಿ ಗೂಡು ಕಟ್ಟಿದ್ದರು.) ಮಾಂಡವಿ ನದಿ ದಾಟಿ ಸೊಗಸಾದ ಕಲಂಗೂಟ್ ಕಡಲ ತಡಿಗೆ ಹೋದೆವು. ದೋನಾಪಾವ್ಲಾ ಶಿಖರದಲ್ಲಿ ನಿಂತು ಮರ್ಮುಗೋವಾ ಬಂದರನ್ನು ದಿಟ್ಟಿಸುತ್ತ ಸೂರ್ಯಾಸ್ತದ ಸೊಬಗನ್ನು ಸವಿದೆವು.

ಮಹಾರಾಷ್ಟ್ರ ಗೋವೆಯನ್ನು ಬಯಸಿದ್ದರಲ್ಲಿ ಏನಾಶ್ಚರ್ಯ? ಯಾರಾದರೂ ಇಷ್ಟಪಡುವ ಹೆಣ್ಣೇ ಈ ಚೂರು ನೆಲ. ಮರ್ಮುಗೋವಾ ಬಂದರೊಂದೇ ಸಾಕು ಆಳುವವರ ನಾಲಿಗೆಯಲ್ಲಿ ನೀರೂರುವುದಕ್ಕೆ.

ಇಂಗ್ಲಿಷ್ ಇಲ್ಲದೆಯೇ ಜನ ಬದುಕಬಲ್ಲರು ಎನ್ನುವುದಕ್ಕೆ ಕಳೆದ ನಾಲ್ಕು ಶತಮಾನಗಳ ಗೋವಾ ಜೀವನ ಒಂದು ನಿದರ್ಶನ. ಬಹು ಜನರು ಇಲ್ಲಿ ಆಡುವ ಭಾಷೆ ಕೊಂಕಣಿ. ಅದರ ಜೊತೆಗೆ ಅವರಲ್ಲಿ ಹಲವರು ಬಲ್ಲ ಭಾಷೆ ಪೋರ್ಚುಗೀಸ್. (ಹೋಗಬಾರದ ದಿಕ್ಕಿನಲ್ಲಿ ಕಾರು ಕಾಣಿಸಿತೆಂದು ಒಬ್ಬ ಹುಡುಗ ಕೂಗಿ ನುಡಿದ 'ಪ್ರೊವಿಸೊ!' ರಸ್ತೆಯಲ್ಲಿ ಬೋರ್ಡುಗಳು ಈಗಲೂ ಹೇಳುತ್ತವೆ: 'ಅಟೆನ್ಸಿಯೊ!') ತಾಯಿ ನುಡಿಯ ಜೊತೆಗೆ ಇರಬೇಕಾದ ಬೇರೊಂದು ಭಾಷೆ ಯಾವುದಾದರೂ ಒಂದೇ.

ಗೋವೆಯಲ್ಲಿ ದ್ರವಸಿಧಿ ಪ್ರಾಪ್ತವಾಗುವುದು ಎರಡು ಉದ್ಯಮಗಳಿಂದ: ಮ್ಯಾಂಗನೀಸ್ ಅದಿರು ಪೂರೈಕೆ ಹಾಗೂ ವಿದೇಶೀ ಸಾಮಗ್ರಿಗಳ ಕಳ್ಳಸಾಗಾಣಿಕೆ. (ಎರಡನೆಯದೀಗ ರುಗ್ಣಶಯ್ಯೆಯಲ್ಲಿದೆ.) ಸಿರಿವಂತರು – ಬಡವರ ಅಂತರ ಬಲು ದೊಡ್ಡದು.

ಒಂದು ಸಂಜೆ ಹಸಿವಾಯಿತೆಂದು, ನಮಗೆ ಮೆಚ್ಚಿಕೆಯಾಗುವ ಊಟ ಸಿಗುತ್ತದೇನೋ ಎಂದು, ಹುಡುಕಿಕೊಂಡು ಹೋದೆವು. ಮಂಗಳೂರಿನ ದಿಟ್ಟ ಕನ್ನಡಿಗ

ಹೊಬ್ಬರು ಹೋಟೆಲಿಗೆ ಕರೆದಿದ್ದರು. ಉದ್ವೇಗದ ಸ್ವಿಚ್ ಹಾಕಿ ಸುತ್ತಲಿನ ಜನವನ್ನೆ ಯನ್ನು ಬಣ್ಣಿಸುತ್ತ ಅವರೆಂದರು: "ನಾನ್ನೂರು ವರ್ಷ ಪೋರ್ಚುಗೀಸರು ಇವರಿಗೆ ಕಲಿಸಿದ್ದು ಎರಡೇ ಎರಡು – ಕುಡಿತ, ಹಾದರ!" (ತೀರಾ ಜಟಿಲ ಪ್ರಶ್ನೆಗೆ ಅತ್ಯಂತ ಸರಳ ಉತ್ತರ.)

ಅಲ್ಲಿಂದ ಹೊರಡುವುದಕ್ಕೆ ಮುನ್ನ ಹಣ್ಣಿನ ಅಂಗಡಿಗೆ ಹೋದೆವು. ನಮ್ಮ ಸಂಗಡ ಇದ್ದ ಪಣಜಿ ಆಕಾಶವಾಣಿಯ ಡೈರೆಕ್ಟರ್ ಮಧುರಕಾಂತ ವೈದ್ಯರು "ಇವರೆಲ್ಲಾ ನಿಮ್ಮ ಕಡೆಯವರು" ಎಂದರು.

ಹಿಂದೂಸ್ತಾನಿಯಲ್ಲಿ ಹಣ್ಣು ಕೇಳಿದೆ. 'ಒಣಗಿ ಹೋಗಿವೆ; ಹೊಸದು ಬೇಕು,' ಎಂದೆ. ಅಂಗಡಿಯವನು ಮರೆಯಲ್ಲಿದ್ದ ದಾಸ್ತಾನಿನತ್ತ ದೃಷ್ಟಿ ಹೊರಳಿಸಿ ಸಹಾಯಕನಿಗೆ "ಕೊಡು" ಎಂದು ನಿರ್ದೇಶನವಿತ್ತ. ಕನ್ನಡದ ಶ್ರೇಷ್ಠ ಪದ – 'ಕೊಡು!' ನಾನೂ ಕನ್ನಡಿಗನಾದೆ: 'ಹಸುರಾಗಿರೋದೇ ಕೊಡೀಪ್ಪಾ!' ಅಂಗಡಿಯವರು ತಬ್ಬಿಬ್ಬಾದಂತೆ ಅನಿಸಿತು. ಮೌನ. ಎದ್ದು ಬಂದು ಆಲಿಂಗಿಸಲು ಅವನು ಭಾಷೆಯ ಹುಚ್ಚನಲ್ಲ. ಸಾಹಿತ್ಯಪ್ರೇಮಿಯೂ ಅಲ್ಲ. ಪರಿಣಾಮವೆಂದರೆ, 'ಕೊಡು' ಎಂದ ತಪ್ಪಿಗೆ, ಹನ್ನೆರಡು ಹಣ್ಣುಗಳ ಪಣಜಿ ಬೆಲೆಯಲ್ಲಿ ಇಪ್ಪತ್ತು ಪೈಸೆ ಅವನು ಬಿಟ್ಟು ಕೊಟ್ಟದ್ದು!

* * * * *

ಬೆಂಗಳೂರಿಗೆ ಮರಳಿ ಬಂದೆವು. ಮಕ್ಕಳು ದೊಡ್ಡವರನ್ನು ಅವರ ದುಡಿಮೆಗೆ ಬಿಟ್ಟು, ಕಪ್ಪೆಚಿಪ್ಪುಗಳ ಕಥೆ ಹೇಳಲು ಗೆಳೆಯ ಗೆಳತಿಯರ ಶೋಧೆಗೆ ಹೊರಟರು....

೨೮–೧–೧೯೬೮

# ಅನ್ವೇಷಣೆ - ಪ್ರತಿಪಾದನೆ

ಪ್ರೊಫೆಸರ್ ಪಿ. ಎನ್. ಓಕ್ ಬೆಂಗಳೂರಿಗೆ ಬರುತ್ತಾರೆ ಎಂಬ ಸುದ್ದಿ ಕಿವಿಗೆ ಬಿದ್ದೊಡನೆ ಹಳೆಯ ನೆನಪೊಂದು ನನ್ನನ್ನು ಕಾಡಿತು. ಅದು ಕೆಲವು ವರ್ಷಗಳ ಹಿಂದೆ ಅವರ ಪರವಾಗಿ ವಹಿಸಿದ್ದ ವಕಾಲತ್ತು. ಪ್ರಕರಣ, ಇತಿಹಾಸದ ಘನ ವಿದ್ವಾಂಸರಿಗೆ ಸಂಬಂಧಿಸಿದ್ದು.

ಇತಿಹಾಸದ ಪ್ರಾಧ್ಯಾಪಕರು ಭಾಗವಹಿಸುವ ಭಾರತೀಯ ಇತಿಹಾಸ ಮಹಾಧಿವೇಶನದಲ್ಲಿ ಪ್ರೊ. ಓಕ್ ತಮ್ಮದೊಂದು ನಿಬಂಧವನ್ನು ಓದುವುದೆಂದು ಗೊತ್ತಾಗಿತ್ತು. ಓದಲೆಂದು ಅವರು ಎದ್ದರು. ಆದರೆ ಅವರ ವೃತ್ತಿಬಾಂಧವರು ಅಡ್ಡಿಯಾದರು! ಓದಲು ಬಿಡಲಿಲ್ಲ. ಗದ್ದಲಮಾಡಿದರು. 'ಕುಳಿತುಕೊಳ್ಳಿ!' ಎಂದು ಕೂಗಾಡಿದರು. ಇತಿಹಾಸದ ವೇದಿಕೆಯ ಮೇಲಿನಿಂದ ಮಾತನಾಡುವ ಅವಕಾಶವನ್ನು ಇತಿಹಾಸದ ಪ್ರಾಧ್ಯಾಪಕರಿಗೆ ನಿರಾಕರಿಸಲಾಯಿತು!

ಆ ಸಭೆಯ ಕಾರ್ಯಕಲಾಪಗಳ ವಿವರವನ್ನು ಪತ್ರಿಕೆಯಲ್ಲಿ ಓದಿದಾಗ, 'ಇಂಥ ದುರ್ಗತಿಯೂ ಪ್ರಾಪ್ತವಾಗಬೇಕೆ ನಮ್ಮ ಬುದ್ಧಿ ಲೋಕಕ್ಕೆ!' ಎನಿಸಿತು. ಅಭಿಪ್ರಾಯ ಸ್ವಾತಂತ್ರ್ಯವನ್ನು ಧಿಕ್ಕರಿಸುವವರು ಅದೆಂಥ ಬುದ್ಧಿಜೀವಿಗಳು?

ಅಭಿಪ್ರಾಯ ಸ್ವಾತಂತ್ರ್ಯವಷ್ಟೆ ಅಲ್ಲ ಆ ಪ್ರಕರಣದಲ್ಲಿ ಅಡಕವಾಗಿದ್ದ ಅಂಶ. ಅನ್ವೇಷಣೆಯ ಸಂಶೋಧನೆಯ ಸ್ವಾತಂತ್ರ್ಯಕ್ಕೇ ಕುಠಾರಪ್ರಾಯವಾಗಿತ್ತು 'ಇತಿಹಾಸದ ಮಡಿ ಬ್ರಾಹ್ಮಣ'ರು ತಳೆದ ನಿಲುವು. ಈ ದೇಶದಲ್ಲಿ ಈಗ ಪ್ರಚಲಿತವಿರುವ ಇತಿಹಾಸ ಅವರ ಪಾಲಿನ ವೇದೋಪನಿಷತ್ತು. ಅದಕ್ಕೆ ವ್ಯತಿರಿಕ್ತವಾಗಿ ಮಾತಾಡುವವನು ಧರ್ಮಲಂಡನೇ ಆಗಬೇಕಷ್ಟೆ? ಅವರೆದುರು ನಿಂತು ಉಸಿರಾಡುವ ಎದೆಗಾರಿಕೆ ತೋರಿದವನ ಮೇಲೆ ಅವರು ದಂಡಾಯುಧ ಬೀಸಲೇಬೇಕು; ಅವರ ಏಕಸ್ವಾಮ್ಯದ ಸಮಾಜದಿಂದ ಆತ ಬಹಿಷ್ಕೃತವಾಗಲೇಬೇಕು.

* * * * *

ಓಕರು ಕ್ರಾಂತಿಕಾರಕ ವಿಚಾರವೊಂದನ್ನು ಪ್ರತಿಪಾದಿಸಲು ಹೊರಟಿದ್ದರು ಎನ್ನೋಣವೆ? ಪ್ರಚಲಿತವಿರುವ ಸೀಮಿತ ಅರ್ಥದಲ್ಲಿ ಅದು ಕ್ರಾಂತಿಯಲ್ಲ; ಆದರೆ ವಿಚಾರವನ್ನು ಕೆದಕುತ್ತದೆಂಬ ಕಾರಣದಿಂದ ಅವರ ಪ್ರತಿಪಾದನೆ ಕ್ರಾಂತಿಕಾರಿಯೇ.

ನಿದರ್ಶನಗಳನ್ನು ನೀಡುವುದಾದರೆ:

—ಆರ್ಯಜನಾಂಗ ಎಂಬುದೇ ಇರಲಿಲ್ಲ.

— ತಾಜಮಹಲನ್ನು ಷಹಜಹಾನನು ಕಟ್ಟಲಿಲ್ಲ. ಮೂಲತಃ ಅದೊಂದು ಶಿವ ದೇವಾಲಯವಾಗಿತ್ತು.

— ಮುಸಲ್ಮಾನ ಇತಿಹಾಸಕಾರರೂ ಆಂಗ್ಲ ಪ್ರಾಚ್ಯವಸ್ತು ಪರೀಕ್ಷಕರೂ ಕುತುಬುದ್ದೀನನು ಕುತುಬ್‌ಮಿನಾರನ್ನು ಕಟ್ಟಿದನೆನ್ನುವುದು ಸತ್ಯಕ್ಕೆ ಎಸಗಲಾಗಿರುವ ಅಪಚಾರ. ಆ ಮಿನಾರ್ ವಾಸ್ತವವಾಗಿ ಹಿಂದೂ ರಾಜನೊಬ್ಬನು ಕಟ್ಟಿದ ನಿರೀಕ್ಷಣ ಗೋಪುರ.

— ಅಕ್ಬರನು ಮಹಾನ್ ಚಕ್ರವರ್ತಿಯಾಗಿರಲಿಲ್ಲ; ಕುಡುಕನೂ ವಿಷಯ ಲಂಪಟನೂ ಆಗಿದ್ದ.

ಛೆ! ಛೆ! ಇವೆಲ್ಲ ಅರ್ಥವಿಲ್ಲದ್ದು!– ಎನ್ನುವುದು ಸುಲಭ. ಅರ್ಥವಿಲ್ಲದಂತೆ ಕಂಡರೂ ತಾಳ್ಮೆಯಿಂದ ಓಕರ ಪ್ರತಿಪಾದನೆಯನ್ನು ಕೇಳಲು ಮಾತ್ರ ಬೌದ್ಧಿಕ ವೈಶಾಲ್ಯ ಬೇಕು, ಸಂಸ್ಕಾರ ಬೇಕು.

* * * * *

ಓಕರಲ್ಲಿರುವ ಬೌದ್ಧಿಕ ಪರಿಕರಗಳು ವಿಶಿಷ್ಟ ಸ್ವರೂಪದವು. ಆ ಪರಿಕರಗಳಲ್ಲಿ ಛಲ, ಹಟ, ನಿರಂತರ ಅನ್ವೇಷಣೆ ಧಾರಾಳವಾಗಿವೆ. ಸಾಮ್ರಾಜ್ಯದ ಅವಶೇಷಗಳ ಕಡಿದ ಕಾಂಡಗಳ ಸುತ್ತಲೂ ಒಂಟಿಯಾಗಿ ಕೆದಕಿ ಅವನ್ನು ಕಿತ್ತು ತಾಯಿಬೇರನ್ನು ಅಳೆಯಬಲ್ಲ ಸಮರ್ಥ ಅವರು. ಪ್ರತಿಪಾದಿಸುವ ಯಾವುದೇ ಸಿದ್ಧಾಂತ ದಂಗುಬಡಿಸುವ ಹಾಗಿರಬೇಕು – ಎಂದು ಅವರು ದೃಢವಾಗಿ ನಂಬಿದ್ದರೆ ಆಶ್ಚರ್ಯವೇನಿಲ್ಲ. ಬಂಡಾಯದ ಕಹಳೆ ಮೊಳಗಿಸುವವರೆಲ್ಲ ಮಾಡುವುದೇ ಹಾಗೆ. ಈ ಬಗೆಯ ಅನ್ವೇಷಕರು ದುರ್ಬೀನಿಗಿಂತಲೂ ಹೆಚ್ಚಾಗಿ ಉಪಯೋಗಿಸುವುದು ಭೂತಗನ್ನಡಿಯನ್ನು.

ಇತಿಹಾಸದ ಅಧ್ಯಾಪಕರ ಮಹಾಧಿವೇಶನದಲ್ಲಿ ಕತ್ತಿವರಸೆ ಕಾಳಗಕ್ಕೆ ಇಳಿದರಲ್ಲ? ಆಗ ಹೇಗಿದ್ದರೋ ಓಕ್ ಈಗಲೂ ಹಾಗೆಯೇ ಇದ್ದಾರೆ. ಕಿಚ್ಚು ಮಾತ್ರ ಹೆಚ್ಚು ತೀಕ್ಷ್ಣವಾಗಿದೆ. ಕೆಚ್ಚು ಅಕ್ಷಯಪಾತ್ರೆಯಾಗಿದೆ.

ಕಳೆದ ಒಂದು ಶತಮಾನದಲ್ಲಿ ಬರೆಯಲ್ಪಟ್ಟ ಭಾರತೀಯ ಇತಿಹಾಸದಲ್ಲಿ ಸತ್ಯಾಂಶಗಳೇ ಇಲ್ಲವೆ ಹಾಗಾದರೆ? ಓಕರ ಪ್ರಕಾರ "ಈ ಭಾರತೀಯ ಇತಿಹಾಸವಿಡೀ ಸುಳ್ಳುಗಳ ಕಂತೆ." ಅದನ್ನು ಮೊಟ್ಟಮೊದಲಿನಿಂದ ಹೊಸದಾಗಿ ಬರೆಯಬೇಕು ಎನ್ನುವ ಅಪೇಕ್ಷೆ ಅವರಿಗೆ. ಅದು ಕನಸಲ್ಲ, ನಿತ್ಯದ ಕಾಯಕ. ದಿಲ್ಲಿಯಲ್ಲಿರುವ ಇತಿಹಾಸ ಪುನರ್ಲೇಖನ ಸಂಸ್ಥೆಗೆ ಅವರು ಮುಖ್ಯಸ್ಥರು.

ನಡುವಯಸ್ಸು ದಾಟಿರುವ ಪುರುಷೋತ್ತಮ ನಾಗೇಶ್ ಓಕ್ ಮಧ್ಯಮವರ್ಗದ ಕುಟುಂಬದಲ್ಲಿ ಜನಿಸಿದ ಮಹಾರಾಷ್ಟ್ರೀಯರು. ಅವರ ಹುಟ್ಟು ಸಂಸ್ಥಾನವಾದ ಇಂದೋರ್ ಮಧ್ಯಪ್ರದೇಶದಲ್ಲಿದೆ. ತಂದೆ ಸಂಸ್ಕೃತ ವಿದ್ವಾಂಸರು. ಹಿರಿಯರು ಹಚ್ಚಿಕೊಟ್ಟ ಓಕ್ ಹಣತೆಗೆ ಧಾರಾಳವಾಗಿ ಎಣ್ಣೆ ಸುರಿದವರು ಸುಭಾಷ್‌ಚಂದ್ರ ಬೋಸರು.

ಆದರೆ ಈಗ ಪಿ. ಎನ್. ಓಕ್ ಬಾಲಕನಲ್ಲ, ಹುಚ್ಚು ಹುಮ್ಮಸಿನ ತರುಣನೂ ಅಲ್ಲ. ಅವರೀಗ ಜವಾಬ್ದಾರರಾದ ಮನುಷ್ಯ. ತಾವು ಏನು ಮಾಡುತ್ತಿದ್ದೇವೆ ಎಂದು ಅವರು ಚೆನ್ನಾಗಿ ಬಲ್ಲರು.

ಇತಿಹಾಸವನ್ನು ಪುನಃ ಬರೆಯುವುದು ತಪ್ಪೆ? ಖಂಡಿತ ಅಲ್ಲ. ಬ್ರಿಟಿಷರು ಹೋದ ಮೇಲೆ ಅವರ ಆಡಳಿತದ ಅವಧಿಯಲ್ಲಿ ದಾಖಲೆಯಾದ ಅಂಶಗಳ ಪುನಃಮಾಪನ ನಡೆಯಿತು. ಅದು ಸಾಕಷ್ಟು ತೃಪ್ತಿಕರವಾಗಿ ಆಗಿದೆ ಎಂದು ದೇಶಪ್ರೇಮಿಗಳಿಗೆ ಅನಿಸುವುದಿಲ್ಲ.

ಬದಲಾವಣೆ ಸಣ್ಣದಿರಲಿ ದೊಡ್ಡದಿರಲಿ, ತಿದ್ದಲು ಹೋಗುವುದೇ ಅಪರಾಧ ಎನ್ನುವವರೂ ಇಲ್ಲದಿಲ್ಲ.

ಚೌಕಟ್ಟನ್ನು ಮೊದಲೇ ನಿರ್ಮಿಸಿ ಅದನ್ನೇ ಮಾನದಂಡವಾಗಿ ಮಾಡಿದರೆ ರಾಷ್ಟ್ರಕ್ಕೆ 'ಮಾನದಂಡ'ವೇ ಸರಿ.

* * * * *

ಓಕ್ ಬರೆದುದನ್ನು ಓದಲು ಅವಕಾಶ ನೀಡಬೇಕಾಗಿತ್ತು ಎಂದು ಹಿಂದೆ ನಾನು ಪ್ರತಿಪಾದಿಸಿದಾಗ, ಅವರ ಸಿದ್ಧಾಂತಗಳನ್ನು ಒಪ್ಪಿರಲಿಲ್ಲ. ಅವರದು ಗಮನಾರ್ಹ ಸಾಧನೆ, ಆ ಸಿದ್ಧಾಂತಗಳನ್ನು ಹೆಚ್ಚು ಜನ ಶ್ರದ್ಧೆಯಿಂದ ಪರಿಶೀಲಿಸಬೇಕು – ಎನ್ನುವಾಗಲೂ ಅಷ್ಟೇ. ಅವರ ಸಿದ್ಧಾಂತಗಳು ಏನೇ ಇದ್ದರೂ ಎಲ್ಲರೂ ಅವನ್ನು ಒಪ್ಪಿಕೊಳ್ಳಬೇಕು – ಎಂದು ಅರ್ಥವಲ್ಲ.

೨೫–೨–೧೯೬೮

# ಭ್ರಮೆಯ ಲೋಕದ ಭಾವೈಕ್ಯ

ಮಿಜೋಗಳನ್ನು ಕುರಿತು ದಿನಪತ್ರಿಕೆಯಲ್ಲಿ ಹೆಚ್ಚು ಕಡಮೆ ತಿಂಗಳಲ್ಲಿ ಮೂವತ್ತು ದಿವಸವೂ ಸುದ್ದಿಗಳಿರುತ್ತವೆ.

ನಿನ್ನೆಯ ವರದಿ :

"ಮಿಜೋ ಜಿಲ್ಲೆಯಲ್ಲಿ ಇಬ್ಬರು ಶತ್ರುಮಿಜೋಗಳನ್ನು ಗುಂಡಿಟ್ಟು ಕೊಲ್ಲಲಾಯಿತು. ಭದ್ರತಾಪಡೆಗಳು ಕೆಲವು ಶಸ್ತ್ರಾಸ್ತ್ರಗಳನ್ನೂ ಮದ್ದುಗುಂಡುಗಳನ್ನೂ ಮಹತ್ವದ ಕಾಗದಪತ್ರಗಳನ್ನೂ ವಶಪಡಿಸಿಕೊಂಡುವು."

ಇಂದಿನ ವಾರ್ತೆ :

"ಪಾಕ್ ಜಿಲ್ಲೆಯಾದ ಚಿತ್ತಗಾಂಗ್ ಗುಡ್ಡಗಾಡು ಪ್ರದೇಶದಲ್ಲಿ ಪಾಕಿಸ್ತಾನಿಗಳು ಶಿಬಿರಗಳನ್ನು ಏರ್ಪಡಿಸಿದ್ದು ಮಿಜೋ ಬಂಡುಕೋರರಿಗೆ ಸೈನಿಕ ಶಿಕ್ಷಣ ನೀಡುತ್ತಿರುವ ಸಂಗತಿ ನಿಜವೆಂದು ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿ ತಿಳಿಸಿದರು......... ಇಂಥ ಬಂಡುಕೋರ ಸಶಸ್ತ್ರ ಮಿಜೋಗಳು ಇತ್ತೀಚೆಗೆ ತ್ರಿಪುರಾದಲ್ಲಿನ ಸಣ್ಣ ಪೇಟೆಯೊಂದಕ್ಕೆ ನುಗ್ಗಿ ಬಂದೂಕಿನಿಂದ ಹೆದರಿಸಿ, ಕೆಲವು ಅಂಗಡಿಗಳನ್ನು ಲೂಟಿ ಮಾಡಿದರು ಸಹಾ – ಎಂದು ಪ್ರಧಾನಿ ವಿವರಿಸಿದರು."

....ಬಹಳ ಕಾಲದಿಂದ ಕಾಡುತ್ತಿರುವ ಈ ಕಾಹಿಲೆಯನ್ನು ಏನೆಂದು ಕರೆಯೋಣ ? ರಾಷ್ಟ್ರಪುರುಷನ ನಿತ್ಯದ ತಲೆನೋವು ಎಂದೆ ? ಅಥವಾ ಆತನಿಗೆ ಬಡಿದಿರುವ ಪಾರ್ಶ್ವವಾಯು ಎಂದೆ ? ಇಲ್ಲವೆ....

* * * * *

ಭಾರತದ ಆಯಕಟ್ಟಿನ ಗಡಿ ರಾಜ್ಯಗಳಲ್ಲೊಂದಾದ ಅಸ್ಸಾಮಿನ ಒಂದು ಜಿಲ್ಲೆ, ಮಿಜೋ ಗುಡ್ಡಪ್ರದೇಶ. ಅಲ್ಲಿಂದ ಇಪ್ಪತ್ತು ಜನ ಮಿಜೋಗಳ ಒಂದು ತಂಡ ವಿಮಾನವೇರಿ ಕಲ್ಕತ್ತೆಗೆ ಬಂತು. ರೈಲು ಹತ್ತಿ ದಕ್ಷಿಣಕ್ಕೆ ಪ್ರಯಾಣ ಬೆಳೆಸಿತು. ಕನ್ಯಾಕುಮಾರಿ ತಲಪಿ "ಎಷ್ಟೊಂದು ದೊಡ್ಡ ದೇಶ ಈ ಭಾರತ !" ಎಂದು ಉದ್ಗಾರವೆತ್ತಿತು.

ಕಾರಣವೇನೇ ಇರಲಿ, ಕೇರಳದ ಮುಖ್ಯಮಂತ್ರಿ ನಂಬೂದಿರಿಪಾದರು ಈ ತಂಡಕ್ಕೆ ಮಾಡಿದ ಸತ್ಕಾರ ಅಂಥಿಂಥದಲ್ಲ. ಬಂದವರಿಗೆ ಎಂಥ ಅಡುಗೆ ಬಡಿಸಬೇಕು ಎನ್ನುವ ವಿಷಯದಲ್ಲೂ ಅವರು ಮುನ್ನೆಚ್ಚರಿಕೆ ವಹಿಸಿದ್ದರಂತೆ. ಮಿಜೋ ಬಂಧುಗಳು ಯಾವುದನ್ನು ಇಷ್ಟಪಡುತ್ತಾರೆ ಎಂದು ತಿಳಿದ ಮೇಲಷ್ಟೇ ಕೇರಳದ ಪಾಕಶಾಸ್ತ್ರ ಪ್ರವೀಣರು ಕಾರ್ಯೋನ್ಮುಖರಾದರಂತೆ.

ತಿರುವನಂತಪುರದಿಂದ ಕಲ್ಲಿಕೋಟೆಗೆ, ಅಲ್ಲಿಂದ ಕಣ್ಣಾನೂರಿನ ಮಾರ್ಗವಾಗಿ ಕಾಸರಗೋಡಿಗೆ. ಮುಂದೆ ಮಂಗಳೂರಿಗೆ. ಕಡಲತೀರದ ಆ ಪಟ್ಟಣದಲ್ಲಿ ಮಿಜೋ ನಿಯೋಗದವರಿಗೆ ಪುರಸಭಾ ಸನ್ಮಾನ. ಅಲ್ಲಿಂದ ಪಶ್ಚಿಮ ಘಟ್ಟವನ್ನೇರಿ ಮೈಸೂರಿಗೆ. ಮತ್ತೆ ಪೌರರ ಸತ್ಕಾರ. ದೀಪಾಲಂಕೃತ ಬೃಂದಾವನಕ್ಕೆ ಭೇಟಿ. ಬಳಿಕ ಬೆಂಗಳೂರಿಗೆ.

* * * * *

ನಿಯೋಗದ ನಾಯಕರು ಲಾಲ್ ಬುಯಿಯಾ. ಮಿಜೋ ಜನತೆಯ ಈ ಪ್ರಮುಖನೊಂದಿಗೆ ಬಂದವರು ಬೇರೆ ಹತ್ತೊಂಭತ್ತು ಜನ. ಕೆಲವರು ಮೀಸೆ ಕುಡಿಯೊಡೆಯದ ಯುವಕರು. ಕೆಲವರು ಮಹಿಳೆಯರು. ಅವರಲ್ಲಿ ಒಬ್ಬಿಬ್ಬರು ರೂಪವತಿಯರು.

ಸ್ವಾಗತಿಸಿದ ಸಿಟಿಜನ್ಸ್ ಫೋರಂ ಮುಖ್ಯಸ್ಥ ಎಂ. ಪಿ. ಎಲ್. ಶಾಸ್ತ್ರಿಯವರಿಗೆ ಆ ಮುಖಗಳನ್ನು ಕಂಡಾಗ ನೆನಪು ಪುರಾಣಕಾಲದತ್ತ ಹಣಿಕಿ ಹಾಕಿದ್ದು ಸ್ವಾಭಾವಿಕ. ಭಾರತೀಯರಿಗೆ ಪರಿಚಿತವಾದ ಕಾಮರೂಪದೇಶದ ಮಕ್ಕಳು ಇವರು.

ಆದರೆ, ಆ ಪ್ರಾಚೀನರಿಗೂ ಇವರಿಗೂ ಮಧ್ಯೆ ಪರಕೀಯ ಸಂಸ್ಕೃತಿಯ ಅಡ್ಡ ಗೋಡೆಯೇ ಎದ್ದಿತು. ಆಂಗ್ಲರ ಆಳ್ವಿಕೆಯ ಕಾಲದಲ್ಲಿ ಕ್ರೈಸ್ತ ಪ್ರಾಟೆಸ್ಟೆಂಟ್ ಧರ್ಮಪ್ರಸಾರಕರು ಇವರ ಮಧ್ಯೆ ದುಡಿದುದರ ಫಲವಾಗಿ ಈ ಜನರ ವೇಷಭೂಷಣ, ಮಾತು ಎಲ್ಲವೂ ಆಂಗ್ಲ.

ಏನು ಇವರ ಸಂಕಟ, ಯಾತನೆ?

ಹಲವು ಕಡೆ ಆಡಿ ಪರಿಷ್ಕಾರಗೊಂಡಿದ್ದ ಮಾತುಗಳಿಂದ ಮಧ್ಯವಯಸ್ಕ ಲಾಲ್ ಬುಯಿಯಾ ಮಿಜೋ ಸಮಸ್ಯೆಯ ಸೂಕ್ಷ್ಮ ಪರಿಚಯ ಮಾಡಿಕೊಟ್ಟರು.

"ನಾವು ಗುಡ್ಡ ಪ್ರದೇಶದವರು. ಬಯಲು ಸೀಮೆಯವರ ವಿಷಯದಲ್ಲಿ ನಮಗೆ ಸಂದೇಹಗಳಿವೆ. ಅವರ ನಮ್ಮ ನಡುವೆ ತಪ್ಪು ಗ್ರಹಿಕೆಗಳಿವೆ. ಕೇಂದ್ರ ಸರಕಾರ ಈ ಪರಿಸ್ಥಿತಿಯನ್ನು ಹೋಗಲಾಡಿಸಬೇಕು. ಮಿಜೋ ಜನರಿಗಾಗಿ ಸಮರ್ಪಕವಾದ ಆಡಳಿತ ವ್ಯವಸ್ಥೆ ರೂಪಿಸಿ ನಮ್ಮ ಪ್ರಶ್ನೆಯನ್ನು ಬಗೆಹರಿಸಬೇಕು. ಇಲ್ಲದಿದ್ದರೆ ತೊಂದರೆಯಾಗುತ್ತದೆ, ತುಂಬ ತೊಂದರೆಯಾಗುತ್ತದೆ."

ಅವರೆಷ್ಟು ಹೊದಿಕೆ ಹೊದಿಸಿದರೂ ಅಂತರಂಗದ ಅತೃಪ್ತಿ ಹೊರಗೆ ಹೊಗೆಯಾಡುತ್ತಿತ್ತು.

"ನೀವು ಸುಖಿಗಳು. ರಾತ್ರೆ ತಿರುಗಾಡಬಹುದು. ನನ್ನ ಜನರು ಕತ್ತಲಾದ ಮೇಲೆ ಹೊರಗೆ ಹೋಗುವಂತಿಲ್ಲ. ಕರ್ಫ್ಯೂ ಅಜ್ಞೆ ಇದೆ. ದಂಡಿನ ಆಳ್ವಿಕೆ ಎಂದು ಹೇಳದೆ ಇದ್ದರೂ ಅವರ ಕಾವಲಿನಲ್ಲೇ ನಾವಿದ್ದೇವೆ............"

ಇದು ಅಸ್ಸಾಮಿನ ಕಥೆ. ಗುಡ್ಡದ ಮೇಲಿನವರಿಗೆ ಬಯಲಿನವರ ಬಗೆಗೆ ವಿಶ್ವಾಸವಿಲ್ಲ. ಬಯಲಿನವರಿಗೆ ಗುಡ್ಡದವರನ್ನು ಕಂಡರೆ ಉಪೇಕ್ಷೆ.

* * * * *

ಹೌದೆ? ಬರೀ ಅಸ್ಸಾಮಿನ ಕಥೆಯೆ?

ಪಾಪ! ಲಾಲ್ ಬುಯಿಯಾಗೆ ತಿಳಿಯದು........

ಅಸ್ಸಾಮಿನವರಿಗೆ ಬಂಗಾಳಿಗಳನ್ನು ಕಂಡರಾಗುವುದಿಲ್ಲ. ಬಂಗಾಳಿಗಳಿಗೆ 'ಮದ ರಾಸಿ'ಗಳು ಸಹ್ಯರಲ್ಲ. ಮದರಾಸಿಗಳಿಗೆ? 'ಡೌನ್ ವಿತ್ ಹಿಂದಿ!' ಮಹಾರಾಷ್ಟ್ರದಲ್ಲೊ? ಕೊಂಕಣ ಸೇನೆ ಕಟ್ಟುವರಂತೆ! ಕೇರಳದ ಮುಸಲ್ಮಾನ ಬಾಂಧವರಿಗೆ ಬೇಕು ಮಾಪಿಳ್ಳೆ ಜಿಲ್ಲೆ! ಕರ್ನಾಟಕದಲ್ಲಂತೂ ಹಳೆಯ ಮೈಸೂರು ಬೇರೆ, ಉಳಿದದ್ದು ಬೇರೆ. ಅಲ್ಲಿ ಒಡೆದ ಪಂಜಾಬು. ಇಲ್ಲಿ ಸಿಡಿಯಬಯಸುವ ತಮಿಳುನಾಡು. ಔತ್ತರೇಯರು, ದಾಕ್ಷಿಣಾತ್ಯರು. ಆ ಮತಸ್ಥರು, ಈ ಮತಸ್ಥರು!

ಭಾರತ ಎನ್ನುವ ಒಂದು ದೇಶ ಇದೆಯಾದರೂ ಎಲ್ಲಿ?

ಆದರೂ ನಾವು ರಾಷ್ಟ್ರಗೀತೆ ಹಾಡುತ್ತೇವೆ, ರಾಷ್ಟ್ರಧ್ವಜಕ್ಕೆ ವಂದಿಸುತ್ತೇವೆ.

ಅವಕಾಶ ದೊರೆಯಿತೋ ಪಂಚಮದಳದವರಾಗುತ್ತೇವೆ. ಮೂವತ್ತು ಬೆಳ್ಳಿ ತುಣುಕುಪಡೆದು ಪರಕೀಯರಿಗೆ ನಮ್ಮ ನೆಲವನ್ನು ಮಾರುತ್ತೇವೆ.

* * * * *

ಕೇಂದ್ರ ಸರ್ಕಾರದ ವೆಚ್ಚದಲ್ಲಿ ಮಿಜೋ ತಂಡ ಭಾರತದರ್ಶನ ಮಾಡುತ್ತಿದೆ. ಹಾಗೆ ನೋಡಿದರೆ ಭಾರತೀಯರೆಲ್ಲ ಗುಡ್ಡಗಾಡಿನ ಜನರೇ; ಭಾರತ ಯಾತ್ರೆಯ ಔಷಧಿ ಪ್ರಾಯಶಃ ಪ್ರಯೋಜನಕಾರಿಯಾಗಬಹುದಾದ ರೋಗಿಗಳೇ.

ಕಾಹಿಲೆ ಗುಣವಾಗುವ ತನಕ:

"ನಾವೆಲ್ಲರು ಮಿಜೋಗಳು; ಒಂದೇ ಬಗೆಯ ಮಕ್ಕಳು...."

೧೦-೩-೧೯೬೮

# ರುದ್ರಭೂಮಿಯ ಮಗ್ಗುಲಲ್ಲಿ ಮನೆ

' ಪಡೆದು ಬಂದಿರಬೇಕು ' ಎನ್ನುವುದಿಲ್ಲವೆ ? ಹಾಗೆ. ಆ ರೀತಿಯ ಕಥೆ ಇದು.

ಬೀದಿಯಾಚೆಗಿನ ಮನೆಯವರು ಬೆಳಗ್ಗೆ ಬಂದು ಬಾಗಿಲು ತಟ್ಟಿದರು.

ಊದಿಕೊಂಡಿದ್ದ ಕಣ್ಣುಗಳು, ಭತ್ತ ಸೋಂಕಿದರೆ ಅರಳಾಗಬೇಕು - ಅಷ್ಟೊಂದು ಉದ್ವಿಗ್ನಗೊಂಡಿದ್ದ ಮುಖ.

" ಒಳಗೆ ಬನ್ನಿ."

ಅವರು ಕದಲಲಿಲ್ಲ. ಸಿಟ್ಟಿನಿಂದ ನಡುಗುತ್ತಿದ್ದ ಧ್ವನಿಯಲ್ಲಿ ಅವರು ಹೇಳಿದರು :

" ರಾತ್ರೆ ಇಡೀ ನಿದ್ದೆ ಇಲ್ಲ. ವಾಸನೆ, ದುರ್ವಾಸನೆ. ಇದು ಮುಂದುವರಿದರೆ ಉಸಿರು ಕಟ್ಟಿ ಸಾಯೋದೇ ಖಂಡಿತ. ಹೇಳುವವರು ಕೇಳುವವರು ಯಾರೂ ಇಲ್ಲವೆ ಈ ರಾಜ್ಯದಲ್ಲಿ ? ಅಲ್ಲ, ನೀವಾದರೂ ಹೇಗೆ ಸಹಿಸಿಕೊಂಡಿದೀರಿ ಅಂತ ?"

" ನಿಜ. ಹೇಗೆ ಸಹಿಸಿಕೊಂಡಿದೀನಿ ಅಂತ ನನಗೇ ಆಶ್ಚರ್ಯ."

" ನಾಚಿಕೆಗೇಡು, ನಾಚಿಕೆಗೇಡು ! ಬದುಕಿರಬಾರದು ಕಣ್ರೀ, ಭೂಮಿಯ ಮೇಲೆ ನಮ್ಮಂಥವರು ಬದುಕಿರಬಾರದು ! "

ಅಷ್ಟು ಹೇಳಿ ಸಿಡಿಮಿಡಿ ನಡಿಗೆಯಿಂದ ಅವರು ಹೊರಟೇ ಹೋದರು.

* * * * *

ಮಧ್ಯವಯಸ್ಸು ದಾಟಿದ ಮನುಷ್ಯ. ಹಗಲು ದುಡಿಯಲು ಹೊರಗೆ ಹೋಗುತ್ತಾರೆ. ಹೊತ್ತಾಗಿ ಮನೆಗೆ ಬರುತ್ತಾರೆ. ರಾತ್ರಿ ಅವರು ಬಯಸುವುದು ಒಂದನ್ನೇ – ವಿಶ್ರಾಂತಿಯನ್ನು.

ನಗರಾಭಿವೃದ್ಧಿ ಮಂಡಳಿಗೆ ಅರ್ಜಿಯ ಮೇಲೆ ಅರ್ಜಿ ಹಾಕಿ ಐದು ವರ್ಷಗಳ ಹಿಂದೆ ನಿವೇಶನ ದೊರಕಿಸಿಕೊಂಡರು. ಎರಡು ವರ್ಷ ಸುಮ್ಮನಿದ್ದು ವಸತಿ ಮಂಡಳಿಗೆ ಪ್ರಾರ್ಥನೆ ಸಲ್ಲಿಸಿ ಸಾಲ ಪಡೆದರು. ' ಮನೆ ಕಟ್ಟಿನೋಡು ' ಅನುಭವದಲ್ಲಿ ಹಣ್ಣಾಗಿ ಅಂತೂ ಕೊನೆಗೆ ' ಗೃಹಸ್ಥ 'ನಾದರು.

ಸಾಲ ತೀರಿಸುವ ಚಿಂತೆ. ಮಕ್ಕಳ ಭವಿತವ್ಯದ ಯೋಚನೆ ...

ಅಂತವರಿಗೆ ಈಗ ಇರುಳಿನ ವಿಶ್ರಾಂತಿಯಿಂದ ವಂಚನೆ....

* * * * *

ಮನೆ ಬಿಟ್ಟವರು ದಾರಿ ನಡೆದು ಬಸ್ ನಿಲ್ದಾಣ ತಲಪಬೇಕು. ರಸ್ತೆಯ ಬದಿಯಲ್ಲಿ ಕಟ್ಟಡಗಳಿಗಾಗಿ ಕಲ್ಲು ಕಡಿದು ಮಾಡಿದ ಭಾರೀ ಹೊಂಡ. ಅದರ ಸುತ್ತಲೂ

ಪುರಸಭೆಯ ಲಾರಿಗಳು. ದಾರಿಗಡ್ಡವಾಗಿ ಅವು ನಿಲ್ಲುವುದೂ ಉಂಟು. ಅವುಗಳಿಂದ ನೌಕರರು ಹೊರಕ್ಕೆ ಸುರಿಯುತ್ತಿರುತ್ತಾರೆ–ಊರಿನ ತಿಪ್ಪೆರಾಶಿಯನ್ನು. ಮನುಷ್ಯ ಬದುಕಬೇಕಾದರೆ ದಿನವೂ ನಿರ್ಮಾಣವಾಗಬೇಕಾದ ಹೊಲಸನ್ನು! ಕಸದಲ್ಲೂ ರಸವಿರಬಹುದೆಂದು ಕೆದಕಿ ಹುಡುಕುವ ಬೀದಿ ಹುಡುಗರ ತಂಡಗಳು. ತಮಗೆ ಆಹಾರ ಸಿಗಬಹುದೆಂದು ಡುರುಕ್ ಡುರುಕೆಂದು ಹೊಲಸಿನ ಪದರ ಪದರಗಳನ್ನು ಪರೀಕ್ಷಿಸುವ ಹಂದಿಗಳು. ಮೂಗಿಗೆ ಆಪ್ಯಾಯಮಾನವಾಗಿದೆ ಎಂದು ಸುತ್ತುವರಿಯುವ ಬೀದಿ ನಾಯಿಗಳು. ತಮಗೂ ವಿಶಿಷ್ಟ ಆಹಾರ ದೊರಕೀತೇನೋ ಎಂದು ಆಸೆಯಿಂದ ಬರುವ ಹಸು ಎಮ್ಮೆಗಳು. ಮೇಲಿನಿಂದ ಹಾರಾಡುವ ಕಾಗೆ–ಗಿಡುಗಗಳು. ರಾಶಿಯಲ್ಲಿ ಇನ್ನೂ ಉಸಿರಾಡುತ್ತಿರುವ ಚಿಲ್ಲರೆ ಪ್ರಾಣಿಗಳು? ರಸ್ತೆಗಳಲ್ಲಿ ವಾಹನಗಳ ಕೆಳಗೆ ಬಿದ್ದಾಗಲೀ ಬೇರೆ ಕಾರಣದಿಂದಾಗಲೀ ಜೀವಬಿಟ್ಟ ಜಂತುಗಳು?

ಆ ನೌಕರರು ಅಧಿಕಾರಿಗಳಿಂದ ಆಜ್ಞಪ್ತರು. ತಗ್ಗುಪ್ರದೇಶದ ಅಂಚಿನಲ್ಲಿರುವ ಹೊಲಸಿನ ರಾಶಿಗೆ ಅವರು ಬೆಂಕಿ ಇಕ್ಕುತ್ತಾರೆ. ಅರ್ಧ ಸುಟ್ಟುದನ್ನು ಕಮರಿಗೆ ತಳ್ಳುತ್ತಾರೆ. ತಳ್ಳಿ ತೆರವಾದ ಸ್ಥಳವನ್ನು ಹೊಸತಿಪ್ಪೆಯಿಂದ ಲಾರಿಗಳು ತುಂಬುತ್ತವೆ.

ದಹನಕ್ರಿಯೆಯ ಫಲವಾಗಿ ಆ ಪ್ರದೇಶವನ್ನು ಹೊಗೆ ಆವರಿಸಿ, ಸುತ್ತಲೂ ನಾಲ್ಕು ದಿಕ್ಕುಗಳಿಗೆ ಅದು ಸಂಚರಿಸುವ ನೋಟವೇ ನೋಟ.

ಸುಡುವುದಕ್ಕೆ ಮುನ್ನ ಆ ದಾರಿಯಾಗಿ ಹೋಗುವವರು ಮೂಗು ಮುಚ್ಚಿಕೊಳ್ಳಬೇಕು. ಬೆಂಕಿ ಕಾಣಿಸಿಕೊಂಡೊಡನೆ ಹೊಗೆ ತಡೆಯಲಾಗದೆ ಕಣ್ಣುಗಳನ್ನೂ ಮುಚ್ಚಿಕೊಳ್ಳಬೇಕು. ಆ ಪ್ರದೇಶದ ನೂರಾರು ಮನೆಗಳವರಂತೂ ಹೊಗೆ ಮೋಡದಿಂದಲೇ ಆವೃತರಾಗಿರಬೇಕು. ಕಣ್ಣಿಗೆ ಹೊಗೆ, ಮೂಗಿಗೆ ವಾಸನೆ....

* * * * *

ಪುರಸಭೆಯ ಅಧಿಕಾರಿಗಳ ದೃಷ್ಟಿಯಲ್ಲಿ ಇದೊಂದು ಸುಲಭಯೋಜನೆ. ನಗರದ ತಿಪ್ಪೆಯನ್ನು ಹೊರಗೆ ದೂರ ಒಯ್ಯಬೇಕಾದುದಿಲ್ಲ. ಪೆಟ್ರೋಲಿನ ಉಳಿತಾಯವೇನು ಕಡಮೆಯೆ? (ಆ ಪೆಟ್ರೋಲನ್ನು ಕೆಲ ನೌಕರರು ಕದ್ದು ಮಾರುವುದಂತೂ ಜೇಮ್ಸ್ ಬಾಂಡ್‌ಗೂ ಸಿಲುಕದ್ದು.) ಅಲ್ಲದೆ, ಹೀಗೆಯೇ ಮಾಡುತ್ತ ಹೋದರೆ ಇನ್ನು ನಾಲ್ಕಾರು ವರ್ಷಗಳಲ್ಲಿ ಹೊಂಡವೂ ಮುಚ್ಚಿಹೋಗುತ್ತದಲ್ಲ!

ಹತ್ತಿರದಲ್ಲಿ ದಿನ್ನೆಗಳಿವೆ. ಅವುಗಳನ್ನು ಕಡಿದು ಕಮರಿಯನ್ನು ಮುಚ್ಚಬಹುದು. ಆದರೆ ಅದಕ್ಕೆ ವೆಚ್ಚವಾಗುತ್ತದಲ್ಲ!

ಜನರಿಗೆ ಉಸಿರಾಟ ಕಷ್ಟವಾಗಬಹುದು. ಆದರೇನಂತೆ? ಆರೋಗ್ಯತ್ಯಾಗವನ್ನಾದರೂ ನಾಗರಿಕರು ಮಾಡಬಾರದೆ?

(ಸಂದೇಹ ಬೇಡ. ಅಧಿಕಾರಿಗಳ ನಿವಾಸಗಳಂತೂ ಆ ಪ್ರದೇಶದಲ್ಲಿಲ್ಲ!)

ಜಪಾನಿನ ಮುಖ್ಯ ನಗರಗಳಲ್ಲಿ ತಿಪ್ಪೆ ಸಮಸ್ಯೆಯ ಪರಿಹಾರಕ್ಕೆ ಬೃಹತ್‌ಯಂತ್ರ

ಗಳಿವೆ. ಆ ಯಂತ್ರಗಳ ಒತ್ತಡಕ್ಕೆ ತಿಪ್ಪೆ ಕಬ್ಬಿಣವಾಗುತ್ತದಂತೆ. ಅದನ್ನು ಯೋಗ್ಯ ಆಕೃತಿಗಳಿಗೆ ಕತ್ತರಿಸಿ ಒಂದಕ್ಕೊಂದು ಬೆಸುಗೆ ಹಾಕಿ ಇಟ್ಟಿಗೆಗಳ ಹಾಗೆ ಮನೆಕಟ್ಟಲು ಬಳಸುತ್ತಾರಂತೆ. ಸೊಗಸಾಗಿ ಕಾಣಲೆಂದು ಅವುಗಳಿಗೆ ಬಣ್ಣ ಹಾಕುತ್ತಾರಂತೆ. ಒಂದೊಂದು ಯಂತ್ರಕ್ಕೆ ಸುಮಾರು ಒಂದೊಂದು ಕೋಟಿ ರೂಪಾಯಿಯಂತೆ.

ಛೀ! ಛೀ! ಅಂಥ ಯೋಜನೆಯನ್ನು ಕನಸಿನಲ್ಲೂ ನಾವು ಮಾಡಬಾರದು.

* * * * *

ನೀರಿನ ಅಭಾವ, ಸೊಳ್ಳೆಗಳ ಹಾವಳಿ. ಕೆಟ್ಟ ರಸ್ತೆಗಳು – ಬೀದಿ ದೀಪಗಳಿಲ್ಲದ ಸಾಲು ಮರಗಳಿಲ್ಲದ ಬೀದಿಗಳು.

ಜನ ಕೇಳುತ್ತಿದ್ದರು: "ನಮ್ಮ ವಿಸ್ತರಣಕ್ಕೆ ಒಬ್ಬ ಮಂತ್ರಿಯಾದರೂ ವಾಸಕ್ಕೆ ಬರಲಿ!"

ದೇವರು ಬೇರೆಯೇ ವರಕೊಟ್ಟರು. ರಾಜ್ಯಪಾಲ ಗಿರಿಯವರೇ ಅಲ್ಲಿ ಮನೆ ಕಟ್ಟುವ ಹಾಗೆ ಮಾಡಿದರು. ಆದರೆ ಗಿರಿಯವರು ಉಪಾಧ್ಯಕ್ಷರಾಗಿ ದಿಲ್ಲಿಗೆ ಹೊರಟು ಹೋಗಬೇಕೆ? ಕೈಯಲ್ಲಿ ಪೊರಕೆ ಹಿಡಿದು ನಗರ ನಿರ್ಮಲೀಕರಣಕ್ಕೆ ಹೊರಡುತ್ತಿದ್ದ ಮನುಷ್ಯ. ಪಾಪ! ಎಷ್ಟು ಒಳ್ಳೆಯವರು!

* * * * *

ಈಗಲೋ ಹಗಲು ರಾತ್ರೆ ಉರಿಯುವ ತಿಪ್ಪೆ ಪ್ರದೇಶವನ್ನು ಸಹಸ್ರಾರು ಜನ ದಾಟಿ ಹೋಗಬೇಕು, ಬರಬೇಕು. ಅದರ ಸುತ್ತಲೂ ವಾಸವಾಗಿರಬೇಕು.

ಆದರೆ ಒಂದು. ಹೊರಗಿನವರಿಗೆ ಮನೆಯ ವಿಳಾಸ ಹೇಳುವುದು ಈಗ ಸುಲಭ.

"ಜಯನಗರದ ಬಸ್‌ಸ್ಟ್ಯಾಂಡ್ ಇದೆಯಲ್ಲ? ಅಲ್ಲಿಂದ ಪೂರ್ವಕ್ಕೆ ತಿರುಗಿ. ಸದಾ ಉರಿಯುತ್ತಿರುವ ಸ್ಮಶಾನ ಸಿಗುತ್ತೆ. ಮೂಗು ಕಣ್ಣು ಮುಚ್ಚಿಕೊಳ್ಳಿ. ಅದರ ಮಗ್ಗುಲಲ್ಲೇ ಮನೆ."

೭–೪–೧೯೬೮

# ಪಾಧ್ಯೆ - ಭಟ್ಕಳರ ಭಾರತಯಾತ್ರೆ

ಯಾವುದು ಭಾರತೀಯ ಸಾಹಿತ್ಯ? ರಾಮಾಯಣ–ಮಹಾಭಾರತಗಳು, ಪುರಾಣ ಕಥೆಗಳು, ಉಪನಿಷತ್ತಿನ ಕಥೆಗಳು, ಸಂಸ್ಕೃತ ಮಹಾಕಾವ್ಯಗಳು–ನಾಟಕಗಳು. ಸರಿ. ಇದೆಲ್ಲ ನಿನ್ನೆಯ ಮಾತಾಯಿತು. ಇವತ್ತು–ಈ ದಿನ–ಯಾವುದನ್ನು ಭಾರತೀಯ ಸಾಹಿತ್ಯ ಎನ್ನಬಹುದು. ನಾವು? ಆರ್. ಕೆ. ನಾರಾಯಣರಂಥವರ ಆಂಗ್ಲ ಕಾದಂಬರಿಗಳನ್ನೆ? ಅಥವಾ ಅಕಾಡಮಿ ಪಾರಿತೋಷಕಗಳನ್ನು ಪಡೆದ ವಿವಿಧ ಭಾರತೀಯ ಭಾಷೆಗಳ ಕೃತಿಗಳನ್ನೆ?

ತೊಡಕಿನ ಪ್ರಶ್ನೆ; ಬಹಳ ತೊಡಕಿನ ಪ್ರಶ್ನೆ. ಈ ಶತಮಾನದ ಭಾರತೀಯ ಸಾಹಿತ್ಯ ಕಥೆಯನ್ನು ಬಲ್ಲವರು ಹೇಳುತ್ತಾರೆ: 'ವಿಶ್ವಕವಿಯಾದ ಠಾಕೂರರೂ ಮೂಲತಃ ಬಂಗಾಳಿ ಲೇಖಕರು.' ಒಬ್ಬ ಬರೆಹಗಾರ ಎಷ್ಟೇ ಪ್ರಖ್ಯಾತನಾದರೂ ಆತನ ಜನಪ್ರಿಯತೆ ಆತ ಬರೆಯುವ ಭಾಷೆಗಷ್ಟೇ ಸೀಮಿತ.

ದೇಶವಿಲ್ಲ–ಅದೆಷ್ಟೇ ವಿಸ್ತಾರವಾಗಿದ್ದರೂ–ಸಾರ್ವತ್ರಿಕವಾಗಿ ಸಾಕ್ಷರ ಜನತೆಯ ಮೇಲೆ ಪ್ರಭಾವ ಬೀರಲು ಸಮರ್ಥವಾಗಿರುವ ಒಂದು ಗ್ರಂಥವನ್ನು ಭಾರತೀಯ ಕೃತಿ ಎನ್ನಬಹುದು. ರಾಮಾಯಣ ಮಹಾಭಾರತಗಳು ರಾಷ್ಟ್ರದ ಮೂಲೆ ಮೂಲೆಯಲ್ಲೂ ಜನತೆಯ ಆದರ ಗಳಿಸಿವೆ. ಅದೇ ವಿಧಾನದಲ್ಲಿ ಅಷ್ಟು ಪ್ರಮಾಣದಲ್ಲಾದರೂ ರಾಷ್ಟ್ರೀಯ ಜೀವನದಲ್ಲಿ ಹಾಸುಹೊಕ್ಕಾಗಿರುವ ಆಧುನಿಕ ಭಾರತೀಯ ಸಾಹಿತ್ಯಕೃತಿ ಯಾವುದು? ಶರಚ್ಚಂದ್ರರ ಕೃತಿಗಳು ಎಲ್ಲೋ ಸ್ವಲ್ಪಮಟ್ಟಿಗೆ ಭಾರತೀಯ ಸಮಾಜದ ಹೃದಯ ತಂತಿಯನ್ನು ಮೀಟಿವೆ. ಸ್ವಲ್ಪಮಟ್ಟಿಗೆ ಮಾತ್ರ. ಅವುಗಳಲ್ಲದೆ ಬೇರೆ ಯಾವುದಾದರೂ ?....

ತಮಾಷೆಯ ಸಂಗತಿಯೆಂದರೆ, ವಿದೇಶೀಯರು ಸಾಧಾರಣವಾಗಿ ಇಂಗ್ಲಿಷಿನಲ್ಲಿ ದೊರೆಯುವ ಭಾರತೀಯ ಲೇಖಕರ ಕೃತಿಗಳನ್ನೇ ಭಾರತೀಯ ಸಾಹಿತ್ಯ ಎಂದು ಭಾವಿಸುತ್ತಾರೆ. ಅಂಥ ಕೃತಿಗಳು ಭಾರತೀಯ ಭಾಷೆಗಳಲ್ಲಿ ದೊರೆಯುವುದಿಲ್ಲ; ಅಲ್ಲೊಂದು ಇಲ್ಲೊಂದು ದೊರೆತರೂ ಭಾರತೀಯರ ಮೇಲೆ ಗಣನೀಯ ಪರಿಣಾಮವನ್ನು ಅವು ಉಂಟುಮಾಡುವುದಿಲ್ಲ. ಹೀಗೆಂದು ವಿದೇಶೀಯರಿಗೆ ತಿಳಿಯಹೇಳಿದರೆ, "ಹೌದೆ!?" ಎಂದು ಅವರು ವಿಸ್ಮಿತರಾಗುತ್ತಾರೆ.

* * * * *

ರಾಷ್ಟ್ರ ಸ್ವತಂತ್ರವಾದ ಮೇಲೆ, ಕಳೆದ ಇಪ್ಪತ್ತು ವರ್ಷಗಳಲ್ಲಿ, ಭಾರತೀಯ

ಸಾಹಿತ್ಯ ರೂಪುಗೊಳ್ಳಲು ಅವಕಾಶವಿದ್ದಿತು – ಎನ್ನುವ ಹೇಳಿಕೆ ಸತ್ಯಕ್ಕೆ ದೂರವಾಗಿಲ್ಲ. ಭಾರತದ ಎಲ್ಲ ಮುಖ್ಯ ಭಾಷೆಗಳಲ್ಲಿ ಎಲ್ಲ ಭಾಷಾಕೃತಿಗಳೂ ದೊರೆಯುವಂತೆ ಮಾಡಿ ಹೊಸ ಸಾಹಿತ್ಯಿಕ ವಾತಾವರಣವನ್ನೇ ಸೃಷ್ಟಿಸುವುದು ಸಾಧ್ಯವಿತ್ತು. ಇದಕ್ಕೋಸ್ಕರ ಕೇಂದ್ರ ಪ್ರಕಾಶನ ಗೃಹವೊಂದನ್ನು ನಿರ್ಮಿಸಿ, ವೆಚ್ಚಕ್ಕೆ ಹಣ ಒದಗಿಸಿ, ಉಸ್ತುವಾರಿಯನ್ನು ಭಾರತೀಯ ಲೇಖಕರಿಗೇ ಒಪ್ಪಿಸಿ ಸರಕಾರ ತನ್ನಷ್ಟಕ್ಕೆ ಕುಳಿತಿದ್ದರೆ, ಇಂದಿನ ದುಃಸ್ಥಿತಿ ಖಂಡಿತ ಉಂಟಾಗುತ್ತಿರಲಿಲ್ಲ. ಬದಲು ಸಾಹಿತ್ಯ ಅಕಾಡಮಿಗೆ ಆ ಹೊಣೆಯನ್ನು ಸರಕಾರ ವಹಿಸಿಕೊಟ್ಟಿತು. ಪಾರಿತೋಷಕಗಳನ್ನು ನೀಡುವುದರ ಹೊರತು ಗಮನಾರ್ಹವಾದ ಬೇರೇನನ್ನೂ ಸಾಧಿಸಲು ವಿಫಲವಾಗಿರುವ ಸಂಸ್ಥೆ ಅದು. ಸಾಹಿತ್ಯ ವಿಷಯಗಳಲ್ಲಿ ಸರಕಾರ ಕೈಹಾಕಬಾರದು ಎನ್ನುವುದಕ್ಕೆ ಈ ಅಕಾಡಮಿಯೊಂದು ಜ್ವಲಂತ ನಿದರ್ಶನ.

ಖಾಸಗಿ ಪ್ರಕಾಶಕರು ಈ ಕೆಲಸವನ್ನು ಮಾಡಬಹುದಿತ್ತು. ಆದರೆ ವ್ಯವಹಾರದ ಜಗತ್ತಿನಲ್ಲಿ ಆದರ್ಶಗಳೂ ಸದುದ್ದೇಶಗಳೂ ಗೌಣ. ಸ್ವತಂತ್ರ ಭಾರತದಲ್ಲಿ ಕಳೆದ ಎರಡು ದಶಕಗಳಲ್ಲಿ ವಿಶೇಷವಾಗಿ ಬಲಿತುಕೊಂಡ ಸಂಕುಚಿತ ಪ್ರವೃತ್ತಿ, ಮೇರೆ ಮೀರಿದ ಸ್ವಭಾಷಾ ವ್ಯಾಮೋಹ, ಭಾರತೀಯ ಭಾಷೆ ಭಾಷೆಗಳ ನಡುವೆ ಕಂದಕಗಳನ್ನು ರಚಿಸಿತು. ನೆರೆಮನೆಯ ಒಳ್ಳೆಯ ಕೃತಿಗಳನ್ನು ಮೆಚ್ಚಿಕೊಳ್ಳುವ ಔದಾರ್ಯದ ಬದಲು, ಆ ಕಡೆ ಕಣ್ಣು ಹಾಯಿಸುವ ಅಗತ್ಯವೂ ಇಲ್ಲ ಎನ್ನುವ ಭಾವನೆ ಬೆಳೆಯಿತು.

ಹೀಗೆ ಸ್ವತಂತ್ರ ಭಾರತದ ಉದಯದೊಡನೆ ಹುಟ್ಟಲು ಅಣಿಯಾಗಬೇಕಾಗಿದ್ದ ಭಾರತೀಯ ಸಾಹಿತ್ಯ ಗರ್ಭದಲ್ಲೇ ಸತ್ತಿತು.

* * * * *

ಭಾಷಾ ಸೂತ್ರಗಳನ್ನು ಕುರಿತ ಚರ್ಚೆಯಲ್ಲಿ ನಿರತರಾಗಿರುವ ರಾಜಕಾರಣಿಗಳು ಒಂದು ಅಂಶವನ್ನು ಮರೆಯುತ್ತಾರೆ. ಅದು ಸಮಾಜ ಸ್ವಾಸ್ಥ್ಯಕ್ಕೆ ಸಂಬಂಧಿಸಿ ಸಾಹಿತ್ಯ ವಹಿಸಬಹುದಾದ ಪಾತ್ರ.

ಕಳೆದ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಭಾರತದ ಅನ್ಯ ಭಾಷೆಗಳ ಶ್ರೇಷ್ಠ ಸಾಹಿತ್ಯವೆಲ್ಲ ವಿಪುಲವಾಗಿ ಹಿಂದಿಯಲ್ಲಿ ಲಭ್ಯವಾಗಿರುತ್ತಿದ್ದರೆ ಹಿಂದಿಯೇ ಹಿರಿದೆಂಬ ಸಾಮ್ರಾಜ್ಯವಾದ ತಲೆ ಎತ್ತುತ್ತಿರಲಿಲ್ಲ. ರಾಷ್ಟ್ರದ ವಿವಿಧ ಭಾಷಾಸಾಹಿತ್ಯಗಳು ಹೇರಳವಾಗಿ ಪರಸ್ಪರ ಭಾಷೆಗಳಲ್ಲಿ ಅನುವಾದಗೊಂಡಿರುತ್ತಿದ್ದರೆ, ರಾಷ್ಟ್ರೀಯ ಭಾವೈಕ್ಯದ ಕಟ್ಟುಗಳು ಇಷ್ಟೊಂದು ಸಡಿಲವಾಗುತ್ತಿರಲಿಲ್ಲ. ಸಾಹಿತ್ಯ – ಮಹಾ ಅದೆಷ್ಟು ಜನರನ್ನು ಮುಟ್ಟುತ್ತವೆ?—ಎನ್ನುವುದು ದೋಷಪೂರಿತ ಪ್ರಶ್ನೆ. ಭಾಷೆಯ ಗೊಂದಲವೆಬ್ಬಿಸುವವರು ಎಲ್ಲ ಕಡೆಗಳಲ್ಲೂ ಅಲ್ಪಸಂಖ್ಯಾತರೇ. ಭಾರತೀಯತ್ವದ ಕಲ್ಪನೆ ಅವರಿಗಿಂತಲೂ ಹೆಚ್ಚು ಜನರಲ್ಲಿ ಮನೆಮಾಡುವುದು ಖಂಡಿತ ಸಾಧ್ಯವಿತ್ತು.

* * * * *

ಇಂಥ ಪರಿಸ್ಥಿತಿಯಲ್ಲಿ ಭಾರತೀಯ ಸಾಹಿತ್ಯ ಸೃಷ್ಟಿಯ ಮತ್ತೊಂದು ಯತ್ನಕ್ಕೆ ದಾರಿ ಯಾವುದು? ಇಷ್ಟವಿರಲಿ, ಇಲ್ಲದಿರಲಿ, ಸದ್ಯಕ್ಕಂತೂ ಇಂಗ್ಲಿಷಿನ ಮೂಲಕವೇ ಈ ಕೆಲಸವಾಗಬೇಕು. ಪ್ರತಿಯೊಂದು ಕ್ಷೇತ್ರದಲ್ಲೂ ಬಹುಭಾಷಾವಿಶಾರದರು ಸಿದ್ಧರಾಗುವ ತನಕ, ರಾಷ್ಟ್ರಕ್ಕೋಸ್ಕರ ಸಂಪರ್ಕಭಾಷೆಯೊಂದನ್ನು ಜನತೆ ಸ್ವೀಕರಿಸುವ ತನಕ, ಇಂಗ್ಲಿಷೊಂದರಿಂದಲೇ ನಮಗೆ ನೆರವು ದೊರೆಯಬಲ್ಲುದು.

ಕಳೆದ ವಾರ ಸಂಪಾದಕದ್ವಯರಿಬ್ಬರು ಕನ್ನಡದ ರಾಜಧಾನಿಗೆ ಬಂದರು. ಸದಾನಂದ ಭಟ್ಕಳ್ ಹಾಗೂ ಪ್ರಭಾಕರ ಪಾಧ್ಯೆ. [ಭಟ್ಕಳ್ ಪ್ರಖ್ಯಾತ ಪ್ರಕಾಶಕರು ಕೂಡಾ.] ಇವರಿಬ್ಬರೂ ಭಾರತೀಯ ಸಾಹಿತ್ಯದ ಉದಯಗೀತದ ಹಾಡುಗಾರರು. ಅವರ ಸೇವೆ 'Indian Writing To-day' ಎಂಬ ಆಂಗ್ಲ ತ್ರೈಮಾಸಿಕದ ಮೂಲಕ. ರಾಷ್ಟ್ರದ ವಿವಿಧ ಭಾಷೆಗಳ ಸಾಹಿತ್ಯವನ್ನು ಕುರಿತ ವಿಮರ್ಶಾತ್ಮಕ ಲೇಖನಗಳೂ ಮಾದರಿ ಸಾಹಿತ್ಯ ಕೃತಿಗಳ ಆಂಗ್ಲ ಭಾಷಾಂತರಗಳೂ ಈ ತ್ರೈಮಾಸಿಕದಲ್ಲಿ ಪ್ರಕಟವಾಗುತ್ತವೆ. ಭಟ್ಕಳ್ – ಪಾಧ್ಯೆಯವರು ಹೊಂದಿರುವುದು ಶ್ಲಾಘನೀಯ ಮಹತ್ವಾಕಾಂಕ್ಷೆ. ವಿವಿಧ ಭಾಷಾಕೃತಿಗಳನ್ನು ಇಂಗ್ಲಿಷಿನಲ್ಲಿ ಪ್ರಕಟಿಸಬೇಕೆಂಬ ಯೋಜನೆ ಯೋಜನೆಗಳೂ ಭಟ್ಕಳರಿಗಿವೆ.

ಪರಸ್ಪರ ಸಂಪರ್ಕ ವಿಚಾರವಿನಿಮಯಗಳಿಂದ, ವೈಯಕ್ತಿಕ ಪರಿಚಯ ಸ್ನೇಹಗಳಿಂದ, ಹಲವು ಕೈಗಳು ನೀಡುವ ನೆರವಿನಿಂದ ತಮ್ಮ ಕನಸು ನನಸಾಗುತ್ತದೆಂದು ಈ ಮಿತ್ರರಿಬ್ಬರು ನಂಬಿದ್ದಾರೆ. ಅದಕ್ಕೋಸ್ಕರ ಅವರು ಭಾರತ ಯಾತ್ರೆ ಕೈಗೊಂಡಿದ್ದಾರೆ.

ಆದರ್ಶವಾದಿಗಳು ಇನ್ನೂ ಈ ದೇಶದಲ್ಲಿ ಇರುವರೆಂಬುದು ತಕ್ಕಮಟ್ಟಿಗೆ ಸಮಾಧಾನ ತರುವ ವಿಷಯ.

೨೧-೪-೧೯೬೮

# ಸಂಪೂರ್ಣ ಶರಣಾಗತಿ

ಮರಿಕುದುರೆಯ ಮೇಲೆ ಸವಾರಿ; ಹೂದೋಟವಲ್ಲಿ ಆಟ; ಅಥವಾ ಗುಡ್ಡದ ತುದಿಯ ಮೇಲೆ ನಿಂತು ಸುತ್ತಣ ಪ್ರಕೃತಿಯ ದರ್ಶನ. ಇವನ್ನೆಲ್ಲ ಬಿಟ್ಟು, ಅಷ್ಟೇನೂ ಸುಂದರವಲ್ಲದ ವಸತಿ ಪ್ರದೇಶಕ್ಕೆ ಯಾಕೆ ನಡಿಗೆ? ಮಕ್ಕಳು ಬೇಸರಗೊಂಡದ್ದು ಸ್ವಾಭಾವಿಕ. ಆದರೂ ಹೆತ್ತವರ ವಿಚಿತ್ರ ಪ್ರವೃತ್ತಿಗಳಿಂದ ಸಾಕಷ್ಟು ಪ್ರಭಾವಿತರಾದ ಚಿಕ್ಕವರು, ಮರುಮಾತು ಆಡದೆ ಬಂದರು.

ಹಂಚಿನ ಪುಟ್ಟ ಮನೆಗಳು ಹಲವು. ಆರಂಭದಲ್ಲಿ ಕಂಡುದೊಂದೇ ತೋಡ ಗೃಹ. ಗೂಡು ಬಾಗಿಲು. ಮಗುವಾಗಿ (ಅಂಬೆಗಾಲಿಟ್ಟು) ಒಳಕ್ಕೆ ಹೋಗಬೇಕು. ಒಳಕ್ಕೆ ಅಥವಾ ಹೊರಕ್ಕೆ ಇಣಿಕಿ ನೋಡಲು ಆರಂಗುಲ ನಾಲ್ಕಂಗುಲದ ಕಪ್ಪು ಕನ್ನಡಿಯ ಕಿಟಿಕಿ ಮೇಲ್ಗಡೆ.

ಅಲ್ಲೊಬ್ಬರು ಇಲ್ಲೊಬ್ಬರಂತೆ ಮುಖತೋರಿಸುತ್ತಿದ್ದ ವಿಶಿಷ್ಟ ಸಂಸ್ಕೃತಿಯ ಈ ಜನರನ್ನು ನೋಡುತ್ತ ನಾನು ದೂರದಲ್ಲಿ ನಿಂತೆ.

"ಬಾಮ್ಮಾ, ಕಾಫಿ ಮಾಡ್ಕೊಡ್ತೀನಿ."

– ಆಹ್ವಾನವಿತ್ತವಳು ತೋಡರ ತಾಯಿ. ಆಕೆ ಆಡಿದ್ದು ಕನ್ನಡ ಭಾಷೆ.

"ಬೇಡಮ್ಮ. ಇದೇ ಈಗ ಕುಡಿದ್ವಿ."

– ನಮ್ಮವರ ಉತ್ತರ.

ಆ ಮನೆಯಿಂದ ಈ ಮನೆಯಿಂದ ತೋಡರ ಮಕ್ಕಳು ಓಡಿ ಬಂದರು.

ಒಬ್ಬಳು ಕಿಶೋರಿ. ವಕ್ಷಸ್ಥಲವನ್ನೂ ಮುಚ್ಚಿಕೊಂಡ ಮಾಸಿದ ಬಿಳಿ ಸೀರೆಯನ್ನು ನೆರಿಗೆಗಳಿಲ್ಲದೆ ಸುತ್ತಿಕೊಂಡಿದ್ದಳು, ಸಾಕಷ್ಟು ತುಂಬಿಕೊಂಡಿದ್ದ ಶರೀರಕ್ಕೆ.

ತುಸು ದೂರದಲ್ಲಿ ತಗ್ಗಿನಲ್ಲಿದ್ದ ವಿಚಿತ್ರ ಕಮಾನು ಕಟ್ಟಡವನ್ನು ತೋರಿಸಿ ಅವಳೆಂದಳು :

"ಅದು ನಮ್ಮ ಗುಡಿ. ದಿನ್ನೆ ಮೇಲೆ ಕೂತವರಲ್ಲ ಅವರು ಪೂಜಾರಿ. ಹೋಗಿ ನೋಡಿ. ಗಂಡಸರಿರೋ ಕಡೆ ನಾವು ಬರಬಾರ್ದು."

*    *    *    *    *

ವಯಸ್ಸಾದ ಪೂಜಾರಿ ಕುಳಿತಿದ್ದರು. ಆದಿಮಾನವನನ್ನು ಹೋಲುವ ಮೈಕಟ್ಟು. ಒರಟು ಬಿಳಿ ಗಡ್ಡವೂ ಕೆದರಿದ ನರೆಗೂದಲೂ ಮುಖದ ವ್ಯಗ್ರತೆಯನ್ನು ಮರೆಸಿದ್ದುವು. ಬೆಳಗಿನ ಹೂ ಬಿಸಿಲಲ್ಲಿ ದಿನ್ನೆಯ ಮೇಲೆ ಅವರು ಮೈಕಾಯಿಸುತ್ತಿದ್ದಂತಿತ್ತು.

ನಾವು ಅತ್ತ ಬಂದುದು ಅವರಿಗೆ ಇಷ್ಟವಾದಂತೆ ತೋರಲಿಲ್ಲ.

ಸಂಭಾಷಣೆ ಆರಂಭಿಸಬೇಕೆಂದು ನಾನೆಂದೆ: "ನೀವು ಪೂಜಾರಿ ಅಂತೆ."

ಜೇನಡುಕವೆಂಬಂತೆ ಹಲ್ಲು ಕಡಿದು ಮೂಗು ಕುಣಿಸಿ ಅವರು ಗುಡುಗಿದರು:

"ಹೌದು, ಪೂಜಾರಿ."

* * * * *

ಸುಮಾರು ನಾಲ್ಕು ಶತಮಾನಗಳಿಗೆ ಹಿಂದೆ ಪೋರ್ಚುಗೀಸ್ ಪಾದ್ರಿ ಫೆರೀರಿ ನೀಲಗಿರಿಯನ್ನೇರಿ ಉದಕಮಂಡಲಕ್ಕೆ ಬಂದಿದ್ದ. ಸಮುದ್ರ ಮಟ್ಟದಿಂದ ಎಂಟು ಸಾವಿರ ಅಡಿ ಎತ್ತರದ ಗುಡ್ಡಗಳ ಮಧ್ಯೆ ಸಮತಟ್ಟಾದ ಸ್ಥಳ. ಆ ಪ್ರದೇಶದಲ್ಲೆಲ್ಲಾ ಆಗ ತೋಡರದೇ ರಾಜ್ಯಭಾರ.

ತೋಡರ ಧರ್ಮಗುರುವಿನೊಡನೆ ಫೆರೀರಿ ಸಂಭಾಷಣೆ. ಪೂಜಾರಿಯ ಸಂಸಾರಕ್ಕೆಲ್ಲ ಫೆರೀರಿಯಿಂದ ಕಾಣ್ಕೆ.

ಆ ಪಾದ್ರಿಯನ್ನು ತೋಡರು ಮುಗಿಸಿಬಿಡಬಹುದಾಗಿತ್ತು. ಬದಲು ಕಡಲಿನಾಚೆಯಿಂದ ಬಂದ ಅವನನ್ನು ಅವರು ಆದರಿಸಿದರು. ಆತ ಅವರನ್ನು ಕುರಿತು ನಾಳೆಗಾಗಿ ಟಿಪ್ಪಣಿ ಬರೆದ.

ಮುಂದೆ ಎರಡು ಶತಮಾನಗಳ ಅನಂತರ ಏಕಶಿಲಾಗ್ರಾಮಕ್ಕೆ (ತೋಡರು ಕರೆಯುತ್ತಿದ್ದುದು ಒಟಕಮಂಡು) ಆಂಗ್ಲ ಅಧಿಕಾರಿ ಕೀಸ್ ಬಂದ. ಕೆಲ ವರ್ಷಗಳಲ್ಲಿ ಕಲೆಕ್ಟರ್ ಸಲ್ಲಿವಾನನೇ ಆಗಮಿಸಿದ. ಅವನ ಬೆನ್ನಲ್ಲೇ (ಅಥವಾ ಮುಂದಾಗಿಯೇ) ಫಿರಂಗಿಗಳು ಬಂದುವು. ನೀಲಗಿರಿಯ ಮೊದಲ ಶಿಲಾಗೃಹವನ್ನು ಸಲ್ಲಿವಾನ ಕಟ್ಟಿಸಿದ.

ಅದು 'ನಾಗರಿಕತೆ'ಯ ಆಗಮನ. ಅದರೊಂದಿಗೆ ಪುರಾತನ ಜನಾಂಗವೊಂದರ ಅವನತಿಗೆ ಆರಂಭ.

ಆಳುತ್ತಿದ್ದ ತೋಡರು ಅಳುವವರಾದರು; ಜೀತದ ಆಳುಗಳಾದರು.

ಎತ್ತರದ ನಿಲುವು. ದಟ್ಟನೆಯ ಕಪ್ಪು ಕೂದಲು, ಮೈತುಂಬ ಹೊದೆದುಕೊಳ್ಳುವ ಬಣ್ಣದ ಪಟ್ಟೆಗಳ ಶಾಲು. ಆ ಭವ್ಯಾಕೃತಿಯ ಪರ್ವತವಾಸಿಯ – ಅರಣ್ಯವಾಸಿಯ – ಬೆನ್ನು ಬಾಗಿತು.

* * * * *

ನನ್ನ ಮಾತಿನ ಮಾರ್ದವತೆ ಸಿಡುಕಿನ ಕೊತ್ತಳವನ್ನು ಕೆಡವಿತ್ತು. ಪೂಜಾರಿ ನನ್ನ ಪ್ರಶ್ನೆಗೆ ಉತ್ತರವಿತ್ತರು:

"ಗುಡಿ ದೇವರು ಪಂಚ ಪಾಂಡವರು."

ದ್ರೌಪದಿಯ ಪತಿಗಳೈವರು ಆ ಜನ. ತೋಡರ ರೀತಿನೀತಿಗಳಿಗೆ ಸಂಸ್ಕಾರಕ್ಕೆ ಬೀಗದ ಕೈ ಆ ಆರಾಧನೆ.

ಅಷ್ಟರಲ್ಲೇ ಯುವಕ ಪ್ರವಾಸಿಗಳ ಒಂದು ತಂಡ ಅಲ್ಲಿಗೆ ಬಂದಿತು. ತಮಿಳರು. ಒಬ್ಬನೆಂದ: "ಇವನನ್ನು ನೋಡಿದರೆ ಭಯವಾಗುತ್ತಪ್ಪ!"

ಆ ಮಾತು ಒತ್ತಿದ ಗುಂಡಿಯಾಯಿತು ಜ್ವಾಲಾಮುಖಿಯ ಸ್ಫೋಟಕ್ಕೆ.

ಪೂಜಾರಿ ಕಿಡಿ ಕಾರಿದರು; ಛೇಡಿಸಿದರು, ಹಂಗಿಸಿದರು; ಅವಮಾನಿಸಿದರು.

“ನಡೀರಿ ಇಲ್ಲಿಂದ!” ಎಂದು ಗರ್ಜಿಸಿದರು ತಮಿಳಿನಲ್ಲಿ.

ಇಂಗ್ಲಿಷಿನಲ್ಲಿ ಆ ಯುವಕರಿಗೆಂದೆ:

“ಇವರು ಗುಡಿಯ ಅರ್ಚಕರು. ನೀವು ಲಘುವಾಗಿ ಮಾತನಾಡಬಾರದು.”

ತಂಡ ತೆರಳಿತು. ಪೂಜಾರಿಯೂ ನಾನೂ ಈಗ ಮಿತ್ರರು.

* * * * *

“ವರ್ಷಕ್ಕೊನ್ನೆ ಜಾತ್ರೆ ಇದೆ ಅಲ್ವೆ?”

“ಜನವರಿಯಲ್ಲಿ. ಆಗ ನಮ್ಮ ಜನಗಳೆಲ್ಲಾ ಬರ್ತಾರೆ.”

“ಒಟ್ಟು ಎಷ್ಟು ಜನ?”

“ಎಂಟುನೂರು.”

“ಹೌದೆ? ಅಷ್ಟೇನೆ?”

“ಹೂಂ”

– ವ್ಯಥೆಯ ನಿಟ್ಟುಸಿರು.

(ಅಧಿಕಾರಿಗಳ ಜನಗಣತಿಯ ಪ್ರಕಾರ ಅಷ್ಟೂ ಇಲ್ಲ; ತೋಡರ ಒಟ್ಟು ಸಂಖ್ಯೆ ನಾಲ್ಕೇನೂರು.)

“ಇಲ್ಲಿ ಎಷ್ಟು ಜನ ಇದಾರೆ?”

“ನಾಲ್ವತ್ತು.”

ಮಕ್ಕಳು ದೂರ ನಿಂತಿದ್ದರು. ಅಳಿಯುತ್ತಿದ್ದ ಕುಲದ ಮುದುಕ ಪೂಜಾರಿಗೆ ನಾನೆಂದೆ:

“ನಮಸ್ಕಾರ. ಬರಲೆ?”

ಮಾತು ಒಳಗಿನ ಅಳಲಿನಲ್ಲಿ ತೊಯ್ದು ಬಂದಿತು:

“ನೀವು ಗೌರವ ಕೊಟ್ಟು ಮಾತನಾಡಿದಿರಿ. ಸಂತೋಷವಾಯ್ತು. ನಮಸ್ಕಾರ.”

* * * * *

ವಸತಿ ಪ್ರದೇಶದಿಂದ ಹೊರಬೀಳುವ ವೇಳೆಗೆ ತೋಡರ ಮಕ್ಕಳು ಅಡ್ಡಗಟ್ಟಿದರು.

ಕಿಶೋರಿ ಕೇಳಿದಳು:

“ಕಾಸು ಕೊಡು.”

“ಯಾಕಮ್ಮ ಕಾಸು?”

“ಮಿಠಾಯಿ ತಿಂತೀವಿ.”

ತನ್ನ ವಿಜಯ ಸಂಪೂರ್ಣವೆಂದು ನಾಗರಿಕತೆ ಕೇಕೆ ಹಾಕಿ ನಗುತ್ತಿತ್ತು.

೧೨–೫–೧೯೬೮

# ಅಂಧೇರಿ ಶಿಬಿರದ ಬೆಳಕು

ಮೇ ತಿಂಗಳ ಉತ್ತರಾರ್ಧದಲ್ಲಿ ಮುಂಬಯಿಯ ಅಂಧೇರಿಯಲ್ಲಿ ಜರಗಿದ ವಿಶ್ವವಿದ್ಯಾನಿಲಯಗಳ ಅಧ್ಯಾಪಕ–ವಿದ್ಯಾರ್ಥಿಗಳ ಶಿಬಿರದಲ್ಲಿ ಸೃಷ್ಟಿಸಲಾದ ಬೆಳಕಿನ ಮಹತ್ವವೇನು? ಈ ಸೊಡರು ಭಾರತದ ನಂದಾದೀಪವಾದೀತೆ? ಲೋಕದ ಯುವಜನಾಂಗ ಕೈಗೆತ್ತಿಕೊಂಡಿರುವ ಉರಿಯುವ ಕೊಳ್ಳಿಗಿಂತ ಭಿನ್ನವಾದ ದೀಪಿಕೆಗೆ ಇಲ್ಲಿ ಬೆಳಗೀತೆ? ಅಂಧೇರಿಯ ಬೆಳಕು ನಿಜವಾಗಿಯೂ ಮಹೋನ್ನತ ಸಂದೇಶವನ್ನು ಸಾರೀತೆ?

ಶಿಬಿರ ಜರಗಿ ಒಂದು ತಿಂಗಳಷ್ಟೇ ದಾಟಿರುವಾಗ ಮೇಲಿನ ಪ್ರಶ್ನೆಗಳಿಗೆ ಖಚಿತವಾದ ಹೌದು–ಅಲ್ಲ ಉತ್ತರ ನೀಡುವುದು ಕಷ್ಟವಾದೀತು.

ಆದರೆ ಅಸಹನೆಯ ಪ್ರತಿಭಟನೆಯ ಹೊಗೆ ಮುಸುಕಿದ ವಾತಾವರಣದಲ್ಲಿ ಅಂಧೇರಿ ಶಿಬಿರ ಚೈತನ್ಯದಾಯಿಯಾದ ತಂಗಾಳಿಯಾಯಿತು ಎಂದು ಮಾತ್ರ ಧಾರಾಳವಾಗಿ ಹೇಳಬಹುದು.

ವಿಶ್ವವಿದ್ಯಾನಿಲಯಗಳ ಅಧ್ಯಾಪಕರ–ವಿದ್ಯಾರ್ಥಿಗಳ ಶಿಬಿರಗಳನ್ನು ಸಂಘಟಿಸಬೇಕೆಂಬ ಸಲಹೆಯನ್ನು ಮುಂದಿಟ್ಟವರು ಸರ್ವೋಚ್ಚ ನ್ಯಾಯಸ್ಥಾನದ ಮುಖ್ಯ ನ್ಯಾಯಾಧೀಶರಾಗಿದ್ದ ಮತ್ತು ಮುಂಬಯಿ ವಿಶ್ವವಿದ್ಯಾಲಯದ ಉಪಕುಲಪತಿಯಾಗಿರುವ ಬಿ. ಪಿ. ಗಜೇಂದ್ರಗಡ್ಕರ್ ಅವರು. (ಬಾಲ್ಯದಲ್ಲಿ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದವರು). ಭಾರತೀಯ ವಿದ್ಯಾಭವನದ ಕುಲಪತಿ ಕನ್ನಯ್ಯಲಾಲ ಮುನ್ಶಿಯವರೂ ಅಂಥದೊಂದು ಶಿಬಿರ ಸ್ವಪ್ನವನ್ನು ಬಹಳ ದಿನಗಳಿಂದ ಕಂಡಿದ್ದರು. 'ರಾಷ್ಟ್ರೀಯ ಐಕ್ಯ ಚರ್ಚಾಗೋಷ್ಠಿ' ಎಂಬುದು ಸಂಸ್ಕೃತ ವಿಶ್ವಪರಿಷತ್, ರಾಮಕೃಷ್ಣ ಮಿಶನ್, ಗಾಂಧಿ ಸ್ಮಾರಕ ನಿಧಿಗಳೊಂದಿಗೆ ಭಾರತೀಯ ವಿದ್ಯಾಭವನ ರೂಪಿಸಿದ ವೇದಿಕೆ. ಮುಂಬಯಿ ವಿಶ್ವವಿದ್ಯಾಲಯವೂ ಈ ವೇದಿಕೆಯೂ ಒಂದಾಗಿ ಶಿಬಿರಕ್ಕಾಗಿ ಕರೆ ನೀಡಿದುವು. ಬೇರೆಯೂ ಹದಿನೆಂಟು ವಿಶ್ವವಿದ್ಯಾಲಯಗಳು ಶಿಬಿರ ಸಂಘಟನೆಯಲ್ಲಿ ತಾವೂ ಸಹಪ್ರವರ್ತಕರಾಗಲು ಮುಂದಾದುವು. ಶಿಬಿರ ಏರ್ಪಟ್ಟಾಗ ದೇಶದ ಐವತ್ತೆಂಟು ವಿಶ್ವವಿದ್ಯಾಲಯಗಳ ಅಧ್ಯಾಪಕರೂ ವಿದ್ಯಾರ್ಥಿಗಳೂ ಅದರಲ್ಲಿ ಭಾಗವಹಿಸಿದರು.

ಆರು ದಿನಗಳ ಶಿಬಿರ ಅಪೂರ್ವವಾಗಿತ್ತು. ಪ್ರತಿನಿಧಿಗಳು ನಾಲ್ಕು ಗುಂಪುಗಳಾಗಿ, ಭಾರತದ ಐಕ್ಯ ಮತ್ತು ಸಮಗ್ರತೆ, ವಿದ್ಯಾರ್ಥಿಗಳ ಸಮಸ್ಯೆಗಳು, ಪಕ್ಷ ರಾಜ

ಕೀಯ ಹಾಗೂ ವಿಶ್ವವಿದ್ಯಾನಿಲಯ, ಭಾಷೆ – ಹೀಗೆ ನಾಲ್ಕು ವಿಷಯಗಳನ್ನು ಚರ್ಚಿಸಿದರು.

ಈ ಎಲ್ಲ ಜಿಜ್ಞಾಸೆ ಮಂಥನಗಳ ಸಾರವನ್ನೊಳಗೊಂಡ ಪ್ರತಿಜ್ಞೆಯನ್ನು ಶಿಬಿರ ಕೊನೆಯ ದಿನ ಸ್ವೀಕರಿಸಿತು.

* * * * *

ಆರು ದಿನಗಳ ಈ ಶಿಬಿರ ಜೀವನ, ಸಾಮೂಹಿಕ ವಿಚಾರ ವಿನಿಮಯ ಎಷ್ಟು ಸ್ಫೂರ್ತಿದಾಯಕವಾಗಿದ್ದುವೆಂದರೆ ಎಂಭತ್ತೊಂದರ ವೃದ್ಧ ಮುನ್ನಿಯವರು ಗತಕಾಲ ದಲ್ಲಿ ಜರಗುತ್ತಿದ್ದ ಭಾರತ ಸ್ವಾತಂತ್ರ್ಯಯೋಧರ ಶಿಬಿರ ಸಮ್ಮೇಳನಗಳನ್ನು ಸ್ಮರಿಸಿ ಕೊಂಡರು.

ಸ್ವಾತಂತ್ರ್ಯೋತ್ತರ ಭಾರತದಲ್ಲೂ ‘ಹೋರಾಟ’ ‘ಸಂಗ್ರಾಮ’ ಪದಗಳು ಜೀವಂತವಾಗಿರಬೇಕಾದ ಪರಿಸ್ಥಿತಿ ಇದು. ಈ ಸಂಗ್ರಾಮ, ಛಿದ್ರ ಪ್ರವೃತ್ತಿಗಳ ವಿರುದ್ಧ, ಸಾರ್ವಜನಿಕ ಜೀವನವನ್ನು ಗಂಡಾಂತರಕ್ಕೆ ಗುರಿಮಾಡಿ, ಭಾರತೀಯ ಪ್ರಜಾ ಪ್ರಭುತ್ವಕ್ಕೆ ಕುಠಾರಪ್ರಾಯವಾಗಿರುವ ದುಷ್ಟಶಕ್ತಿಗಳ ವಿರುದ್ಧ.

ಈ ದೇಶವನ್ನು ದುರ್ಬಲಗೊಳಿಸಿರುವ ವಿವಿಧ ಅಭಾವಗಳಲ್ಲಿ ಮುಖ್ಯವಾದುವು ಯಾವುವು? ಧ್ಯೇಯದ ಅಭಾವ, ಹೊಣೆಗಾರಿಕೆಯ ಅಭಾವ.

ಈ ದುಃಸ್ಥಿತಿಯನ್ನು ಕೊನೆಗಾಣಿಸಲು ದಾರಿ ಯಾವುದು? ಶಿಕ್ಷಣದಿಂದ ತಿಳಿವಳಿಕೆ ಮೂಡಿಸುವುದರಿಂದ, ಅರಿವಿನ ಪ್ರಸಾರದಿಂದ ಮನೆಮುರುಕ ಶಕ್ತಿಗಳನ್ನು ಜಯಿಸಬೇಕು; ಪ್ರಭಾವಶಾಲಿಯಾದ ಪುರೋಗಾಮಿಯಾದ ವಿಚಾರಗಳಿಗೆ ಚಾಲನೆನೀಡಬೇಕು.

“ಅಂಥ ವಿಚಾರಗಳು ಪ್ರಬಲ ಅಸ್ತ್ರಗಳಂತೆ ಪರಿಣಾಮಕಾರಿಯಾದುದನ್ನು ಇತಿಹಾಸ ತೋರಿಸಿಕೊಟ್ಟಿದೆ. ಅದನ್ನು ನಾವು ಮರೆಯಬಾರದು”, ಎನ್ನುತ್ತಾರೆ ಗಜೇಂದ್ರಗಡ್ಕರ್.

ಅವರ ಮಾತನ್ನೇ ಉಲ್ಲೇಖಿಸುವುದಾದರೆ ಶಿಕ್ಷಣಕ್ಷೇತ್ರಕ್ಕೆ ಈ ಶಿಬಿರ ನೀಡುವ ಆಗ್ರಹದ ಕರೆ ಇದು:

“ಎಚ್ಚರಾಗಿ! ಏಳಿ! ಭಾರತದ ಐಕ್ಯ ಸಮಗ್ರತೆ ಸೌಹಾರ್ದಗಳು ಭದ್ರವಾಗಿ ಸ್ಥಾಪನೆಗೊಂಡು, ಪ್ರಜಾಪ್ರಭುತ್ವವು ನಮ್ಮ ತಾಯ್ನಾಡಿನ ನೆಲದಲ್ಲಿ ಸುಭದ್ರವಾಗಿ ಬೇರೂರುವತನಕವೂ ಭುಜಕ್ಕೆ ಭುಜ ತಗುಲಿಸಿ ಒಂದಾಗಿ ಮುನ್ನಡೆಯಿರಿ!”

* * * * *

ಭ್ರಮನಿರಸನದಿಂದ ಸೃಷ್ಟಿಯಾದ ಶೂನ್ಯವನ್ನು ಸಿನಿಕತನ ತುಂಬುತ್ತಿರುವಾಗ ರೂಢಮೂಲ ಅಭಿಪ್ರಾಯಗಳಿಗೆಲ್ಲ ಸಮರಾಹ್ವಾನ ನೀಡಲು ಹೊಸ ಪೀಳಿಗೆ ಉತ್ಸುಕ ವಾಗಿರುವಾಗ ‘ವಿಗ್ರಹ ಭಂಜನೆ’ಯೇ ಜಾಗ್ರತಿಯ ಸಂಕೇತವೆನಿಸಿರುವಾಗ, ಮೇಲಿನ ಕರೆ ಎಷ್ಟು ಕರ್ಣರಂಧ್ರಗಳನ್ನು ಹೊಕ್ಕೀತು?

–ಇದು ಪ್ರತಿಯೊಬ್ಬ ವಿವೇಚನಾಪರನೂ ಕಾತರದಿಂದ ಕೇಳುವ ಪ್ರಶ್ನೆ.

ಒಂದು ನಾಗರಿಕತೆಯನ್ನು ನಾಶಗೊಳಿಸುವ ಬಗೆ ಹೇಗೆ?

“ಒಂದು ನಾಗರಿಕತೆಯನ್ನೂ ಜನಾಂಗವನ್ನೂ ನಿರ್ಮೂಲಪಡಿಸಬೇಕಾದರೆ, ಆ ಜನಾಂಗದ ವಿಶ್ವವಿದ್ಯಾಲಯಗಳನ್ನೂ ಜ್ಞಾನಪೀಠಗಳನ್ನೂ ಶಿಕ್ಷಣವನ್ನೂ ಧ್ವಂಸ ಮಾಡಿದರಾಯಿತು.”

ದೇಶದಲ್ಲಿ ಬದುಕನ್ನು ದುಸ್ಸಹಗೊಳಿಸುತ್ತಿರುವ ಶಕ್ತಿಗಳಿಗೆ ಮೇಲಿನ ಮಾತಿನ ಅರಿವು ಖಂಡಿತವಾಗಿಯೂ ಇದೆ.

ಒಳಿತನ್ನು, ನೆಮ್ಮದಿಯನ್ನು, ಪ್ರಗತಿಯನ್ನು ಬಯಸುವವರಷ್ಟೇ ಈಗ ಆ ಮಾತಿನ ಅರ್ಥವನ್ನು ಮನನ ಮಾಡಿಕೊಂಡು ಸಂರಕ್ಷಕರ ಸಮವಸ್ತ್ರವನ್ನು ಧರಿಸಬೇಕಾಗಿದೆ.

*   *   *   *   *

ಅಂಧೇರಿಯ ಬೆಳಕನ್ನು ಒಂದು ಸ್ಥಳಕ್ಕೆ ಒಯ್ಯುವರಂತೆ. ಒಂದೊಂದು ವರ್ಷ ಒಂದೊಂದು ಕಡೆ ಇಂಥ ಶಿಬಿರ ಜರಗುವುದಂತೆ.

“ಜ್ಞಾನಮತದ ಸದಸ್ಯರಾದ ನಾವು ಪ್ರಥಮವಾಗಿ ಭಾರತೀಯರು, ದ್ವಿತೀಯವಾಗಿ ಭಾರತೀಯರು, ಅಂತಿಮವಾಗಿಯೂ ಭಾರತೀಯರು; ವೈಯಕ್ತಿಕ ಬದುಕಿನಲ್ಲೂ ಸಾಂಘಿಕ ಜೀವನದಲ್ಲೂ ಇತರ ದೇಶಬಾಂಧವರಿಗೆ ವಿನಮ್ರ ದೃಷ್ಟಾಂತವಾಗುವಂತೆ ನಾವು ಬಾಳುತ್ತೇವೆ.”

– ಎಂಬ ಪ್ರತಿಜ್ಞೆಯನ್ನು ಮತ್ತೆ ಮತ್ತೆ ಸ್ವೀಕರಿಸಲಾಗುವುದಂತೆ.

ಈಗಲೋ ಒಂಟಿ ದನಿ. ನಾಳೆ ಅದು ಕಲಕಲ ನಿನಾದವಾಗಬೇಕು.

೨೦–೬–೧೯೬೮

# "ತುಮ್‌ನೆ ದೇಖಾ ಹೈ ಕ್ಯಾ"?

ಸೊಗಸಾದ ತೆಳು ಪೆಟ್ಟಿಗೆ. ಅದರಲ್ಲಿ ಚರಕಾ. ತದೇಕಚಿತ್ತನಾಗಿ ನೂಲು ತೆಗೆಯುವ ಸ್ಫುರದ್ರೂಪಿ ಯುವಕ.

ಎರಡು ದಶಕಗಳ ಅನಂತರ—

ಅಚ್ಚುಕಟ್ಟಾದ ಪೆಟ್ಟಿಗೆ. ಒಳಗೆ ಟೇಪ್ ರೆಕಾರ್ಡ್‌. ಸ್ವಿಚ್ ಹಾಕಿ ಧ್ವನಿದಾರ ಇನ್ನೊಂದು ಚಕ್ರಕ್ಕೆ ಸುತ್ತಿಕೊಳ್ಳುವುದನ್ನು ಆಸ್ಥೆಯಿಂದ ನೋಡುವ, ಅಲೆಯಲೆಯಾಗಿ ಹೊರಬರುವ ಹಾಡಿಗೆ ಕಿವಿಗೊಡುವ ಆಕರ್ಷಕ ಮುಖಮುದ್ರೆಯ ವಯಸ್ಕ.

ಅವರು ಬಾಬುರಾವ್ ಕುಮಠೇಕರ್.

*　　　*　　　*　　　*　　　*

ಅಲ್ಪಪ್ರಾಣವಿರಲಿ, ಮಹಾಪ್ರಾಣವಿರಲಿ ಕುಮಟಾ ಎಂದರೆ ಕುಂಠಿತ ಎನ್ನಿಸಬಹುದು; ಕರ್ಮಟ ಎಂದೂ ಭಾಸವಾಗಬಹುದು. ಆದರೆ ಕರ್ನಾಟಕದ ಕಡಲ ತಡಿಯ ಈ ಹಕ್ಕಿಗೆ ಯಾವ ಸೀಮಾ ಬಂಧನವೂ ಇಲ್ಲ. ದೇಶದ ಆಕಾಶದಲ್ಲಿ ಸ್ವಚ್ಛಂದವಾಗಿ ವಿಹರಿಸಿ, ಕಳೆದ ಆರುವರ್ಷಗಳಿಂದ ಉತ್ತರ ಪ್ರದೇಶದ ಮುಸ್ಸೂರಿ ಗಿರಿಧಾಮದ ಗೂಡಿನಲ್ಲಿ ನೆಲೆಸಿರುವ ವಿಶಿಷ್ಟ ಜೀವ ಇದು.

ಚರಕದಿಂದ ಟೇಪ್‌ರೆಕಾರ್ಡರ್‌ಗೆ – ಇದೇನೀ ಅವಸ್ಥಾಂತರ?

ಸ್ವಾತಂತ್ರ್ಯಸಮರದಲ್ಲಿ ಜೀವತೇದವರು. ಆ ಹೋರಾಟವೇ ಶಿಕ್ಷಣ. ಅಲ್ಲಿನ ಅನುಭವವೇ ಅಪೂರ್ವ ಸಂಸ್ಕಾರ. ಗುರಿಸಾಧನೆಯಾಯಿತು ಎಂದೊಡನೆ ಬೇರೆ ದಾರಿ ಹಿಡಿಯಲು ಅಣಿಯಾದರು. ಗಾಂಧೀಜಿಯ ಮರಣ ಬದುಕಿನ ನಾಟಕದ ಮಧ್ಯಂತರವನ್ನು ಸಾರಿತು.

ಕುಮಠೇಕರ್ ರಾಜಕಾರಣಿಯಾಗಲಿಲ್ಲ. ರಾಜಕೀಯ ಸಂತ್ರಸ್ತನಾಗಿ ಜೋಳಿಗೆಯನ್ನೂ ಹಿಡಿಯಲಿಲ್ಲ. ಜೀವನದ ಉತ್ತರಾರ್ಧಕ್ಕಾಗಿ ಹೊಸತೊಂದು ಬಾವುಟವನ್ನೂ ಹೊಸ ಘೋಷಣೆಯನ್ನೂ ಅವರು ರೂಪಿಸಿದರು. ಹಿಂದಿನ ಆದರ್ಶ ಚಿಟ್ಟೆಯಾಗಿ ಹೊರಬಂತು. ಭಾರತದ ಹಲವು ಬಣ್ಣಗಳು. ಎಷ್ಟು ರಮ್ಯ!

ಭಾರತೀಯ ಬದುಕಿನ ಆಳವನ್ನು – ಮೂಲವನ್ನು – ಕೆದಕುತ್ತ ಕೆದಕುತ್ತ ಚಿಂತನಪರ ಬಾಬೂರಾಯರು ತಮ್ಮನ್ನು ತಾವೇ ಪ್ರಶ್ನಿಸಿರಬೇಕು: ತಲೆತಲಾಂತರಗಳಿಂದ ನಮ್ಮ ಜನತೆಯ ಮೇಲೆ ಪ್ರಭಾವ ಬೀರಿರುವ ಶಕ್ತಿ ಯಾವುದು? ವೈವಿಧ್ಯದ ಎಸಳುಗಳನ್ನು ಹೊತ್ತ ತೊಟ್ಟು ಯಾವುದು? ಹೊರಗೂ ಸೆರೆಮನೆಯೊಳಗೂ ಅವರು

ನಡೆಸಿದ ಅಧ್ಯಯನ ಸಂತ ಸಾಹಿತ್ಯದ ಶಿಲಾವೇಗುಲದತ್ತ ಅವರನ್ನು ಒಯ್ಯಿತು. ಕನ್ನಡ ಮರಾಠಿ ಹಿಂದಿಗಳಲ್ಲಿ ಒಳ್ಳೆಯ ಬರೆಹಗಾರರಾದ ಕುಮಠೇಕರ್, ಕನ್ನಡದ ವಚನ ಸಾಹಿತ್ಯವನ್ನೂ ದಾಸಸಾಹಿತ್ಯವನ್ನೂ ಹಿಂದಿಗೆ ಅನುವಾದಿಸಿದರು. ಮಹಾರಾಷ್ಟ್ರದ ಸಂತ ಜ್ಞಾನೇಶ್ವರರ ಕೃತಿಯನ್ನೂ ಹಿಂದಿಯಲ್ಲಿ ಸಿದ್ಧಪಡಿಸಿದರು.

ಅವರ ಟೇಪ್ ರಿಕಾರ್ಡರ್ ನುಡಿಯುತ್ತದೆ: "ನೀ ಪೋಗದಿರೋ ರಂಗಾ...." ಮರುಕ್ಷಣದಲ್ಲೇ ಇನ್ನೊಂದು ಹಾಡೂ ಕೇಳಿಬರುತ್ತದೆ: "ನ ಜಾವ್ವೋರೇ ರಂಗಾ...."

* * * * *

ಸದಾ ಸತ್ಯದ ಸಂಶೋಧನೆ ಶೇಖರಣಸತ್ವದ್ದು, ಪರಿಗ್ರಹಣ ತತ್ವದ್ದು. ಸಂಗೀತ ಅವರ ಪಾಲಿಗೆ ವಾಹಕ. ಅವರ ಜೆನ್ನೇರಿ ಶತಮಾನಗಳ ಸಂತರಿಂದ 'ರಾಷ್ಟ್ರಭಾಷೆ'ಯನ್ನಾಡಿಸಿ, ಇತರ ರಾಷ್ಟ್ರಭಾಷೆಗಳಲ್ಲಿಯೂ ನುಡಿಸಿ, ರಾಷ್ಟ್ರೀಯ ಭಾಷೈಕ್ಯ ಸಾಧನೆಗಾಗಿ ಶ್ರಮಿಸುವ ಸಮರ್ಪಿತ ಜೀವಿ ಈಗ ಈ ಕುಮಠೇಕರ್.

ಬಾಬೂರಾಯರ ಕನಸಿನ ಮಂದಿರ, ಮಸ್ಸೂರಿಯಲ್ಲಿ ಸ್ಥಾಪಿತವಾಗಿರುವ ಸಂತ ಸಾಹಿತ್ಯ ಸದನ.

ಸಂತಸಾಹಿತ್ಯ ಬೋಧನೆಗಳ ಬಗೆಗೆ ಸಂಶೋಧನೆ, ಅಧ್ಯಯನ, ಗ್ರಂಥ ಪ್ರಕಟಣೆ, ಪ್ರಚಾರ – ಇವಿಷ್ಟು ಸದನದ ಬಹುಮುಖ ಕಾರ್ಯಕ್ರಮಗಳು. ಇವುಗಳಲ್ಲೆಲ್ಲ ಸಂಗೀತದ್ದು ದೊಡ್ಡ ಪಾತ್ರ.

೧೯೬೦ರಲ್ಲಿ ನಡೆದ ಸದನದ ಕಾರ್ಯಾರಂಭದ ಹಿರಿತನವನ್ನು ಆಗಿನ ರಾಷ್ಟ್ರಾಧ್ಯಕ್ಷ ಬಾಬುರಾಜೇಂದ್ರ ಪ್ರಸಾದರು ವಹಿಸಿದ್ದರು. ಆ ಸಂದರ್ಭದಲ್ಲಿ ಅವರೆಂದರು:

"ಸದನದ ಧ್ಯೇಯಗಳು ಎಷ್ಟು ಉದಾತ್ತ ಎಷ್ಟು ಪರಿಶುದ್ಧ ಎಂದರೆ, ವ್ಯವಸ್ಥಾಪಕರು ಯೋಜಿಸಿರುವುದಕ್ಕಿಂತಲೂ ಮುಂಚೆಯೇ ಅವು ಈಡೇರುವುದು ಖಂಡಿತ. ಯಾಕೆಂದರೆ ಸಂತರ ಸಂದೇಶಕ್ಕಿಂತಲೂ ಭಾರತದ ಜನತೆಯ ಮೇಲೆ ಪರಿಣಾಮ ಬೀರುವಂಥದು ಬೇರೊಂದಿಲ್ಲ."

ಒಳ್ಳೆಯ ಸಂಘಟಕರಾದ ಬಾಬೂರಾವ್ ತಮ್ಮ ಕಾರ್ಯಸಾಧನೆಗಾಗಿ ಕಲೆ ಹಾಕಿರುವ ವ್ಯಕ್ತಿಗಳೂ ಗಾತ್ರದವರೇ. ಭಾರತದ ನಿವೃತ್ತ ಸರ್ವೋಚ್ಚ ನ್ಯಾಯಾಧೀಶ ಭುವನೇಶ್ವರ ಪ್ರಸಾದ ಸಿನ್ಹರು ಅಧ್ಯಕ್ಷರು; ರಂಗನಾಥ ದಿವಾಕರರು ಉಪಾಧ್ಯಕ್ಷರು; ಯು. ಎನ್. ಢೇಬರ್, ಚಂದ್ರಭಾನು ಗುಪ್ತ, ಡಾ॥ ಪಿ. ಕೆ. ಆರ್. ವಿ. ರಾವ್, ಬಿ. ಗೋಪಾಲರೆಡ್ಡಿ ಮತ್ತಿತರರು ಸದಸ್ಯರು. ಬಾಬೂರಾವ್ ಕುಮಠೇಕರ್ ಸಂಸ್ಥಾಪಕ ಕಾರ್ಯನಿರ್ವಾಹಕ – ನಿರ್ದೇಶಕರು.

ಇಂಥ ಸಂಸ್ಥೆಗಳಲ್ಲ ಆಕರ್ಷಕ ಹೆಸರುಗಳು ಇರಲೇಬೇಕು. ಇಷ್ಟು ಜನ ಪ್ರತಿಷ್ಠಿತರನ್ನು ಕಲೆಹಾಕಿರುವುದು, ಬಾಬೂರಾವ್ ಕಾರ್ಯಕುಶಲರೆಂಬುದಕ್ಕೆ ನಿದರ್ಶನ.

* * * * *

ಸಂತಸದನದಲ್ಲಿ ಸ್ಥಾಪಿತವಾಗಿರುವ ವಿಸ್ತಾರಗೊಳ್ಳಬೇಕಾಗಿರುವ, ಗ್ರಂಥಾಲಯದ ಹೆಸರು – ಸಂತ ಸ್ವಾಧ್ಯಾಯ ಮಂದಿರ. ಅಲ್ಲಿ ಒಂದೊಂದು ಭಾಷೆಗೆ ಒಂದೊಂದು ವಿಭಾಗ. ಸಂಸ್ಕೃತಕ್ಕೆ ವ್ಯಾಸಕಕ್ಷೆ; ಪಾಲಿಗೆ ಗೌತಮ ಕಕ್ಷೆ; ಬಸವೇಶ್ವರ ಕಕ್ಷೆ ಕನ್ನಡಕ್ಕೆ; ಜ್ಞಾನೇಶ್ವರ ಕಕ್ಷೆ ಮರಾಠಿಗೆ; ತೆಲುಗಿಗೆ ವೇಮನ ಕಕ್ಷೆ; ಹಿಂದಿಗೆ ಕಬೀರ ಕಕ್ಷೆ;— ಹೀಗೆಯೇ ಇತರ ಭಾಷೆಗಳಿಗೆ ಕೂಡಾ. ಸ್ವಾಧ್ಯಾಯ ಮಂದಿರದಲ್ಲಿ ಸಂತ ಸಾಹಿತ್ಯ ಗ್ರಂಥಗಳ ಸಂಖ್ಯೆ ಕ್ರಮೇಣ ೩೦,೦೦೦ ಕ್ಕೆ ಏರುವ ನಿರೀಕ್ಷೆ.

ಪ್ರಕಟಣಾವಿಭಾಗದಲ್ಲಿ ಪ್ರತಿ ವರ್ಷ ನಾಲ್ಕು ಸಾವಿರದಿಂದ ಆರುಸಾವಿರ ಪುಟಗಳಷ್ಟು ಸಾಹಿತ್ಯ ಪ್ರಕಟಿಸುವ ಯೋಜನೆ.

ಸಂಸ್ಕೃತಿ ಸಂಘಟನೆಯಲ್ಲಿ ವಚನ, ಪದ, ಭಜನೆಗಳನ್ನು ರಾಷ್ಟ್ರದಾದ್ಯಂತ ಜನಪ್ರಿಯಗೊಳಿಸಲು ಕಲಾವಿದರನ್ನು ಸಿದ್ಧಪಡಿಸುವ ಏರ್ಪಾಡು.

–ಈ ಎಲ್ಲ ಚಟುವಟಿಕೆಗಳಿಗೆ ತಗಲುವ ಅಂದಾಜು ವೆಚ್ಚ ೧೦ ಲಕ್ಷ ರೂಪಾಯಿ.

ಅಷ್ಟು ಹಣವನ್ನು ರಾಷ್ಟ್ರದಾದ್ಯಂತ ಬೊಗಸೆಯೊಡ್ಡಿ ಸಂಗ್ರಹಿಸಲು ಬಾಬುರಾವ್ ನಿರ್ಧರಿಸಿದ್ದಾರೆ.

* * * * *

ಟೇಪ್‌ರೆಕಾರ್ಡರ್‌ನೊಡನೆ ಊರೂರು ಸುತ್ತುವ ಒಂಟಿ ಜೀವ. ಸದ್ಗೃಹಸ್ಥರ ಸಂದರ್ಶನ. ಮಿತ್ರರ ನೆರವಿನಿಂದ ಸಭೆ.

“ ಭಾಗ್ಯಕೀ ಲಕ್ಷ್ಮೀ ಆವೊ ಮಾ ”

ಅದರೊಂದಿಗೆ : “ ಭಾಗ್ಯದ ಲಕ್ಷ್ಮಿ ಬಾರಮ್ಮಾ ”

ಅಕ್ಕನವರ “ ನೀವು ಕಂಡಿರಾ ? ”– “ ತುಮ್‌ನೆ ದೇಖಾ ಹೈ ಕ್ಯಾ ?”

“ ಇವತ್ತಿನ ಮಿತ್ರ ನಾಳೆ ಶತ್ರುವಾದಾಗ ಏನು ಮಾಡಬೇಕು ? ಎನ್ನುವುದು ರಾಜಕಾರಣಿಯ ಚಿಂತೆ. ಇವತ್ತಿನ ಶತ್ರು ಕೂಡಾ ನಾಳೆ ಮಿತ್ರನಾಗುವಂತೆ ಮಾಡುವುದು ಹೇಗೆ – ಇದು ಸಂತರ ವಿಚಾರ. ರಾಷ್ಟ್ರೀಯ ಭಾವೈಕ್ಯ ಆಗುವುದು ರಾಜಕಾರಣಿಯಿಂದಲ್ಲ, ಸಂತ ಬೋಧನೆಯಿಂದ.”

—ಇದು ‘ ಕುಮಠೇ ’ಕರರ ವಿಚಾರ. ಈ ವಿಚಾರಕ್ಕೆ ಅವರು ತಮ್ಮನ್ನು ತಾವು ಧಾರೆ ಎರೆದುಕೊಂಡಿದ್ದಾರೆ.

೧೪–೭–೧೯೬೮

# ಈ ನೆಲಕ್ಕೊಂದು ಹೆಸರು : ಕನ್ನಡನಾಡು

ಇತ್ತೀಚೆಗೆ ಕಂಡೊಂದು ಸನ್ನಿವೇಶ ಮತ್ತೆ ಮತ್ತೆ ಕಣ್ಣಿಗೆ ಕಟ್ಟುತ್ತಿದೆ. ಅಲ್ಲಿ ಕೇಳಿಸಿದ ಕೆಲವು ಪದಗಳು ಇದ್ದಕ್ಕಿದ್ದಂತೆ, ಅಥವಾ ತುಸು ಬದಲಾವಣೆಯೊಂದಿಗೆ ಕುಣಿದಾಡುತ್ತಿವೆ.

ಗ್ರಂಥ 'ಗಂಗೋತ್ರಿ'ಯನ್ನು ಕುವೆಂಪು ಮಹಾಕವಿಗೆ ಅರ್ಪಿಸುವ ಸಂದರ್ಭ. ರಾಜ್ಯದ ಅರ್ಥಮಂತ್ರಿ ರಾಮಕೃಷ್ಣ ಹೆಗಡೆಯವರು ಮಾತನಾಡುತ್ತಾ, "ರಾಜ್ಯಕ್ಕೆ ಕರ್ನಾಟಕವೆಂದು ಹೆಸರಿಡಬೇಕೆಂಬುದು ಕುವೆಂಪು ಅವರ ಆಶಯಗಳಲ್ಲಿ ಒಂದು. ಆ ಆಶಯ ಈಡೇರುವ ದಿನ ದೂರವಿಲ್ಲ," ಎಂದರು. ಕುವೆಂಪು ತಮ್ಮ ಭಾಷಣದಲ್ಲಿ ನಾಡಿನ ಹೆಸರಿನ ಪ್ರಸ್ತಾಪಮಾಡಿ, "ಮೈಸೂರು ಎಂಬ ಹೆಸರು ಸಲ್ಲುವುದಿಲ್ಲ. ಕರ್ನಾಟಕವೆಂದೋ ಇನ್ನೆಂಥದೋ ಹೆಸರಿಡಬೇಕು," ಎಂದು ನುಡಿದರು.

ಕವಿಯ ನಿಲುವಿನಿಂದ ನಾನು ಚಕಿತನಾದೆ. ಮೈಸೂರಿನ ಬದಲು ಕರ್ನಾಟಕವೋ ಇನ್ನೆಂಥದೋ ಹೆಸರು.........

ಬೇರೆಯೇ ಹೆಸರು. ಯಾವುದು? 'ಕನ್ನಡನಾಡು' ಎಂದೆ?

*　　*　　*　　*　　*

ಶಾಸನ ಸಭೆಯಲ್ಲಿ ಖಾಸಗಿ ಸದಸ್ಯರದೊಂದು ನಿರ್ಣಯ. ಈ ರಾಜ್ಯಕ್ಕೆ 'ಕನ್ನಡ ನಾಡು' ಎಂಬ ಹೆಸರಿಡಬೇಕೆಂದು ಪ್ರೊಫೆಸರ್ ಶ್ರೀಕಂಠಯ್ಯನವರ ಪ್ರತಿಪಾದನೆ. ಶ್ರೀಕಂಠಯ್ಯ ಕವಿಯಲ್ಲ, ಸಾಹಿತಿಯಲ್ಲ. ಬ್ಯಾರಿಸ್ಟರು; ವಕೀಲವೃತ್ತಿಯವರು, ನ್ಯಾಯಶಾಸ್ತ್ರದ ಅಧ್ಯಾಪಕರು ಕೂಡಾ; ಹಿಂದೆ ರಾಜಕೀಯ ಶಾಸ್ತ್ರದ ಪ್ರಾಧ್ಯಾಪಕರಾಗಿದ್ದವರು. ವಿರೋಧಿ ಬಣದ ಸದಸ್ಯರಾಗಿದ್ದರೂ ಸ್ವತಂತ್ರ ಪ್ರವೃತ್ತಿಯ ಒಂಟಿ ವ್ಯಕ್ತಿ.

ಕಾವೇರಿ–ಗೋದೆಯರು ಮೈತೊಳೆವ ನಾಡು ಮೈಸೂರು ಅಲ್ಲ, ಕರ್ನಾಟಕವೂ ಅಲ್ಲ – ಎಂದು ಶ್ರೀಕಂಠಯ್ಯ ಆಧಾರಸಹಿತ ವಾದಿಸಿದರು. ಕರ್ನಾಟಕ ಎಂಬುದೇ ಸಮಂಜಸ ಎಂಬ ವಾದವೂ ಶಾಸನ ಸಭೆಯಲ್ಲಿ ಒಂದು ದಶಕಕ್ಕೂ ಹೆಚ್ಚುಕಾಲ ಪ್ರತಿಧ್ವನಿಸಿದೆ. ಹಾಗೆ ಪ್ರತಿಪಾದಿಸಿದವರು ಕವಿಗಳನ್ನು ಸಾಕ್ಷಿಗಳಾಗಿ ಕರೆದಿದ್ದಾರೆ; ಶಿಲಾಲೇಖಗಳಿಂದ ಉದ್ಧರಿಸಿದ್ದಾರೆ.

ವಾಸ್ತವವಾಗಿ ಇದೆಲ್ಲ ಬೌದ್ಧಿಕ ನೆಲಗಟ್ಟಿನ ಮೇಲೆ ನಡೆದಿರುವ ಮಂಡನೆ, ಸಮರ್ಥನೆ.

*　　*　　*　　*　　*

ರಾಜಕಾರಣಿಯ ಪಾಲಿಗೆ ಬುದ್ಧಿ ವಿವೇಕಗಳೆಲ್ಲ ಬೇಕೆನಿಸಿದಾಗ ತೊಡುವ, ಬೇಡವಾದಾಗ ತೆಗೆದಿಡುವ, ಪೋಷಾಕು. ಅಧಿಕಾರದ ಭೋಗ್ಯಕ್ಕೆ ಸಂಬಂಧಿಸಿದ ಕುಸ್ತಿ ಕಣದಲ್ಲಿ ಆತನದು ಬರಿಮೈ.

ನಾಡಿನ ಹೆಸರಿಗೆ ಸಂಬಂಧಿಸಿ ಈತನಕ ನಡೆದಿರುವ ಗದ್ದಲವನ್ನು ನಿರ್ವಿಕಾರ ಮನಸ್ಸಿನಿಂದ ಪರೀಕ್ಷಿಸಿದಾಗ ಕಾಣುವುದೇನು? ಆಳುವ ಪಕ್ಷದ ಪ್ರಮುಖರು ಕರ್ನಾಟಕವೆಂಬ ಅಭಿಧಾನ ಸರಿಯೆಂದು ವೈಯಕ್ತಿಕವಾಗಿ ಒಪ್ಪಿದರೂ ಸಾಂಘಿಕವಾಗಿ ಆ ನಿಲುವನ್ನು ಕೈಗೊಳ್ಳಲಿಲ್ಲ. ಕಾರಣ, ತಮ್ಮ ಪಕ್ಷದಲ್ಲಿ ಒಡಕು ಉಂಟಾಗಬಹುದೆಂಬ ಭಯ. ಪ್ರದೇಶಗಳ ಕೃತಕ ಜೋಡಣೆಯಿಂದ ರೂಪುಗೊಂಡಿತ್ತು ರಾಜ್ಯದ ಶರೀರ. ಕನ್ನಡದ ರಕ್ತ ಹರಿದರೂ ಅವಯವಗಳ ನಡುವೆ ಸಾಮರಸ್ಯ ಕಾಣಲಿಲ್ಲ. ಅಧಿಕಾರದ ಹಂಚಿಕೆಗೆ ಸಂಬಂಧಿಸಿ ಜಾತಿ, ಪ್ರಾದೇಶಿಕ ಮತ್ತಿತರ ಕಣಗಳಿಂದ ರಕ್ತ ಕೆಟ್ಟಿತು. ನಾಡಿನ ಹೃದಯ ಸ್ವಲ್ಪ ಮಟ್ಟಿಗೆ ಹೆಪ್ಪುಗಟ್ಟಿತು.

ಈ ಪರಸ್ಪರ ಅಪನಂಬಿಕೆ ಆಧಾರವಿಲ್ಲದ್ದು ಎನ್ನುವಂತಿಲ್ಲ. ಹಳೆಯ ಮೈಸೂರಿನ ಒಕ್ಕಲಿಗರಿಗೆ ಪ್ರಾಧಾನ್ಯವಿದ್ದಿತು. ಹೊಸ ರಾಜ್ಯದ ನಿರ್ಮಾಣ ಆಗದಿರುತ್ತಿದ್ದರೆ, ಮೈಸೂರಿನ ಅಧಿಕಾರ ಸೂತ್ರಗಳು ಅವರ ಕೈಯಲ್ಲೇ ಇರುತಿದ್ದುವು. ನೂತನ ರಾಜ್ಯದಲ್ಲಿ ಸಂಖ್ಯಾಬಲದಿಂದ ಲಿಂಗಾಯತರೇ ಪ್ರಾಮುಖ್ಯ ಪಡೆದರು. ಆ ರಾಜಕಾರಣಿಗಳೇ ಸೂತ್ರಧಾರರು. ಆ ವಿರಸಕ್ಕೆ ವೈಮನಸ್ಸಿಗೆ 'ಮೈಸೂರು' 'ಕರ್ನಾಟಕ'ಗಳು ಪ್ರತೀಕಗಳಾದುವು. ಕರ್ನಾಟಕ ಎಂಬ ಹೆಸರನ್ನು ಒಪ್ಪಿಕೊಳ್ಳುವುದೆಂದರೆ ಶರಣಾಗತಿ ಸಂಪೂರ್ಣವಾದಂತೆ ಎಂದು ಹಳೆಯ ಮೈಸೂರಿನ ಪ್ರಮುಖ ಸಮಾಜ ಭಾವಿಸಿತು.

ರಾಜಕೀಯ ವಲಯದ ಹೊರಗಿನ ವಿಷಯ ಬೇರೆ. ಅರಸೊತ್ತಿಗೆಯ ಬಗೆಗೆ ಭಕ್ತಿ ವ್ಯಾಮೋಹಗಳಿರುವವರು 'ಶ್ರೀಮನ್ಮಹಾರಾಜರು ಕರ್ನಾಟಕ ರತ್ನಸಿಂಹಾಸನಾಧೀಶ್ವರ'ರೆನಿಸಿದರೂ 'ಮೈಸೂರು' ಎಂಬ ಹೆಸರಿಗೇ ಅಂಟಿಕೊಳ್ಳುತ್ತಾರೆ. ಭಾಷೆ ಸಾಹಿತ್ಯ ಸಂಸ್ಕೃತಿಗಳ ಮಾತನ್ನಾಡುವವರು 'ಕರ್ನಾಟಕ'ವನ್ನು ಒಪ್ಪಿಕೊಳ್ಳುತ್ತಾರೆ. ಇಲ್ಲಿ ಜಾತಿ ಮತಗಳ ಅಡ್ಡಗೋಡೆಗಳಿಲ್ಲ. ಈ ನಿಲುವುಗಳಿಗೆ ಅಧಿಕಾರದ ಆಸೆಯ ಹಿಮ್ಮೇಳವಿಲ್ಲ.

* * * * *

ರಾಜಕೀಯ ಕ್ಷೇತ್ರದಲ್ಲೂ ಕಂಡುಬರುವ ಸೋಜಿಗದ ಸಂಗತಿಯೊಂದಿದೆ. ನೂತನ ರಾಜ್ಯದ ರಚನೆಗೂ ಮುನ್ನವೇ ಕಮ್ಯೂನಿಸ್ಟ್ ಪಕ್ಷ, ಸಮಾಜವಾದಿ ಪಕ್ಷ, ಪ್ರಜಾಸಮಾಜವಾದಿ ಪಕ್ಷಗಳೆಲ್ಲ ತಮ್ಮ ನಾಮಧೇಯವನ್ನು ಕರ್ನಾಟಕ ಪದದಿಂದಲೇ ಆರಂಭಿಸಿದುವು. ಈಗಲೂ ಆ ಪಕ್ಷಗಳು – ಜನಸಂಘ ಸೇರಿ – ತಮ್ಮ ಚಟುವಟಿಕೆಗಳನ್ನು ನಡೆಸಿರುವುದು 'ಕರ್ನಾಟಕ' ವ್ಯಾಪ್ತಿಯಲ್ಲೇ.

ಹಿಂದೆ ಗಾಂಧೀಶಕೆ ಆರಂಭವಾದಾಗ ಕಾಂಗ್ರೆಸು ಕೂಡಾ ಭಾಷಾ ಪ್ರಾಂತಗಳ ತಳಹದಿಯ ಮೇಲೆಯೇ ಸಂಘಟನೆಯನ್ನು ಕಟ್ಟಿತು.

ವೈಯಕ್ತಿಕವಾಗಿ ಕಾಂಗ್ರೆಸ್ ವಿರೋಧಿಗಳು ಕೆಲವರು "ರಾಜ್ಯದ ಹೆಸರು ಬದಲಿಸಿದರೆ ರಕ್ತಪಾತವಾದೀತು! ರಾಜ್ಯ ಎರಡು ಹೋಳಾದೀತು!" ಎಂದು ಹೆದರಿಸಿದರೂ, ವಿರೋಧಪಕ್ಷಗಳು 'ಕರ್ನಾಟಕ' ಪದ ಬೇಡವೆನ್ನುವುದಿಲ್ಲ.

*   *   *   *   *

ಹೀಗಿದ್ದರೂ ಅನೈಕ್ಯದ ಅಸಮಾಧಾನದ ಅಸಹನೆಯ ಅಂಶಗಳು ನಾಮಾಂತರದ ಪ್ರಶ್ನೆಯನ್ನು ಜಟಿಲಗೊಳಿಸಿವೆ. ಈಗ ಇದಕ್ಕೆ ಪರಿಹಾರವೇನು?

ಭಾಷೆಯ ವಿಷಯವಾಗಿ ಮಾತನಾಡುವವರೆಲ್ಲ ಭಾವಾವೇಶಕ್ಕೆ ಒಳಗಾಗುವುದು ಸ್ವಾಭಾವಿಕ. ಭೌಗೋಳಿಕ ಹೊಂದಾಣಿಕೆ, ಆಡಳಿತಾನುಕೂಲ, ಆರ್ಥಿಕ ಸಾಮರ್ಥ್ಯ ಇತ್ಯಾದಿ ಉಪಾಧಿಗಳನ್ನು ಪಟ್ಟಿಮಾಡಬಹುದಾದರೂ, ಹೊಸ ಪ್ರಾಂತಗಳ ರಚನೆಗೆ ಪ್ರಧಾನ ಅಡಿಪಾಯ ಭಾಷೆಯೇ.

ಆ ಕಾರಣದಿಂದ ಈ ರಾಜ್ಯವನ್ನು 'ಕನ್ನಡನಾಡು' ಎನ್ನಬಹುದಲ್ಲ? ಹಳೆಯ ಮೈಸೂರಷ್ಟೇ ಕನ್ನಡನಾಡು ಅಲ್ಲ. ಕನ್ನಡ ಭಾಷೆಯನ್ನು ಮುಖ್ಯವಾಗಿ ಆಡುವ ಎಲ್ಲ ಪ್ರದೇಶಗಳೂ ಆ ನಾಡಿನ ವ್ಯಾಪ್ತಿಯಲ್ಲಿ ಬರುತ್ತವೆ. 'ಕನ್ನಡನಾಡು' ಬೇರೆಯಲ್ಲ, 'ಕರ್ನಾಟಕ' ಬೇರೆ ಅಲ್ಲ.

ಎಲ್ಲರಿಗೂ ಒಪ್ಪಿಗೆಯಾಗಬಹುದಾದಂಥ ಹೆಸರನ್ನು ಸೂಚಿಸಿರುವ ಶ್ರೀಕಂಠಯ್ಯನವರು ಹಳೆಯ ಮೈಸೂರಿನವರು; ಅಲ್ಲಿನ ಬಹುಜನ ಸಮಾಜಕ್ಕೆ ಸೇರಿದವರು. ಬಲ್ಲವನೇ ಕಿವಿ ಚುಚ್ಚುತ್ತಿರುವುದರಿಂದ ನೋವಾಗುವುದಿಲ್ಲ, ರಕ್ತ ಸೋರುವುದಿಲ್ಲ, ಹುಣ್ಣು ಆಗುವುದಿಲ್ಲ.

ರಾಜಕೀಯದ ಜನ 'ಕನ್ನಡನಾಡು' ಎಂಬುದನ್ನು ಒಪ್ಪಿಕೊಳ್ಳುವುದಾದರೆ ಉಳಿದವರು ಅಸ್ತು ಎನ್ನುವುದು ಕಷ್ಟವಾಗದು.

೨೯-೯-೧೯೬೪

# ಮಾತೃ ವಂದನ

---

ಒಂದು ಕಥೆ ಒಂದು ವ್ಯಥೆ....

ವಿಳಾಸವಿಲ್ಲದೆ ಬಂದ ಒಂದು ಲಕೋಟೆಯೊಳಗೆ ಅಚ್ಚಾದ ಹಾಳೆಗಳಿವೆ. ಸುಮಾರು ೨೪೦ ಪುಟಗಳು. ಪ್ರತಿ ಪುಟದಲ್ಲೂ ಕೃತಿಯ ಶೀರ್ಷಿಕೆ ಮೂಡಿದೆ: ' ಒಂದು ಕಥೆ ಒಂದು ವ್ಯಥೆ '.

ಯುವಕ ಬರೆಹಗಾರ ಶಿವರಾಮು ಒಂದೆರಡು ತಿಂಗಳ ಹಿಂದೆ ಮನೆಗೆ ಬಂದ ನೆನಪಾಗುತ್ತಿದೆ.

ಅಭ್ಯಾಸ ಬಲದಿಂದ ಕೇಳಿದ್ದೆ :

" ಈಗೇನು ಬರೀತಾ ಇದ್ದೀರಿ ?"

" ವಂದೇ ಮಾತರಂ ಪದ್ಯದ ಇತಿಹಾಸ ಬರೀತಾ ಇದ್ದೇನೆ."

" ಓ! ಒಳ್ಳೆಯ ವಿಷಯ ಆರಿಸಿಕೊಂಡಿದ್ದೀರಿ! ಓದೋದಕ್ಕೆ ಉತ್ಸುಕನಾಗಿದ್ದೀನಿ."

ಪುಸ್ತಕದ ಬರೆವಣಿಗೆ ಮುಗಿದು ಅದರ ಮುದ್ರಣವೂ ಆಗಿದೆ. ಇನ್ನು ಕೆಲವೇ ದಿನಗಳಲ್ಲಿ ಬಿಡುಗಡೆ.

' ತಾನಾಯ್ತು ರಣಮಂತ್ರ ', 'ಮಂತ್ರದ್ರಷ್ಟ ಬಂಕಿಮಚಂದ್ರ', ' ಮಂತ್ರ ದರ್ಶನ ', ' ದಶಪ್ರಹರಣ ಧಾರಿಣೀ '.... ' ಮರ್ಮಾಘಾತ ', ' ಭಗೀರಥ ತಪಸ್ಸು', ' ಕಥೆ–ವ್ಯಥೆ '.... ಸೊಗಸಾದ ಅಧ್ಯಾಯಗಳು, ಕಲಾವಿದ ವರ್ಮ ಸಂದರ್ಭೋಚಿತವಾಗಿ ರಚಿಸಿರುವ ರೇಖಾಚಿತ್ರಗಳು, ಅಂದವಾದ ಮುದ್ರಣ....

ಹಾಳೆಗಳನ್ನು ತಿರುವಿಹಾಕಿಯೇ ಹೇಳಬಹುದು :

" ಇದೊಂದು ಅಪೂರ್ವ ಕೃತಿ."

* * * * *

ಅವಸರಪಡದೆ ಓದಿದಾಗ ಆಗುವ ಅನುಭವವೂ !

ಇಸವಿಗಳ ಘಟನೆಗಳ ವರದಿಯಲ್ಲ. ಇದೊಂದು ಕಾವ್ಯ. ರಾಷ್ಟ್ರ ಜೀವನದ ಮಾಸಿದ ಪುಟಗಳು ಇಲ್ಲಿ ಜ್ವಲಂತ ವರ್ಣಚಿತ್ರಗಳಾಗಿವೆ. ಪುರುಷಪುಂಗವರ ವಾಣಿಗಳು ಇಲ್ಲಿ ಬೃಹತ್ ವಾದ್ಯಗೋಷ್ಠಿಯ ವಾದನಗಳಾಗಿವೆ. ಪ್ರತಿಯೊಂದು ಅಧ್ಯಾಯದ ಕೊನೆಗೂ ಇರುವ ಸಾಕ್ಷ್ಯಮೂಲ – ಗ್ರಂಥ ಋಣದ ಪಟ್ಟಿಗಳು ಡಾಕ್ಟರೇಟ್ ಪದವಿಯ ಅಭ್ಯರ್ಥಿಗಳನ್ನು ನಾಚಿಸಲು ಸಮರ್ಥವಾಗಿವೆ.

'ವಂದೇ ಮಾತರಂ' ಗೀತದ ಕರ್ತೃ ಬಂಕಿಮಚಂದ್ರರನ್ನು ಕುರಿತು ಶಿವರಾಮು ಬರೆದಿರುವುದು ಹೀಗೆ:

"ಆ ದ್ರಷ್ಟಾರನು ವೇದಮೊಡನೆ ಈಶನನ್ನು ಎರಕಗೊಳಿಸಿ, ಮಾತೃದೇವತೆಯ ಭವ್ಯೋಜ್ವಲ ಮೂರ್ತಿ ನಿರ್ಮಿಸಿ, ಜನರ ಹೃದಯಸಿಂಹಾಸನದಲ್ಲಿ ಅದನ್ನು ಸ್ಥಾಪಿಸುವ ದೃಢ ನಿಶ್ಚಯದೊಡನೆ ಲೇಖನಿ ಆಡಿಸತೊಡಗಿದನು."

ವಸ್ತುವಿಗೆ ಅನುಗುಣವಾದ ಇಂಥದೇ ಶೈಲಿ ಉದ್ದಕ್ಕೂ. ಇತರರ ಮಾತುಗಳನ್ನು ಉಲ್ಲೇಖಿಸಿದಾಗಲೂ ರಸಭಂಗವಿಲ್ಲ. ಆಳವಾದ ಅಧ್ಯಯನವೂ ಗಾಢವಾದ ಸಂಬುಗೆಯೂ ಇಲ್ಲಿ ಸೃಷ್ಟಿಸಿರುವುದು ಅಮೂಲ್ಯವಾದೊಂದು ಮಿಶ್ರಲೋಹವನ್ನು.

ಓದುಗನ ಮೇಲೆ ಒಂದಲ್ಲ ಒಂದು ಪರಿಣಾಮವನ್ನು ಬೀರುವಂಥ ಕೃತಿ ಇದು.

* * * * *

೧೯ನೆಯ ಶತಮಾನದಲ್ಲಿ ಬಾಳಿ ಅಮರನಾದ ಸಾಹಿತಿಶ್ರೇಷ್ಠ ಬಂಕಿಮಬಾಬು. ಬಂಗಾಳಿಯಲ್ಲಿ ಬಂಕಿಮ ಎಂದರೆ ಬಾಗಿದ್ದು.

"ಯಾರು ನಿನ್ನನ್ನು ಬಗ್ಗಿಸಿದ್ದು ?" ಎಂದು ಪರಮಹಂಸರು ಒಮ್ಮೆ ಪರಿಹಾಸ್ಯದ ಧ್ವನಿಯಲ್ಲಿ ಕೇಳಿದರಂತೆ.

"ಬ್ರಿಟಿಷರ ಬೂಟಿನ ಹೊಡೆತ," ಎಂದು ಬಾಬು ನಗುತ್ತ ಉತ್ತರವಿತ್ತರಂತೆ.

ಪರಕೀಯ ಸರಕಾರದಲ್ಲಿ ಉನ್ನತ ಸ್ಥಾನದಲ್ಲಿದ್ದುಕೊಂಡೇ, ರಾಷ್ಟ್ರಾಭಿಮಾನದ ಕೈವಾರಿಯಾಗಿ, 'ಮಾತೃದರ್ಶನ'ದಿಂದ ಪುನೀತರಾಗಿ, ಶತ ಶತಮಾನ ಬಾಳುವ ಸಾಹಿತ್ಯ ಕಾಣಿಕೆಯನ್ನು ಸಲ್ಲಿಸಿದ ಧನ್ಯ ಬಂಕಿಮಚಂದ್ರ.

'ವಂದೇ ಮಾತರಂ ಮಹಾನ್ ಕ್ರಾಂತಿಗೀತೆ ಆದೀತೆಂದು ಬಂಕಿಮರು ಕನಸು ಮನಸಿನಲ್ಲೂ ಎಣಿಸಿರಲಿಲ್ಲ', ಎಂದಿದೆ, ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕಾ. ಶಿವರಾಮು ಅಂದಿರುವಂತೆ, "ಇದು ಸತ್ಯಕ್ಕೆ ದೂರ."

ಮಾತೃವಂದನವೇ ಉಸಿರಾಗಿರುವ 'ಆನಂದ ಮಠ'ವನ್ನು ಬರೆದ ಬಂಕಿಮರು, ಆರಂಭದಲ್ಲಿ ಓದುಗರು ಆಸಕ್ತಿ ತೋರದಿದ್ದಾಗ, ಗೆಳೆಯನೊಬ್ಬನಿಗೆ ನೊಂದು ಬರೆದರು:

"ನಾನು ತಾನೇ ಆನಂದಮಠವನ್ನು ಬರೆದು ಏನು ಮಾಡಿಯೇನು? ನೀವು ತಾನೇ ಅದರ ಮೂಲಮಂತ್ರವನ್ನು ವಿವರಿಸಿ ಏನು ಮಾಡೀರಿ? ಈ ಈರ್ಷ್ಯಾ ಪರವಶರೂ ಆತ್ಮೋದರ ಪರಾಯಣರೂ ಆದ ಜನಕ್ಕೆ ಉನ್ನತಿ ಇಲ್ಲ. 'ವಂದೇ ಉದರಂ' ಎನ್ನಿ!"

ಆದರೂ ನಾಳೆಯ ಬಗೆಗೆ ವಿಶ್ವಾಸವಿರಿಸಿಕೊಂಡಿದ್ದ ದ್ರಷ್ಟಾರ ಬಂಕಿಮರು ಒಮ್ಮೆ ಮಗಳೊಡನೆ ಅಂದರು:

"ಒಂದು ದಿನ ಬರುತ್ತದೆ – ಬಹುಶಃ ೨೫–೩೦ ವರ್ಷಗಳ ಅನಂತರ ಬರುತ್ತದೆ – ಆಗ ಬಂಗಾಲವಿಡೀ ಈ ಹಾಡಿನಿಂದ ಹುಚ್ಚೆದ್ದು ಹೋಗುತ್ತದೆ...."

ಭವಿಷ್ಯ ನಿಜವಾಯಿತು. ಅಷ್ಟೇ ಅಲ್ಲ, ಇಡಿಯ ಭಾರತಕ್ಕೇ ಆ ಹಾಡು ಹುಚ್ಚು ಹಿಡಿಸಿತು. ಯೂರೋಪು, ಅಮೆರಿಕ, ಆಫ್ರಿಕಗಳಲ್ಲೂ – ಭಾರತೀಯರು ನೆಲೆಸಿದ ಎಲ್ಲೆಡೆಗಳಲ್ಲೂ – ಬೀಜಮಂತ್ರವಾಯಿತು ವಂದೇ ಮಾತರಂ.

* * * * *

ಬಂಕಿಮರು ನಿಧನರಾಗಿ ೧೨ ವರ್ಷಗಳಾದ ಮೇಲೆ, ೧೮೯೬ರಲ್ಲಿ, ಕಾಂಗ್ರೆಸ್ ಅಧಿವೇಶನ 'ವಂದೇ ಮಾತರಂ' ಗೀತೆಯ ನಾಂದಿ ಸ್ತುತಿಯೊಂದಿಗೆ ಆರಂಭವಾಯಿತು. ಕವೀಂದ್ರ ರವೀಂದ್ರನಾಥ ಠಾಕೂರರು ಅದನ್ನು ಹಾಡಿದರು.

ಆ ಕವಿಯ ಅಭಿಪ್ರಾಯದಲ್ಲಿ :

"ವಂದೇ ಮಾತರಂ! ಉಕ್ಕಿನ ಕೋಟೆಯಂತಹ ಮನಸ್ಸಿನ ಬಾಗಿಲನ್ನೂ ತೆರೆಯಬಲ್ಲ, ಅಂತರಂಗದ ಕೋಣೆಯ ಬಲವಾದ ಕೋಣೆಗಳನ್ನೂ ಕೆಡವಿ ಒಳನುಗ್ಗಿ ಬಿಡುವ, ತನ್ನ ಕರೆಗೆ ಅಪ್ರಾಮಾಣಿಕರಾಗಿರುವವರನ್ನೂ ಸಹ ವಂದೇ ಮಾತರಂ ಘೋಷಿಸುವಂತೆ ವಿವಶಗೊಳಿಸುವ ಜಾದೂಗಾರ ಪದಗಳಿವು."

* * * *

ಅಂಥ ಅಮರ ಕೃತಿ ಸ್ವತಂತ್ರ ಭಾರತದ ರಾಷ್ಟ್ರಗೀತೆಯಾಗಲಿಲ್ಲ. ಇದೀಗ ವ್ಯಥೆಯ ಭಾಗ. ರಾಷ್ಟ್ರಜಾಗೃತಿಗೆ ಅಭಿವ್ಯಕ್ತಿ ನೀಡಿದ್ದ ಗೀತ, ನಶ್ವರ ರಾಜಕೀಯದ ಅವಸರ ಅಗತ್ಯಗಳಿಗೆ ಬಲಿಯಾಯಿತು.

ಆ ಮರಂತದ ಚಿತ್ರಣವನ್ನು ಶಿವರಾಮು ಮನ ಕರಗುವಂತೆ ಮಾಡಿದ್ದಾರೆ.

ನಮ್ಮ ನಾಡಿನಲ್ಲಿ ಅಕ್ಷರಸ್ಥರಾದವರೆಲ್ಲ ಈ ಕೃತಿಯನ್ನು ಓದಬೇಕು. ಅನಕ್ಷರಸ್ಥರಾದವರು ಓದಿಸಿ ಕೇಳಬೇಕು. ವಿಶಿಷ್ಟ ವಿಚಾರಧಾರೆಗೆ ಶಿವರಾಮು ಬದ್ಧರೆಂಬುದನ್ನು ಗಣನೆಗೆ ತಾರದೆ (ಅಥವಾ ತಂದುಕೊಂಡು) ಅವರು ಬರೆದಿರುವ ಕಥೆಯನ್ನು ಮನನ ಮಾಡಬೇಕು. ಕವಿಯಾದ ಕತೆಗಾರನಾದ ಉದಯೋನ್ಮುಖ ಲೇಖಕನೊಬ್ಬ ಹೊಸ ಪೀಳಿಗೆಯ ಪ್ರಭಾವಶಾಲಿ ಬರೆಹಗಾರನಾಗಿ ವೇದಿಕೆಯ ಮೇಲೆ ನಿಂತಿರುವರೆಂಬುದನ್ನು ಮನಗಾಣಬೇಕು.

೨೦–೧೦–೧೯೬೮

# ಇಲ್ಲಿಂದ ಇನ್ನೆಲ್ಲಿಗೆ?

ಕರ್ನಾಟಕ ರಾಜ್ಯೋದಯ ಸಂಭ್ರಮದ ಮುನ್ನಾದಿನ ಪತ್ರಿಕೆಗಳು ಪ್ರಕಟಿಸಿದ ಒಂದು ವಾರ್ತೆ, ಹಬ್ಬದ ಊಟಕ್ಕೆ ಮುಂಚೆ ಗುಟುಕು ಕಷಾಯ ಕುಡಿದಂತೆ. ಆ ಕಹಿಯನ್ನು ನೀಡಿದವರು ಕರ್ನಾಟಕದ ರಾಜಕೀಯ ಶಿಲ್ಪಿ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರು.

"ರಾಷ್ಟ್ರದ ಐಕಮತ್ಯವನ್ನು ಕಾಪಾಡುವುದಕ್ಕೋಸ್ಕರ, ಅಗತ್ಯಬಿದ್ದರೆ, ಪ್ರಾಂತರಹಿತ ಏಕಘಟಕ ಸರ್ಕಾರ ರಚಿಸುವುದಕ್ಕೂ ಕಾಂಗ್ರೆಸ್ ಪಕ್ಷವು ಹಿಂಜರಿಯದು."
—ಇದು ಕಾಂಗ್ರೆಸ್ ಅಧ್ಯಕ್ಷ ನಿಜಲಿಂಗಪ್ಪನವರು ಅಮೃತಸರದಲ್ಲಿ ನೀಡಿರುವ ಹೇಳಿಕೆ.

ಅವರ ಅಭಿಪ್ರಾಯದಂತೆ :

"ಭಾಷಾ ರಾಜ್ಯಗಳಿಂದ ರಾಷ್ಟ್ರವನ್ನು ಭಿನ್ನಭಿನ್ನ ಮಾಡುವುದಕ್ಕಿಂತಲೂ ಏಕೀಭೂತ ಸರಕಾರದ ರಚನೆಯೇ ಲೇಸು.

"ರಾಜ್ಯ-ರಾಜ್ಯಗಳಿಂದ ಗಡಿ ಮುಂತಾದ ಅನೇಕ ಸಮಸ್ಯೆಗಳಿಗೆ ಭಾಷಾ ರಾಜ್ಯಗಳ ರಚನೆಯೇ ಹೊಣೆ. ಇದೇ ಪರಿಸ್ಥಿತಿ ಮುಂದುವರಿದರೆ, ಯಾವುದಾದರೊಂದು ಪುನರಾಲೋಚನೆ ಅಗತ್ಯವಾಗುತ್ತದೆ."

* * * * *

'ಹೀಗೆ ಆಗಬಹುದೆಂದು ನಾವು ಅಂದೇ ಎಚ್ಚರಿಕೆ ನೀಡಿದ್ದೆವು.'

—ಇದೀಗ ಭಾಷೆಯ ತಳಹದಿಯ ಮೇಲೆ ರಾಷ್ಟ್ರಗಳ ಪುನರ್ವಿಂಗಡಣೆಯನ್ನು ವಿರೋಧಿಸಿದವರು, ವಲಯ ರಾಜ್ಯಗಳ ರಚನೆಯಾಗಲಿ ಎಂದು ಪ್ರತಿಪಾದಿಸಿದವರು, ಬಲಿಷ್ಠ ಕೇಂದ್ರ ಸರ್ಕಾರವೊಂದೇ ಕಾಹಿಲೆಗಳನ್ನು ತಡೆಗಟ್ಟಬಲ್ಲುದು ಎಂದವರು, ಈಗ ಹೇಳಬಹುದಾದ ಮಾತು.

ಇಂಥಮೊಂದು ಮಾತು ಅಗತ್ಯವಾಗುವಂಥ ಸನ್ನಿವೇಶ ನಿರ್ಮಾಣವಾಗುವುದಕ್ಕೆ ಭಾಷಾವಾರು ರಾಜ್ಯಗಳು ಕಾರಣೀಭೂತವಾಗಿವೆ – ಎಂಬ ವಾದವನ್ನು ಅಲ್ಲಗಳೆಯುವುದು ಬಹಳ ಕಷ್ಟ.

ಹಾಗಾದರೆ ಸ್ವತಂತ್ರ ಭಾರತದಲ್ಲಿ ಬೇರೆಯೇ ದಾರಿಯಲ್ಲಿ ಇತಿಹಾಸ ರೂಪುಗೊಳ್ಳುವಂತೆ ಮಾಡುವುದು ಸಾಧ್ಯವಿತ್ತೆ? ಈಗಿನದಕ್ಕಿಂತ ಭಿನ್ನವಾದ ಆಡಳಿತ ನಕಾಶೆಯನ್ನು ಅಣಿಗೊಳಿಸುವುದಕ್ಕಾಗುತ್ತಿತ್ತೆ?

'ಇತ್ತು,' ಎಂಬ ಖಚಿತ ಉತ್ತರ ನೀಡುವುದೂ ಕಷ್ಟವೇ.

ವಾಸ್ತವವಾಗಿ, ಇಪ್ಪತ್ತು ವರ್ಷಗಳ ಕಾಲ ಪ್ರಾದೇಶಿಕ ಭಾಷೆಗಳ ಮಹತ್ವವನ್ನು ಎತ್ತಿ ಹಿಡಿದ ಮೇಲೆ, ಜನ ಆಡುವ ಭಾಷೆಯಲ್ಲಿ ಆಡಳಿತ ನಡೆದಾಗಲೇ ಪ್ರಜಾಪ್ರಭುತ್ವ ಯಶಸ್ವಿಯಾಗುತ್ತದೆ ಎಂಬ ಸತ್ಯ ಸಾರ್ವತ್ರಿಕವಾಗಿ ಸ್ವೀಕೃತವಾದ ಮೇಲೆ, ಆ ತಿಳಿವಳಿಕೆಯಲ್ಲಿ ಹೊಸತೊಂದು ಪೀಳಿಗೆಯೇ ಬೆಳೆದ ಮೇಲೆ, ಭಾಷಾವಾರು ರಾಜ್ಯಗಳ ರಚನೆಮಾಡುವುದು ಅತ್ಯಂತ ತರ್ಕಬದ್ಧ, ಅತ್ಯಂತ ಸಮಂಜಸ.

ಆದರೆ ಈ ಸೂತ್ರಚಾಲನೆ ರಾಷ್ಟ್ರದ ವರಿಷ್ಠನಾಯಕತ್ವದಿಂದ ಆಗಲಿಲ್ಲ. ಸ್ವಾತಂತ್ರ್ಯ ಪ್ರಾಪ್ತಿಯಾದೊಡನೆಯೇ ಈ ಹೊಸ ಆಡಳಿತ ಸಿದ್ಧವಾಗಲಿಲ್ಲ. ವಿವೇಕ ತಾನು ಮಾಡಬೇಕಾಗಿದ್ದ ಕೆಲಸವನ್ನು ಭಾವವಿಕಾರಕ್ಕೆ ವಹಿಸಿಕೊಟ್ಟಿತು. ಕುರುಡು ಭಾಷೆ ರಾಜಕೀಯ ಬಡಿಗೆಯಾಯಿತು. ಇಲ್ಲದಿದ್ದರೆ, ಆಂಧ್ರ ಪ್ರದೇಶದ ರಚನೆಗೆ ಪೊಟ್ಟಿ ಶ್ರೀರಾಮುಲುರನ್ನು ಹುತಾತ್ಮರನ್ನಾಗಿ ಮಾಡುವ ಅಗತ್ಯವಿತ್ತೆ? ಝೂಲಾಚಿ ಪಾಯ್‌ಜೆಯಂಥ ಚಳುವಳಿ ಹೆಚ್ಚುತ್ತಿತ್ತೆ? ದ್ರಾವಿಡ ನಾಡಿನ ಹೆಸರಿನಲ್ಲಿ ಪ್ರತ್ಯೇಕತೆಯ ಪ್ರವೃತ್ತಿ ಬಲಿಯುತ್ತಿತ್ತೆ?

ನಡೆದದ್ದು ಅಮೃತ ಮಂಥನ. ಹುಟ್ಟಿದ್ದು ಹಾಲಾಹಲ.

* * * * *

ಆದರೆ ಪುರಾಣಗಳು ಸಾರುವಂತೆ ಹಾಲಾಹಲದ ಬಳಿಕ ಅಮೃತ ಬರಲೇಬೇಕು.

ಅಂಥ ಆಶಾವಾದ ಒಳ್ಳೆಯದು. ಆದರೆ ವಸ್ತುಸ್ಥಿತಿ ಸಾರುವುದೇನನ್ನು?

ನಿಜವಾಗಿಯೂ ರಾಷ್ಟ್ರೀಯ ನಾಯಕರು ಎನ್ನಿಸಿಕೊಂಡವರ ಕಾಲದಲ್ಲಿ ಆಗದೆ ಇದ್ದುದು, ಪ್ರಾಂತೀಯ ನಾಯಕರು ಆ ಪಾತ್ರ ವಹಿಸಿರುವಾಗ ಆಗುತ್ತದೆಯೆ?

ರಾಷ್ಟ್ರವಿಭಜನೆಗೆ ಒಪ್ಪಿದಾಗಲೇ ರಾಜಕೀಯ ಸಂಧಿಸಾಧಕ ಪ್ರವೃತ್ತಿಯನ್ನು ಗರ್ಭಗುಡಿಯಲ್ಲಿ ಇಟ್ಟಂತಾಯಿತು. ಈಗಲಂತೂ ಆ ಪ್ರವೃತ್ತಿ ರಾಷ್ಟ್ರೀಯ ಗುಣವಾಗಿದೆ! ಕೆಲವೊಂದು ಕೊಡುವ ಪಡೆಯುವ ವ್ಯವಹಾರಕ್ಕಾಗಿ ಗೋವೆಯನ್ನು ಎರಡು ಹೋಳು ಮಾಡುವುದಕ್ಕೂ ಸಿದ್ಧ—ಎಂದು ರಹಸ್ಯವಾಗಿ 'ರಾಷ್ಟ್ರೀಯ' ನಾಯಕರೊಬ್ಬರು ಒಮ್ಮೆ ನುಡಿದಿದ್ದರು. ಯಾವ ಕೆಳಮಟ್ಟವನ್ನು ರಾಷ್ಟ್ರ ಮುಟ್ಟಿದೆ ಎಂಬುದನ್ನು ಸೂಚಿಸಲು ಇದೊಂದು ಉದಾಹರಣೆ ಸಾಲದೆ?

ಭಾಷಾವಾರು ಪ್ರಾಂತಗಳ ರಚನೆಯನ್ನಾದರೂ ಸಮರ್ಪಕವಾಗಿ ಮಾಡಲಾಯಿತೆ? ಇದು ಅಂತಿಮ ಎಂಬ ಮುದ್ರೆ ಒತ್ತಲಾಯಿತೆ? ಈ ವಿಂಗಡಣೆ ನಡೆದುದೂ ಸಂಧಿಸಾಧಕ ಪ್ರವೃತ್ತಿಯ ಚೌಕಟ್ಟಿನಲ್ಲೇ. ಇಲ್ಲದಿದ್ದರೆ, (ಕನ್ನಡನಾಡಿನ ಉದಾಹರಣೆಯೊಂದನ್ನು ತೆಗೆದುಕೊಳ್ಳುವುದಾದರೆ) ಕಾಸರಗೋಡಿನ ಬಲಿಯಾಗುತ್ತಿತ್ತೆ? ತಾಳವಾಡಿ, ಹೊಸೂರು, ಸೊಲ್ಲಾಪುರ, ಅಕ್ಕಲಕೋಟೆ ಹೊರಗುಳಿಯುತ್ತಿದ್ದುವೆ?

ವಿವಾದದ ಅಗ್ನಿಷ್ಟಿಕೆಯಲ್ಲಿ ಒಂದಿಷ್ಟು ಉರಿ ಸದಾ ಇರುವಂತೆ ಮಾಡಿದುದು ಯಾವ ಜಾಣತನ?

ನೆಲಜಲಗಳಿಗಾಗಿ ಎಷ್ಟೊಂದು ರಾಜ್ಯಗಳಲ್ಲಿ ಹಾಹಾಕಾರಗಳು! ಅಣೆಕಟ್ಟು ನಿರ್ಮಾಣ, ಕಾರ್ಖಾನೆ ಸ್ಥಾಪನೆ, ಬಂದರು ರಚನೆ – ಪ್ರಾದೇಶಿಕತೆಯ ಹೊಗೆಯಿಂದ ಕಪ್ಪಾಗಿರುವ ಯೋಜನೆಗಳು ಒಂದೇ ಎರಡೇ?

* * * * *

ಈಯೆಲ್ಲ ಸಂಗತಿಗಳಿಂದ ವ್ಯಥೆಯುಂಟಾಗುತ್ತದೆ. ಸ್ವಾಭಾವಿಕ.

ಗಿಡ ಬಲವಾದ ಮರವಾಗಿ ಬೆಳೆಯುತ್ತಿಲ್ಲ. ರೆಂಬೆ ಕೊಂಬೆಗಳು ಅಡ್ಡಾದಿಡ್ಡಿಯಾಗಿ ಹರಡುತ್ತಿವೆ. ಚಿಗುರುತ್ತಲೇ ಎಲೆಗಳು ಮುರುಟಿಕೊಳ್ಳುತ್ತಿವೆ. ಫಲಬಿಡುವ ಸೂಚನೆಯಂತೂ ಇಲ್ಲ.

ಇಂಥ ಪರಿಸ್ಥಿತಿಯಲ್ಲಿ ತೋಟಗಾರ ಏನು ಮಾಡಬೇಕು? ಕೊಡಲಿ ಬೀಸುವುದೆ? ಗಿಡವನ್ನು ಬೇರು ಸಹಿತ ಕಿತ್ತು ಎಸೆಯುವುದೆ?

ಸುಲಭದ ದಾರಿ ನಿಜ. ಆದರೆ ಪರಿಣಾಮ, ಹಾನಿಯೊಂದೇ.

* * * * *

ಕಹಿ ಯೋಚನೆಗಳಿಗೆ ಕಹಿ ಮಾತುಗಳಿಗೆ ವ್ಯಥೆ ಸಂಕಟಗಳು ಕಾರಣವಾಗಬಹುದು. ಆದರೆ ವಾಸ್ತವಾಂಶಗಳಿಂದ ಮೂಡಿ ಬರುವ ಪ್ರಶ್ನೆಯಾವುದು? ಪ್ರಜೆ ಆಡುವ ಭಾಷೆಯಲ್ಲಿ ರಾಜಕೀಯ ವ್ಯವಹಾರಗಳು ನಡೆಯದ ಪ್ರಜಾಪ್ರಭುತ್ವ ಪದ್ಧತಿ ಯಶಸ್ವಿಯಾದೀತೆ? ನುಡಿಯ ಅಂತಸ್ಸತ್ವಕ್ಕೆ ದೊರೆತಿರುವ ಚಾಲನೆಯನ್ನು ತಡೆ ಹಿಡಿಯುವುದಕ್ಕಾದೀತೆ? ಪ್ರಾಂತರಹಿತ ಏಕ ಘಟಕದ ರಚನೆಗಾಗಿ ಕಾಂಗ್ರೆಸು ಗಟ್ಟಿ ಮನಸ್ಸು ಮಾಡಿದರೂ, ಉಳಿದ ಪಕ್ಷಗಳು ಒಪ್ಪುವುದುಂಟೆ?

ಇರುವ ಲೋಪ ದೋಷಗಳನ್ನು ಸರಿಪಡಿಸುವುದು ಒಂದು ದಾರಿ. ಸದ್ಯದ ರಾಜಕೀಯ ನೆಲೆಗಟ್ಟಿನಲ್ಲೇ ಇದು ಸಾಧ್ಯ. ಅವ್ಯವಸ್ಥೆಯನ್ನು ಪೂರ್ತಿ ತೊಡೆದು ಹಾಕಿ ಹೊಸ ವ್ಯವಸ್ಥೆಯನ್ನು ಹೇರಿಸುವುದು ಇನ್ನೊಂದು ದಾರಿ. ಇದು ಸರ್ವಾಧಿಕಾರಶಾಹಿಯಿಂದ ಆಗುವ ಕೆಲಸ; ಈ ರಾಷ್ಟ್ರದಲ್ಲಿ ಪ್ರಜಾಪ್ರಭುತ್ವಕ್ಕೆ ಗ್ರಹಣ ಹಿಡಿದರೆ ಮಾತ್ರ ಇದು ಶಕ್ಯ....

....ರಾಜ್ಯೋತ್ಸವದ ಔತಣಕ್ಕೆ ಮುನ್ನ ಕಹಿ ಗುಟುಕು. ಔತಣದ ಅನಂತರವೂ ಪಚನಕ್ಕಾಗಿ ಕಹಿ ಗುಟುಕು ಒಳ್ಳೆಯದೇ.

೧೦-೧೧-೧೯೬೮

# ನಂದಾದೇವಿಗೆ ನಮನ

'ಹಿಂದೂಸ್ಥಾನ ಏರೋನಾಟಿಕ್ಸ್ ಲಿಮಿಟೆಡ್‌ನವರು [ಮುಖ್ಯ ಕಾರ್ಯಾಲಯ: ಬೆಂಗಳೂರು] ತಮ್ಮ ಕಾನ್ಪುರ ವಿಭಾಗವನ್ನು ಬೆಂಗಳೂರಿನ ಪತ್ರಿಕಾಕರ್ತರು ಸಂದರ್ಶಿಸುವ ಏರ್ಪಾಟು ಮಾಡಿದ್ದಾರೆ. ಗುರುವಾರ ಬೆಳಗ್ಗೆ ಡಕೋಟಾದಲ್ಲಿ ಪ್ರಯಾಣ. ಶುಕ್ರವಾರ ಕಾನ್ಪುರ ಕಾರ್ಖಾನೆಯಲ್ಲಿ ತಯಾರಾಗುವ ಎಚ್. ಎಫ್. ೨೪ಲರಲ್ಲಿ ಪರೀಕ್ಷಾರ್ಥ ಹಾರಾಟ. ಶನಿವಾರ, ಬಂದ ರೀತಿಯಲ್ಲೇ ಮರಳಿ ಬೆಂಗಳೂರಿಗೆ....'

ಆಹ್ವಾನ ಪತ್ರಿಕೆಯನ್ನೋದಿದವನು ಹೆಬ್ಬೆರಳನ್ನು ಮೇಲೆತ್ತಿದೆ.

* * * *

ಹಸನ್ಮುಖಿ ವಿನಯಶೀಲ ಸ್ಕ್ವಾಡ್ರನ್ ಲೀಡರ್ ನಯ್ಯರ್ ರಕ್ಷಣಾ ವಿಭಾಗದ ಬೆಂಗಳೂರು ಕೇಂದ್ರದ ಸಾರ್ವಜನಿಕ ಸಂಪರ್ಕಾಧಿಕಾರಿ. ನಮ್ಮ ತಂಡದ ಸುಖ ದುಃಖ ವಿಚಾರಿಸುವ ವ್ಯಕ್ತಿಯೂ ಅವರೇ.

ಸುಮಾರು ಅವರಷ್ಟೇ ವಯಸ್ಸು ಡಕೋಟಾ ವಿಮಾನಕ್ಕೆ. [ಅದು ಮೊದಲ ಬಾರಿ ರೆಕ್ಕೆ ಬಿಚ್ಚಿದ್ದು ಮೂವತ್ತಾರು ವರ್ಷಗಳಿಗೆ ಹಿಂದೆ.] ಆಧುನಿಕ ಜಗತ್ತಿನಲ್ಲಿ ಈಗ ಅದು ಹಳೆಯ ಅಧ್ಯಾಯ. ಆದರೆ, ಭೂಮಿಯ ಮೇಲೆ ಎತ್ತಿನ ಬಂಡಿ ಇನ್ನೂ ಓಡಾಡುತ್ತಿರುವ ಭಾರತದಲ್ಲಿ ಡಕೋಟಾಕ್ಕೂ ಸ್ಥಾನವಿದೆ. ಪ್ರಯಾಣಕ್ಕಾಗಿ ಅದರ ಅಗತ್ಯ ಈಗ ಕಡಮೆಯಾಗುತ್ತಿದೆಯಾದರೂ ಹೇರುಗಳನ್ನು ಸಾಗಿಸಲು ವಿಮಾನ ದಳ ಅದನ್ನು ಬಳಸುತ್ತದೆ.

ಚಾಲಕ ಜಗತ್‌ಮೌಲಾ ಹಿಂದೆ ಹೊಸ ವಿಮಾನಗಳನ್ನು ಪರೀಕ್ಷಿಸುವ ಚಾಲಕರಾಗಿದ್ದವರು. ಇಂಗ್ಲೆಂಡಿನಲ್ಲಿ ತರಬೇತಿ ಪಡೆದವರು. ಎಪ್ಪತ್ತೆರಡು ಬಗೆಯ ವಿಮಾನಗಳನ್ನು ನಡೆಸಿರುವ ವ್ಯಕ್ತಿ.

ಹೈದರಾಬಾದಿನಲ್ಲಿ ಕೆಲ ನಿಮಿಷ ಇಳಿದು ಡಕೋಟಾ ಮೂರು ಗಂಟೆಗೆ ಕಾನ್ಪುರ ತಲಪಿತು. ಒಂಭತ್ತುನೂರು ಮೈಲುಗಳನ್ನು ದಾಟಿ ಬಂದಿದ್ದೆವು. ಮೈಸೂರು, ಆಂಧ್ರ ಪ್ರದೇಶ, ಮಹಾರಾಷ್ಟ್ರ, ಮಧ್ಯ ಪ್ರದೇಶ, ಉತ್ತರ ಪ್ರದೇಶ – ಹೀಗೆ ಐದು ರಾಜ್ಯಗಳ ಮೇಲೆ ಡಕೋಟಾ ಹಾರಿತ್ತು. ಊರು, ಜನಜೀವನದ ಸುಳಿವಿಲ್ಲದ ವಿಸ್ತಾರ ಭೂ ಪ್ರದೇಶ, ಕಾಡು, ನದಿ, ಕೆಲ ಹೊಲಗಳು, ಹಳ್ಳಿ, ಮತ್ತೆ ಬಿಕೋ ಎನ್ನುವ ನೆಲ, ಪುನಃ ಊರು – ಅದೇ ಚಕ್ರ.

ಮೇಲಿನಿಂದ ಭರತಭೂಮಿಯನ್ನು ಕಂಡಾಗ ಹೊಳೆಯುವ ಅಂಶ: ಆದಿ ಅಂತ್ಯ

ಗಳಿಲ್ಲವೇನೋ ಎಂದು ಭಾಸವಾಗುವ ಅದರ ವಿಸ್ತಾರ. ಚಿಂತನೆಗೆ ವಸ್ತು: ಆ ನೆಲ ಬಂಗಾರವಾಗುವ ಬಗೆ.

* * * * *

ಉತ್ತರ ಪ್ರದೇಶವನ್ನು ಆಳುತ್ತಿರುವವರು ದಕ್ಷಿಣದ ಗೋಪಾಲರೆಡ್ಡಿ. ೧೫ ಲಕ್ಷ ಜನ ಸಂಖ್ಯೆಯ ಕಾನ್ಪುರದಲ್ಲಿ ಸರ್ಕಾರವಿಲ್ಲವೆಂದರೂ ಸರಿಯೆ. ಕಾನ್ಪುರ ಅಂದಗೇಡಿ ನಗರ. ಔದ್ಯೋಗಿಕ ಬೆಳವಣಿಗೆಯೂ ಪಾಳೆಯಗಾರ ಪ್ರವೃತ್ತಿಯೂ ವಿವಾಹ ವಿಚ್ಛೇದ ಮಾಡಿಕೊಳ್ಳಲಾರದೆ ತೊಳಲಾಡುತ್ತ ಇಲ್ಲಿ ಬಾಳುತ್ತಿವೆ. ೮ ಕೋಟಿ ರೂಪಾಯಿ ವರ ಮಾನವಿರುವ ಈ ನಗರದಲ್ಲಿ ರಾಜರಸ್ತೆಯಲ್ಲೂ ಮೂಗು ಮುಚ್ಚದೆ ನಡೆಯುವಂತಿಲ್ಲ. ಭಿಕ್ಷುಕರು, ರೋಗಿಗಳು, ರಸ್ತೆಯಂಚಿನಲ್ಲೇ ಮನೆ ಮಾಡಿದವರು – ಸಹಸ್ರ ಸಹಸ್ರ. ಶತಮಾನಗಳ ಧೂಳು ಇಲ್ಲಿ ತಾಂಡವವಾಡಿದೆ. ನಗರದ ಹಳೆಯ ವಿಭಾಗದಲ್ಲಿ ಹಲವು ಶತಮಾನ ಹಿಂದಿನ ಗೂಡುಮನೆಗಳಲ್ಲಿ ಗಿಜಿ ಗಿಜಿ ಸದ್ದಿನ ಮಧ್ಯೆ ಜನ ಮನುಕುಲದ ಎರಡು ಮೂಲೋದ್ದೇಶಗಳನ್ನು – ಬದುಕಿರುವುದು ಹಾಗೂ ಸಂತಾನಾಭಿವೃದ್ಧಿಗೊಳಿಸುವುದು – ಸಾಧಿಸುತ್ತಿದ್ದಾರೆ.

ನಗರದ ವಿಸ್ತರಣದಲ್ಲಿ ಆಧುನಿಕ ದೇವಾಲಯವೊಂದು ಸಿದ್ಧವಾಗಿದೆ. ಕೋಟಿ ಕೋಟಿ ರೂಪಾಯಿ ವೆಚ್ಚಮಾಡಿ ಉದ್ದಿಮೆದಾರ ಸಿಂಘಾನಿಯಾ ಕಟ್ಟಿಸಿರುವ ಅಮೃತ ಶಿಲೆಯ ಭವ್ಯ ದೇವಸ್ಥಾನ. ರಾಧಾಕೃಷ್ಣರು ಇಲ್ಲಿ ಪ್ರತಿಷ್ಠಾಪಿತರು. ದೈವಭಕ್ತಿ ಮನುಷ್ಯನಿಂದ ಎಂಥ ಅದ್ಭುತವನ್ನು ಮಾಡಿಸಬಲ್ಲುದು ಎನ್ನುವುದಕ್ಕೆ ಇದೊಂದು ಉದಾಹರಣೆ. ಕಾವಲುಗಾರ ವಿವರಿಸಿದ : ಮಧ್ಯಾಹ್ನ ಒಂದು ಘಂಟೆಗೆ ದೇವರು ಮಲಗ್ತಾರೆ ; ನಾಲ್ಕು ಘಂಟೆಗೆ ಅರ್ಚಕರು ಬಂದು ಎಬ್ಬಿಸ್ತಾರೆ.........[ಮನುಷ್ಯ ದೇವರನ್ನು ಎರಕ ಹೊಯ್ಯುವುದು ತನ್ನ ಅಚ್ಚಿನಲ್ಲಿಯೇ]... ನಮ್ಮ ಜನನನ್ನೂ ಸಮಾಜವನ್ನೂ ನೋಡಿದಾಗ ಯಾರಿಗಾದರೂ ಉದ್ಗಾರ ಹೊರಡಬಹುದು : 'ದೇವರೇ ಕಾಪಾಡಬೇಕು.'

* * * * *

ಕಾನ್ಪುರದ ವಿಮಾನ ಕಾರ್ಖಾನೆ ಬೆಂಗಳೂರಿನ ಕಾರ್ಖಾನೆಗಿಂತ ಚಿಕ್ಕದು. ಮ್ಯಾನೇಜಿಂಗ್ ಡೈರೆಕ್ಟರ್ ಪಿ. ಡಿ. ಛೋಪ್ರಾ. ಅದರ ಎಲ್ಲ ವಿಭಾಗಗಳನ್ನೂ ನೋಡಿದೆವು. ಹಂತಹಂತವಾಗಿ ಎಚ್. ಎಫ್. – ೭೪೮ ವಿಮಾನ ಸಿದ್ಧವಾಗುತ್ತಿರುವುದನ್ನು ಕಂಡೆವು. ಇಂಥ ನಾಲ್ವತ್ತು ವಿಮಾನಗಳಿಗಾಗಿ ಈ ಕಾರ್ಖಾನೆಯ ಬಳಿ ಬೇಡಿಕೆಯಿದೆ. ವರ್ಷಕ್ಕೆ ಆರು ಸಿದ್ಧವಾಗುತ್ತವೆ. ಹದಿನೇಳು ವಿಮಾನಗಳನ್ನು ಈಗಾಗಲೇ ಇಂಡಿಯನ್ ಏರ್‌ಲೈನ್ಸ್ ಹಾಗೂ ವಿಮಾನದಳಕ್ಕೆ ಕೊಡಲಾಗಿದೆ. ಹದಿನೆಂಟನೆಯದು ಸಿದ್ಧವಾಗಿ ಹೊರಗೆ ನಿಂತಿದೆ.

ಮದರಾಸಿನ ಅಡಿಯಾರ್‌ನಿಂದ ಬಂದಿರುವ ಯುವಕ ಅಶೋಕ್ ಇಲ್ಲಿ ಟೆಸ್ಟ್

ಪೈಲಟ್. ಹಾರಾಡುವ ಬಯಕೆ ಹದಿನೈದನೆಯ ವರ್ಷದಲ್ಲೇ ವಿಮಾನದ ಬಳಿಗೆ ಅವರನ್ನು ಒಯ್ದಿತ್ತು. ಭಾರತೀಯ ವಿಮಾನದಳದಿಂದ ಎರವಲಾಗಿ ಬಂದಿರುವ ಇವರು ಎಲ್ಲ ಹೊಸ ವಿಮಾನಗಳನ್ನೂ ಪರೀಕ್ಷಿಸುವ ಚಾಲಕ ಸ್ನೆಹಪರ, ಉತ್ಸಾಹಿ,

ಸೊಗಸಾದ ದೊಡ್ಡ ವಿಮಾನ. ಕಾನ್ಪುರದಿಂದ ಅದು ಹೊರಟು ಹಾರಿದುದು ನೇರವಾಗಿ ಉತ್ತರಕ್ಕೆ. ೧೮,೦೦೦ ಅಡಿ ಎತ್ತರದಲ್ಲಿ ಯಾನ. [ಡಕೋಟಾ ಏರು ತ್ತಿದ್ದುದು ೮-೧೦ ಸಾವಿರ ಅಡಿಗಳಿಗೆ.] ಘಂಟೆಗೆ ಮುನ್ನೂರು ಮೈಲು ವೇಗ. ಅತ್ತ ಇತ್ತ ನೋಡುತ್ತಿದ್ದಾಗಲೇ ನಾವು ಸೀತಾಪುರ ತಲಪಿದ್ದೆವು. ಅಲ್ಲಿಂದ ಹಿಮಾಲಯ ಪರ್ವತಾವಳಿಯ ಬುಡಕ್ಕೆ ಕೇವಲ ನೂರು ಮೈಲು. ಎಂದೋ ಒಮ್ಮೆ ಪ್ರಾಚೀನ ಕಾಲದಲ್ಲಿ ಭೂಗರ್ಭದಿಂದ ಉದಿಸಿ ಬಂದು ಎತ್ತರಕ್ಕೆ ಸೆಟೆದು ಹಿಮಾಚ್ಛಾದಿತವಾಗಿ ನಿಂತ ಗಿರಿಮಾಲೆ. ಅದು ಲೋಕದ ಕೊರಳಿನ ಪದಕ; ಅಥವಾ, ಭಾರತಿ ಮುಡಿದ ಹೂವು. ಮೈಚಾಚಿ ನಿಂತ ಆ ದೈವಿಕ ಸೌಂದರ್ಯವನ್ನು ಎವೆಮುಚ್ಚದೆ ನೋಡಿದೆವು. ನೇರವಾಗಿ ನಮ್ಮ ಎದುರಿಗಿತ್ತು ನಂದಾದೇವಿ ಪರ್ವತ. ಪಕ್ಕಕ್ಕೆ ಹೊರಳಿ, ಶ್ರೇಣಿ ಯುದ್ದಕ್ಕೂ ಸ್ವಲ್ಪಹೊತ್ತು ಸಾಗಿ, ಮತ್ತೆ ವಿಮಾನ ಕಾನ್ಪುರಕ್ಕೆ ಹೊರಟಿತು.

ಕೆಳಗೆ ಹರಿಯುತ್ತಿತ್ತು ಗಂಗಾನದಿ. ಪರ್ವತಶ್ರೇಣಿ, ಬಯಲು. ಅಲ್ಲಿ ಇಲ್ಲಿ ಮಾನವ. ನೆಲ, ನೆಲ........

ಆ ರಾತ್ರೆಯೆಲ್ಲ ಹಿಮಾಲಯದ ಕನಸು.

* * * * *

ಶನಿವಾರ ಡಕೋಟಾ ಹೈದರಾಬಾದ್ ದಾಟಿದ ಬಳಿಕ ಮೈಸೂರು ರಾಜ್ಯ ತಲಪುವವರೆಗೂ ಮೋಡಗಳದೇ ಮೆರವಣಿಗೆ. ದೋಣಿಗಳಿಲ್ಲದೆ ಧಾವಿಸುತ್ತಿದ್ದ ಹಾಯಿಗಳು, ತೇಲುತ್ತಿದ್ದ ಜಲಪರ್ವತಗಳು. ನಂದಿ ಬೆಟ್ಟದ ಬಳಿಗೆ ಬಂದಾಗ ಬಿಸಿಲು ಬಾಡಿತ್ತು.

ಡಕೋಟಾ ನೆಲ ಮುಟ್ಟಿತು.

೧-೧೨-೧೯೬೮

# ಭಾಗ್ಯನಗರದ ಆತ್ಮ

ಇದು ಹೈದರಾಬಾದ್. ಆಂಧ್ರಪ್ರದೇಶದ ರಾಜಧಾನಿ.

ನಾನೊಬ್ಬ ಪ್ರವಾಸಿ. ನಾಲ್ಕು ದಿನ ಇಲ್ಲಿರುವ ಯೋಜನೆ.

ಸಾಹಿತಿಗಳನ್ನು ಕಾಣದೆ, ರಾಜಕಾರಣಿಗಳನ್ನು ನೋಡದೆ ಇಲ್ಲಿ ಹೊತ್ತು ಕಳೆಯಬಹುದೆನ್ನುವುದು ಎಷ್ಟು ಸಮಾಧಾನದ ಸಂಗತಿ! ಅನಾಮಧೇಯನಾಗಿ ಈ ಊರಿನ ಉದ್ದಗಲದಲ್ಲಿ ನಾನು ಓಡಾಡಬಹುದು. 'ವ್ಯಕ್ತಿತ್ವ'ದ ಉಪ್ಪು ಇಲ್ಲಿನ ಜನಸಾಗರದಲ್ಲಿ ಕರಗಬಹುದು. ಮನಸ್ಸು ಬಂದತ್ತ ಈಸುವ ಸ್ವಾತಂತ್ರ್ಯದಿಂದ ಹಾಯೆನಿಸಬಹುದು.

ಎಂಥ ಆಸೆಗಳು ಮನುಷ್ಯನಿಗೆ!

ಒಳಗಿನ ಹಲವು ಸಿಕ್ಕುಗಳನ್ನು ಸಡಿಲಗೊಳಿಸುವ ಬಯಕೆಯ ನಡುವೆ ಒಂದು ವಿಚಾರ ಉದಿಸಿದೆ: ಈ ನಗರದ ಆತ್ಮ ಎಲ್ಲಿದೆ ಎಂಬುದನ್ನು ನಾನು ಶೋಧಿಸಬೇಕು.

* * * * *

ಆ ಮಾತನ್ನು ಮೊದಲು ಬಳಸಿದವರು ಯಾರು? ಎಲ್ಲಿಯೋ ಓದಿದ ನೆನಪು; 'ಒಂದೊಂದು ನಗರಕ್ಕೂ ಒಂದೊಂದು ಆತ್ಮವಿದೆ?' ನಿಜವೆ? ಎಂಥ ರೊಮ್ಯಾಂಟಿಕ್ ಕಲ್ಪನೆ! ಬೆಂಗಳೂರಿಗೆ, ದಿಲ್ಲಿಗೆ, ಮುಂಬಯಿ – ಕಲ್ಕತ್ತಗಳಿಗೆ, ಮದರಾಸು – ತಿರುವ ನಂತಪುರಗಳಿಗೆ ಒಂದೊಂದು ಆತ್ಮ! ಅವು ನುಡಿಯುವುದು, ಮಿಡಿಯುವುದು ಬೇರೆ ಬೇರೆಯಾಗಿ. ವಿಧ ವಿಧದ ಸಂವೇದನೆ, ವಿವಿಧ ಪ್ರತಿಕ್ರಿಯೆ.

ಇದು ಎಷ್ಟರಮಟ್ಟಿಗೆ ನಿಜ?

ಪ್ರತಿಯೊಂದು ನಗರವೂ ಜಂಬದ ಕೋಳಿ ಎಂದಾದರೆ, ಅದನ್ನು ಹಿಡಿದು ಕತ್ತು ತಿರುವಬೇಕು; ಬಣ್ಣದ ಪುಕ್ಕಗಳನ್ನು ಕೀಳಬೇಕು; ಹರಿತವಾದ ಕತ್ತಿಯಿಂದ ಆಳ ವಾದ ಗೀರುಗಳನ್ನು ಹಾಕಬೇಕು; ಆತ್ಮ ಎಲ್ಲಿದೆ ಎಂದು ಹುಡುಕಬೇಕು.

* * * * *

ಇನ್ನು ಇಪ್ಪತ್ತು ವರ್ಷಗಳಲ್ಲಿ ನಾಲ್ಕನೆಯ ಶತಮಾನೋತ್ಸವವನ್ನು ಆಚರಿಸ ಲಿರುವ ನಗರ ಇದು. ವಾಸ್ತವವಾಗಿ ಮೊದಲು ಈ ಆತ್ಮವನ್ನು ಮಹಮ್ಮದೀಯ ದೊರೆ ಯೊಬ್ಬ ಭಾಗ್ಯನಗರ ಎಂದು ಕರೆದ. ಸಮೀಪದ ಗೋಲ್ಕೊಂಡ ಅವನ ರಾಜಧಾನಿ. ಭಾಗ್ಯ ಎಂಬಾಕೆ ಆತನ 'ಮೇರೀ ಜಾನ್'. ಆ ಪ್ರೇಯಸಿಯ ಪ್ರೀತ್ಯರ್ಥ ಸುಲ್ತಾನ ಮಹಮ್ಮದ್ ಕುಲಿ ಕುತುಬ್‌ಷಾ ಒಂದು ನಗರವನ್ನೇ ಕಟ್ಟಿದ. ಹೆಣ್ಣು ಆತನ ಆತ್ಮ. ಅದರ ಮೇಲಣ ಮೋಹದಿಂದ ಹುಟ್ಟಿತು ಈ ಆತ್ಮ.

ಅನಂತರದ ವರ್ಷಗಳಲ್ಲಿ ಎರಡು ಮೂರು ಬಾರಿ ಈ ಆತ್ಮದ ಹೆಸರನ್ನು ಬದಲಾಯಿಸಿದರು. ಕೊನೆಗೆ ಅಂಟಿಕೊಂಡಿತು, ಹೈದರಾಬಾದ್.

ಹದಿನೈದು ಲಕ್ಷ ಜನ ಗಿಜಿಬಿಜಿಸುತ್ತಿರುವ ಈ ನಗರ, ಸರ್ಕಾರದ ಪ್ರಚಾರಕರು ಬಣ್ಣಿಸಿರುವ ಪ್ರಕಾರ, 'ದಕ್ಷಿಣದಲ್ಲಿ ಇತಿಹಾಸ ಕಂಡಿರುವ ಎಲ್ಲ ಸಂಸ್ಕೃತಿಗಳ ಮಧುರ ಮಿಶ್ರಣ'.

ಆ ಮಧುರ ಮಿಶ್ರಣವೇ ಆತ್ಮವಿರಬಹುದೆ?

ಭಾರತಕ್ಕೆ ಸ್ವಾತಂತ್ರ್ಯ ಪ್ರಾಪ್ತವಾದ ಆರಂಭದಲ್ಲಿ, ಇಲ್ಲಿ, ಹೇಗೆ ಕಾಣಿಸಿತು ಆ ಮಿಶ್ರಣ! ಅಲ್ಪಸಂಖ್ಯಾಕರು ಭಯೋತ್ಪಾದಕರ ಪಾತ್ರವಹಿಸಿ, ನಿಶ್ಶಸ್ತ್ರರಾದ ಬಹುಸಂಖ್ಯಾಕರು ತತ್ತರಿಸುತ್ತ ಬಾಳುವಂತೆ ಮಾಡಿದರು. ಐದು ಸಾವಿರ ವರ್ಷಗಳಿಗೆ ಹಿಂದಿನ, ಅಲ್ಲ – ಅದಕ್ಕೂ ಐದು ಸಾವಿರ ವರ್ಷಗಳಿಗೆ ಹಿಂದಿನ, ಮಾನವ ನಾಗರಿಕತೆ ತನ್ನ ಮಾಗಿದ ವಯಸ್ಸಿನಲ್ಲಿ ಮಾನ ಬಿಟ್ಟು ಕುಣಿಯಿತು. ಭಯೋತ್ಪಾದಕರಿಗಿಂತಲೂ ಬಲಶಾಲಿಯಾದ ಸೈನ್ಯ ನುಗ್ಗಿ ಬಂದೊಡನೆ, ಕೆಲವರು ಕಟ್ಟಿದ್ದ ಇಸ್ಪೀಟೆಲೆಗಳ ಮನೆ ಧೂಳು ಮುಕ್ಕಿತು. ನಾಲ್ಕು ಶತಮಾನ, ತಮ್ಮದಲ್ಲದ ವಂಶಾವಳಿಗೆ ಕುರಿಮರಿಗಳಂತೆ ಕುರ್ನಿಸು ಮಾಡಿದ್ದ ಜನ ಈಗ ಹೊಸ ಅಧಿಕಾರಿಗಳಿಗೆ ಮಣಿದರು.

....ನೆನಪು ಹನ್ನೆರಡು ವರ್ಷಗಳ ಹಿಂದಕ್ಕೆ ಓಡುತ್ತಿದೆ. ಒಂದೆರಡು ತಿಂಗಳಲ್ಲೇ ಉದಯವಾಗಲಿದ್ದ ಕನ್ನಡ ನಾಡಿನ ಸ್ತುತಿಪಾಠಕನಾಗಿ ಈ ಹೈದರಾಬಾದಿಗೆ ಬಂದಿದ್ದೆ. ಇದು ಆಗ ಸಂಸ್ಥಾನದ ರಾಜಧಾನಿ. ತೆಲುಗರು, ಮರಾಠಿಗರು, ಕನ್ನಡಿಗರು ನಿವಾಸಿಗಳಾದ ಜಿಲ್ಲೆಗಳು ಸೇರಿ ರೂಪುಗೊಂಡಿದ್ದ ನಿಜಾಮರಾಜ್ಯ. (ಕನ್ನಡ ಪ್ರದೇಶಗಳು ಆ ಸಂಸ್ಥಾನದೊಂದಿಗೆ ಸೇರ್ಪಡೆಯಾದದ್ದು ಅಂದಿಗೆ ೧೫೦ ವರ್ಷಗಳಿಗೆ ಹಿಂದೆ, ಮೈಸೂರು ಹುಲಿ ಟೀಪೂವಿನ ಪತನವಾದಾಗ. ಅದು ನಿಜಾಮನ ನಿಷ್ಠೆಗಾಗಿ ಆಂಗ್ಲರ ಕೊಡುಗೆ.) ನಿಜಾಮನ ಪದಚ್ಯುತಿಯವರೆಗೆ ಅಲ್ಪಸಂಖ್ಯಾಕರ ಉರ್ದೂವಿಗೇ ಪಟ್ಟ. ಉಳಿದವರಿಗೆ ಅರಸರ ಅಂತಃಪುರದಲ್ಲಿ ಸಂಚಿಯ ಕೆಲಸ. ಯಥಾ ರಾಜಾ, ತಥಾ ಪ್ರಜಾ. ಯಾರು ಬಲಶಾಲಿಯೋ, ಯಾರು ಆಳುತ್ತಾನೋ, ಅವನಿಗೆ ಸಾಷ್ಟಾಂಗ ಪ್ರಣಾಮ.

ಸ್ವಾತಂತ್ರ್ಯೋತ್ತರ ಭಾಷಾ ಬಿರುಗಾಳಿಗೆ ಸಿಲುಕಿ, ಕೃತಕವಾಗಿ ಕೂಡಿಕೊಂಡಿದ್ದುದು ಒಡೆಯಿತು. ಆಂಧ್ರ ಪ್ರದೇಶಕ್ಕೆ ರಾಜಧಾನಿಯಾಯಿತು, ಹೈದರಾಬಾದು. ಏಮುಂಡಿ? ಏಮಿ ಸಮಾಚಾರಮು? 'ಮಧುರ ಮಿಶ್ರಣ'ದ ಪ್ರಜೆಗಳಿಗೀಗ ಹೊಸ ಪಾತ್ರ.

ಒಂದೇ ತೊಂದರೆ: ಕೆರೆ ಸರೋವರಗಳು ಸಾಗರಗಳೆಂದು ಕರೆಸಿಕೊಳ್ಳುವ ಊರು – ಪ್ರದೇಶ ಇದು. ಹೊಸ ನೀರು ಬಂದರೂ ನೀರು ಮತ್ತಷ್ಟು ಕೊಳಕಾಗಬೇಕೇ ಹೊರತು ತಿಳಿಯಾಗಲು ಮಾರ್ಗವಿಲ್ಲ.

ಜನದಟ್ಟಣೆಯ ರಸ್ತೆಗಳಲ್ಲಿ – ಅಂಥವೇ ಹೆಚ್ಚು – ಓಡಾಡಿದಾಗಲೆಲ್ಲ ಜಿದರು

ಎಂಜಲುಗಳ ಗಲೀಜು ವಾಸನೆಯಿಂದ ಉಸಿರು ಕಟ್ಟುತ್ತದೆ. ಹುಣ್ಣಿಂದ ಕ್ರಿಮಿಗಳಿಗೆ ಬೇಸರವೆ? ಕತ್ತಲು ಮನೆಗಳು, ಕತ್ತಲು ಮನಗಳು. ಗಪೀಶ್ವರ ನಿತ್ಯ ಕಾರ್ಯದಲ್ಲಿ ನಿರತ. ಉಣ್ಣಲು ಎಷ್ಟು ಬೇಕೋ ಅಷ್ಟು ದುಡಿಯುತ್ತಾನೆ. ದುಡಿದು, ಉಂಡು, ಪವಿತ್ರವಾದ ಸೃಷ್ಟಿಕಾರ್ಯದಲ್ಲಿ ನಿರತನಾಗುತ್ತಾನೆ.

‘ನಿನ್ನೆಯೇ ಚೆನ್ನಾಗಿತ್ತು’ – ಇದೊಂದು ಹೊಸ ವೇದಾಂತ. ನಾಳೆ? ಆ ಬಗ್ಗೆ ಯೋಚಿಸುವ ಅಗತ್ಯ ಯಾರಿಗಿದೆ?

ಕಾಲ ಕಾಲಕ್ಕೆ ಸರಿಯಾಗಿ ಎಲ್ಲಿಂದಲೋ ಧ್ವನಿವರ್ಧಕವೊಂದು ಪ್ರಾರ್ಥನೆಗೆ ಕರೆ ನೀಡುತ್ತದೆ. ಎಲ್ಲರೂ ಮಾತನಾಡುತ್ತಿರುವ ಕಾಲ. ಬರಿಯ ಗಂಟಲ ಭಾಗ್ಯದಿಂದ ಯಾರಿಗೆ ತೃಪ್ತಿ?

ಬೆಳಗು ಆರು ಘಂಟೆ? ಕಾರಖಾನೆಯ ಶಿಳ್ಳು ದೀರ್ಘವಾಗಿ ಚೀತ್ಕರಿಸುತ್ತದೆ.

ಇದೇ ಏನು ನಗರದ ಆತ್ಮದ ಚೀತ್ಕಾರ?

ನಗು ಬರುತ್ತಿದೆ.

೧೨-೧-೧೯೬೯

# ಉತ್ತರೀಯದಲ್ಲಿ ಕೆಂಡ

ರಾಜಧಾನಿಯಲ್ಲಿ ಗದ್ದಲವೋ ಗದ್ದಲ.

ಆನೆಯ ಮೇಲೆ ಅಂಬಾರಿ. ಅಂಬಾರಿಯಲ್ಲೊಂದು ಮಂದಾಸನ. ಆಸನದ ಮೇಲೆ ಈ ಶತಮಾನದ ಕನ್ನಡ ಮಹಾಕಾವ್ಯ ಶ್ರೀರಾಮಾಯಣ ದರ್ಶನಂ. ಇದು ಗಜ ವೈಭವ. ಹಾರಗಳ ಸಂಕೋಲೆ. ಪೂಜೆ, ಪುಷ್ಪವೃಷ್ಟಿ.

ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ಅಮಿತೋತ್ಸಾಹವೇ ಈ ಕಾರ್ಯಕ್ರಮಕ್ಕೆ ಬಂಡವಾಳ. ಮಹಾಕವಿ ಕುವೆಂಪುಕೃತ ರಾಮಾಯಣ ದರ್ಶನದ ಅನಾವೃಶ ವಿದ್ಯಾರ್ಥಿ ಕೋ. ಚೆ. ನೆನಪು ಮಾಡಿಕೊಟ್ಟಂತೆ, ನಾಲ್ಕುನೂರು ವರ್ಷಗಳಿಗೆ ಹಿಂದೆ ವಿಜಯ ನಗರದಲ್ಲಿ ಕವಿ ಪೆದ್ದಣ್ಣನ ಕೃತಿಗೆ ಸಂದಿತ್ತು ಇಂತಹ ಆನೆ ಮನ್ನಣೆ.

ಈ ಕಾವ್ಯಾರಾಧನೆ, ಕವಿಪೂಜೆ, ಜನಪದದ ಸಂಸ್ಕಾರಕ್ಕೊಂದು ಅಭಿವ್ಯಕ್ತಿ.

* * * * *

ಅದಾಗಿ ಕೆಲವೇ ಗಂಟೆಗಳ ಅಂತರದಲ್ಲಿ ರಾಜಧಾನಿಯ ವಿಶ್ವವಿದ್ಯಾಲಯದ ಪದವೀಪ್ರದಾನ ಸಮಾರಂಭ. ಈ ಸಲ ಪದವೀಧರರಾದವರ ಸಂಖ್ಯೆ ೩೩೪೫. ಕಲೆ, ವಿಜ್ಞಾನ, ವಾಣಿಜ್ಯ, ವೈದ್ಯಕೀಯ, ಶಿಲ್ಪ – ನಾನಾ ಬಗೆಗಳ ಸ್ನಾತಕರು; ಸ್ನಾತ ಕೋತ್ತರ ಅಧ್ಯಯನವನ್ನು ಮುಗಿಸಿದವರು; ಡಾಕ್ಟರೇಟ್ ಪ್ರಶಸ್ತಿಯನ್ನು ಪಡೆದವರು.

ಅದು ಗಾಜಿನ ಮನೆಯ ಜಾತ್ರೆ. ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಲಿರುವ ಪದವಿ ಸಂಖ್ಯೆ.

ಈ ಬಾರಿ ಇಬ್ಬರಿಗೆ ಗೌರವ ಡಾಕ್ಟರೇಟ್ ಪ್ರಶಸ್ತಿ. ಮಹಾಕವಿ ಕುವೆಂಪು, ಗುಜರಾತ್ ವಿಶ್ವವಿದ್ಯಾಲಯದ ಉಪಕುಲಪತಿ ಉಮಾಶಂಕರ ಜೋಷಿ. ಜ್ಞಾನ ಪೀಠದ ಪ್ರಶಸ್ತಿಯನ್ನು ಒಟ್ಟಿಗೆ ಸ್ವೀಕರಿಸಿದವರು. ಇಲ್ಲಿಯೂ ಒಂದೇ ಸಂದರ್ಭದಲ್ಲಿ ಗೌರವ.

* * * * *

ಇಂತಹ ಸಮಾರಂಭಕ್ಕೆ ಗಾಂಭೀರ್ಯ ಉಂಟು, ಪಾವಿತ್ರ್ಯ ಉಂಟು.

ಅದರೆ ಇಲ್ಲಿ ?

ಜನಾದರಣೀಯ ಕವಿ ಕುವೆಂಪು ಭಾಷಣ ಮಾಡಿದಾಗ ವಿದ್ಯಾರ್ಥಿ ಸಮುದಾಯ ಗೌರವದಿಂದ ಕಿವಿ ಕೊಟ್ಟಿತು. ಉಘೇ ಎಂದಿತು. ಕೆಲವೇ ನಿಮಿಷಗಳಿಗೆ ಹಿಂದೆ

ಅದೇ ಸಮುದಾಯ, ವಿಶ್ವವಿದ್ಯಾಲಯದ ಮಹಾ ಕುಲಪತಿ, ಕುಲಪತಿ, ಸೆನೆಟ್ ಸಭಾಸದರ ಮೆರವಣಿಗೆ ವೇದಿಕೆಯತ್ತ ಸಾಗಿದಾಗ ಪರಿಹಾಸ್ಯ ಮಾಡಿತು. ಮುಂದೆ ಉಮಾಶಂಕರ ಜೋಶಿ ಪದವೀಪ್ರದಾನ ಭಾಷಣ ಮಾಡಲೆದ್ದಾಗ ವಿದ್ಯಾರ್ಥಿಗಳು ಹಲವು ವಿಧಗಳಲ್ಲಿ ತಮ್ಮ ಅಸಹನೆಯನ್ನು ತೋರಿದರು; ಉಪನ್ಯಾಸಕ್ಕೆ ಅಡ್ಡಿ ಒಡ್ಡಿದರು.

ಈ ವರ್ತನೆಗೆ ಅರ್ಥ?

ಯಾವುದಾದರೂ ಅರ್ಥ ಇರಲೆಂದೋ ಏನೋ ೩೫೦ರಷ್ಟು ಎಂಜಿನಿಯರಿಂಗ್ ಪದವೀಧರರು ಆರಂಭದಿಂದಲೂ ಒಂದು ಕೂಗಿಗೆ ಅಂಟಿಕೊಂಡರು:

“ನಮಗೆ ಉದ್ಯೋಗ ಬೇಕು; ಉದ್ಯೋಗ ಕೊಡಿ!”

* * * * *

ವಿದ್ಯಾರ್ಥಿಗಳ ನಡವಳಿಕೆಯನ್ನು ಖಂಡಿಸುವುದು ಸುಲಭ. ಕೆಲ ಆಸಕ್ತ ಜನರು ಬೂದಿಯೂದಿ ಕೆಂಡ ಸಿಗಿ ಸಿಗಿಯಾಗುವಂತೆ ಮಾಡಿದರು ಎಂದೂ ಆರೋಪಿಸಬಹುದು.

ಆದರೆ ಇದು ಪೂರ್ಣ ಸತ್ಯದ ದರ್ಶನವಾಗಲಾರದು.

ಬೆಂಗಳೂರು ವಿಶ್ವವಿದ್ಯಾಲಯವನ್ನಷ್ಟೇ ತೆಗೆದುಕೊಳ್ಳುವುದಾದರೆ ಕಳೆದ ಎರಡು ಮೂರು ವರ್ಷಗಳಲ್ಲಿ ಕ್ರಮ ಕ್ರಮವಾಗಿ ಹೆಚ್ಚುತ್ತ ಬಂದ ಅಶಿಸ್ತಿನ ಪ್ರವೃತ್ತಿ, ಈ ವರ್ಷ ಪರಾಕಾಷ್ಠೆಯನ್ನು ಮುಟ್ಟಿತು.

ಈ ೩೩೪೫ ಜನರಲ್ಲಿ ವಿದ್ಯಾರ್ಥಿನಿಯರು ೧೧೫೭ ಮಂದಿ. ಅವರಲ್ಲಿ ಅನೇಕರು ಈಗಾಗಲೇ ಉದ್ಯೋಗಾವಲಂಬಿಗಳಾಗಿರುವವರ ಕೈ ಹಿಡಿಯಬಹುದು. ಉಳಿದವರು ಸಣ್ಣ ಪುಟ್ಟ ಹುದ್ದೆಗಳಿಗಾಗಿ ಯುವಕರೊಡನೆ ಸೆಣಸಾಡಬಹುದು. ಇತರ ಪದವೀಧರ ಸಮುದಾಯಕ್ಕೆಲ್ಲ ಉದ್ಯೋಗಗಳು ಎಲ್ಲಿವೆ? ಎಂಜಿನಿಯರಿಂಗ್ ವಿದ್ಯಾರ್ಥಿಗಳ ಮಟ್ಟಿಗಂತೂ ಈ ಬಗ್ಗೆ ವಿವಾದವಿಲ್ಲ. ಈಗಾಗಲೇ ನಿರುದ್ಯೋಗಿಗಳಾಗಿರುವ ಕೆಲವು ಸಹಸ್ರ ಎಂಜಿನಿಯರಿಂಗ್ ಪದವೀಧರರ ಪಡೆಯನ್ನು ಇವರೂ ಸೇರಿಕೊಳ್ಳಬೇಕು.

ಕಪ್ಪು ನಿಲುವಂಗಿ ಧರಿಸಿ ಅದೇ ಬಣ್ಣದ ಭವಿಷ್ಯತ್ತನ್ನು ಇದಿರುನೋಡಬೇಕಾಗಿರುವ ಹುಡುಗರು, ಸಂಭ್ರಮದ ಘಳಿಗೆಯಲ್ಲೂ ಸಂಕಟದ ಮಾತನ್ನೇ ಆಡಿದರೆ ಏನಾಶ್ಚರ್ಯ?

* * * * *

ವ್ಯಥೆಯ ಸಂಗತಿಯೆಂದರೆ, ಎರಡು ಸಮಾನಾಂತರ ರೇಖೆಗಳ ಮೇಲೆ ಹಿರಿಯರೂ ಕಿರಿಯರೂ ಪಯಣ ಬೆಳೆಸಿರುವುದು. ಈ ರೇಖೆಗಳ ಮಧ್ಯೆ ಮುಳ್ಳಿನ ಬೇಲಿ ಇನ್ನು ಹುಟ್ಟಿಕೊಳ್ಳುವುದೊಂದೇ ಬಾಕಿ.

ಗುರುಶಿಷ್ಯರ ನಡುವಣ ಆತ್ಮೀಯ ಸಂಬಂಧ ನಿನ್ನೆಯ ಕಥೆ. ಇವತ್ತೇನಿದ್ದರೂ, ಬೋಧನ ಅಧ್ಯಯನಗಳು ವ್ಯವಹಾರಲೋಕದ್ದು.

ಇಂತಹ ಪರಿಸ್ಥಿತಿಯಲ್ಲಿ ಪದವಿ ನೀಡುವುದನ್ನು ಧಾರ್ಮಿಕ ಕ್ರಿಯೆಯಂತೆ ನಡೆಸಿ

ದರೆ, ಅವಕ್ಕೆ ಪ್ರತಿಕ್ರಿಯೆಯಾಗಿ ಸ್ನಾತಕರೂ ಅವರ ಮಿತ್ರರೂ ಕೂಗಾಡಿದರೆ, ಆ ನಡತೆಯ ಪೃಥಕ್ಕರಣ ಕಷ್ಟವಾಗಬಾರದು.

* * * * *

ಬೆಂಗಳೂರು, ರಾಷ್ಟ್ರದ ಇತರ ಕೇಂದ್ರಗಳು, ಲೋಕದ ಬೇರೆ ಬೇರೆ ಪ್ರಮುಖ ನಗರಗಳು – ಎಲ್ಲ ಕಡೆಗಳಲ್ಲೂ ಒಂದಲ್ಲ ಒಂದು ಕಾರಣಕ್ಕಾಗಿ ಯುವ ಜನಾಂಗ ಹೊಗೆಯಾಡುತ್ತಿದೆ. ಇದರ ಅಂತರಾರ್ಥವನ್ನು ಕಂಡು ಹಿಡಿದು, ರೋಗಾಣುವನ್ನು ಬಳಲುತ್ತಿರುವವನಿಂದ ಬೇರ್ಪಡಿಸುವುದು ಸಾಧ್ಯವಾಯಿತೆಂದರೆ, ಈ ಶತಮಾನದ ಅತಿ ದೊಡ್ಡ ಸಮಸ್ಯೆಗೆ ಪರಿಹಾರ ದೊರಕಿಸಿದಂತಾಗುವುದು.

ನಮ್ಮ ಪರಿಸರದ ಮಟ್ಟಿಗೆ ಹೇಳುವುದಾದರೆ ಆ ಬಗೆಯ ಪರೀಕ್ಷೆಗೆ ಪ್ರಯತ್ನಕ್ಕೆ ಮೊದಲ ಹೆಜ್ಜೆ, ಈಗಿನ ಸ್ವರೂಪದಲ್ಲಿ ಘಟಿಕೋತ್ಸವವನ್ನು ನಡೆಸದೇ ಇರುವುದು. ಪದವೀದಾನ ಸಮಾರಂಭವು ವಾರ್ಷಿಕ ವಿನೋದವೆಂದು ಪರಿಗಣಿತವಾದ ಮೇಲೆ ಅಂಥ ಕ್ರಿಯೆಗಳನ್ನು ಬಿಟ್ಟುಕೊಡುವುದು ಜಾಣತನ.

ಪದವಿಗಳನ್ನು ಅಲ್ಲಲ್ಲಿನ ಕಾಲೇಜುಗಳಲ್ಲೇ ಒಪ್ಪಿಸಬಹುದು. ಸ್ನಾತಕೋತ್ತರ ಶಿಕ್ಷಣವನ್ನು ಮುಗಿಸಿದವರಿಗಷ್ಟೇ ವಿಶ್ವವಿದ್ಯಾಲಯ ದೀಕ್ಷೆ ನೀಡುವ ಹೊಸ ಪದ್ಧತಿಯಿಂದ, ಅಂಥವರ ಸಂಖ್ಯೆ ನೂರರ ಹತ್ತಿರದಲ್ಲೇ ಇರುತ್ತದಾದುದರಿಂದ, ಸಮಾರಂಭದ ಘನತೆ ಗಾಂಭೀರ್ಯಗಳು ಉಳಿಯುವುದೂ ಅದು ಶೋಭಾಯಮಾನವಾಗುವುದೂ ಸಾಧ್ಯ.

ಕೆಂಡ ಅಗ್ಗಿಷ್ಟಿಕೆಯಲ್ಲಿರುವುದೇ ಚೆನ್ನು.

೯–೧–೧೯೬೯

# ಗಂಗೋತ್ರಿ ವಾದ್ಯಮೇಳ

ಬೆಂಗಳೂರು ವಿಶ್ವವಿದ್ಯಾಲಯದ ಪದವೀದಾನ ಸಮಾರಂಭ ನಡೆದ ಹತ್ತೇ ದಿನಗಳಲ್ಲಿ ಮೈಸೂರು ವಿಶ್ವವಿದ್ಯಾಲಯದ ಘಟಿಕೋತ್ಸವ.

ಸಿಂಗರಿಸಿಕೊಂಡ ಕನ್ಯೆಯನ್ನು ನಾಚಿಸುವಂತಿತ್ತು ಅಲಂಕೃತ ಮಾನಸಗಂಗೋತ್ರಿ ಬಯಲು ಸಭಾಭವನ. ಬರೆಹದ ಹಣೆಯ ಕುಂಕುಮ.

ಸಂಜೆ ಅಲ್ಲಿ ಹತ್ತು ಸಹಸ್ರ ಜನ ನೆರೆಯಬೇಕು! ನಾಲ್ಕೂವರೆಸಾವಿರಕ್ಕೂ ಹೆಚ್ಚು ವಿದ್ಯಾರ್ಥಿ ವಿದ್ಯಾರ್ಥಿನಿಯರು ಪದವಿಗಳನ್ನು ಪಡೆಯಬೇಕು.

ಹಲವರನ್ನು ಒಂದು ಶಂಕೆ ಬಾಧಿಸುತ್ತಿತ್ತು :

ಸಮಾರಂಭ ಶಾಂತ ವಾತಾವರಣದಲ್ಲಿ ಜರಗುತ್ತದೋ ಇಲ್ಲವೋ ?

ಕೆಲವರನ್ನು ಕೇಳಿದೆ :

"ಏನು ಹೇಳುತ್ತಾರೆ ನಮ್ಮ ಎಳೆಯರು ?"

ಉತ್ತರ ಒಂದೇ ಬಗೆಯದು :

"ಗೊತ್ತಿಲ್ಲ."

ವಿದ್ಯಾರ್ಥಿ ಸಮುದಾಯವೇ ಒಂದು ನವ್ಯ ಕವಿತೆ. ಪದಗಳೆಲ್ಲ ಸಾಲುಕಟ್ಟಿ ಉಡುಪು ಕಳಚಿದಾಗಲೇ ಅರ್ಥ ಮೂಡುವುದು ಸಾಧ್ಯ.

ರೆಜಿಸ್ಟ್ರಾರ್ ರಾಮಚಂದ್ರನ್ ಅಂದರು :

"ಕಾರ್ಯಕ್ರಮಗಳು ಕನ್ನಡದಲ್ಲಿ ನಡೀತವೆ."

ಉತ್ತರದ ಉಪಕುಲಪತಿ ಡಾ. ಶ್ರೀಮಾಲಿಯವರ ಮುಖದ ಮೇಲೆ ಮುಗುಳುನಗೆ.

*       *       *       *       *

ಎರಡು ನಗರಗಳ ನಡುವಣ ಅಂತರ ನೂರು ಮೈಲುಗಳಿಗೂ ಕಡಮೆ. ಆದರೆ ವಾತಾವರಣ ಅದೆಷ್ಟು ಭಿನ್ನ! ಅಸಹನೆ ಹೊಗೆಯಾಡುವ ಕಾರ್ಖಾನೆಯಲ್ಲ ಮೈಸೂರು. ಇದು ವಿದ್ಯಾನಗರ. ನಿಸರ್ಗದ ಮಡಿಲಲ್ಲಿ ಮೊಗ್ಗುಗಳು ಅರಳುವ ರೀತಿಯೇ ಬೇರೆ.

ಕುಲಾಧಿಪತಿ ಪಾಠಕರ ಕನ್ನಡ, ಕುಲಪತಿ ಶ್ರೀಮಾಲಿಯವರ ಕನ್ನಡ, ಅಭ್ಯಾಸವಿಲ್ಲದಿದ್ದರೂ ಸೊಗಸಾಗಿ ಶಬ್ದಿಸಿದ ವಿವಿಧ ವಿಭಾಗಗಳ ಡೀನರ ಕನ್ನಡ.... ವಿನೋದ? ಸ್ವಲ್ಪ ಮಟ್ಟಿಗೆ ನಿಜ. ಆದರೆ, ಮಗುವಿನ ತೊದಲಿಗೆ ಪ್ರತಿಕ್ರಿಯೆ ಹರ್ಷದ್ದೊಂದೇ ತಾನೆ ?

ಸಂತುಷ್ಟ ವಿದ್ಯಾರ್ಥಿ ಬಣ ಪಂಡಿತ ಹೃದಯನಾಥ ಕುಂಜ್ರುರವರ ಇಂಗ್ಲಿಷ್ ಭಾಷೆಯ ಘಟಕೋತ್ಸವ ಭಾಷಣವನ್ನು ತಾಳ್ಮೆಯಿಂದ ಕೇಳಿತು. ಅತಿಥಿಗೆ ಗೌರವ ಸಲ್ಲಿಸುವ ಹೃದಯ ವೈಶಾಲ್ಯ ಅದು. ಆ ಸಹನಶೀಲತೆ ಕನ್ನಡಕುಲದ ಹಿರಿಯ ಗುಣ. ನಾವು ವಿಜೇತರಾದಾಗ ಯಾವಾಗಲೂ ಉದಾರಿಗಳೇ.

* * * * *

ಔದಾರ್ಯ ಎಷ್ಟು ದೊಡ್ಡದು ಎಂಬುದು ಅರ್ಥವಾಗಬೇಕಾದರೆ, ಕುಂಜ್ರು ಅವರ ಉಪನ್ಯಾಸದ ಸ್ವರೂಪವನ್ನು ಗಮನಿಸಬೇಕು. ಒಂದೆಡೆ ಕುಂಜ್ರುವಾದನ ಕರ್ಕಶವಾಗಿತ್ತು. ಮಾನಸಗಂಗೋತ್ರಿಯ ವಾಸ್ತವ್ಯಮೇಳಕ್ಕೆ ಸರಿಹೊಂದಲಿಲ್ಲ. ಪ್ರಾದೇಶಿಕ ಭಾಷೆಗಳ ಹೊಸ ಇಂಚರವನ್ನು ಅರ್ಥಮಾಡಿಕೊಳ್ಳುವುದು ಎಂಬತ್ತು ದಾಟಿದ ಆ ಆಂಗ್ಲ ಸಂಪ್ರದಾಯ ಶರಣರಿಗೆ ಕಷ್ಟವಾಗಿತ್ತು.

ಆದರೂ ಕುಂಜ್ರು ಪ್ರಸ್ತಾಪಿಸಿದ ಬೇರೆ ಕೆಲ ವಿಷಯಗಳು ಅಪಸ್ವರಗಳಾಗಲಿಲ್ಲ. ಉದಾಹರಣೆಗೆ – ವಿದ್ಯಾರ್ಥಿಗಳ ಅಶಿಸ್ತಿಗೆ ಸಂಬಂಧಿಸಿದ್ದು. "ಸಾಧಾರಣವಾಗಿ, ವಿದ್ಯಾರ್ಥಿ ಬಂಡಾಯಗಳಲ್ಲಿ ಭಾಗವಹಿಸುವವರು ಮಾನವಿಕ ವಿಭಾಗದವರು" ಎಂಬ ಕುಂಜ್ರು ಅಭಿಪ್ರಾಯ ವಿವಾದಾಸ್ಪದವಾದದ್ದು. ಆದರೆ, ವಿದ್ಯಾರ್ಥಿಗಳ ಅಸ್ವಾಸ್ಥ್ಯದ ಕಾರಣಗಳ ಬಗೆಗೆ ಅವರು ನಡೆಸಿದ ಪೃಥಕ್ಕರಣ ಸಮಂಜಸವಾಗಿತ್ತು. ಶಿಕ್ಷಣ ಮತ್ತು ಪರೀಕ್ಷಾ ಶುಲ್ಕಗಳಲ್ಲಿ ಏರಿಕೆ, ವಾಸ ಹಾಗೂ ಜೀವನದ ಅತೃಪ್ತಿಕರ ಸ್ಥಿತಿಗತಿಗಳು, ಕಷ್ಟಕರ ಪ್ರಶ್ನೆ ಪತ್ರಿಕೆಗಳು, ವಿದ್ಯಾರ್ಥಿಗಳು ಮತ್ತು ಅಧ್ಯಾಪಕರ ನಡುವೆ ಸಂಪರ್ಕದ ಅಭಾವ, ಮೇಲಣ ಶಿಕ್ಷಣಕ್ಕಾಗಿ ವಿದ್ಯಾರ್ಥಿಗಳನ್ನು ಸಾಕಷ್ಟು ಸಿದ್ಧಪಡಿಸದಿರುವುದು – ಇವೆಲ್ಲ ಅಭ್ಯಾಸಕ್ಕೆ ಆಗಾಗ್ಗೆ ಅಡ್ಡಿಯುಂಟುಮಾಡುತ್ತಿವೆ. "ಶಿಕ್ಷಕರಲ್ಲಿನ ಒಳಗುಂಪುಗಳೂ ವಿಶ್ವವಿದ್ಯಾಲಯಗಳನ್ನು ತೊಂದರೆಗೆ ಗುರಿಪಡಿಸಿವೆ. ಶಿಕ್ಷಕ – ರಾಜಕಾರಣಿಗಳು ಅನೇಕ ಸಲ ವಿದ್ಯಾರ್ಥಿ ಮುಷ್ಕರಗಳಿಗೆ ಪ್ರಚೋದಕರಾಗುವುದು ಕಂಡುಬಂದಿದೆ."

ಕಹಿಯಾದ ಮಾತು. ಆದರೆ ವಸ್ತುಸ್ಥಿತಿಯನ್ನು ಅರಿತುಕೊಳ್ಳಲು ಸಹಾಯಕ.

ಈ ಸಂದರ್ಭದಲ್ಲಿ ಶಿಕ್ಷಣ ಆಯೋಗದ ವರದಿಯಿಂದ ಕೆಲ ವಾಕ್ಯಗಳನ್ನು ಕುಂಜ್ರು ಉದ್ಧರಿಸಿದರು:

"ಸಾರ್ವಜನಿಕ ಜೀವನದ ಸ್ಥಿತಿಗತಿಗಳು, ವಯಸ್ಕರೆನಿಸಿಕೊಂಡವರಲ್ಲಿ ಕುಸಿಯುತ್ತಿರುವ ಶಿಸ್ತಿನ ಮಟ್ಟ, ಅವರ ಪೌರಪ್ರಜ್ಞೆ ಹಾಗೂ ವ್ಯಕ್ತಿ ಚಾರಿತ್ರ್ಯದ ದುರ್ಬಲತೆ – ಇವು ವಿದ್ಯಾರ್ಥಿಗಳ ಮೇಲೆ ಅಪೇಕ್ಷಣೀಯವಲ್ಲದ ಪರಿಣಾಮವನ್ನುಂಟುಮಾಡಿವೆ."

* * * * *

ತರಗತಿಯ ಹೊರಗೆ ಅಧ್ಯಾಪಕರೊಂದಿಗೆ ಸಮಾನಸ್ಕಂಧರಾಗಿ ವರ್ತಿಸುವ ವಿದ್ಯಾರ್ಥಿಗಳು ನಮ್ಮಲ್ಲಿದ್ದಾರೆ. ಶಿಷ್ಯರ 'ಆತಿಥ್ಯ' ಸ್ವೀಕರಿಸಿ ಆಮೋದಪ್ರಮೋದಗಳಲ್ಲಿ ಕಾಲಕಳೆಯುವ ಅಧ್ಯಾಪಕರೂ ಅಲ್ಲಿ ಇಲ್ಲಿ ಸಿಗುತ್ತಾರೆ.

ಜಾತಿಮತ ಮತ್ತಿತರ ಅಸ್ತ್ರಗಳು ಸಾರ್ವಜನಿಕ ಜೀವನದಲ್ಲಿ ಸ್ವಾರ್ಥಸಾಧನೆಗಾಗಿ ಬಳಸಲ್ಪಡುತ್ತಿರುವಾಗ ಶಿಕ್ಷಣದ ಕ್ಷೇತ್ರವೂ ಈ ಶಸ್ತ್ರಾಸ್ತ್ರಗಳಿಂದ ಬಾಧಿತವಾಗುವುದರಲ್ಲಿ ಆಶ್ಚರ್ಯವೇನು?

ವಿಷವಾಯು ಸುಳಿದಾಡುವುದು ಇಂಥ ಗುಂಡಿಗಳಲ್ಲಿಯೇ. ಮಾರಕ ಕ್ರಿಮಿಕೀಟಗಳು ಹುಟ್ಟಿಕೊಳ್ಳುವುದೂ ಇಲ್ಲಿಯೇ.

ಇದು ಉಚ್ಚಶಿಕ್ಷಣದ ಮಟ್ಟಕ್ಕಷ್ಟೇ ಸೀಮಿತವಲ್ಲ. ಗ್ರಾಮ ಹಂತದಲ್ಲೂ ಇದರ ಹಾವಳಿಯನ್ನು ಕಾಣಬಹುದು. ಪ್ರಾಥಮಿಕ ನೆಲೆಯಿಂದ ಮೇಲಿನವರೆಗೆ ಈ ರೋಗಾಣುಗಳು ಆರೋಗ್ಯವನ್ನು ಕೆಡಿಸಿವೆ.

'ಅಧ್ಯಾಪಕ – ರಾಜಕಾರಣಿ' ವಾತಾವರಣದ ಶಿಶು. ಆತನ ಜನ್ಮದಾತರು ಬೀಜಾಸುರರಾದ ರಾಜಕಾರಣಿಗಳೇ.

* * * * *

ಕುಂಜ್ರು ಉಲ್ಲೇಖಿಸಿದ ಒಂದು ಗಾದೆ, ವಿದ್ಯಾರ್ಥಿಗಳನ್ನು ಅರ್ಥಮಾಡಿಕೊಳ್ಳಲು ನೆರವಾಗುತ್ತದೆ.

"ಇಪ್ಪತ್ತರೊಳಗಿನ ಯಾವನೇ ಆಗಲಿ ಆತ ತೀವ್ರಗಾಮಿಯಾಗದೇ ಇದ್ದರೆ, ಆತನಿಗೆ ಹೃದಯ ಇಲ್ಲ ಎನ್ನಬೇಕು; ನಾಲ್ವತ್ತು ದಾಟಿದ ಮೇಲೂ ಯಾವನಾದರೂ ತೀವ್ರಗಾಮಿಯಾಗಿದ್ದರೆ ಅವನಿಗೆ ತಲೆ ಇಲ್ಲ ಎನ್ನಬೇಕು."

ಎಷ್ಟೋ ವೇಳೆ ಹಿರಿಯರೂ ಕಿರಿಯರೂ ಸಮಾನಾಂತರ ರೇಖೆಗಳಲ್ಲಿ ಸಾಗುತ್ತಾರೆ. ಅದು ಒಮ್ಮುಖ ದಾರಿ. ಆಗಾಗ್ಗೆ ಅವರಿಬ್ಬರೂ ಸಂಧಿಸುವುದು ಮುಖ್ಯ.

* * * * *

ಮೈಸೂರು ವಿಶ್ವವಿದ್ಯಾಲಯದ ಘಟಿಕೋತ್ಸವ ಆರಂಭವಾದಾಗ ಇನ್ನೂ ಸಂಜೆ. ಆದರೂ ಪಶ್ಚಿಮದಿಂದ ಸೂರ್ಯನ ಶಾಖ ವೇದಿಕೆಗೆ ತಟ್ಟುತ್ತಿತ್ತು. ಪದವಿ ನೀಡಿಕೆ ಮುಗಿದು, ಅತಿಥಿ ಹೃದಯನಾಥ ಕುಂಜ್ರು ಮಾತನಾಡತೊಡಗಿದಾಗ ಸೂರ್ಯ ಕಂತಿದ. ಗಾಳಿ ತಣ್ಣನೆ ಬೀಸಿತು.

ಅಧ್ಯಾಪಕ ಸುಬ್ಬರಾಯಾಚಾರ್ – ವಿದ್ಯಾರ್ಥಿ ಯೋಗಕ್ಷೇಮದ ಡೀನರು – ಸಭಾಂಗಣದ ಹೊರವಲಯದಲ್ಲಿ ಸುತ್ತಾಡುತ್ತಿದ್ದರು, ಶಿಷ್ಯಕೋಟಿಯ ಮೇಲೆ ಕಣ್ಣಿಟ್ಟು. ಅವರ ಹೊಸ ಹೊಣೆಯ ನಿರ್ವಹಣೆ ಯಶಸ್ವಿ ಎನ್ನುವುದಕ್ಕೆ ಸಾಕ್ಷಿಯಾಗಿತ್ತು, ಇರುಳಿನೊಡನೆ ಬೆರೆತ ಶಾಂತ ಕಲರವ.

೨೩–೧–೧೯೬೯

# ನಂ. ೧೫೧ : ರಾ. ಕೃ. ಹೆಗಡೆ !

ಅಂಡಮಾನದಿಂದ ಹಿಂತಿರುಗಿದ ಒಬ್ಬರನ್ನು ಭೇಟಿಯಾದೆ.

ಬಾಲ್ಯದಲ್ಲಿ, ಅಂಡಮಾನ ದ್ವೀಪದ ಕಾರಾಗೃಹದ ಏಕಾಂತ ಕೊಠಡಿಗಳಲ್ಲಿ ಬಂಧಿಗಳಾಗಿರುತ್ತಿದ್ದ ಸ್ವಾತಂತ್ರ್ಯವೀರರ ಕತೆಗಳನ್ನು ಕೇಳಿದಾಗಲೆಲ್ಲ ಮೈನವಿರೇಳುತ್ತಿತ್ತು. ತಾಯ್ನಾಡಿನ ವಿಮೋಚನೆಯ ಹೋರಾಟದಲ್ಲಿ ಭಾಗಿಗಳಾಗಿ, ಅಂತಹ ಶಿಕ್ಷೆಗೆ ಗುರಿಯಾದವರು ೧೫೦ ಜನ.

ಇದೀಗ ಅಂಡಮಾನದಿಂದ ಮರಳಿ ಬಂದಿರುವವರು ೧೫೧ನೆಯವರು ! ಅವರಿದ್ದುದು ಒಂಭತ್ತು ದಿನ. ರಾಜ್ಯದಿಂದ ೭೭೦ ಮೈಲು (ಸಮುದ್ರ ಮಾರ್ಗವಾಗಿ) ದೂರವಿದ್ದರೂ, ಅದು ಪೂರ್ತಿ ಏಕಾಂತ ವಾಸವಲ್ಲ ; ಸಪತ್ನೀಕ ಪ್ರವಾಸ.

ಅರ್ಥಮಂತ್ರಿ ರಾಮಕೃಷ್ಣ ಹೆಗಡೆಯವರು ಅಂಡಮಾನ ದ್ವೀಪಗಳಿಗೆ ಹೋದುದು ಬಹು ದಿನಗಳ ಬಯಕೆಯನ್ನು ಈಡೇರಿಸುವ ಉದ್ದೇಶದಿಂದ. ತಾವು ನೋಡಿದ್ದನ್ನು ಬಣ್ಣಿಸುವಾಗ ಅವರು ಬಳಸುವುದು ಕಾವ್ಯಲೋಕದ ಪದಗಳನ್ನು. ಅವರ ಪಾಲಿಗೆ ಅದೊಂದು ಸ್ಮರಣೀಯ ಯಾತ್ರೆ.

* * * * *

ಅಲ್ಲಿ ಅವರು ಏನು ಕಂಡರು ?

ಪುಟ್ಟ ಭಾರತವನ್ನು – ಕನಸಿನ ಭಾರತವನ್ನು. ಹಲವು ಭಾಷೆಗಳು, ಹಲವು ಸಂಸ್ಕೃತಿಗಳು. ಅಷ್ಟಿದ್ದರೂ ಸಂಪೂರ್ಣ ಸಾಮರಸ್ಯ, ಸಮನ್ವಯ. ವಿವಿಧತೆಯಲ್ಲಿ ಏಕತೆ. [ಹಿಂದಿಯೋ ಹಿಂದೂಸ್ಥಾನಿಯೋ ಸಂಪರ್ಕ ಭಾಷೆ.] 'ನಾಗರಿಕತೆ'ಯ ಸೋಂಕಿನಿಂದ ಕಲುಷಿತವಾಗದ ದ್ವೀಪಗಳು. ಅನಾದೃಶವಾದ ನಿಸರ್ಗ ರಮಣೀಯತೆ. ಮಾನವನಿಗೆ ಆಹ್ವಾನ ನೀಡುತ್ತಿರುವ ಅಪಾರ ಅರಣ್ಯ ಸಂಪತ್ತು.

ಕಾಳಾಪಾನಿ ಎಂದು ಯಾಕೆ ಕರೆದರೊ ? ಇದು ಕರಿನೀರಲ್ಲ. ನೋಡಿ ಬೇಸುವುದು ಸುತ್ತಲೆಲ್ಲ ವ್ಯಾಪಿಸಿರುವ ಕಡುನೀಲಿ.

ಒಂದು ದ್ವೀಪ ? ಅಲ್ಲ. ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳು. ದ್ವೀಪ ಸಮುಚ್ಚಯ. ಅಂಡಮಾನ್‌ನಲ್ಲಿ ಮೂರು ಮುಖ್ಯ ದ್ವೀಪಗಳಿವೆ; ನಿಕೋಬಾರ್‌ನಲ್ಲೂ ಮೂರು ದೊಡ್ಡ ದ್ವೀಪಗಳು. ಆದರೆ ಒಟ್ಟು, ಭಾರತದ ಪ್ರಭುತ್ವಕ್ಕೊಳಗಾಗಿರುವ ನಡುಗಡ್ಡೆಗಳ ಸಂಖ್ಯೆ ೩೪೮.

ಬ್ಲೇರ್ ಬಂದರು ಆ ಪ್ರದೇಶದ ಮುಖ್ಯ ಪಟ್ಟಣ. ಇದರ ಜನ ಸಂಖ್ಯೆ

೪೦,೦೦೦. ಎಲ್ಲ ದ್ವೀಪಗಳ ಜನಸಂಖ್ಯೆ ೬೫ – ೭೦,೦೦೦. ವಿಸ್ತೀರ್ಣ ೩,೮೦೦ ಚದರ ಮೈಲುಗಳು. ವರ್ಷಕ್ಕೆ ೯೦ ಅಂಗುಲಗಳಿಂದ ೧೬೦ರ ತನಕ ಮಳೆ. ಉಷ್ಣ ಹೆಚ್ಚಿನಿಸಿದರೂ [೭೦ ರಿಂದ ೯೦ ಡಿಗ್ರಿ ತನಕ] ಅದನ್ನು ಮರೆಸುವ ಶೀತಲ ಗಾಳಿ.

*    *    *    *    *

ಪಾಶ್ಚಾತ್ಯರು ಅಂಡಮಾನ್ ದ್ವೀಪವನ್ನು 'ಬಂಗಾರದ ನೆಲ, ನರಭಕ್ಷಕರ ಸ್ಥಳ' ಎಂದು ಕರೆದರು. ದಟ್ಟನೆಯ ಕಾಡುಗಳಿಗೆ ಚಿನ್ನದ ಜಲಿ. ನರಭಕ್ಷಕರಿರಲೂ ಬಹುದು. ಕೆಲ ದ್ವೀಪಗಳಲ್ಲಿ, ಜಿಂಕೆಯನ್ನು ಬಳಸದ, ಬಾಣ ಪ್ರಯೋಗಿಸುವ ಮೂಲನಿವಾಸಿಗಳಿದ್ದಾರೆ. ಒಮ್ಮೆ ಒಂದು ದ್ವೀಪವನ್ನು ಮುಟ್ಟಿದ ಮೂವರು ನಾವಿಕರು ಮರಳಿ ಬರಲಿಲ್ಲ. ಒಬ್ಬ ರಷ್ಯನ್ ಭೂಗರ್ಭಶಾಸ್ತ್ರಜ್ಞ ಬಾಣತಗಲಿ ಹತನಾದ. ಉಡುಗೆ: ಗಂಡಸರಿಗೆ ಮರದ ತೆಳು ತೊಗಟೆಯ ನೀಳ ಲಂಗೋಟಿ. ಹೆಂಗಸರ ನಡುವಿನ ಸುತ್ತಲೂ ಹುಲ್ಲಿನ ಕವಚ.

ಕಾರ್‌ನಿಕೋಬಾರ್ ದ್ವೀಪದ ಕತೆ ಬೇರೆ. ಇಲ್ಲಿನವರು ಅದೆಂದೋ ಕ್ರೈಸ್ತಾನುಯಾಯಿಗಳಾದರು. ದ್ವೀಪದ ಸುತ್ತಲೂ ವೃತ್ತಾಕಾರವಾದ ನಾಲ್ವತ್ತು ಮೈಲುಗಳ ಟಾರು ರಸ್ತೆ. ಶತಮಾನಗಳಿಂದ ಪರಕೀಯರ 'ಸ್ಪರ್ಶ'ಕ್ಕೊಳಗಾಗದೆ ತಮ್ಮದೇ ವಿಶಿಷ್ಟ ರೀತಿಯಲ್ಲಿ ಬಾಳುತ್ತಿರುವ ಜನ. ಅವರ ಸಾಮಾಜಿಕ ಬದುಕಿನ ಮೂಲ ಮಂತ್ರ: ಸಮಾನತೆ, ಸೌಹಾರ್ದ. ಬಾಹ್ಯ ಜಗತ್ತಿನೊಡನೆ ಅವರಿಗೆ ನಿತ್ಯ ಸಂಪರ್ಕವಿಲ್ಲ. ಬೆಳೆದುದನ್ನು ಅವರದೇ ಸಹಕಾರ ಸಂಘ ಹೊರಲೋಕಕ್ಕೆ ರಫ್ತು ಮಾಡುತ್ತದೆ; ತಮಗೆ ಬೇಕಾದ ಸಾಮಗ್ರಿಗಳನ್ನು ತರಿಸಿಕೊಡುತ್ತದೆ.

ವರ್ಣರಂಜಿತ ಬಟ್ಟೆಯುಡುವ ಹುಡುಗಿಯರು ಅಲ್ಲಿ ಸ್ಕೂಟರ್ – ಸೈಕಲ್ ಸವಾರಿ ಮಾಡುತ್ತಾರೆ. ಜನ ನೆಲ ಮುಟ್ಟುವ ಛಾವಣಿ ಇರುವ ಗುಡಿಸಲುಗಳಲ್ಲಿ ವಾಸಿಸುತ್ತಾರೆ. ನೈರ್ಮಲ್ಯಕ್ಕೆ ಅಲ್ಲಿ ಅಗ್ರ ಪೂಜೆ.

ಒಮ್ಮೆ ಅಲ್ಲಿಗೆ ಹೋದ ರಾಷ್ಟ್ರಪತಿ ಡಾ|| ಹುಸೇನರು ಕೇಳಿದರು: "ನಿಮಗೇನು ಬೇಕು?"

ಉತ್ತರ: "ನಮಗೆ ಏನೇನೂ ಬೇಡ. ಹೊರಗಿನವರು ಇಲ್ಲಿ ಬರದಿದ್ದರೆ ಸಾಕು."

ಅತ್ಯಂತ ಸುಂದರವಾದ ಬೇರೊಂದು ದ್ವೀಪ, ಪ್ರವಾಸಿಗರ ಸ್ವರ್ಗವಾಗಬಲ್ಲುದು. ಅದರೆದುರು ಹೊನಲೂಲು ಸಪ್ಪೆ.

*    *    *    *    *

ಮನುಷ್ಯರು ಕಡಮೆ. ಪ್ರಾಣಿಗಳಂತೂ ಇಲ್ಲವೇ ಇಲ್ಲ. ದುಡಿಮೆಗೆಂದು ಇಲ್ಲಿಂದ ಆನೆಗಳನ್ನು ಒಯ್ದರು. ಅವು ತಪ್ಪಿಸಿಕೊಂಡು, ಕಾಡು ಸೇರಿ, ಸ್ವತಂತ್ರವಾಗಿವೆ! ಜಿಂಕೆಗಳನ್ನು ಸಾಕಿದರು. ಅವು ಹೇರಳ ಸಂಖ್ಯೆಯಲ್ಲಿ ಅಭಿವೃದ್ಧಿ ಹೊಂದಿ ಓಡಾಡುತ್ತಿವೆ. ಕೆಲ ಕಾಡುಹಂದಿಗಳಿವೆ—ಎನ್ನುತ್ತಾರೆ. ಕೋತಿಗಳಿಲ್ಲ.

ಒಂದು ದ್ವೀಪ ಒಮ್ಮೆ ಹೊಗೆಯಾಡಿತು. ಅಲ್ಲಿ ಇನ್ನೂ ಕಾವು ಇದೆ.

ಆಗ್ನೇಯ ಏಷ್ಯದ ಆಯಕಟ್ಟಿನ ಸ್ಥಳದಲ್ಲಿರುವ ಈ ದ್ವೀಪಗಳ ಮೇಲೆ ಹಲವರಿಗೆ ಕಣ್ಣು. ೧೯೪೨–೪೫ರ ಅವಧಿಯಲ್ಲಿ ಇವು ಜಪಾನರ ವಶವಾದುವು. ಈಗಲೂ ಮೀನು ಹಿಡಿಯಲೆಂದು ಜಪಾನರು ಸಮೀಪಕ್ಕೆ ಬರುತ್ತಾರೆ. ಮಲಯದವರು, ಮಲಯೇಷ್ಯ ದವರು, ಚೀನೀಯರು – ಇವರಿಗೆಲ್ಲ ಈ ಮೀನು ರುಚಿ.

ಪೂರ್ವ ಪಾಕಿಸ್ತಾನದಿಂದ ಬಂದ ೯೦ ನಿರಾಶ್ರಿತ ಕುಟುಂಬಗಳಿಗೆ ಒಬ್ಬೊಬ್ಬರಿಗೆ ಐದೆಕರೆ ನೆಲವನ್ನೂ ಸಾಲವನ್ನೂ ಕೊಟ್ಟು, ಇಲ್ಲಿ ನೆಲೆಸಲು ಆಸ್ಪದವೀಯಲಾಗಿದೆ.

ಉದ್ಯಮ, ಉದ್ಯೋಗಗಳು? ಸಾಗುವಳಿ ಸ್ವಲ್ಪಮಟ್ಟಿಗಿದೆ. ೩೫ ವರ್ಷ ಹಳೆಯ 'ಸಾ ಮಿಲ್' ಇದೆ. ಅಷ್ಟೇ ಹಳೆಯ ಮಿನ್ಕೋ ಬೆಂಕಿಪೆಟ್ಟಿಗೆ ಕಾರಖಾನೆ. ಇನ್ನೊಂದು ಪ್ಲೈವುಡ್ ಕಾರಖಾನೆ. ಇದು ೪೦೦ ಕೋಟಿ ರೂಪಾಯಿ ಬೆಲೆ ಬಾಳುವ ಅರಣ್ಯ ಸಂಪತ್ತು ಇರುವ ಕಡೆ 'ಕಾಸಿನ ಮಜ್ಜಿಗೆ.' ದ್ವೀಪಗಳ ಈಗಿನ ಅರಣ್ಯ ಆದಾಯ ರೂಪಾಯಿ ಒಂದೂವರೆ ಕೋಟಿ ಮಾತ್ರ.

* * * * *

'ನಾಗರಿಕತೆ'ಯ ಚಂಚೂ ಪ್ರವೇಶದಿಂದ ಹಾನಿ ತಟ್ಟದಂತೆ ಎಚ್ಚರ ವಹಿಸಿ, ಈ ದ್ವೀಪಗಳ ಆರ್ಥಿಕ ಅಭಿವೃದ್ಧಿಯಾಗುವಂತೆ ಮಾಡುವುದು ಸಾಧ್ಯವೆ? ಇದು ಸಾಧ್ಯ – ಎನ್ನುತ್ತಾರೆ ಹೆಗಡೆಯವರು.

ಇದನ್ನು ಚರ್ಚಿಸಿ, ತಮ್ಮ ಸಲಹೆಗಳೊಂದಿಗೆ ಪ್ರಧಾನ ಮಂತ್ರಿಗೆ ಅವರು ಒಂದು ವರದಿ ನೀಡುತ್ತಾರೆ.

ಒಂದು ಘಂಟೆಯ ಕಾಲ, ಸುತ್ತಲೂ ಕುಳಿತಿದ್ದ ಶ್ರೋತೃಗಳನ್ನು ನುಡಿಚಿತ್ರ ದಿಂದ ಬೇರೆಯೇ ಪ್ರಪಂಚಕ್ಕೆ ಒಯ್ದಿದ್ದ ಹೆಗಡೆಯವರು ಮದರಾಸಿಗೆ ಬಂದು ಮುಟ್ಟಿ ದರು. ಅಲ್ಲಿಂದ ಮೈಸೂರಿಗೆ.

ವಸ್ತುಸ್ಥಿತಿಯ ನೆನಪಿಗಾಗಿ ಯಾರೋ ಅಂದರು:

"ನೀವು ಬೇರೆಯೇ ಹುದ್ದೆ ಸ್ವೀಕರಿಸುತ್ತೀರಿ – ಅಂತ...."

"ಮಾಜಿ ಮುಖ್ಯಮಂತ್ರಿ ಜತ್ತಿಯವರು ಲೆಫ್ಟಿನೆಂಟ್ ಗವರ್ನರ್ ಆಗಿರುವಾಗ ಮಂತ್ರಿ ಅಂಡಮಾನಿನ ಛೀಫ್ ಕಮಿಶನರ್ ಯಾಕಾಗಬಾರದು – ಅಂತಲೊ?"

—ಎಂದು ಹೆಗಡೆಯವರೇ ಪರಿಹಾಸ್ಯದ ಮರುಪ್ರಶ್ನೆ ಕೇಳಿ, ನಗೆಯ ತೆರೆ ಎಬ್ಬಿಸಿದರು.

೨೩–೨–೧೯೬೯



# ಬಡತನ, ಸಿರಿತನ...

**ಕಾ**ಲು ಶತಮಾನದ ಬಳಿಕ, ಹಿಂದೆ ನಡೆದ ದಾರಿಯನ್ನು ಮತ್ತೊಮ್ಮೆ ತುಳಿದು ಬಂದೆ.

ಬೆಂಗಳೂರಿನಿಂದ ಮಂಗಳೂರಿಗೆ; ಅಲ್ಲಿಂದ ಕಾಸರಗೋಡಿನ ದಾರಿಯಾಗಿ ನೀಲೇಶ್ವರಕ್ಕೆ; ಆ ಊರಿನಿಂದ ಕಣ್ಣಾನೂರಿನ ಹಾದಿ ಹಿಡಿದು ಕೊಡಗು ಸೀಮೆಗೆ; ಮೈಸೂರನ್ನು ಮುಟ್ಟಿ ಮರಳಿ ಬೆಂಗಳೂರಿಗೆ. ಮಲೆನಾಡು ಬಯಲು ಸೀಮೆಗಳ ವಿಸ್ತಾರವಾದೊಂದು ವೃತ್ತಕ್ಕೆ ಇದು ಪ್ರದಕ್ಷಿಣೆ.

ಬೇಸಗೆಯ ಕುಡಿನೋಟಕ್ಕೆ ಆಗಲೆ ತುತ್ತಾಗಿದ್ದ ಹವಾಮಾನ. ದುಡಿಯುವ ದೇಹಗಳಲ್ಲಿ ಇನ್ನು ಹೆಚ್ಚು ಬೆವರು; ದುಡಿಯದ ದೇಹಗಳಲ್ಲೂ ಬೆವರು. ನೆಲದ ಮೈಯಿಂದಲೇ ಕಮಟುವಾಸನೆ ಹೊರಸೂಸಲು ಆರಂಭ.

ಹಸುರು ಹಾಸನ ಶ್ರಮಗೀತದ ಪಲ್ಲವಿ ನುಡಿಯುತ್ತದೆ. ಇದು ಹಾಸನ–ಮಂಗಳೂರು ರೈಲು ನಿರ್ಮಾಣದ ಸಂಕಟ. ಎಷ್ಟೊಂದು ಹಳೆಯ ರೆಕಾರ್ಡ್! ವರ್ಷಗಳು ಉರುಳಿ ದಶಕಗಳಾದರೂ, ತಂತಿ ಕಡಿದು ತಂಬೂರಿ ಗೋರಿ ಕಂಡಿಲ್ಲ ಎನ್ನುವುದೊಂದೇ ಸಮಾಧಾನ. ಇವತ್ತಲ್ಲ ನಾಳೆ ಈ ರೈಲುದಾರಿ ಆಗಿಯೇ ಆಗುತ್ತದೆ. ಅಂದರೆ? ಇನ್ನೆಷ್ಟು ವರ್ಷ ತಗಲಬಹುದು? ದಯವಿಟ್ಟು ಯಾರೂ ಈ ಪ್ರಶ್ನೆ ಕೇಳಬಾರದು. ಪ್ರಾಯಶಃ ಮಂಗಳೂರಿನ ಸರ್ವಋತು ಬಂದರು ಮುಗಿಯುವ ವೇಳೆಗೆ ಗಿರಿಕಾನನಗಳ ನಡುವಿನಿಂದ ಜುಕು ಜುಕು ಬಂಡಿ ಸಾಗಬಹುದು.

ದಾರಿಯುದ್ದಕ್ಕೆ ಅಲ್ಲಲ್ಲಿ ಅಧಿಕಾರಿಗಳ ಗೂಡಾರಗಳು. ಭಾವೀ ರೈಲು ನಿಲ್ದಾಣಗಳ ಬೀಜಗಳು ಮೊಳಕೆಯೊಡೆದಿವೆ. ಗೊಬ್ಬರ ಹಾಕಿ ನೀರು ಹನಿಸುತ್ತಿರುವವರು ಮಲೆಯಾಳೀ ಕಾರ್ಮಿಕರು.

*　　*　　*　　*　　*

ಮಂಗಳೂರಿನಲ್ಲಿ ಮಣ್ಣು ಈಗ ತುಟ್ಟಿ. ಪಶ್ಚಿಮ ಕರಾವಳಿಯ ಭಾರಿ ಬಂದರು ನಿರ್ಮಾಣವಾಗುತ್ತಿರುವ – ಆಗಲಿರುವ – ನಗರವಲ್ಲವೆ? ಎಲ್ಲರೂ ಬರಲಿರುವ ನಾಳೆಯನ್ನು, ಆಗಲಿರುವ ಆರ್ಥಿಕಾಭಿವೃದ್ಧಿಯನ್ನು, ಇದಿರು ನೋಡುತ್ತಿದ್ದಾರೆ. ಗಾನ–ನೃತ್ಯಗಳ ನಿಶಾಜೀವನವೂ ಮಂಗಳೂರಿನಲ್ಲಿ ಮನೆ ಮಾಡಿದೆ; ಕೇರಳ ಸಂಸ್ಕೃತಿಯು ಪ್ರವಾಸಿಗಳಿಗಾಗಿ ಕಾದು ಕುಳಿತಿದೆ.

ಔದ್ಯೋಗಿಕ ಚಟುವಟಿಕೆಯ ಗೆಲಿ, ಮೇಲ್ಮೊಗವಾಗಿ ಸಾಗಲು ಇಲ್ಲಿ ಅಣಿಯಾಗಿದೆ. ಹಸಿರು ನಿಶಾನೆ ಯಾವಾಗ ಬೀಸುವುದೋ ಎಂದು ಕಾತರ.

ಭಾರೀ ನೌಕೆಗಳು ಹಡಗುಕಟ್ಟೆಯನ್ನು ಮುಟ್ಟಿ ನಿಲ್ಲುವುದು, ಘನಪ್ರಮಾಣದ ಆಮದು ರಫ್ತುಗಳಾಗುವುದು, ಯಾವಾಗ? ಇನ್ನೆಷ್ಟು ಕಾಲ ಬೇಕು? ಈ ಪ್ರಶ್ನೆಯನ್ನು ಯಾರೂ ಕೇಳಬಾರದು. ಪ್ರಾಯಶಃ ಕೂ–ಗಾಡಿ ಹಾಸನದಿಂದ ಇಳಿದು ಬರುವ ವೇಳೆಗೆ ಪಂಡೆಯ ಬಳಿ ಹಡಗಿನ ದೀಪರಾಶಿ ಹತ್ತಿಕೊಳ್ಳಬಹುದು.

ಹಿಂದೆ ಈ ನಗರಪಲ್ಲಿ ದಾರಿ ನಡೆಯುವುದು ಸುಲಭವಾಗಿತ್ತು. ಈಗಲೋ ಸಾಲುಗಟ್ಟಿ ಸಾಗುವ ವಾಹನಗಳ ನಡುವಿನಿಂದ ಪಾದಚಾರಿ ನುಸುಳಿ ಪಾರಾಗಬೇಕು.

*　　*　　*　　*　　*

ಪಶ್ಚಿಮ ಕರಾವಳಿಯುದ್ದಕ್ಕೂ ರಾಷ್ಟ್ರೀಯ ಹೆದ್ದಾರಿ. ಇದು ಸ್ವತಂತ್ರ ಭಾರತದ ಕೊಡುಗೆ.

ದಕ್ಷಿಣಾಭಿಮುಖವಾಗಿ ಕೇರಳದತ್ತ ಸಾಗಬಹುದು. ಕೆಲವೇ ಮೈಲುಗಳಾಚೆ ಗಡಿ ಪಹರೆ.

"ನಿಲ್ಲಿ!"

"ಯಾಕೆ?"

"ನಿಮ್ಮ ವಾಹನದಲ್ಲಿ ಕಳ್ಳಸಾಗಾಣಿಕೆಯ ಅಕ್ಕಿ ಇರಬಹುದು."

ನೋಡಿದರೆ ಸಂಭಾವಿತರ ಹಾಗೆ ಕಾಣುತ್ತೀರಿ; ಆಗ?

— ಸಹಿಮಾಡಿ, ಮುಂದುವರಿಯಬಹುದು.

ಪೋಲೀಸರಲ್ಲಿ ಒಳ್ಳೆಯವರಿರುತ್ತಾರೆ. ಒಳ್ಳೆಯವರಲ್ಲದವರು ಕೂಡಾ. ಯಾರೋ ಅಂದರು: ಒಂದು ಲಾರಿ ಹೇರು ಆ ಕಡೆಗೆ ಹೋಗಲು ಐದುನೂರು ರೂಪಾಯಿ ಕಾಣ್ಕೆ ತೆತ್ತರಾಯಿತು.

ಅಂಥ ಲಾರಿ ತಮ್ಮ ರಾಜ್ಯದೊಳಗೆ ಬಂದಿತೆಂದು ಕೇರಳ ಸರ್ಕಾರಕ್ಕೆ ಸಂತೋಷವೇ. ಎಷ್ಟು ಹುಲುಸಾಗಿ ಭತ್ತದ ಸಸಿಗಳು ಅಲ್ಲಿ ಬೆಳೆದರೂ ಅವರಿಗೆ ಸಾಲದು. ನೆಲ ಕಡಮೆ. ಜನ ಹೆಚ್ಚು. ಅಕ್ಕಿ, ಅಕ್ಕಿ ಎಂದು ಕೇಂದ್ರದೊಡನಂತೂ ನಿರಂತರ ಯುದ್ಧ.

ಮೊದಲಾದರೆ ರೈಲುಗಾಡಿಯೊಂದೇ ಇತ್ತು. ಮದರಾಸು ಆಧಿಪತ್ಯದ ಗವರ್ನರ್ ದೊರೆ ಮಲಬಾರನ್ನು ದಾಟಿ ಹಿಂದೆ ಮಂಗಳೂರಿಗೆ ಬರುತ್ತಿದ್ದುದು ಈ ದಾರಿಯಾಗಿ. ಈಗ ರೈಲಿನ ಜತೆಗೆ ರಾಷ್ಟ್ರೀಯ ಹೆದ್ದಾರಿಯೂ ಇದೆ.

ಮಂಜೇಶ್ವರ ಗೋವಿಂದ ಪೈಯವರು ಕನ್ನಡದ ರಾಷ್ಟ್ರಕವಿಯಾದರೂ, ಕೇರಳದವರಾಗಿ ಸತ್ತರು. ಕಾಸರಗೋಡು: ಭಾಷಾವಾರು ಪ್ರಾಂತ ರಚನೆಗೆ ಬಲಿಯಾಗಿ ಅಸಹಾಯಕವಾಗಿರುವ ಜನ. ಚಂದ್ರಗಿರಿ ನದಿ. ಹಿಂದೆ ಕೇರಳ – ತುಳುನಾಡುಗಳಿಗೆ ಇದು ಗಡಿಯಾಗಿತ್ತು. ಕಾಞಂಗಾಡ್, ನೀಲೇಶ್ವರ. ನೀಲ ಮುನಿ ಇಲ್ಲಿ ಈಶ್ವರ ದೇವರನ್ನು ಪ್ರತಿಷ್ಠಾಪಿಸಿದ. ಊರು ತಲಪಲು ನದಿಗೆ ಅಡ್ಡವಾಗಿ ಈಗ ಸೇತುವೆ. ಕುಡಿಯಲು ಶೋಧಿಸಿದ ಕೊಳಾಯಿ ನೀರು.

ಜಾಗತಿಕ ಯುದ್ಧ ನಡೆದಿದ್ದಾಗಲೂ ತಿಂಗಳಿಗೆ ಮೂರು ರೂಪಾಯಿ ತೆತ್ತರೆ ಇಲ್ಲಿನ ವಿದ್ಯಾರ್ಥಿನಿಲಯದಲ್ಲಿ ಊಟ ಸಿಗುತ್ತಿತ್ತು. ಕಾಸರಗೋಡು – ಪುತ್ತೂರು ತಾಲೂಕುಗಳಿಂದ ಕನ್ನಡದ ಹುಡುಗರು ನೂರುಗಟ್ಟಲೆಯಲ್ಲಿ ವಿದ್ಯಾರ್ಜನೆಗೆಂದು ಇಲ್ಲಿನ ರಾಜರ ಹೈಸ್ಕೂಲಿಗೆ ಬರುತ್ತಿದ್ದರು. ಈಗ ಅಂತಹ ಅಗತ್ಯವಿಲ್ಲ. ಎಲ್ಲೆಲ್ಲೂ ಪ್ರೌಢ ಶಾಲೆಗಳಿವೆ.

ನೀಲೇಶ್ವರದಾಚೆಗೆ ಚರ್ವತ್ತೂರು. ಸಮೀಪದಲ್ಲೇ ಚಿರಸ್ಮರಣೀಯ ಕಯ್ಯೂರು. ಈ ನದಿಗೂ ಸೇತುವೆ.

ಉದಿಸುತ್ತಿರುವ ಸೂರ್ಯ ತೆಂಗುಮಾವುಗಳೆಡೆಯಿಂದ ಹೊಂಗಿರಣಗಳನ್ನು ತೂರಿಸೆಯುತ್ತಾನೆ. ಜನ ನಸುಕಿನಲ್ಲೇ ಕಾರ್ಯೋನ್ಮುಖರಾಗಿದ್ದಾರೆ. ಹೆಂಗಸರು, ಗಂಡಸರು.... ಅಲ್ಲಿ ಇಲ್ಲಿ ನುಣುಪು ಬಿಳಿಮರಳು.

* * * * *

ಇರಟ್ಟಿದಾರಿಯಾಗಿ ಪಶ್ಚಿಮದ ಪರ್ವತ ಶ್ರೇಣಿಯನ್ನೇರಿ ವೀರರಾಜ ಆಳಿದ ಸೀಮೆಗೆ.

ಕೇರಳದ ನಿಸರ್ಗಸೌಂದರ್ಯ ನಿತ್ಯನೂತನ. ತೆರೆ ಸರಿದಾಗ ಕಾಣುವುದು ಹಿಂದಿನದೇ ಕಡುಬಡತನ. ಅಲ್ಲಿ ಇಲ್ಲಿ ಹೆಪ್ಪು ಕಟ್ಟಿದ ಸಿರಿತನ.

ಪತ್ರಿಕೆಗಳಲ್ಲಿ ಕಣ್ಣುತೆರೆಸುವ ವಾರ್ತೆ. ರಾಷ್ಟ್ರೀಯ ಮಾದರಿ ಪರಿಶೀಲನಾ ಸಂಸ್ಥೆಯ ವರದಿ : " ಭಾರತದ ಮೂರರಲ್ಲೊಂದು ಭಾಗ ಜನತೆ ಕಡುಬಡತನದಲ್ಲಿ ಜೀವಿಸುತ್ತಾರೆ. ಗ್ರಾಮಾಂತರ ಪ್ರದೇಶದಲ್ಲಿ ಜನರ ಮಾಸಿಕ ವೆಚ್ಚ ರೂ. ೧೫ ; ನಗರಗಳಲ್ಲಿ ರೂ. ೨೪. ಕಳೆದ ೨೦ ವರ್ಷಗಳಲ್ಲಿ ಆರ್ಥಿಕ ಬೆಳವಣಿಗೆ ಗಮನಾರ್ಹವಾಗಿ ಆಗಿದ್ದರೂ ಈ ಪರಿಸ್ಥಿತಿ ಬದಲಾಗಿಲ್ಲ."

ಬಡತನದಲ್ಲಿ ' ಹಿರಿತನ' ಯಾರದು ?

"ದಾರಿದ್ರ್ಯದ ಪಟ್ಟಿಯಲ್ಲಿ ಪ್ರಥಮ ಸ್ಥಾನ ಕೇರಳಕ್ಕೆ. ಅಲ್ಲಿ ಶೇಕಡಾ ೪೪.೪ ರಷ್ಟು ಜನ ಬಡವರು."

ಎರಡನೆಯ ಸ್ಥಾನ ಮೈಸೂರಿಗೆ. ನಮ್ಮಲ್ಲಿ ಶೇಕಡಾ ೪೪ ರಷ್ಟು ಬಡವರು.

ಇದೂ ಸೋದರತೆಯೋ ಅಲ್ಲವೇ ? !

೨–೩–೧೯೬೯

# ರಾಷ್ಟ್ರ ಶಕಟದ ಇಂಧನ

ಅಧ್ಯಾಪಕರ ವಿರುದ್ಧ ಪ್ರದರ್ಶನ, ಉಪಾಧ್ಯಾಯರಿಗೆ ವರ್ಗಾವಾಯಿತೆಂದು ಮುಷ್ಕರ, ಕುಲಪತಿಗೆ ಘೇರಾವ್, ಪ್ರಿನ್ಸಿಪಾಲರ ಬಗೆಗೆ ಅನುಕಂಪ ತೋರಿಸುವ ಹೋರಾಟ, ವಸತಿಗೃಹದ ಮೇಲೆ ಹಲ್ಲೆ, ಬೀದಿಗಳಲ್ಲಿ ಮೆರವಣಿಗೆ – ಏನು ಇದರ ಅರ್ಥ? ಬೆಂಕಿಯನ್ನುರಸುತ್ತ ಹೊರಟಿರುವ ಅಸಹನೆಯ ಸಿಡಿಮದ್ದು – ಯಾರೀತ?

ಲೋಕದ ಹಲವಾರು ದೇಶಗಳಲ್ಲಿ ಯುವಜನಾಂಗ – ವಿದ್ಯಾರ್ಥಿಗಳು, ಎಳೆಯರು – ಬೀದಿಗಿಳಿದಿದ್ದಾರೆ, ಒಂದಲ್ಲ ಒಂದು ಕಾರಣಕ್ಕಾಗಿ. ಇವರು ಹಿಡಿದಿರುವುದು ಅಡ್ಡದಾರಿಯೊ? ನೇರ ದಾರಿಯೊ? ಬಾಹುಗಳ ಬೀಸಾಟಕ್ಕೆ, ಬಲಿಷ್ಠ ಗಂಟಲಿನ ಕೂಗಾಟಕ್ಕೆ, ದೇಶಗಳ ಭಾಷೆಗಳ ಪರಿವೆ ಇಲ್ಲ. ಬಣ್ಣಗಳ ಆತಂಕವೂ ಇಲ್ಲ.

ಬಯಲನ್ನು ಆಕ್ರಮಿಸಿರುವ ಈ ಶಕ್ತಿಯ ತೂಕವೇನು? ಗಾತ್ರವೆಷ್ಟು?

ತಜ್ಞರದೊಂದು ಸಮಿತಿ ಅದನ್ನು ಕುರಿತು ವಿಶ್ಲೇಷಣೆ ನಡೆಸಿದೆ. ಅದರ ವರದಿ ಗಮನಾರ್ಹ.

* * * *

ಮೂವತ್ತೊಂದು ರಾಷ್ಟ್ರಗಳ ಪ್ರತಿನಿಧಿಗಳುಳ್ಳ ಯುಕ್ತರಾಷ್ಟ್ರ ಸಮಿತಿ ಇದು. ಸಾಮಾಜಿಕ ಬೆಳವಣಿಗೆಯ ಆಯೋಗ. ೮೦ ಪುಟಗಳ ವರದಿ ಸಿದ್ಧವಾದುದು ಯುಕ್ತ ರಾಷ್ಟ್ರ ಸಂಘದ ವಿವಿಧ ಶಾಖೆಗಳ ನೆರವಿನಿಂದ.

ಆ ವರದಿಯ ಪ್ರಕಾರ, ೧೯೬೮ರಲ್ಲಿ ೫೦ ರಾಷ್ಟ್ರಗಳಲ್ಲಿ ವಿದ್ಯಾರ್ಥಿ ಮತ ಪ್ರದರ್ಶನಗಳಾದುವು. ಗಮನ ಸೆಳೆಯುವ ಈ ಕಲರವ, ತಮ್ಮ ಮಾತನ್ನು ಇತರರು ಕೇಳಲೇಬೇಕೆಂಬ ಹಕ್ಕಿನ ಸಾಧನೆ, – ಈ ಚಳುವಳಿ ಬೆಳೆಯುತ್ತ ಹೋಗುತ್ತದೆ. ಶಿಕ್ಷಣಕ್ಕಾಗಿ ಎಳೆಯರ ಬಯಕೆ ಹೆಚ್ಚಿದಂತೆ, ರಾಷ್ಟ್ರೀಯ ವ್ಯವಹಾರಗಳಲ್ಲಿ ತಮ್ಮ ಬಲವನ್ನು ಯುವಕರು ಮನಗಾಣತೊಡಗಿದಂತೆ ಅವರ ಹೋರಾಟ ತೀವ್ರಗೊಳ್ಳುತ್ತದೆ.

ಸಮಾಜದ ಆಗುಹೋಗುಗಳ ಮೇಲೆ ಕಿರಿಯರು ಪ್ರಭಾವ ಬೀರುವುದು ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲೂ ಕಂಡು ಬರುತ್ತದೆ, ಹೊಂದುತ್ತಿರುವ ರಾಷ್ಟ್ರಗಳಲ್ಲೂ ಕಂಡು ಬರುತ್ತದೆ.

'ಸಮಾಜವಿರೋಧಿ' ಎಂದು ಸುಲಭವಾಗಿ ಬಣ್ಣಿಸಲ್ಪಡುವ ಈ ವರ್ತನೆ, ದುಷ್ಪ್ರವೃತ್ತಿಗಳು, ಹೆಚ್ಚು ಕಡಮೆ ಎಲ್ಲ ರಾಷ್ಟ್ರಗಳಲ್ಲೂ ಇವೆ. ನಗರ ಜೀವನಕ್ಕೆ ವಿದ್ಯಾರ್ಥಿಗಳು ಒಳಗಾಗುತ್ತಿರುವ ಕಡೆಗಳಲ್ಲೆಲ್ಲ ಈ ಲಕ್ಷಣ ಕಂಡುಬರುತ್ತದೆ.

ರಾಷ್ಟ್ರಸಂಪದಭಿವೃದ್ಧಿ ಹೆಚ್ಚಿದಂತೆಲ್ಲ ಯುವಕರು, ರಾಷ್ಟ್ರದ ವ್ಯವಹಾರಗಳಲ್ಲಿ ತಮ್ಮ ಸಕ್ರಿಯ ಪಾತ್ರ ಇರಲೇಬೇಕೆಂದು ಕೇಳುತ್ತ ಹೋಗುತ್ತಾರೆ.

ಈ ರೀತಿ ಭಾಗವಹಿಸಬೇಕೆನ್ನುವ ಆಗ್ರಹ ಕಿರಿಯ ಜನಾಂಗದ ಎಲ್ಲ ಹಂತಗಳಲ್ಲೂ ಕಂಡುಬರುತ್ತದೆ. "ಆಡಳಿತಗಾರರ ತೀರ್ಮಾನಗಳು ತಮಗೆ ಒಪ್ಪಿಗೆಯಾಗದಿದ್ದರೆ ಉಚ್ಚಶಿಕ್ಷಣ ಪಡೆಯುವವರು ತಮ್ಮ ವಿಶ್ವವಿದ್ಯಾನಿಲಯದ ಜೀವನವನ್ನು ಛಿದ್ರಗೊಳಿಸುವುದಕ್ಕೂ ಹಿಂಜರಿಯುವುದಿಲ್ಲ. ಬೀದಿಗಿಳಿದು ಮೆರವಣಿಗೆ ಸಾಗಲು ಎಲ್ಲ ಕ್ಷೇತ್ರಗಳ ಕಿರಿಯರೂ ಸಿದ್ಧ. ಅವರ ಅಭಿಪ್ರಾಯಗಳು ಮತದಾರರಿಗೆ, ಬಹುಸಂಖ್ಯಾಕರಿಗೆ, ಸರಕಾರಕ್ಕೆ ಬೇರೆ ಯಾರಿಗೂ ಸಮ್ಮತವಾಗದಿರಬಹುದು; ಆದರೂ ತಮ್ಮ ಧ್ವನಿಯನ್ನು ಕೇಳಿಸಿಯೇ ತೀರುವ ಛಲ ಅವರಿಗೆ. ಅದಕ್ಕೋಸ್ಕರ ಪುಂಡಾಟ ನಡೆಸುವುದಕ್ಕೂ ಅವರು ಹಿಂಜರಿಯುವುದಿಲ್ಲ."

ಈ ಚಳುವಳಿಯಲ್ಲಿ ಒಂದು ಬಗೆಯ ಒಗ್ಗಟ್ಟಿದೆ. ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ಮೇಲ್ಪಂಗ್ತಿಯನ್ನು ಹೈಸ್ಕೂಲು – ಸೆಕೆಂಡರಿ ಸ್ಕೂಲುಗಳ ವಿದ್ಯಾರ್ಥಿಗಳೂ ಅನುಸರಿಸುತ್ತಾರೆ; ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳೂ ಅನುಸರಿಸುತ್ತಾರೆ.

ಯಾವುದೇ ಒಂದು ಗುಂಪು ನಿರ್ದಿಷ್ಟ ಗುರಿಯೊಂದನ್ನು ಮುಂದಿಟ್ಟು ಕಾರ್ಯಪ್ರವೃತ್ತವಾಗುತ್ತದೆ ಎನ್ನೋಣ. ಆ ಗುರಿಯೊಡನೆ ಏನೇನೂ ಸಂಬಂಧವಿಲ್ಲದ ಇತರ ಗುಂಪುಗಳ ನಿಷ್ಕ್ರಿಯ ನೆರವೂ ಅದಕ್ಕೆ ದೊರೆಯುತ್ತದೆ. ಒಮ್ಮೊಮ್ಮೆ ಆ ಸಹಕಾರ ಸಕ್ರಿಯವಾಗುವುದೂ ಉಂಟು.

* * * * *

ಯುವ ಜನಾಂಗದ ಈ ನಡವಳಿಕೆಯಿಂದ ಆಗುವ ಒಳಿತೆಷ್ಟು? ಕೆಡುಕೆಷ್ಟು?

ತಜ್ಞರ ಪ್ರಕಾರ:

"ಸಾಮಾಜಿಕ ವ್ಯವಹಾರಗಳಲ್ಲಿ ಯುವಜನರ ಹೆಚ್ಚುತ್ತಲಿರುವ ಪ್ರಭಾವ, ಅವರ ಸ್ವಾಭಾವಿಕ ಆತುರ, ಅಸಹನೆ ಇವುಗಳಿಂದ ಸತ್ಪರಿಣಾಮಗಳೂ ಉಂಟಾಗಿವೆ, ದುಷ್ಪರಿಣಾಮಗಳೂ ಉಂಟಾಗಿವೆ."

ಎಳೆಯರ ಮೇಲೆ ಹಿರಿಯರ ಹಿಡಿತ ತಪ್ಪುತ್ತಿರುವುದು, ವ್ಯಕ್ತಿತ್ವವನ್ನು ಮುಚ್ಚಿಬಿಡುವಂತಹ ಸಾಮೂಹಿಕ ಜೀವನದ ಒತ್ತಡ ಹೆಚ್ಚುತ್ತಲಿರುವುದು – ಈ ಬಗೆಯ ಮನಶ್ಶಾಸ್ತ್ರಕ್ಕೆ ಸಂಬಂಧಿಸಿದ ಕಾರಣಗಳೂ ಈ ಅಶಾಂತಿಯ ಹಿನ್ನೆಲೆಯಲ್ಲಿ ಇವೆ ಎಂಬುದು ಸ್ಪಷ್ಟ. ಆದರೆ ಮುಖ್ಯ ಅಂಶಗಳು ಸೂಕ್ಷ್ಮತರವಾಗಿವೆ. ನೈತಿಕ ಮಟ್ಟಗಳು ತೀವ್ರಗತಿಯಿಂದ ಬದಲಾಗುತ್ತಿವೆ. "ನ್ಯಾಯ ಅನ್ಯಾಯಗಳ ಕಲ್ಪನೆಯ ಬಗೆಗೆ ಅನಿಶ್ಚಿತ ನಿಲುವು ತಳೆದ ವ್ಯಕ್ತಿಗಳ ಎರಡನೆಯ ಅಥವಾ ಮೂರನೆಯ ಪೀಳಿಗೆ ಈಗ ಕಾರ್ಯಾಚರಣೆ ಮಾಡುತ್ತಿದೆ."

"ಸಹಿಷ್ಣುತೆ ಹೆಚ್ಚಿದೆಯಾದರೂ, ಅನಿಶ್ಚಯತೆಯ ಕಾರಣದಿಂದ ಉಂಟಾಗುವ ಅಭಪ್ರತೆಯ ಭಾವನೆಯೂ ಕಾತರವೂ ತೀವ್ರಗೊಂಡಿವೆ."

* * * * *

ಮೇಲಿನದೆಲ್ಲ ಜೀರ್ಣಿಸಿಕೊಳ್ಳಲು ಆಹಾರ – ತಾಯ್ತಂದೆಯರಿಗೆ, ವಿದ್ಯಾದಾನ ಮಾಡುವವರಿಗೆ, ಆಳುವವರಿಗೆ.

ಖಂಡನೆ, ಭರ್ತ್ಸನೆ – ಬಹಳ ಸುಲಭ. ಸಂಕಟವನ್ನು ಅರ್ಥ ಮಾಡಿಕೊಂಡು ಯೋಗ್ಯ ಕಾರ್ಯಕ್ರಮಗಳನ್ನು ರೂಪಿಸುವುದು ಕಷ್ಟ.

ರಾಷ್ಟ್ರದ – ಸಮಾಜದ – ವ್ಯವಹಾರಗಳಲ್ಲಿ ಯುವಕರು ವಹಿಸುವ ಪಾತ್ರವನ್ನು ಕಡೆಗಣಿಸುವಂತಿಲ್ಲ. ಯಾವುದೇ ಬೆಳವಣಿಗೆಗೆ ಆ ಪಾತ್ರ ಅನಿವಾರ್ಯ ಎಂದರೆ ಸಾಲದು. ಅದು ಅಪೇಕ್ಷಣೀಯ ಎನ್ನುವಂತಾಗಬೇಕು. ಯುವಕರು ನಿಗಿನಿಗಿ ಕೆಂಡ; ಬಳಿ ಸಾರಿ ಮೈ ಕಾಯಿಸಿಕೊಳ್ಳೋಣ – ಎನ್ನುವ ಸ್ವಾರ್ಥ ಸಲ್ಲದು. ರಾಷ್ಟ್ರ ಶಕಟದ ಚಲನೆಗೆ ಇಂಧನವಾಗಿ ಯುವಶಕ್ತಿ ಬಳಸಲ್ಪಡಬೇಕು.

೩೦–೩–೧೯೬೯

# ಸಾಮಾಜಿಕ ಪರಿವರ್ತನೆಯಲ್ಲಿ ಬಲ್ಲಿದರ ಪಾತ್ರ

ಆಗುತ್ತಲಿರುವ ಅಥವಾ ಆಗಬೇಕಾದ ಸಾಮಾಜಿಕ ಬದಲಾವಣೆಗಳಲ್ಲಿ ಬಲ್ಲಿದರು ವಹಿಸಬಹುದಾದ ಅಥವಾ ವಹಿಸಬೇಕಾದ ಪಾತ್ರ ಯಾವುದು ?

ಸಮಾಜ ನಿಂತ ನೀರೆ? ಹರಿಯುವ ನದಿಯೆ? ಚಲನೆಯ ಜುಳು ಜುಳು ಸಪ್ಪಳವೂ ಇದೆ. ಕಟ್ಟಿಕೊಂಡ ನೀರಿನ ಗಬ್ಬು ವಾಸನೆಯೂ ಇದೆ. ಈ ವಿಪರ್ಯಾಸಕ್ಕೆ ಏನು ಕಾರಣ.

ಮೂಲಭೂತವಾಗಿ ಮಾನವನ ಇರುವಿಕೆಯನ್ನು, ಅವನು ನಡೆಯಬೇಕಾದ ದಾರಿಯನ್ನು ನಿರ್ಧರಿಸುವುದು ಆಡಳಿತವರ್ಗ. ನಮ್ಮ ರಾಜ್ಯಾಂಗವೂ ಪಂಚವಾರ್ಷಿಕ ಯೋಜನೆಗಳೂ ನಿರ್ಧರಿಸಿರುವ ಗುರಿ ಏನು ಸಾಧಾರಣವಾದದ್ದೆ?

ಬಲಿಷ್ಠವಾದ, ಒಗ್ಗಟ್ಟಿನ, ಜಾತ್ಯಾತೀತವಾದ, ಸಮಾಜವಾದಿ ಹಾಗೂ ಪ್ರಜಾ ಪ್ರಭುತ್ವವಾದಿಯಾದ ರಾಷ್ಟ್ರದ ನಿರ್ಮಾಣ. ಜನತೆಗೆ ಉತ್ತಮ ಜೀವನ ಮಟ್ಟವನ್ನು ನೀಡುವುದಕ್ಕಾಗಿ ಬೆಳೆಯುತ್ತಿರುವ ಹಾಗೂ ಸಮೃದ್ಧವಾದ ಅರ್ಥವ್ಯವಸ್ಥೆಯ ರಚನೆ. ಸಮಾನತೆ ಹಾಗೂ ಸಾಮಾಜಿಕ ನ್ಯಾಯದ ತಳಹದಿಯ ಮೇಲೆ ನೂತನ ಸಮಾಜದ ಸ್ಥಾಪನೆ.

ಉದಾತ್ತ ಧ್ಯೇಯ: ಉನ್ನತ ಆದರ್ಶ!

ಇವುಗಳ ಸಾಧನೆಗಾಗಿ ಈ ಎರಡು ದಶಕಗಳಲ್ಲಿ ಕೈಗೊಂಡಿರುವ ಕ್ರಮಗಳೇನು? ಕ್ರಮಿಸಿರುವ ಮಾರ್ಗವೆಷ್ಟು? ನಡೆಯುತ್ತ ಎಡವಿದ್ದರೆ ಅದು ಎಷ್ಟರ ಮಟ್ಟಿಗೆ?

ಹಲವು ಜನ ಪರಿಣತರು, ಪರೀಕ್ಷಕರು ಹಗಲುರಾತ್ರೆ ದುಡಿದು ಸಿದ್ಧಪಡಿಸಬೇಕಾದ ಪೃಥಕ್ಕರಣ ಇದು.

* * * * *

ಕತ್ತಲು ಬೆಳಕುಗಳ ಬಿಸಿಲು ಮಳೆಗಳ ರಾಷ್ಟ್ರೀಯ ಬಯಲಲ್ಲಿ ಒಂದು ಅಂಶ ಸ್ಫುಟವಾಗಿದೆ. ಅದು, ಆಡಳಿತಗಾರ ಹಾಗೂ 'ಬಲ್ಲಿದ'ರ ನಡುವೆ ಸೇತುವೆ ಇಲ್ಲ ಎಂಬುದು.

'ಬಲ್ಲಿದ'ರೆಂದರೆ ವಿಶ್ವವಿದ್ಯಾಲಯಗಳ ಗುರುಗಳಿರಬಹುದು, ಸಮಾಜದ ಸುಶಿಕ್ಷಿತರಿರಬಹುದು, ಬುದ್ಧಿಜೀವಿಗಳಿರಬಹುದು. ಇವರ ಹಾಗೂ ಸರಕಾರದ ನಡುವೆ ಇರುವುದು ಕಂದಕ. ಎರಡೂ ಬದಿಗಳವರು ಆಗೊಮ್ಮೆ ಈಗೊಮ್ಮೆ ಪರಸ್ಪರ ಮುಖ ನೋಡುತ್ತಾರೆ, ಆದರೆ ಮಾತನಾಡುವುದಿಲ್ಲ.

'ಬಲ್ಲಿದ'ರ ಅನುಭವ, ನಿರೀಕ್ಷಣೆ, ಸಾಮರ್ಥ್ಯ ಆಡಳಿತಗಾರನ ಮುಂದಿರುವ ಗುರಿಗಳ ಸಾಧನೆಗಾಗಿ ವಿನಿಯೋಗವಾಗುವುದಿಲ್ಲ – ಯಾಕೆ ?

ಪೂರ್ವದೂಷಿತ ಅಭಿಪ್ರಾಯಗಳು ಕೆಲವು ಇಂತಹ ಪರಿಸ್ಥಿತಿಗೆ ಕಾರಣ ಎನ್ನಬಹುದು. ಮುಖ್ಯವಾದುವು: ಆಡಳಿತಗಾರನಿಗೆ ಸಂದರ್ಭ ಸಾಧನೆಯೇ ಅತಿ ಮಹತ್ವದ್ದು ಎನ್ನುವುದು; 'ಬಲ್ಲಿದ' ಪ್ರಾಯೋಗಿಕ ವ್ಯಕ್ತಿಯಲ್ಲ ಎಂಬುದು.

ಆಡಳಿತಸೂತ್ರ ವಹಿಸಿದವನಲ್ಲಿ ಅಸಹನೆ ಇರಬಹುದು. ಕಾರಣ, ಎರಡು ಚುನಾವಣೆಗಳ ನಡುವಣ ಅವಧಿಯಲ್ಲಿ ಅವನು ಒಂದಷ್ಟು ಮಾಡಿತೋರಿಸಬೇಕು. ಮತದಾರರು ಇರಿಸಿದ ವಿಶ್ವಾಸಕ್ಕೆ ತಾನೂ ತನ್ನ ಪಕ್ಷವೂ ಸತ್ಪಾತ್ರ ಎಂದು ಮನಗಾಣಿಸಿಕೊಡಬೇಕು. ಹೀಗಾಗಿ, ಯೋಜನೆಗಳನ್ನು ಕೃತಿಗಿಳಿಸುವ ಅಧಿಕಾರಿಗಳ ಮೇಲೆಯೇ ಅವನ ಅವಲಂಬನ.

ಪರಿಣಾಮ, ಸಮಾಜವನ್ನು ರೂಪಿಸುವ ವಿಷಯದಲ್ಲಿ ತನ್ನ ಪಾತ್ರವೇನೂ ಇಲ್ಲ ಎಂಬ ಭಾವನೆ ಪ್ರಾಧ್ಯಾಪಕನಲ್ಲಿ ಬೇರೂರುವುದು. ತಾನಾಯಿತು, ತನ್ನ ತರಗತಿಯಾಯಿತು........

* * * * *

ಈ ದೇಶದಲ್ಲಿ ವಿಶ್ವವಿದ್ಯಾನಿಲಯಗಳು ಸ್ಥಾಪನೆಯಾದಾಗ ಆಳುವ ವರ್ಗಕ್ಕೆ ಬೇಕಾದ ಸುಶಿಕ್ಷಿತರನ್ನು ಒದಗಿಸುವುದೇ ಅವುಗಳ ಗುರಿಯಾಗಿತ್ತು. ಯೋಗ್ಯ ವಿದ್ಯಾರ್ಥಿಗಳನ್ನು ಪದವೀಧರರನ್ನಾಗಿ ಮಾಡಿ ಹೆಬ್ಬಾಗಿಲಿನಾಚೆಗೆ ಕಳುಹಿಸಿದರಾಯಿತು ಅವುಗಳ ಕೆಲಸ.

ಆ ಮಾತು ಇಂದಿನ ಸ್ಥಿತಿಗೆ ಅನ್ವಯಿಸುವುದಿಲ್ಲ.

ಕೊಠಾರಿ ಆಯೋಗ 'ಶಿಕ್ಷಣ ಮತ್ತು ರಾಷ್ಟ್ರೀಯ ಅಭಿವೃದ್ಧಿ' ಯನ್ನು ಕುರಿತ ತನ್ನ ವರದಿಯಲ್ಲಿ ವಿಶ್ವವಿದ್ಯಾನಿಲಯಗಳ ಬಗೆಗೆ ಹೀಗೆ ಹೇಳಿದೆ:

೧. ಹೊಸ ಜ್ಞಾನವನ್ನು ಅರಸುವುದು, ಕರಗತ ಮಾಡುವುದು; ಉತ್ಸಾಹದಿಂದ, ನಿರ್ಭಯವಾಗಿ ಸತ್ಯದ ಶೋಧನೆಯಲ್ಲಿ ತೊಡಗುವುದು; ಹಿಂದಿನ ಜ್ಞಾನವನ್ನು ಈಗಿನ ಅವಶ್ಯಕತೆ ಹಾಗೂ ಸಂಶೋಧನೆಗಳ ಬೆಳಕಿನಲ್ಲಿ ತಿಳಿಯಹೇಳುವುದು.

೨. ಜೀವನದ ಎಲ್ಲಾ ಹಂತಗಳಲ್ಲೂ ಯೋಗ್ಯ ನಾಯಕತ್ವವನ್ನು ಒದಗಿಸುವುದು.

೩. ಕೃಷಿ, ಕಲೆ, ವೈದ್ಯಕೀಯ, ವಿಜ್ಞಾನ, ತಾಂತ್ರಿಕತೆಗಳಲ್ಲಿ ತರಬೇತು ಪಡೆದ, ಅದೇ ವೇಳೆ ಸಾಮಾಜಿಕ ಧ್ಯೇಯದ ಭಾವನೆಯನ್ನು ಹೊಂದಿ ಸುಸಂಸ್ಕೃತ ವ್ಯಕ್ತಿಗಳೂ ಆಗಿರುವ, ಸಮರ್ಥ ಯುವಕ ಯುವತಿಯರನ್ನು ಸಮಾಜಕ್ಕೆ ಒದಗಿಸುವುದು.

೪. ಜ್ಞಾನದ ಪ್ರಸಾರದ ಮೂಲಕ ಸಮಾನತೆ ಹಾಗೂ ಸಾಮಾಜಿಕ ನ್ಯಾಯದ ವರ್ಧನೆಗೆ ಶ್ರಮಿಸುವುದು.

೫. ವ್ಯಕ್ತಿಗಳಲ್ಲೂ ಸಮಾಜದಲ್ಲೂ 'ಒಳ್ಳೆಯ ಬದುಕು' ರೂಪುಗೊಳ್ಳಲು ಬೇಕಾದ ಪ್ರವೃತ್ತಿಗಳನ್ನು ಮೌಲ್ಯಗಳನ್ನು ಅಧ್ಯಾಪಕರಲ್ಲೂ ಮತ್ತು ವಿದ್ಯಾರ್ಥಿಗಳಲ್ಲೂ ಅವರ ಮೂಲಕ ಸಮಾಜದಲ್ಲೂ, ಹೆಚ್ಚಿಸುವುದು.

ಸುಸ್ಪಷ್ಟ. ಒಪ್ಪಿಕೊಳ್ಳುವ ಮಾತು.

* * * * *

ಮೇಲಿನ ಪಾತ್ರವನ್ನು ವಿಶ್ವವಿದ್ಯಾಲಯಗಳು ನಿರ್ವಹಿಸುತ್ತವೆಯೆ? ತರಗತಿಗಳ ಹೊರಗೆ ವಿದ್ಯಾಮಂದಿರದ ಆವರಣದ ಹೊರಗೆ ತಮ್ಮ ಹೊಣೆಗಾರಿಕೆ ಇದೆ ಎಂಬುದನ್ನು ಪ್ರಾಧ್ಯಾಪಕರು ಒಪ್ಪುವರೆ? ಒಪ್ಪುವಮಾತೇ ಇಲ್ಲ, ಅದು ಅವರ ದೃಢ ನಂಬುಗೆ ಎನ್ನುವದಾದರೆ, ಆ ನಂಬುಗೆಯಂತೆ ಅವರು ನಡೆದುಕೊಳ್ಳುತ್ತಿದ್ದಾರೆಯೆ? ಆಂತರಿಕ ಇಂಧನ, ಬಾಹ್ಯ ಒತ್ತಡಗಳಿಗೆ ಸಿಲುಕಿ ಆರ್ಥಿಕವಾಗಿ, ಸಾಮಾಜಿಕವಾಗಿ ಸಮಾಜದಲ್ಲಿ ಏನು ಬದಲಾವಣೆಗಳಾಗುತ್ತಿವೆ? 'ಸಮಾಜ' ಎನ್ನುವ ಪದಕ್ಕಾದರೂ ಈಗಿನ ಅರ್ಥ ಏನು? ರಾಜಕೀಯ ಸ್ಥಿತ್ಯಂತರಗಳು ಎಷ್ಟರ ಮಟ್ಟಿಗೆ ಗ್ರಾಮೀಣ ಹಾಗೂ ನಗರ ಜೀವನವನ್ನು ಬದಲಿಸಿವೆ! ಕನಸಿನ ಗುರಿಯನ್ನು ವಾಸ್ತವವಾಗಿ ಮುಟ್ಟಲು ಆಗಬೇಕಾದುದೇನು? ತಿದ್ದಬೇಕಾದ ಅರೆಕೊರೆಗಳು ಯಾವುವು?

ಭಾಷಾವಿಜ್ಞಾನ ಸಾಹಿತ್ಯಗಳ ಆಚಾರ್ಯರು, ಸಮಾಜವಿಜ್ಞಾನ, ಇತಿಹಾಸ, ಮನೋವಿಜ್ಞಾನಗಳ ಗುರುಗಳು, ಅರ್ಥಶಾಸ್ತ್ರ ರಾಜ್ಯಶಾಸ್ತ್ರಗಳ ಪಂಡಿತರು ಮಾಡುವ ಕೆಲಸ ಆಡಳಿತಗಾರನಿಗೆ ದಾರಿದೀಪವಾಗಬೇಕು. ಆಗಲೇ ಕಂದಕಕ್ಕೆ ಅಡ್ಡವಾಗಿ ಸೇತುವೆ ನಿರ್ಮಾಣವಾಗುತ್ತದೆ. ಸಾಮಾಜಿಕ ಪರಿವರ್ತನೆಯ ಪ್ರಯತ್ನ ಅರ್ಥಪೂರ್ಣವಾಗುತ್ತದೆ.

೨೪-೪-೧೯೬೯

೧

# ಸ್ನೇಹಬಂಧನಕ್ಕೆ ರೇಶ್ಮೆ ದಾರ

'ಶ್ಯಾಮನ ತಾಯಿ' ಕಾದಂಬರಿಯನ್ನು ಓದಿ ಗಂಟಲು ಗೊಗ್ಗರವಾದದ್ದು, ಕಣ್ಣುಗಳನ್ನು ಒರಸಿಕೊಂಡದ್ದು ನೆನಪು. ಹಾಗೆಯೇ 'ಶ್ಯಾಮ್ ಚಿ ಆಯಿ' ಚಲನಚಿತ್ರವನ್ನು ಯಾವುದೋ ಬೆಳಗ್ಗೆ ಕಂಡದ್ದು. ಹೊರಗೆ ಬಿಸಿಲು. ಕಣ್ಣುರಿ. ಬಸ್ಸು ಹತ್ತಿ ಬಡಾವಣೆಗೆ ಪಯಣ.

"ಆತ ಆತ್ಮಹತ್ಯೆ ಮಾಡಿಕೊಂಡ, ಗೊತ್ತೆ ?"

ಆ ಗ್ರಂಥಕರ್ತನನ್ನು ಕುರಿತು ಮಾತು.

ನಾನೇ ಹಾಗೆ ಹೇಳಿದೆನೊ ? ಅಥವಾ ಇನ್ನೊಬ್ಬರೊ ? ನೆನಪಿಲ್ಲ. ಒಟ್ಟಿನಲ್ಲಿ ಮಸಣದ ಮೌನ ಅಲ್ಲಿ ಮನೆ ಮಾಡಿತು, ಕೆಲ ನಿಮಿಷ.

ಗಾಳಿಯಲ್ಲಿ ಲೀನವಾಗಿದ್ದುದು ಸಾನೆ ಗುರೂಜಿಯ ಉಸಿರು.

*　　*　　*　　*　　*

ಮತ್ತೆ ಆತನ ಮಾತು ಮೊನ್ನೆ ಬಂತು. ಅಂತರ್ ಭಾರತಿ ಸಂಸ್ಥೆಯ ಸ್ಥಾಪನೆಯ ಅವಸರದಲ್ಲಿ. ಸಾವಿನ ಮಾತಲ್ಲ, ಬದುಕಿನ ಮಾತು.

ಮಹಾರಾಷ್ಟ್ರದ ಪಾಂಡುರಂಗ ಸದಾಶಿವ ಸಾನೆ, ಲಕ್ಷಾಂತರ ಮನೆಗಳಲ್ಲಿ ಸಾನೆ ಗುರೂಜಿ ಎಂದೇ ಪ್ರಖ್ಯಾತರು. ಪ್ರಚಂಡ ದೇಶಭಕ್ತ, ಗಣನೀಯ ವಿದ್ವಾಂಸ, ಪ್ರಸಿದ್ಧ ಲೇಖಕ. ದೀನ ಭಾರತದ ವಾಣಿ – ಸಮಾಜವಾದಿ.

ಅವರದೊಂದು ಕನಸಿತ್ತು. ವೈವಿಧ್ಯಮಯ ವರ್ಣರಂಜಿತ ಭಾರತವನ್ನು ಒಲವಿನ ರೇಶಿಮೆ ದಾರದಿಂದ ಬಿಗಿದುಕಟ್ಟಬೇಕು – ಎಂಬುದು.

ಅದೇನು ಹೊಸತೆ ? ಈ ಹಲವು ವರ್ಷಗಳಲ್ಲಿ ದೊಡ್ಡವರನೇಕರು ಅದೆಷ್ಟೋ ಬಾರಿ ಹಾಗೆ ನುಡಿದದ್ದನ್ನು ಕೇಳಿರುವೆವಲ್ಲ ? ವ್ಯತ್ಯಾಸವಿಷ್ಟೆ : ಕಿಚ್ಚು ಮನೆಯನ್ನು ದಹಿಸತೊಡಗಿದ ಮೇಲೆ ಬಾವಿ ತೋಡಲು ಹೊರಟ ಕಥೆ ಇದಲ್ಲ. ಸಾನೆ ಗುರೂಜಿ ಕನವರಿಸಿದ್ದು ೧೯೪೭ರ ಆಗಸ್ಟ್ ೧೫ರಂದು, ಈ ದೇಶದಲ್ಲಿ ಹೊಸ ಬದುಕಿನ ಝುಂಝಾರವ ಮೊಳಗುತ್ತಲಿದ್ದಾಗ.

ಅವರು ಹಲವು ಅಸುರ ಶಕ್ತಿಗಳನ್ನು ಕಂಡರು : ಸಂಕುಚಿತ ಪ್ರಾದೇಶಿಕ ಭಾವನೆ, ಕುರುಡು ವ್ಯಾಮೋಹ, ಹುಚ್ಚೆದ್ದ ಜಾತೀಯತೆ, ಗುರಿ ತಪ್ಪಿದ ನಿಷ್ಠೆ. ಅವರಿಗೆ ಅನಿಸಿತು : ಈ ಶಕ್ತಿಗಳು ದಮನವಾದರಲ್ಲವೆ ಸುಖಶಾಂತಿ ನೆಲೆಸುವುದು ?

ಅವರೆಂದರು :

"ಬೊಂಬಾಯಿಯಂಥ ನಗರಗಳಲ್ಲಿ ಜರ್ಮನ್, ಫ್ರೆಂಚ್, ರಷ್ಯನ್ ಕಲಿಸುವ ಸಂಸ್ಥೆಗಳಿವೆ; ಆದರೆ ಎಲ್ಲ ಭಾರತೀಯ ಭಾಷೆಗಳನ್ನೂ ಒಂದೇ ಕಡೆ ಕಲಿಸುವ ಸಂಸ್ಥೆಯೊಂದು ಎಲ್ಲೂ ಇಲ್ಲ.

"ಭಾಷಾವಾರು ಪ್ರಾಂತಗಳ ತಳಹದಿಯ ಮೇಲೆ ಭಾರತೀಯ ಒಕ್ಕೂಟದ ಸೌಧವನ್ನು ನಾವು ಕಟ್ಟಬೇಕು. ರಾಜ್ಯಗಳು ಸಂಕುಚಿತ ಪ್ರಾದೇಶಿಕ ನಿಷ್ಠೆ ಮತ್ಸರಗಳಿಗೆ ತುತ್ತಾಗದೆ ಪ್ರೇಮ ಸಹಕಾರ ಭಾವಗಳಿಂದ ವರ್ತಿಸಿದರೆ ಮಾತ್ರ ಅಂಥ ಕಟ್ಟಡದ ನಿರ್ಮಾಣ ಸಾಧ್ಯ. ದೇವರಿಗೆ ಸಾವಿರ ತಲೆಗಳಿವೆ, ಸಾವಿರ ಕಣ್ಣುಗಳಿವೆ ಎಂದು ಬಣ್ಣಿಸಿದ್ದಾರೆ. ಆದರೆ ಸಾವಿರ ಹೃದಯಗಳಿವೆ ಎಂದು ಎಲ್ಲೂ ಯಾರೂ ಹೇಳಿಲ್ಲ. ಅದೇ ರೀತಿ ಭಾರತಕ್ಕೆ ಕಣ್ಣು – ತಲೆಗಳು ಸಾವಿರವಿರಬಹುದು. ಆದರೆ ಹೃದಯ ಒಂದೇ ಇರಬೇಕಷ್ಟೆ?"

* * * * *

ಠಾಕೂರರ ವಿಶ್ವಭಾರತಿಯ ವಿಷಯದಲ್ಲಿ ಸಾನೆ ಗುರೂಜಿಗೆ ಗೌರವ. ಭಾರತೀಯರು ತಮ್ಮ ಸುತ್ತಲೂ ಗೋಡೆ ಕಟ್ಟಿಕೊಂಡರೆ ಈ ದೇಶ ಮಹಾನ್ ರಾಷ್ಟ್ರ ಹೇಗಾದೀತು? ಆ ಕಾರಣದಿಂದ ಜಾಗತಿಕ ಕುಟುಂಬದ ಸದಸ್ಯನಾಗಬೇಕು ಭಾರತ.

ಆದರೆ ಮೊದಲು ಭಾರತ ಎನಿಸಿಕೊಳ್ಳಬೇಕಲ್ಲ ಈ ದೇಶ? ಜನ ಭಾರತೀಯರು ಎಂದು ಕರೆಯಿಸಿಕೊಳ್ಳಬೇಕಲ್ಲ?

ಅಂತಹದೊಂದು ಪರಿಸ್ಥಿತಿಯ ನಿರ್ಮಾಣವೇ ಅಂತರ್ ಭಾರತಿಯ ಉದ್ದೇಶ.

* * * * *

ಸಾನೆ ಗುರೂಜಿ ೧೯೫೦ರ ಜೂನ್ ೧೧ ರಂದು ತಮ್ಮದು ಇಷ್ಟು ಸಾಕು – ಎಂದರು. ಅದೊಂದು ಸಂಕಟದ ಸಂಗತಿ.

ಆದರೆ ಅಂತರ್ ಭಾರತಿ ಕೆಲವು ವಿವೇಚನಾಪರರ ಅರಿವಿನ ಪದರಗಳ ಆಳಕ್ಕೆ ಆಗಲೇ ಇಳಿದಿತ್ತು. ವಿನೋಬಾ, ಆಚಾರ್ಯ ನರೇಂದ್ರದೇವ್, ಆಚಾರ್ಯ ಕ್ಷಿತಿ ಮೋಹನ್ ಸೇನ್, ಜೈನೇಂದ್ರಕುಮಾರ್, ಉಮಾಶಂಕರ ಜೋಶಿ, ಮಾಸ್ತಿ ವೆಂಕಟೇಶ ಐಯಂಗಾರ್ – ಇವರೆಲ್ಲ ಅಂತರ್ ಭಾರತಿಯ ಇಸಿದಸಿಗೆ ಹಿಮ್ಮೇಳವಾದವರೇ. ೧೯೫೨ರಲ್ಲಿ ಪೂನಾ ನಗರದಲ್ಲಿ ಕುಲಪತಿ ಡಾ. ಜಯಕರರ ಓರಿತನದಲ್ಲಿ ಮಾಸ್ತಿಯವರು ಅಂತರ್ ಭಾರತಿಯ ಪ್ರಥಮ ಕೇಂದ್ರವನ್ನು ಉದ್ಘಾಟಿಸಿದರು. ಸಾನೆ ಗುರೂಜಿಯ ಮಿತ್ರರೂ ಶಿಷ್ಯರೂ ಈ ಕೇಂದ್ರದ ಚಟುವಟಿಕೆಗಳ ಹೊಣೆ ಹೊತ್ತರು.

ಸದ್ದುಗದ್ದಲಗಳಿಲ್ಲದೆ ಕೆಲಸ ಅಲ್ಲಿ ಇಲ್ಲಿ ನಡೆಯಿತು.

* * * * *

ಆದರೆ ವಿನಮ್ರತೆಗೆ ಬೆಲೆಯುಂಟೆ ಈ ಕಾಲದಲ್ಲಿ? ದಿನಪತ್ರಿಕೆಯ ಮುಖಪುಟ

ಗಳನ್ನು (ಸಾಧ್ಯವಿದ್ದರೆ ರೇಡಿಯೋ ಟೆಲಿವಿಷನ್‌ಗಳನ್ನು ಕೂಡ) ಆಕ್ರಮಿಸಿಕೊಂಡ ವರಿಗೇ ಗೆಲುವು. ಅಂಥವಕ್ಕೆ ಸೇನೆ ಕಟ್ಟಬೇಕು. ಕಲ್ಲು – ಇಟ್ಟಿಗೆ – ಬಾಟಲಿಗಳ ಮಾತನ್ನಾಡಬೇಕು. ಮನೆ ಸುಡಬೇಕು. ತಲೆ ಒಡೆಯಬೇಕು. ಅದೀಗ ಸುದ್ದಿ! 'ನಾಳೆಗೆ ರದ್ದಿ'. ಆದರೆ ಇಂದು ಅದೊಂದೇ ಸುದ್ದಿ .......

ಇದು ಸ್ವತಂತ್ರ ಭಾರತವನ್ನು ಆಕ್ರಮಿಸಿದ ಜಾಡ್ಯ. ಆದಿ ಅಂತ್ಯ ಒಂದಾದರೂ ಉಂಟೆ ಇದಕ್ಕೆ?

ಕಿರಿಚುವ ಪ್ರೇಕ್ಷಕರಿಗೆ ಹೆದರಿ ವಿವೇಚನೆ ನೇಪಥ್ಯಕ್ಕೆ ಸರಿದಾಗ ಇನ್ನು ಏನು ತಾನೇ ಆದೀತು ?

ಈ ಸಂಕಟದಲ್ಲೂ ಸಮಾಧಾನವೆಂದರೆ, ಮಾನವತೆಯಾಗಲಿ ವಿವೇಕವಾಗಲಿ ಇನ್ನೂ ಹರಕಿರಿ ಮಾಡಿಕೊಂಡಿಲ್ಲ.

ಆ ಕಾರಣದಿಂದಲೇ ಸಾನೆ ಗುರೂಜಿ ಕನಸು ಕಂಡ ಇಪ್ಪತ್ತು ವರ್ಷಗಳಾದ ಮೇಲೂ ಮತ್ತೊಮ್ಮೆ ಅವನ್ನು ಪ್ರಸ್ತಾಪಿಸುತ್ತಿದ್ದಾರೆ.

* * * * *

ಮೊನ್ನೆ ಆ ಗೀತೆಯನ್ನು ಹಾಡಿದವರು ಕನ್ನಡ ಕವಿ ವಿನಾಯಕರು. ಉದ್ಘಾಟನೆ ಯನ್ನು ಮಾಡಿದವರು ಒಕ್ಕೂಟದ ಶಿಕ್ಷಣಮಂತ್ರಿ ಡಾ. ವರದ ಕಸ್ತೂರಿ ರಾಘವ ವಿಜಯೀಂದ್ರರಾವ್.

ವಿಶ್ವವಿದ್ಯಾಲಯದ ಆವರಣದಲ್ಲೇ ಬೆಂಗಳೂರಲ್ಲಿ ಅಂತರ್ ಭಾರತಿ ಜನ್ಮ ತಾಳಿದ್ದು ಸ್ವಾಭಾವಿಕವೇ. ಒಳ್ಳಿತಿಗೆ ಎಲ್ಲೂ ಸ್ಥಳವಿಲ್ಲ ಎಂದು ಕೇಕೆ ಹಾಕುವವರು ದೇಶದಾದ್ಯಂತ ಸಾರಿದ್ದರೂ, ಎಲ್ಲಾದರೂ ಅದು ಅವಿತಿರಬೇಕಲ್ಲ? ಮಹಾರಾಷ್ಟ್ರದಲ್ಲಿ ಪುಣೆ ವಿಶ್ವವಿದ್ಯಾಲಯದ ಆವರಣದಲ್ಲಿ ಅಂತರ್ ಭಾರತಿ ಹುಟ್ಟಿತು. ಬೆಂಗಳೂರಲ್ಲೂ ಅಷ್ಟೆ.

ಡಾ. ರಾಯರು ತಮ್ಮದೊಂದು ಕನಸನ್ನು ಜನರ ಮುಂದಿಟ್ಟರು. ಅದು ಪ್ರತಿಯೊಂದು ರಾಜ್ಯದಲ್ಲೂ ಅಂತರ್ ಭಾರತಿ ತಲೆಯೆತ್ತಬೇಕು ಎಂಬುದು, ನಗರ-ಪಟ್ಟಣ – ಹಳ್ಳಿಗಳನ್ನೆಲ್ಲ ಆವರಿಸಬೇಕು ಎಂಬುದು.

ವಿವಿಧ ಭಾಷೆಗಳನ್ನಾಡುವ ಭಾರತೀಯರು ನೆರೆಯುವ ವೇದಿಕೆ ಅಂತರ್ ಭಾರತಿ. ಪರಸ್ಪರರನ್ನು – ಭಾಷೆ, ಸಾಹಿತ್ಯ, ಸಂಸ್ಕೃತಿಗಳನ್ನು – ಚೆನ್ನಾಗಿ ತಿಳಿದು ಕೊಳ್ಳುವ ಮಾಧ್ಯಮ.

ಈ ದೇಶದ ಜನತೆಯ ಸ್ನೇಹ ಬಂಧನಕ್ಕೆ ರೇಶಿಮೆ ದಾರ – ಅಂತರ್ ಭಾರತಿ.

೮-೬-೧೯೬೯

# ಸಾರಸ್ವತ ರಾಜಧಾನಿ - ಕೊಟ್ಟಯಂ

ಹಸುರಿನ ಮಧ್ಯೆ ಕರಿಯ ದಾರಿ. ಬಳಸು, ತಿರುವು. ಒಂದು ಊರು ಮುಗಿದು ಇನ್ನೊಂದು ಆರಂಭವಾಗುವುದು ಎಲ್ಲಿಯೋ – ಹೇಳುವುದು ಕಷ್ಟ. ಬೆಳಗಿನ ಹೊತ್ತು, ದಾರಿಯುದ್ದಕ್ಕೂ ಶಾಲೆಗಳತ್ತ ಸಾಗುವ ಹುಡುಗ ಹುಡುಗಿಯರು. ಅದೇನು ಜ್ಞಾನ ದಾಹವೊ ಈ ಮಲೆಯಾಳಿ ಮಕ್ಕಳಿಗೆ? ಎರ್ನಾಕುಲಂನಿಂದ ನಾಲ್ವತ್ತೇ ಮೈಲು (ಎಷ್ಟು ಕಿ. ಮಿ. ?). ಆದರೂ ಇದು ಮುಗಿಯದ ದಾರಿ.

ಆನೆ, ಮರದ ದಿಮ್ಮಿಗಳು, ಹಲಗೆಗಳು. ಆದರೆ ಮುಗ್ಗುಲ ಸೇತುವೆಯ ಅಡ್ಡಕ್ಕೆ ಮಲಗಿರುವುದೆಲ್ಲ ಹರುಕು, ಮುರುಕು. ಒಂದು ಶತಮಾನಕ್ಕೂ ಮೇಲಾಯಿತೇನೋ ಮರವನ್ನು ಸೀಳಿ ? ನಡು ಬಿಸಿಲಲ್ಲಿ ಕಡ್ಡಿ ಗೀರಿದರೆ ಈ ಸೇತುವೆ ಉರಿಯಬಹುದು.

ಮುಂದೆ, ಎಂದೂ ಉರಿಯದ ಊರು ಕೊಟ್ಟಯಂ. ಯಾಕೆ ? ಕಾರಣ – ಇದು ಸರಸ್ವತಿಯ ಆವಾಸಸ್ಥಾನ. ಅಗ್ನಿಭಕ್ಷಕ ಭಾಷಣಗಳೆಲ್ಲ ಬೇರೆ ನಗರಗಳಿಗೆ ಮೀಸಲು. ಇಲ್ಲಿ ಇರುವುದು – ಅಕ್ಷರ, ಅಕ್ಷರ, ಅಕ್ಷರ. ಮೊದಲ ಮಲೆಯಾಳಿ ಪುಸ್ತಕ ಸುಮಾರು ಒಂದೂವರೆ ಶತಮಾನಕ್ಕೆ ಹಿಂದೆ (೧೮೨೯) ರಲ್ಲಿ ಪ್ರಕಟವಾಯಿತು. (ಬೈಬಲ್ ; ನಿಜ.) ಅನಂತರ ಅದೆಷ್ಟು ಸಹಸ್ರ ಪುಸ್ತಕಗಳು ಬೆಳಕು ಕಂಡವೊ !

ಜನಸಂಖ್ಯೆ ಲಕ್ಷಕ್ಕೂ ಕಡಮೆ ಇರುವ ಈ ಊರಲ್ಲಿ ಭಾರೀ ಪ್ರಮಾಣದ ಒಂದು ದಿನ ಪತ್ರಿಕೆ. 'ಮಲಯಾಳ ಮನೋರಮಾ.' ಉತ್ತರದ ಕಲ್ಲಿಕೋಟೆಯಲ್ಲಿ ಇದರ ಇನ್ನೊಂದು ಆವೃತ್ತಿ. ಪ್ರಭಾವಶಾಲಿಯಾದ ದೈನಿಕ. ಎರಡೂ ಆವೃತ್ತಿ ಸೇರಿ ಪ್ರಸಾರ ಸಂಖ್ಯೆ ಎರಡೂವರೆ ಲಕ್ಷಕ್ಕೂ ಮೇಲು.

(ಅವರು ಕೇಳುತ್ತಾರೆ: "ನಿಮ್ಮ ಪ್ರಮುಖ ದಿನಪತ್ರಿಕೆಗಳು ಯಾವುವು? ಪ್ರಸಾರ ಸಂಖ್ಯೆ ಎಷ್ಟು ? " ಉತ್ತರ ಹೇಳಬೇಕು. ಆದರೆ – ಆದರೆ....)

ಕೇರಳೀಯನಿಗೆ ಬೇಕು ಪತ್ರಿಕೆ ಮತ್ತು ಪುಸ್ತಕ........ಪುಸ್ತಕಲೋಕದ ಸಂಪಾದಕ ಶ್ರೀಧರನ್ ಹೇಳುತ್ತಾರೆ:

"ನಿಲ್ಲಿಸಿ. ಇದೇ ನಮ್ಮ ಪ್ರಕಾಶನ ಮಂದಿರ."

ಸಾಹಿತ್ಯ ಪ್ರವರ್ತಕ ಸಹಕರಣ ಸಂಘ.

ಪುಸ್ತಕವಾಚನ ಹೊಸ ಮಟ್ಟವನ್ನು ಮುಟ್ಟಿದ, ದ್ವಿತೀಯ ಯುದ್ಧಾನಂತರ ಕಾಲಾವಧಿ. ಪ್ರಕಾಶಕರು ಲಾಭ ಗಳಿಸಿದ್ದೇ ಗಳಿಸಿದ್ದು.

ಬರೆಹಗಾರರಿಗೆ ಅವರು ಕೊಟ್ಟರೆ ಉಂಟು.

ಕೊಟ್ಟಯಂ ಪಟ್ಟಣದಲ್ಲಿ ಸ್ನೇಹಿತರಾದ ಕೆಲವು ಲೇಖಕರು ಒಂದಾಗಿ, ತಮಗಾಗುತ್ತಿರುವ ಅನ್ಯಾಯವನ್ನು ತಪ್ಪಿಸುವುದು ಹೇಗೆ ? ಎಂದು ಯೋಚಿಸಿದರು. ತಮ್ಮ ಕೃತಿಗಳನ್ನು ತಾವೇ ಪ್ರಕಟಿಸಬೇಕು, ಮಾರಾಟದ ವ್ಯವಸ್ಥೆಯನ್ನು ತಾವೇ ಮಾಡಬೇಕು – ಎಂದು ಭಾವಿಸಿದರು. ೧೯೪೫ ನೆಯ ಇಸವಿ. ಹನ್ನೆರಡು ಜನ ಲೇಖಕರು, ಒಬ್ಬೊಬ್ಬರು ಹತ್ತು ಹತ್ತು ರೂಪಾಯಿ ಕೊಟ್ಟು ಒಂದು ಸಹಕಾರ ಸಂಘ ಸ್ಥಾಪಿಸಿದರು. ನಿಜವಾದ ಸಹಕಾರ ಸಂಘ.

ಕಿರುತೊರೆ. ಬತ್ತಲಿಲ್ಲ. ಆರಂಭದ ಮೂರು ನಾಲ್ಕು ವರ್ಷಗಳಲ್ಲಿ ಪ್ರಕಟವಾದದ್ದು ಒಂದೇ ಪುಸ್ತಕ. ೧೮೪೨ ರ ವೇಳೆಗೆ ಮಾತ್ರ ೬೫ ಸಾವಿರ ರೂಪಾಯಿಗಳ ಮೂಲ ಬಂಡವಾಳ ಕೂಡಿತು. ಕ್ರಮೇಣ ಹೆಚ್ಚುತ್ತ ಆರೇಳು ಲಕ್ಷಗಳಷ್ಟಾಯಿತು. ಪುಸ್ತಕಗಳ ಪ್ರಕಟಣೆಯೂ ಮಾರಾಟವೂ ತೀವ್ರಗತಿಯಿಂದ ನಡೆದು, ಕಳೆದ ಒಂದು ದಶಕದಲ್ಲಿ ಚಟುವಟಿಕೆ ಪವಾಡದ ಸ್ವರೂಪವನ್ನು ತಳೆಯಿತು.

ಇದೀಗ ಮೂರು ಸಾವಿರದ ಗೆರೆಯನ್ನು ದಾಟಿವೆ, ಸಾಹಿತ್ಯ ಪ್ರವರ್ತಕಸಂಘ ಪ್ರಕಟಿಸಿದ ಪುಸ್ತಕಗಳ ಸಂಖ್ಯೆ. ಸರಾಸರಿ ದಿನಕ್ಕೊಂದು ಪುಸ್ತಕದ ಪ್ರಕಟಣೆ, ಅದರ ಈಗಿನ ಸಾಧನೆ. ವರ್ಷಕ್ಕೆ ೩೬೫ ಪುಸ್ತಕಗಳು. ನೂರಾರು ಪುಟಗಳು, ಸಾವಿರಾರು ಪುಟಗಳು. ಸಣ್ಣವು, ದೊಡ್ಡವು – ಎಲ್ಲವೂ.

* * * * *

ಕಚೇರಿ. ಕಾರ್ಯನಿರತ ಉದ್ಯೋಗಿಗಳು.

ಪ್ರಸಕ್ತ ಅಧ್ಯಕ್ಷರು: ಖ್ಯಾತ ಕತೆಗಾರ ಪೊನ್ನು ಕುನ್ನಂ ವರ್ಕಿ. ಯಾವಾಗಲೂ ತಿಳಿವಳಿಕೆಯ ಮಂದಹಾಸ. ಸಂಘ ಪ್ರಕಟಿಸಿರುವ ಒಳ್ಳೊಳ್ಳೆಯ ಪುಸ್ತಕಗಳನ್ನು ತರಿಸಿ ಅವರು ತೋರಿಸಿದರು.

"ಇದು ಕಥಾಸಂಗ್ರಹ. ಇದು ಮಕ್ಕಳ ಉಡುಗೊರೆ ಪುಸ್ತಕಗಳ ಕಟ್ಟು. ಇದು ನಿಘಂಟು."

ನಿಘಂಟು ? ಮಧ್ಯವಯಸ್ಸಿನ ಅಭಯ ದೇವರು ಹೆಚ್ಚು ಕಡಮೆ ಏಕಾಕಿಯಾಗಿ ಹಗಲೆನ್ನದೆ ಇರುಳೆನ್ನದೆ ಎರಡು ವರ್ಷಗಳ ಕಾಲ ಬರೆದು ಜೋಡಿಸಿ ಅಣಿಗೊಳಿಸಿದ ಘನಕೃತಿ. ಅನ್ಯರಿಂದ ಹಣಸಹಾಯ ಪಡೆಯದೆ ಸಂಘವೇ ಪ್ರಕಟಿಸಿದ ಉದ್ಗ್ರಂಥ. ಪ್ರಥಮ ಮುದ್ರಣದ ಐದು ಸಾವಿರ ಪ್ರತಿಗಳಿಗೂ ಗಿರಾಕಿ ಸಮುದಾಯ........

ಬರೆಯುವವರಿಗೆ – ನ್ಯಾಯ. ಶೇಕಡಾ ಮೂವತ್ತರ ಗೌರವ ಧನ. ಭಾರತದ ಬೇರೆಲ್ಲೂ ಹೀಗಿಲ್ಲ; ಪ್ರಪಂಚದ ಇತರ ಕಡೆಗಳಲ್ಲೂ ಇಲ್ಲ.

ಪಾಲುದಾರರಿಗೆ ಡಿವಿಡೆಂಡ್. ಕಳೆದ ವರ್ಷ ಶೇಕಡಾ ಏಳೂವರೆ; ಈ ವರ್ಷ ಹತ್ತು.

* * * * *

ನಾನೆಂದೆ :

" ನಮ್ಮ ತೊಂದರೆ -- ಪ್ರಕಟವಾದ ಕೃತಿ ಓದುಗನಿಗೆ ದೊರೆಯದೇ ಇರುವುದು."

ಕಾರ್ಯದರ್ಶಿ ಇಳಿಕಮುರಿ ನುಡಿದರು :

" ಅದೇ ಮುಖ್ಯವಾದದ್ದು."

ಕೊಟ್ಟಯಮಿನ (ಅಲ್ಲಿ, ಕೇರಳದ) ಸಾಹಿತ್ಯಪ್ರವರ್ತಕ ಸಹಕರಣ ಸಂಘದವರು ಅದನ್ನು ಪರಿಹರಿಸುವ ಬಗೆ ಹೀಗೆ :

ಒಂದು ಕೇಂದ್ರ ಪುಸ್ತಕಾಲಯ. ಬಳಿಕ ಎಂಟು ಜಿಲ್ಲಾ ಕೇಂದ್ರಗಳಲ್ಲಿ ಎಂಟು ಶಾಖೆಗಳು. ದಿನವೂ ಕೇಂದ್ರಕ್ಕೆ ವರದಿ. ಟೆಲಿಫೋನ್ ಸಂಪರ್ಕ. ಮಲೆಯಾಳಿ ಭಾಷೆಯಲ್ಲಿ ಒಳ್ಳೆಯ ಪುಸ್ತಕವನ್ನು ಯಾರೇ ಪ್ರಕಟಿಸಿರಲಿ, ಆ ಅಂಗಡಿಗಳಲ್ಲಿ ಅದು ದೊರೆಯುತ್ತದೆ. ಈ ಮಾರಾಟ ವ್ಯವಸ್ಥೆಯ ಅಧಿಪತಿ ಖ್ಯಾತ ಕತೆಗಾರ ರಾಮನ್ ನಾಯರ್. ಅವರ ಕೆಳಗೆ ದುಡಿಯುವವರು ನೂರಾರು ಜನ. ಅವರ ಕಚೇರಿಯೊಂದು ಪುಟ್ಟ ಕಾರಖಾನೆ....

* * * *

ಅಧ್ಯಕ್ಷರು, ಕಾರ್ಯದರ್ಶಿ, ಸಂಪಾದಕರು ನಾಳೆಯ ತಮ್ಮ ಯೋಜನೆಗಳನ್ನು ಚಿತ್ರಿಸಿದರು. ಮುಖ್ಯ ಬೀದಿಯಲ್ಲಿ ಮೂರಂತಸ್ತುಗಳ ಕಟ್ಟಡ – ಕಾರ್ಯಾಲಯ. ಊರಿನ ಹೊರ ವಲಯದಲ್ಲಿ ಮೂರೆಕರೆ ಸ್ಥಳದಲ್ಲಿ ಆಧುನಿಕ ಮುದ್ರಣಾಲಯ....

ಇವರು ಕನಸುಗಾರರು. ಆಶ್ಚರ್ಯವೆಂದರೆ ಇವರ ಕನಸೆಲ್ಲ ನೆನಸಾಗುತ್ತದೆ.

ತಲೆದೂಗಿ ನಾನೆಂದೆ:

" ರಾಜಕೀಯ ಜನಕ್ಕೆ ತಿರುವನಂತಪುರ ಮೊಸಲು. ಕೊಟ್ಟಯಂ "–

ಕೊಳ್ಳಿ ದೆವ್ವಗಳಿಗೆ ಇಲ್ಲಿ ಸ್ಥಳವಿಲ್ಲ.

ಕೊಟ್ಟಯಂ ಕೇರಳದ ಸಾರಸ್ವತ ರಾಜಧಾನಿ.

೨-೧೧-೧೯೬೯

# "ಸಬ್‌ಕೋ ಸನ್ಮತಿ ದೇ...."

ವಿನಾಯಕರಿಗೆ ಸ್ವಾಗತ; ವಿನಾಯಕರಿಗೆ ವಿದಾಯ.

ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಯಾಗಿ ಡಾ. ವಿ. ಕೃ. ಗೋಕಾಕರು ಬಂದುದು ನಿನ್ನೆಯೋ ಮೊನ್ನೆಯೋ. ಇವತ್ತೇ ಆ ಸ್ಥಾನದಿಂದ ನಿರ್ಗಮನ.

ಮೊನ್ನೆ – ನಿನ್ನೆ – ಇವತ್ತಿನ ಈ ಮೂರು ವರ್ಷಗಳು, ಮೂವತ್ತು ವರ್ಷಗಳ ಹಾಗಿದ್ದುವು. ಬಂದುದು ಮೂವತ್ತರ ಹರೆಯದ ಹುಮ್ಮಸ್ಸಿನೊಡನೆ; ಹೊರಟುದು ಅರುವತ್ತರ ಮಾಗಿದ ಅನುಭವದೊಡನೆ. ನರೆತುದು ಮನಸ್ಸು, ಕೂದಲಲ್ಲ. ಹಿಂಸೆ ನೀಡುವ ಜರಾಯಂತ್ರವನ್ನು ಯಾರೋ ತಂದು ವಿಶ್ವವಿದ್ಯಾಲಯದ ಕೆಂಪು ಕಟ್ಟಡದೆ ದುರು ಬಚ್ಚಿಟ್ಟರು, ಯಾವುದೋ ಮರದ ಕೆಳಗೆ. ಸದ್ದಿಲ್ಲದ ಚಲನೆ ಅದರದು. ಮಹಾ ಮಾರಕಾಸ್ತ್ರ. ಮೂರನೆಯ ವರ್ಷದ ವೇಳೆಗೆ ಅದು ರೆಕ್ಕೆ ಬಡೆಯಿತು. ಎಂಥ ಕೆನ್ನಾಲಿಗೆ! ಏನು ಹೊಗೆ!

ಮೊದಲು ಹೊಗಳಿದರು: ವಿದ್ಯಾವಿಚಕ್ಷಣ. ಮೇಲಾಗಿ ಕವಿ, ಕನ್ನಡ ಕುಲ ಭೂಷಣ. ಕೊನೆಯಲ್ಲಿ ಹೀಗಳೆದರು: ಅದಕ್ಷ ಆಡಳಿತಗಾರ, ಸ್ವಜನ ಪಕ್ಷಪಾತಿ, ದುರ್ಬಲ.

ನಾಲಗೆ ಮಾತ್ರ ಅದೇ. ಅದೇ.

ನಾಟಕವೋ ನಾಟಕ. ಪ್ರಹಸನ ಎನ್ನೋಣವೆ? ದುರಂತ ಎನ್ನೋಣವೆ? ಕೆಲವರು ನಗುತ್ತಾರೆ; ಬೇರೆ ಕೆಲವರು ಮೊಸಳೆ ಕಣ್ಣೀರು ಸುರಿಸುತ್ತಾರೆ; ಮತ್ತೆ ಕೆಲವರು ದಂಗಾಗಿ ಬಿರುಗಣ್ಣು ಬಿಡುತ್ತಾರೆ.

ಅಗೋ ಅಂಕದ ಕರಿಪರದೆ!

ಮಹಾಕವಿ ಕುವೆಂಪು ಮೈಸೂರು ವಿಶ್ವವಿದ್ಯಾಲಯದ ಕುಲಪತಿಯಾಗಿದ್ದಾಗಲೂ ಹೀಗೆಯೇ ಮಾಡಿದರು. ಹಿತಕರವಲ್ಲದ ನಾನಾ ವಿಶೇಷಣಗಳಿಂದ ಅವರನ್ನು ಬಣ್ಣಿಸಿದರು. 'ಕೈಲಾಗದವರು' ಎಂದರು.

ತೆರೆ ಏರಿದಾಗ ಚಪ್ಪಾಳೆ: ಅಂಕದ ಪರದೆ ಎಳೆದಾಗ, ಶಿಳ್ಳು, ಪರಿಹಾಸ್ಯದ ಹೇಷಾರವ.

ಸರಸ್ವತಿಯ ಮಕ್ಕಳನ್ನು ಕಂಡರೆ ಅಕ್ಷರ ದ್ವೇಷಿಗಳಿಗೆ ಅದೇನು ಹೊಟ್ಟೆಯುರಿಯೊ? 'ಮಸಿ'ಯೊಂದೇ ಅಂಟಬೇಕಾದ ಕೈಗೆ ಮಣ್ಣು ಮೆತ್ತದೆ ಅವರಿಗೆ ಸಮಾಧಾನವಿಲ್ಲ.

* * * * *

ಸೆನೆಟ್ ಸಭೆ. ತಾಲೂಕಿನ ಮ್ಯುನಿಸಿಪಾಲಿಟಿ ಇದಕ್ಕಿಂತ ಮೇಲು. ಇಲ್ಲಿ ವಿವೇಕದ ವಾಕ್‌ಶಕ್ತಿ ಉಡುಗುತ್ತದೆ. ಅನಾಗರಿಕ ಧಾಟಿಯ ಶಾಸನರು ಜುಟ್ಟು ಹಿಡಿದು ತಿರುಪುತ್ತಾರೆ. ಅಸಂಸ್ಕೃತರದೇ ಪಾಗ್ಯುರಿ. ಕೂಗಾಡಿದವರು ಕಾಗದದ ಮೇಲಿಡುವ ಭಾರದ ಗಾಜುಗುಂಡನ್ನೆತ್ತಿ ಎಸೆಯುತ್ತಾರೆ. ಕುಲಪತಿಯೂ ಹತ್ತಿರ ಇದ್ದವರೂ ಆಹುತಿಯಾಗದೆ ಬದುಕಿ ಉಳಿಯುತ್ತಾರೆ. ತಲೆ ಒಡೆದಿದ್ದರೆ ಆಂಬ್ಯುಲೆನ್ಸ್ ಬರಬೇಕು. ಘಣ್ - ಘಣ್ - ಘಣ್....ಶಾಲೆಯ ಘಂಟೆಯಲ್ಲ, ಅಗ್ನಿಶಾಮಕ ವಾಹನವಲ್ಲ. ಗಾಯಗೊಂಡ ಕುಲಪತಿಯನ್ನು ಸಾಗಿಸಲು ಆಂಬ್ಯುಲೆನ್ಸ್........

ಹಲೋ, ಹಲೋ, ಹಲೋ....ಫೋನಿನ ಆ ಕಡೆಯಿಂದ ಉತ್ತರವೇ ಇಲ್ಲ.

ಸಬ್ ಕೋ ಸನ್ಮತಿ ದೇ ಭಗವಾನ್........

ಗಾಂಧಿ ಹಾಡಿದ್ದೆ? ಯಾವ ಗಾಂಧಿ? ಜನ್ಮ ಶತಾಬ್ದಿಯ ! ಯಾವ ಜನ್ಮ? ಯಾವ ಜನ್ಮದ ಶಾಪ?

ವಿದ್ಯಾರ್ಥಿಗಳ ಅಶಿಸ್ತು ಬೆಂಗಳೂರಿಗೆ ಮೀಸಲಿಲ್ಲ. ಇದು ದೇಶದ ಕಾಹಿಲೆ. ಅಲ್ಲ, ಲೋಕದ ಕಾಹಿಲೆ.

ಇಂಥ ವೈಜ್ಞಾನಿಕ ಪೃಥಕ್ಕರಣ ಬಹಳ ಸುಲಭ. ಆದರೆ, ಹತ್ತಿರವಿದ್ದು ನೋಡಿದವರಿಗೆ ಗೊತ್ತು ಈ ಅನಾರೋಗ್ಯದ ವಿಲಕ್ಷಣ ರೂಪ. ಹೊರಗಿನ ರಾಜಕೀಯ ದುಃಕಷಾಯದ ಪಡಿನೆಳಲು ಇಲ್ಲಿ. ಆ ಉರಿಯಲ್ಲಿ ತಮ್ಮ ಅಡುಗೆ ಪಾತ್ರೆ ಇಟ್ಟು ಬೇಳೆ ಬೇಯಿಸಿಕೊಳ್ಳುವ ಪ್ರಾಧ್ಯಾಪಕರು ಕೆಲವರು. ವಿದ್ಯಾರ್ಥಿಗಳೋ ತರಗೆಲೆ. ಮಿನಿ ಸ್ಕರ್ಟಿನ ಹುಡುಗಿ ಸೇದಿದ ಸಾಧು ಸಿಗರೇಟಿನ ಬೆಂಕಿಯೂ ಸಾಕು. ಕೆಲವೇ ಕ್ಷಣಗಳಲ್ಲಿ ಉಸಿರಾಟಕ್ಕೆ ಸಂಚಕಾರ.

"ಹಾಕು ಬೆಂಕಿಲಿ ಉರಿಲಿ ಧಗಧಗ...."

ಆಗ ಅಲ್ಲಿ ಸುಟ್ಟದ್ದು ವಿದೇಶಿ ವಸ್ತುಗಳನ್ನು. ಗಾಂಧೀ ಯುಗದ ಆ ಹಾಡಿಗೆ ಧಾಟಿ: ಧರಣಿಮಂಡಲ ಮಧ್ಯದೊಳಗೆ ಮೆರೆಯುತಿಹ ಕರ್ನಾಟ ದೇಶದಿ....

ಇದು ಕರ್ಣಾಟಕ. ಇಲ್ಲಿ ಕೊಳ್ಳಿ ಇಡುವುದು ವಿಶ್ವವಿದ್ಯಾಲಯದ ಪೀಠೋಪಕರಣಗಳಿಗೆ. ಕಾಗದ ಪತ್ರಗಳಿಗೆ....ಪಠ್ಯಪುಸ್ತಕಗಳನ್ನು ತಂದು ಆ ಹೋಮ ಕುಂಡದಲ್ಲಿ ಹಾಕಿಬಿಡಬಹುದಾಗಿತ್ತು. ಅಲ್ಲಿಗೆ ಮುಗಿದೇ ಹೋಗುತ್ತಿತ್ತು ಕಥೆ....

* * * * *

ಹೆಮ್ಮಾರಿ ನಾನು —

ಬೇಕೆನಗೆ ನರಬಲಿ........

....ತಿಳಿದೋ ತಿಳಿಯದೆಯೋ ತಪ್ಪುಗಳಾಗಿರಬಹುದು. ಅಂಥವಕ್ಕೆ ವಿಚಾರಣೆ ಇದೆ. ತಪ್ಪೊಪ್ಪಿಗೆ ಇದೆ. ದಂಡನೆಯೋ ಕ್ಷಮೆಯೋ ಇದೆ....ಅದರ ಬದಲು ಬಾಯಿಗೆ ಬಟ್ಟೆ ತುರುಕಿ, ಶಿಲುಬೆಗೇರಿಸುತ್ತೇವೆ ಎಂದರೆ....?

ವಿದ್ಯಾರ್ಥಿಗಳೆಂದು ಕರೆದುಕೊಂಡ ಎಳೆಯ ಸಮುದಾಯ ಘೇರಾವ್ ಮಾಡಿದಾಗ ಗೋಕಾಕರೆಂದರು :

"ಈ ವಿಧಾನದಿಂದ ನೀವೇನನ್ನೂ ಸಾಧಿಸಲಾರಿರಿ. ನನ್ನನ್ನು ನೀವು ಕೊಲ್ಲಬಹುದು. ಆದರೆ ಏನನ್ನೂ ಸಾಧಿಸಲಾರಿರಿ...."

ಎಂಥ ವೇಳೆಯಲ್ಲೂ ಧೃತಿಗೆಡದ ಮನುಷ್ಯ. ಸ್ಥಿತಪ್ರಜ್ಞ. ಬರೆ ವಿದ್ಯಾರ್ಥಿಗಳಾಗಿದ್ದರೆ ಆ ಮಾತು ಬೇರೆ. ಆದರೆ ಅಲ್ಲಿದ್ದುದು ಅರಚುತ್ತಿದ್ದ ಗೊಂಬೆಗಳು. ಕೀಲಿತಿರುವುತ್ತಿದ್ದುದು ಕಾಣದ ಕೈ.

ಕೇಕೆ ಹಾಕಿ ಅವು ಕುಣಿದುವು : "ನಮಗೆ ಬಲಿ ಬೇಕು, ಬಲಿ!"

* * * * *

ಮಾನಸಗಂಗೋತ್ರಿಯ ಕನಸನ್ನು ಕುವೆಂಪು ಕಂಡರು. ಅವರು ಒಂಟಿಕೊಪ್ಪಲಿಗೆ ಮರಳಿದ ಮೇಲೆ ಆ ಕನಸು ಚಿಗುರೊಡೆಯಿತು.

ಕವಿ ವಿನಾಯಕರು ನಾಗರಬಾವಿಯ (ಬೇಡಿ! ಬೇಡಿ, ಆ ಹೆಸರು!) ಗುಡ್ಡಗಳ ಮೇಲೆ ನಿಂತು, ಕಣಿವೆಗಳಲ್ಲಿ ಚಲಿಸುತ್ತಿದ್ದ ವೃಷಭಾವತಿಯನ್ನು ಕಂಡು, ನಾಳೆಯ ವಿಶಾಲ ಗುರುಕುಲವನ್ನು ಕಲ್ಪಿಸಿಕೊಂಡರು.

ಕುವೆಂಪುವನ್ನೀಗ 'ಎಂಥ ಕನಸುಗಾರ!' ಎಂದು ಹೊಗಳುತ್ತಾರೆ. ವಿನಾಯಕರಿಗೋ ಆ ಪ್ರಶಂಸೆ ನಾಳೆ ಸಲ್ಲುತ್ತದೆ.

ಮೊನ್ನೆ ಗುಡ್ಡಗಳ ಮೇಲೆ ಗಾಂಧೀಭವನದ ಉದ್ಘಾಟನೆಯಾಯಿತು. ಸದ್ಯಕ್ಕೆ ಅದೊಂದೇ. ಅಲ್ಲಿ ಧ್ವನಿವರ್ಧಕವನ್ನಿಟ್ಟು, ಸಮೆದು ಕರ್ಕಶವಾದ ರೆಕಾರ್ಡೊಂದನ್ನು ಹಾಕಬಹುದು, ಇನ್ನು.

"ಸಬ್‌ಕೋ..........."

೧೯-೧೦-೧೯೬೯

# ವಿನಾಯಕರ ಸಮನ್ವಯ ಕಹಳೆ

ಕನ್ನಡದ ಸಾಹಿತ್ಯಪಥಿಕ ಕಕ್ಕಾವಿಕ್ಕಿಯಾಗಿದ್ದಾನೆ. ಇದು ಸಂದಸಪಸ ಎಂದು ಭ್ರಮಿಸಿದ್ದ ಪಾಪ! ನೋಡಿದರೆ, ಗೊಂಡಾರಣ್ಯ. ಇದನ್ನು ದಾಟಿ ಆತ ಮುಂದೆ ಸಾಗಬೇಕು. ದಾರಿ ಕಾಣದು. ಎಲ್ಲ ಕುತ್ತುಗಳಿಂದ ಪಾರಾಗಿ ಬಯಲಿನ ವಿಸ್ತಾರಕ್ಕೆ ಇಳಿಯುವ ಬಯಕೆ ಆತನಿಗೆ. ಕತ್ತಲು ಹಗಲಿನಿಂದ ಬೆಳಕಿನ ಕಡೆಗೆ ಸಾಗುವ ಬಗೆ ಯಾವುದು ?

ವ್ಯಥೆ, ಚಿಂತೆ ಆವರಿಸಿದ ಪಯಣಿಗ, ಮನುಷ್ಯ ಧ್ವನಿಯೊಂದು ಕೇಳಿಬಂದಂತಾಗಿ ಮೈಯೆಲ್ಲ ಕಿವಿಯಾಗುತ್ತಾನೆ.

"ಪ್ರಪಂಚದಲ್ಲಿ ಪರೀಕ್ಷಾ ಕಾಲವೊಂದು ಒದಗಿ ಬಂದಿದೆ. ಮಾನವನ ವೈಜ್ಞಾನಿಕ ಪ್ರತಿಭೆಗೆ ಅಸಾಧಾರಣವಾದ ಪುಟ ದೊರೆತು ಅದರಿಂದ ಮನುಕುಲದ ಆರ್ಥಿಕ, ಸಾಮಾಜಿಕ, ರಾಜಕೀಯ – ಒಟ್ಟಿನಲ್ಲಿ ಅದರ ಸಾಂಸ್ಕೃತಿಕ – ಜೀವನದಲ್ಲಿ ಚಮತ್ಕಾರಿಕ ಕ್ರಾಂತಿಗಳಾಗಿವೆ. ಅಣುಯುಗದ ಮಾನವನ ಮಹತ್ತು ಒಂದು ರೀತಿಯಿಂದ ಪರ್ವತಪ್ರಾಯವಾಗಿ ಬೆಳೆದರೆ, ವ್ಯಕ್ತಿತ್ವದ ವಿಕಾಸದ ದೃಷ್ಟಿಯಿಂದ ಅವನು ಅಣೋರಣೀಯನಾಗಿದ್ದಾನೆ. ಯಂತ್ರ ಯುಗದ ಯಂತ್ರವೊಂದರ ಮೊಳೆಯಾಗುತ್ತಿದ್ದಾನೆ ..."

ಆ ಮಾತುಗಳಲ್ಲಿ ತನ್ನದೇ ಅರಿವಿನ ಸತ್ಯ ದರ್ಶನವನ್ನು ಪಥಿಕ ಕಂಡು ವಿಸ್ಮಿತನಾಗುತ್ತಾನೆ.

* * * * *

ಇದು ಕವಿ, ಕಾದಂಬರಿಕಾರ, ನಿಬಂಧಕಾರ, ನಾಟಕಕಾರ, ವಿಮರ್ಶಕ, ದಾರ್ಶನಿಕ ವಿನಾಯಕರ ಕಹಳೆ. ವಿವಿಧ ನಿಲುವುಗಳಲ್ಲಿ ವಿನಾಯಕರು! ನವೋದಯದ ವಿಹಾರಿ, ಪ್ರಗತಿಶೀಲತೆಯ ಸಮವಸ್ತ್ರಧಾರಿ, ನವ್ಯತೆಯ ಪ್ರವಾದಿ, ಈಗ ಸಮನ್ವಯತೆಯ ಅಧ್ವರ್ಯು!

ಕನ್ನಡ ಸಾಹಿತ್ಯದಲ್ಲಿ ಕಂಡು ಬರುವ ಗೊಂದಲಗಳೆಲ್ಲ ಕೊನೆಗಂಡು ಸಾಹಿತ್ಯ ಹಿತಕರವಾಗಿ ಪರಿಪುಷ್ಟವಾಗಿ ಬೆಳೆಯಬೇಕಾದರೆ ಹೊಸದೊಂದು ದೃಷ್ಟಿ ಅಗತ್ಯ; ಅದೇ ಸಮನ್ವಯ ದೃಷ್ಟಿ.

—ಆ ನೆಲೆಗೆ ಬಂದು ತಲಪಿರುವ ವಿನಾಯಕರು ಹೊಸ ಮಾರ್ಗದ ಆದ್ಯ ಪ್ರವರ್ತಕರಾಗಿ, ಸಮನ್ವಯದ ಘೋಷಣೆಯನ್ನು ನಾಡಿನ ಮುಂದೆ ಇರಿಸಿದ್ದಾರೆ. ಈ

ನಿಲುವಿನ ಪ್ರತಿಪಾದನೆಯಿಂದ ಸಾಹಿತ್ಯಕ ಆಂದೋಲನವೊಂದು ರೂಪುಗೊಳ್ಳುತ್ತದೆಂದು ಅವರು ಆಶಿಸಿದ್ದಾರೆ.

* * * * *

ಸನಾತನರಿಂದ ಪ್ರಾರಂಭಿಸಿ ಅತಿ ನವ್ಯರವರೆಗೆ ವಿವಿಧ ಸ್ವರಗಳು ಈ ದಿನ ಕೇಳಿ ಬರುತ್ತವೆ.

—"ಸತ್ವಕ್ಕಿಂತ ಅಪರಿಪಕ್ವ ತತ್ವಕ್ಕೆ ನಾವು ಪಟ್ಟಗಟ್ಟುತ್ತಿರುವಂತೆ ತೋರುತ್ತದೆ."

"ತತ್ವ ಪಂಥ, ತಂತ್ರ ಇಲ್ಲವೇ ರೀತಿ ಇಂದಿನ ಸಾಹಿತ್ಯದಲ್ಲಿ ಪಕ್ಷಾರೂಢವಾದಂತಿದೆ."

ಇಂತಹ ಗೊಂದಲಮಯ ಪರಿಸ್ಥಿತಿಯಲ್ಲಿ "ಸಮನ್ವಯ ದೃಷ್ಟಿಯನ್ನು ಬಯಸುವವರು ದನಿ ಎತ್ತುವುದು ಅನಿವಾರ್ಯವಾಗಿದೆ."

ಈ ಸಮನ್ವಯ ಮಾರ್ಗದ ಸೂತ್ರಗಳ ಸಾರವಾದರೂ ಏನು?

—"ವ್ಯಕ್ತಿಗಳಿದ್ದಷ್ಟೂ ಜೀವನ ದೃಷ್ಟಿಗಳುಂಟು."

"ಅನುಭವ ಮುಖ್ಯ; ಆದರೆ ರೀತಿ ಇಲ್ಲವೇ ತಂತ್ರ ಗೌಣವಲ್ಲ."

"ನವ್ಯ ಸಾಹಿತ್ಯ ನವೋದಯ ಸಾಹಿತ್ಯದ ಒಂದು ಅವಸ್ಥೆ ಮಾತ್ರ."

ಕೃತಿ ರಚನೆಯಲ್ಲಿ, ಕರ್ತೃ ಯಾವ ವಿಧಾನವನ್ನೇ ಬಳಸಿರಲಿ, ಕೃತಿಯ ಶ್ರೇಷ್ಠತೆಗೆ ರಸಾಸ್ವಾದನೆಯೇ ಒರೆಗಲ್ಲು. ಅಲ್ಲಿ ಉತ್ತಮವೆಂದು ಕಂಡು ಬರುವ ಸಾಹಿತ್ಯವೇ ನಾಲ್ಕು ದಿನ ಬಾಳುತ್ತದೆ.

ಇದೆಲ್ಲವನ್ನೂ ವಿಶ್ಲೇಷಿಸಿ ಸಮನ್ವಯ ಘೋಷಣೆ ಸಾರುತ್ತದೆ:

"ಸಾಹಿತ್ಯದ ವಿವಿಧ ಒಲವು ನಿಲುವುಗಳಿಗೆಲ್ಲ ಇದೊಂದು ವೇದಿಕೆ. ಸಮನ್ವಯವು ಪಕ್ಷಾತೀತ."

'ಸಮನ್ವಯ' ವಿನಾಯಕರ ಹಿರಿತನದಲ್ಲಿ ಪ್ರಕಟವಾಗಲಿರುವ ಒಂದು ಸಾಹಿತ್ಯ ತ್ರೈಮಾಸಿಕದ ಹೆಸರು ಕೂಡಾ. ಇಲ್ಲಿ ವಿಮರ್ಶಾತ್ಮಕ ಲೇಖನಗಳಿಗೆ ಅಗ್ರಸ್ಥಾನ. ಮಾದರಿ ಬರೆಹಗಳಿಗಾಗಿಯೂ ಕೆಲವು ಪುಟಗಳು ಮೀಸಲಾಗಿರುತ್ತವೆ.

'ಸಮನ್ವಯ'ವು ತನ್ನ ದೃಷ್ಟಿಯಲ್ಲಿ, ನಿಲುವಿನಲ್ಲಿ, ಪಕ್ಷಾತೀತ–ಒಪ್ಪಬಹುದು. ಆದರೆ, ಈ ನಿಲುವನ್ನು ಪ್ರತಿಪಾದಿಸುವವರದೇ ಒಂದು ಪಕ್ಷವಾಗುತ್ತದಲ್ಲ? 'ಸಮನ್ವಯ'ದ ಘೋಷಣೆಯನ್ನು, ಧೋರಣೆಯನ್ನು, ಒಪ್ಪುವವರು ಸಹಜವಾಗಿಯೇ ಏಕಧ್ಯೇಯದಿಂದ 'ಪ್ರೇರಿತ'ರಾಗುವರಲ್ಲ? ಅವರ ಬಳಗ ನಿರ್ಮಾಣವಾಗುವುದಲ್ಲ?

ಪ್ರಾಯಶಃ ಇದು ಅನಿವಾರ್ಯವಾದ ಬೆಳವಣಿಗೆ. ಮಾರ್ಗ, ಸರಿ. ಮತವಾಯಿತೋ, ಸಮನ್ವಯ ಕಾಮನಬಿಲ್ಲಾಗುವುದಿಲ್ಲ. ಯಾವುದಾದರೂ ಒಂದು ಬಣ್ಣ ಅದನ್ನು ಆವರಿಸುತ್ತದೆ.

ವಿನಾಯಕರ ಕಪ್ತಾನಿಕೆಯ ಪರೀಕ್ಷೆಯಾಗುವುದು ಇಲ್ಲೇ.

*    *    *    *    *

ಕನ್ನಡ ಸಾಹಿತ್ಯ ಪಥಿಕನ ಪಾಲಿಗೆ ಸಮನ್ವಯ ಘೋಷಣೆಯೊಂದು ಸಾಹಿತ್ಯ ಸಂಭವ. ಅವನ ಆಸೆಗಳು ಗರಿಗೆದರಿ, ದೃಷ್ಟಿ ಅಡವಿಯಾಚೆಗಿನ ಹಗಲು ಬೆಳಕಿನತ್ತ ಹರಿಯುವುದು ಸ್ವಾಭಾವಿಕ.

ವಿನಾಯಕರ ಸಮನ್ವಯದ ಕಹಳೆಗೆ ಆತನ ಪ್ರತಿಕ್ರಿಯೆ – ಹೃತ್ಪೂರ್ವಕ ಸ್ವಾಗತ.

೧೫–೧೦–೧೯೬೭

# ಅಪಾಯದ ಘಂಟೆ

ಕರ್ನಾಟಕ ರಾಜ್ಯ ಸ್ಥಾಪನೆಯಾಗಿ ಒಂದು ದಶಕವಷ್ಟೇ ಸಂದಿದ್ದ ಕಾಲಾವಧಿ. ಆ ಊರಲ್ಲಿ ದೇ. ಭ. ರೊಬ್ಬರ ಪ್ರಯತ್ನದ ಫಲವಾಗಿ ಶಾಲೆ ಸ್ಥಾಪಿಸಿದ್ದರು. ಅಧ್ಯಾಪಕರಾಗಿ ಬಂದ ಮಧ್ಯವಯಸ್ಸಿನವರೊಬ್ಬರು ಮಹಾ ರಸಿಕರಾಗಿದ್ದು ಆ ಪ್ರದೇಶದಲ್ಲಿ ಬಹಳ ಬೇಗನೆ ಜನಪ್ರಿಯರಾದರು.

ಒಂದು ದಿನ ಶಿಕ್ಷಣ ಇಲಾಖೆಯಿಂದ ಅವರಿಗೊಂದು ಸುತ್ತೋಲೆ ಬಂತು. ಕೆಲವು ಪುಸ್ತಕಗಳನ್ನು ಶಾಲೆಯ ಗ್ರಂಥಭಂಡಾರಕ್ಕೆ ಕಡ್ಡಾಯವಾಗಿ ಕೊಳ್ಳಬೇಕೆಂದು ಅದರಲ್ಲಿ ತಿಳಿಸಿತ್ತು. ಮಾರುಕಟ್ಟೆಯಿಂದ ತಾವಾಗಿಯೇ ಕೆಲವು ಪುಸ್ತಕಗಳನ್ನು ಶಾಲೆಗೆ ತರಿಸುವಂತಿದ್ದರೆ, ಪುಸ್ತಕ ವ್ಯಾಪಾರಿಯಿಂದ ನಾಲ್ಕು ಕಾಸು ಕಮಿಷನ್ ರೂಪದಲ್ಲಿ ಮಾಸ್ತರಿಗೆ ದೊರೆಯುವ ಸಾಧ್ಯತೆಗೆ ಇದರಿಂದ ಕಲ್ಲುಬಿತ್ತು. 'ಈ ಪುಸ್ತಕಗಳು ಬೇಡ' ಎಂದರೆ ವೇತನವನ್ನೇ ನಿಲ್ಲಿಸುವ ಬೆದರಿಕೆ. ಶಾಲೆಯ ಮನ್ನಣೆ ರದ್ದಾಗಬಹುದು. ಗೊಣಗುಟ್ಟಿಕೊಂಡು ಮೇಷ್ಟ್ರು ಹಣ ತುಂಬಿ ಪಾರ್ಸಲು ಬಿಡಿಸಿಕೊಂಡರು.

ಗಂಟು ಬಿಚ್ಚಿದಾಗ ಮಾತ್ರ ಬೇರೊಂದು ಗಂಟು ಬಿಚ್ಚಿದ ಅನುಭವ ಅಧ್ಯಾಪಕರಿಗೆ ಆಯಿತು! ರಸಿಕರಾದ ಅವರಿಗೆ ರಸದೌತಣವೇ ದೊರೆತಿತ್ತು. ಅಲ್ಲಿ ಇಲ್ಲಿ ಸಾಲುಗಳನ್ನು ಓದುತ್ತ ಚಿತ್ರಗಳನ್ನು ನೋಡುತ್ತ ಅವರು ಮೈಮರೆತರು. ಸರ್ಕಾರ ತಾನಾಗಿಯೇ ಇಂಥ ಪುಸ್ತಕಗಳನ್ನು ಒದಗಿಸುವುದೆಂದರೆ ಸಾಮಾನ್ಯವೆ?

ತಕ್ಷಣ ಅವರಿಗೊಂದು ವಿಚಾರ ಹೊಳೆಯಿತು.

ಆ ಪುಸ್ತಕಗಳು ಬೇರೆ ಯಾರ ಕಣ್ಣಿಗೂ ಬೀಳದಂತೆ ಅವರು ಬಚ್ಚಿಟ್ಟರು.

ಊರಿನ ರಸಿಕ ಸ್ನೇಹಿತ ಕಲ್ಲಪ್ಪನೊಡನೆ ಆ ಸಂಜೆ ಪಿಸುದನಿಯಲ್ಲಿ, ಅವರೆಂದರು :

"ಮಜಾ ಮಜಾ ಪುಸ್ತಕ ತರಿಸಿದೀನಿ ಕಲ್ಲಪ್ಪ."

"ಹೌದಾ ? ಎಲ್ಲಿ, ನೋಡಾನ."

"ಗುಟ್ಟಿನಲ್ಲಿ ಓದಬೇಕು. ಕಳ್ಳಪೇಟೇಲಿ ಭಾರಿ ಬೆಲೆ ಕೊಟ್ಟು ತಂದಿದೀನಿ."

"ಹಂಗಾ ? ಭೇಷಾಯ್ತು ಬಿಡು."

"ಎಲ್ಲ ಪಸಂದಾಗಿವೆ. ಹೊಚ್ಚ ಹೊಸ ಹಣ್ಣಿನ ತರಹೆ."

ಕಲ್ಲಪ್ಪನ ಬಾಯಿಯಲ್ಲಿ ನೀರೂರಿತು.

"ತೆಗಿ ಮತ್ತೆ."

“ನೀನು ನನ್ನ ಗೆಣೆಯ. ನಿನಗೆ ಫ್ರೀ. ಓದೋಕೆ ಬೇಕು ಅಂತ ಬೇರೆ ಯಾರು ಕೇಳಿದ್ರೂ ಒಂದೊಂದಕ್ಕೆ ಎಂಟೆಂಟಾಣೆ. ನಾವಿಬ್ರೂ ಸರಿಯಾಗಿ ಹಂಚ್ಕೊಳ್ಳೋದು. ಸರಿಯೇನಪ್ಪ ?”

“ಹೂಂ.”

ಹಾಗೆ ಆರಂಭವಾಯಿತು ಶಾಲೆಯ ಗ್ರಂಥಭಂಡಾರವಲ್ಲಿ ಸಾಹಿತ್ಯ ಸಮಾರಾಧನೆ.

ವಿಧಾನ ಪರಿಷತ್ತಿನ ಸದಸ್ಯ ವೈ. ಎಸ್. ಪಾಟೀಲರು ಕತೆಗಾರರಲ್ಲ. ಆದರೆ ಮೇಲಿನ ಚಿತ್ರ ದುಸ್ಸಾಧ್ಯವಾದುದೆಂದು ಅವರು ಹೇಳಲಾರರು. ಯಾಕೆಂದರೆ, ಅಂಥ ಚಿತ್ರದ ವಿವಿಧ ಅಂಶಗಳನ್ನೂ ಕಲಾಕಾರರನ್ನೂ ಅವರು ಈಗ ಬಲ್ಲರು.

ಜಾನಪದ ಸಾಹಿತ್ಯದಲ್ಲಿ ಶೃಂಗಾರ ಸಾಮಾನ್ಯ; ಕಾದಂಬರಿಗಳಲ್ಲೂ ಅಷ್ಟೆ. ಒಂಭತ್ತು ರಸಗಳು ಇರುವುದಾದರೂ ಯಾತಕ್ಕೆ? ಪಾಟೀಲರು ವಿಧಾನ ಪರಿಷತ್ತಿನಲ್ಲಿ ಕೆಲ ಪುಸ್ತಕಗಳಿಂದ ಮಾಡಿದ ಉಲ್ಲೇಖಗಳಲ್ಲಿ ಆಕ್ಷೇಪಾರ್ಹವಾದುವೇನೂ ಇರಲಿಲ್ಲ. ಸಾಹಿತ್ಯ ದೃಷ್ಟಿಯಿಂದ ಅವು ಖಂಡಿತ ಖಂಡನೆಗೆ ಅರ್ಹವಲ್ಲ.

ಆದರೂ ವಿಧಾನ ಪರಿಷತ್ತು ನಿಶ್ಶಬ್ದವಾಗಿ ಪಾಟೀಲರ ಮಾತುಗಳಿಗೆ ಕಿವಿ ಗೊಟ್ಟಿತು. ಒಂದು ಬಗೆಯ ದಿಗ್ಭ್ರಾಂತಿ ಸದಸ್ಯರನ್ನು ಆವರಿಸಿದಂತೆ ಕಂಡಿತು.

ಕಾರಣ ?

ಪಾಟೀಲರು ಆ ಪುಸ್ತಕಗಳನ್ನು ಸಾಹಿತ್ಯ ಪರಿಷತ್ತಿನಿಂದ ತಂದಿರಲಿಲ್ಲ, ಮಾರು ಕಟ್ಟೆಯಿಂದಲೂ ತಂದಿರಲಿಲ್ಲ. ಮಾಧ್ಯಮಿಕ ಶಾಲೆಯ ಗ್ರಂಥಭಂಡಾರದಿಂದ ಎತ್ತಿ ಕೊಂಡು ಬಂದಿದ್ದರು. ಸರಕಾರದ ಆದೇಶದಂತೆ ಅವುಗಳನ್ನು ಕೊಳ್ಳಲಾಗಿತ್ತು. ಹಾಗೆ ಕೊಂಡುದು, ಮಕ್ಕಳ ವಾಚನಕ್ಕೋಸ್ಕರ, ಅವರ ಬೌದ್ಧಿಕ ವಿಕಾಸಕ್ಕೋಸ್ಕರ !

ವೈ. ಎಸ್. ಪಾಟೀಲರು ಚಪ್ಪಾಳೆಯ ಮೇಲೆ ಕಣ್ಣಿಟ್ಟಿರುವ ರಾಜಕಾರಣಿಯಲ್ಲ. ನಮ್ಮ ಸಾಮಾಜಿಕ ಜೀವನ ಮೌಲ್ಯಗಳ ಬಗೆಗೆ ಬಲವಾದ ಅಭಿಪ್ರಾಯಗಳಿರುವ ವಿಚಾರಶೀಲ ಶಾಸಕರಲ್ಲಿ ಅವರೊಬ್ಬರು. ಒಳಗಿನ ಸಂಕಟ ಅವರಿಂದ ಮಾತುಗಳನ್ನು ಆಡಿಸಿತು :

“ಶಾಲೆಯ ಗ್ರಂಥಭಂಡಾರಕ್ಕೆ ಇಂಥ ಪುಸ್ತಕಗಳನ್ನು ಕೊಳ್ಳುವಂತೆ ನಿರ್ದೇಶ ನೀಯಬೇಕಾದರೆ ಶಿಕ್ಷಣ ಶಾಖೆಯ ಅಧಿಕಾರಿಗಳು ಒಂದೋ ದಡ್ಡರಿರಬೇಕು, ಅಥವಾ ಭಂಡ ರಸಿಕರಿರಬೇಕು, ಇಲ್ಲವೆ ಲಂಚಕೋರರಿರಬೇಕು.”

* * * * *

ಶಿಕ್ಷಣಖಾತೆಯಲ್ಲಿ ಸುಧಾರಣೆಗಳಾಗುತ್ತಿವೆ. ಈ ಸಂಬಂಧದಲ್ಲಿ ವಿದ್ಯಾಸಚಿವ ಶಂಕರಗೌಡರು ನಿಷ್ಠುರ ಕ್ರಮಗಳನ್ನು ಕೈಗೊಳ್ಳುತ್ತಿದ್ದಾರೆ. ಅನೇಕ ಸಮಿತಿ ಉಪ ಸಮಿತಿಗಳು ರಚಿಸಲ್ಪಟ್ಟಿವೆ. ಹೀಗಿದ್ದರೂ, ಅರ್ಜಿಗಳೂ ಫೈಲುಗಳೂ ತಮ್ಮದೇ ಆದ ವಿಚಿತ್ರ ರೀತಿಯಲ್ಲಿ ಫಲ ಬಿಡುತ್ತವೆ.

ಕೇಂದ್ರ ಗ್ರಂಥಾಲಯಕ್ಕೂ ಅವರ ಅಧೀನದಲ್ಲಿರುವ ಗ್ರಂಥ ಭಂಡಾರಗಳಿಗೂ ಮೇಲಿನ ಮಾತು ಅನ್ವಯಿಸುತ್ತದೆ. ಅಲ್ಲಿಯೂ ಸಮಿತಿ ಉಪಸಮಿತಿಗಳಿವೆ. ಫಲಿತಾಂಶ ಮೇಲಿನಂತೆಯೇ.

ಪ್ರಕಟಣೆಗೆ ಅವಕಾಶವಿಲ್ಲದೆ ಒಳ್ಳೆಯ ಹಸ್ತಪ್ರತಿಗಳು ಕೊಳೆಯುತ್ತಿರುವಾಗ, ಶ್ರೇಷ್ಠ ಗ್ರಂಥಗಳನ್ನು ಮುದ್ರಿಸಿ ಮಾರಾಟ ಮಾಡಲಾಗದೆ ಗ್ರಂಥಕರ್ತರೂ ಪ್ರಕಾಶಕರೂ ಸಾಲದ ಹೊರೆಯ ಕೆಳಗೆ ನರಳುತ್ತಿರುವಾಗ, ಸಾಹಿತ್ಯಮಠದ ಕನಿಷ್ಠರು ಪಾದಪೂಜೆಗೊಳಗಾಗುತ್ತಾರೆ. "ಇದೊಂದು ಒಳ್ಳೆಯ ಗ್ರಂಥದ ೫೦೦ ಪ್ರತಿಗಳನ್ನಾದರೂ ಕೊಳ್ಳಬಲ್ಲಿರಾ?" ಎಂದು ಕೇಳಿನೋಡಿ. "ಹಣವಿಲ್ಲ" ಎನ್ನುತ್ತಾರೆ. ಅದೇ ವೇಳೆಗೆ ಬೇರೆ ಕೆಲ ಪುಸ್ತಕಗಳ 'ಖರೀದಿ' ಮಾತ್ರ ನಡೆದೇ ಇರುತ್ತದೆ!

ಕನ್ನಡ ಸರಸ್ವತಿಯ ಪೂಜಾಸಮಯದಲ್ಲಿ ವಾಸ್ತವವಾಗಿ ಕೇಳಿಬರುತ್ತಿರುವುದು ಅಪಾಯದ ಘಂಟೆ.

೧೭-೩-೧೯೬೮

# ಹೆಳವನಿಗೆ ಹಾರುವ ಆಸೆ

ಆಕಾಶವಾಣಿಯವರು ಅಂಚೆಯ ಮೂಲಕ ಪುಟ್ಟದೊಂದು ಪುಸ್ತಕವನ್ನು ಕಳುಹಿಸಿದ್ದಾರೆ. ಅದೊಂದು ಬಗೆಯ ಸ್ವಪರಿಚಯ. ಭಾರತ ಸರ್ಕಾರದ ಅಂಗವಾಗಿರುವ ಆಲ್ ಇಂಡಿಯಾ ರೇಡಿಯೋ ಯಾವ ರೀತಿ ಕೆಲಸ ಮಾಡುತ್ತಿದೆ? ಪ್ರಸಾರ ನಿಲಯದಲ್ಲಿ ಏನೇನಿದೆ? ವಿವಿಧ ವಿಭಾಗಗಳ ಕಾರ್ಯನಿರ್ವಹಣೆ ಹೇಗೆ? ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಬಯಸುವವರು ಏನು ಮಾಡಬೇಕು? ನಿಲಯದ ಕಲಾವಿದರು ಎಂದರೆ ಯಾರು? ಅವರಿಗಾಗಿ ಏನೇನು ಅನುಕೂಲಗಳನ್ನು ಕಲ್ಪಿಸಲಾಗಿದೆ?– ಈ ಎಲ್ಲ ವಿವರಗಳು ಪುಸ್ತಿಕೆಯಲ್ಲಿವೆ.

ಸಾಧಾರಣವಾಗಿ ಸಾರ್ವಜನಿಕರಿಗೆ ತಿಳಿಯದೆ ಇರುವ ಒಂದು ಅಂಶವೂ ಇದೆ. ಮನೆಬಿಟ್ಟು ಹೋದ ಹುಡುಗ ಮರಳಿ ಬಂದಿಲ್ಲ ಎಂದಿಟ್ಟುಕೊಳ್ಳಿ. ಪತ್ರಿಕೆಗಳಲ್ಲಿ ಪ್ರಕಟಣೆ ಕೊಡುವುದೇನೋ ಸರಿಯೆ. ಆದರೆ ಆಕಾಶವಾಣಿಯ ಮೂಲಕ ಸಂದೇಶ ಪ್ರಸಾರವನ್ನೂ ಮಾಡಬಹುದು. (ಓಡಿ ಹೋಗುವ ಹೋರಿ ಎಮ್ಮೆಗಳಿಗೆ ಇದು ಅನ್ವಯಿಸುವುದಿಲ್ಲ.) ಪುಸ್ತಕದಲ್ಲಿ ಬರೆದಿಲ್ಲವಾದರೂ, ಯಾವನೇ ಒಬ್ಬ ರೋಗಿಗೆ ನಿರ್ದಿಷ್ಟ ಗುಣದ ರಕ್ತವೇನಾದರೂ ಬೇಕಿದ್ದರೆ, ಆಕಾಶವಾಣಿಯ ಮೂಲಕ ವಿನಂತಿ ಮಾಡುವುದಕ್ಕೂ ಅವಕಾಶವುಂಟು.

'ಪ್ರತಿಭೆಗೆ ಪ್ರೋತ್ಸಾಹ ನೀಡುವುದು ಆಕಾಶವಾಣಿಯ ಕಾರ್ಯಗಳಲ್ಲಿ ಒಂದು', ಎನ್ನುತ್ತದೆ ಪುಸ್ತಕ. ಅಕ್ಷಿನಲ್ಲಿ ಸಾಮಾನ್ಯವಾಗಿ ಕಂಡುಬರದ ಅನಾಮಿಕರ ಸಣ್ಣ ಕತೆ, ನಾಟಕ, ಕವಿತೆಗಳೇ ಹೆಚ್ಚಾಗಿ ಪ್ರಸಾರವಾಗುವುದನ್ನು ಕಂಡರೆ ಮೇಲಿನ ಮಾತಿನ ಸತ್ಯತೆ ಯಾರಿಗಾದರೂ ಅರಿವಾದೀತು!

ವಿವಿಧ ಭಾರತಿಯ ಕೆಲವು ಕೇಂದ್ರಗಳಲ್ಲಿ ಜಾಹೀರಾತು ಪ್ರಕಟಣೆಗೂ ಏರ್ಪಾಟಿದೆ. ಇದರಿಂದ ತಮ್ಮ ಮಡಿವಂತಿಕೆಗೆ ಭಂಗ ಬಂದಿದೆ ಎಂಬ ಭಾವನೆ ಆಕಾಶವಾಣಿಯ ಹಲವರಲ್ಲಿ ಇರುವಂತೆ ತೋರುತ್ತದೆ. ಜಾಹೀರಾತು ದರಗಳ ಬಗೆಗೆ ಎರಡು ಮಾತುಗಳಲ್ಲಿ ವಿವರ ನೀಡುವ ಔದಾರ್ಯವನ್ನು ಈ ಪುಟ್ಟ ಪುಸ್ತಕದಲ್ಲಿ ತೋರಿಸಿಲ್ಲ.

ಕಾರ್ಯಕ್ರಮ ನಿಯತಕಾಲಿಕೆಗಳಿಗೆ ಸಂಬಂಧಿಸಿದ ಮಾಹಿತಿ ಸ್ವಾರಸ್ಯಪೂರ್ಣವಾಗಿದೆ. ಸ್ವಾತಂತ್ರ್ಯ ಬಂದು ೨೦ ವರ್ಷಗಳು ಸಂದರೂ ಈ ನಿಯತಕಾಲಿಕೆ ಪ್ರತಿವಾರ ಪ್ರಕಟವಾಗುವುದು ಇಂಗ್ಲಿಷೊಂದರಲ್ಲೇ. ಹದಿನೈದು ದಿನಗಳಿಗೊಮ್ಮೆ ಈ ನಿಯತಕಾಲಿಕೆ ಪ್ರಕಟವಾಗುವುದು ರಾಷ್ಟ್ರದ ಹದಿನಾಲ್ಕು ಭಾಷೆಗಳಲ್ಲಿ ಏಳರಲ್ಲಿ

ಮಾತ್ರ. ಈ ಪುಟಗಳನ್ನು ಓದಿದಾಗ ನಮಗೆ ಬಡ ಕನ್ನಡದ ನೆನಪಾಗುವುದು ಸ್ವಾಭಾವಿಕ. ಕನ್ನಡದಲ್ಲೂ ಆಕಾಶವಾಣಿಯ ಕಾರ್ಯಕ್ರಮಗಳನ್ನು ತಿಳಿಸುವ ನಿಯತಕಾಲಿಕೆ ಇರಬೇಕೆಂದು ಕನ್ನಡಿಗರು ಕೇಳತೊಡಗಿ ಅನೇಕ ವರ್ಷಗಳು ಸಂದಿವೆ. ಮೈಸೂರು ರಾಜ್ಯದಲ್ಲಿ – ಅರ್ಥಾತ್ ಕರ್ನಾಟಕದಲ್ಲಿ – ಒಂದು ಮುಖ್ಯ ಕೇಂದ್ರ, ಇನ್ನೊಂದು ಉಪ ಮುಖ್ಯ ಕೇಂದ್ರ ಹಾಗೂ ಎರಡು ಮರುಪ್ರಸಾರ ಕೇಂದ್ರಗಳಿವೆ. ರೇಡಿಯೋ ಉಳ್ಳವರ ಸಂಖ್ಯೆ ವರ್ಧಿಸಿವೆ. ಆದರೆ ಅವರಿಗಾಗಿ ಕನ್ನಡ ಪ್ರಸಾರಿಕೆ ಮಾತ್ರ ಇಲ್ಲ. ಹತ್ತು ಹನ್ನೊಂದು ವರ್ಷಗಳಿಗೆ ಹಿಂದೆ 'ಆಕಾಶವಾಣಿ ಪ್ರಸಾರಿಕಾ' ಎಂಬ ಹೆಸರು ಹೊತ್ತು ಒಂದೋ ಎರಡೋ ಸಂಚಿಕೆಗಳು ಬಂದಿದ್ದುವು. ಅಷ್ಟರೊಳಗೇ ಬಾಲಗ್ರಹ ಹಿಡಿ ಬಡೆಯಿತು.

ಆಯಾ ವರ್ಷ ಪ್ರಸಾರವಾದ ಇಂಗ್ಲಿಷ್ ಭಾಷಣಗಳನ್ನು ವಾರ್ಷಿಕ 'ಮಿಸಲನಿ' ಯಲ್ಲಿ ಆಕಾಶವಾಣಿ ಪ್ರಕಟಿಸುತ್ತದೆ. ಹಿಂದಿ ಭಾಷಣಗಳು ವಾರ್ಷಿಕ 'ಪ್ರಸಾರಿಕಾ' ದಲ್ಲಿ ಬರುತ್ತವೆ. ಬೇರೆ ಭಾಷೆಗಳಲ್ಲಿ, ಮುದ್ರಿಸಲು ಯೋಗ್ಯವಾದ ಭಾಷಣಗಳು ಪ್ರಸಾರವಾಗುತ್ತಿಲ್ಲ ಎಂದು ಬೇಕಿದ್ದರೆ ಅರ್ಥಮಾಡಿಕೊಳ್ಳಬಹುದು.

ಪತ್ರಿಕಾ ಪ್ರಪಂಚದ ಅನುಭವಿಗಳು ಹೇಳುತ್ತಾರೆ: ಜಾಹೀರಾತುಗಳನ್ನು ಸ್ವೀಕರಿಸಿದರೆ ಆಕಾಶವಾಣಿಯ ನಿಯತಕಾಲಿಕೆ – ಅದು ಯಾವ ಭಾಷೆಯಲ್ಲೇ ಇರಲಿ – ಲಾಭದಾಯಕವಾಗುತ್ತದೆ.

.... ತಮ್ಮ ಪ್ರಸ್ತುತ ನಿಲುವಿಗೆ ಹೊಂದಿಕೊಳ್ಳುವಂತಿದ್ದರೆ ಮಾತ್ರ ಇತರರ ಅಭಿಪ್ರಾಯಗಳು ಅಧಿಕಾರ ವರ್ಗಕ್ಕೆ ಪಥ್ಯ.

* * * * *

ರಾಷ್ಟ್ರದ ಸುದ್ದಿ ಪ್ರಸಾರ ಶಾಖೆಯ ಹೊಸ ಮಂತ್ರಿ ಕೆ. ಕೆ. ಷಾ ಪತ್ರಿಕೋದ್ಯಮದ ಅನುಭವವಿರುವ ವ್ಯಕ್ತಿ. ಪ್ರಜಾಪ್ರಭುತ್ವದಲ್ಲಿ ಜನಜಾಗೃತಿಯನ್ನುಂಟು ಮಾಡುವ ಕಾರ್ಯದಲ್ಲಿ ಆಕಾಶವಾಣಿ ಯಶಸ್ವಿಯಾಗಿಲ್ಲ – ಎಂದು ಅವರು ಒಪ್ಪುತ್ತಾರೆ.

ಆಕಾಶವಾಣಿಯ ಅಸ್ವಾಸ್ಥ್ಯ ಈಗ ಹಳೆಯದು. ಸರಕಾರದಲ್ಲಿ ಸರ್ವವ್ಯಾಪಿಯಾಗಿರುವ ನೌಕರಶಾಹೀ ಮನೋಭಾವ ಅನಿವಾರ್ಯವಾಗಿ ಬಹುಜನ ಸಂಪರ್ಕ ಸಾಧನವಾದ ಪ್ರಸಾರ ವ್ಯವಸ್ಥೆಯನ್ನೂ ಆಕ್ರಮಿಸಿದೆ. ಕಲ್ಪನಾಶಕ್ತಿಯುಳ್ಳ ಸೃಜನಶೀಲರಾದ ವ್ಯಕ್ತಿಗಳು ಆಕಾಶವಾಣಿಯಲ್ಲಿ ಅಧಿಕಾರಿಗಳಾಗಿರುವುದು ಕಡಮೆ. ಆಶ್ಚರ್ಯದ ಸಂಗತಿಯೆಂದರೆ, ಅಂಥ ಪ್ರತಿಭಾಶಾಲಿ ಯುವಕರಿಗೆ ಆಕಾಶವಾಣಿಯಲ್ಲಿ ಅವಕಾಶ ದೊರೆತರೂ, ಬಹಳ ಬೇಗನೆ ಅವರು ಕೆಂಪುಪಟ್ಟಿಯ ವೃತ್ತಿಧರ್ಮಕ್ಕೆ ಬಲಿಯಾಗುತ್ತಾರೆ. ಬಿಚ್ಚುನುಡಿಯ ಟೀಕೆ ವಿಮರ್ಶೆಗಳಿಗೆ ಆಕಾಶವಾಣಿ ವಲಯದಲ್ಲಿ ಸ್ಥಾನವಿಲ್ಲ. ಹಿರಿಯ ಅಧಿಕಾರಿಗಳನ್ನು ಓಲೈಸುವುದರಲ್ಲೇ ಕಿರಿಯರು ಜೀವ ಸವೆಸುತ್ತಾರೆ.

ಒಂದು ಬಗೆಯ ಸರ್ವಜ್ಞ ಪ್ರವೃತ್ತಿ ಆಕಾಶವಾಣಿಯ ಉದ್ಯೋಗಿಗಳಲ್ಲಿ ಇರಬೇಕಾದ ಗುಣ. ಆದರೆ, ಆ ಗುಣ ಮಿತಿ ಮೀರಿ ಇಲ್ಲದ ಆತ್ಮಪ್ರತಿಷ್ಠೆಗೂ ದಾರಿ ಮಾಡಿಕೊಡುತ್ತದೆನ್ನುವುದೇ ವಿಷಾದದ ಸಂಗತಿ.

ಈ ಬಣ್ಣನೆ ಯಾವುದೇ ಒಂದು ಪ್ರಧಾನ ಭಾಷೆಯ ನಿಲಯಕ್ಕೆ ಅನ್ವಯಿಸುವುದಿಲ್ಲ. ಇಡೀ ಆಕಾಶವಾಣಿಗೇ ಇದು ಸಲ್ಲುತ್ತದೆ.

* * * * *

ಬ್ರಿಟಿಷರಿದ್ದಷ್ಟು ಕಾಲ ಅವರ ಸರಕಾರದ ಮುಖವಾಣಿಯಾಗಿತ್ತು ಆಲ್ ಇಂಡಿಯಾ ರೇಡಿಯೋ. ಸ್ವಾತಂತ್ರ್ಯ ಬಂದ ಮೇಲೆ ಹಿಂದಿನ ಪರಂಪರೆಯನ್ನು ಅನುಸರಿಸುವ ಬದಲು, ಹೊಸ ಧ್ಯೇಯ ಘೋಷಣೆಗಳನ್ನು ರೂಪಿಸಿಕೊಂಡು ಆಕಾಶವಾಣಿ ಕಾರ್ಯಪ್ರವೃತ್ತವಾಗಬೇಕಿತ್ತು. ಹೋಗಲಿ, ಈಗಲಾದರೂ ಏನಾದರೂ ಮಾಡಬಹುದೇನೋ ಎಂಬ ಚಿಂತೆ ಹಲವರಿಗೆ. ರೋಗ ಉಲ್ಬಣವಾದ ಮೇಲೆ ನಿವಾರಣೆ ಕಷ್ಟದ ಕೆಲಸ.

ಈ ಅಶರೀರವಾಣಿಗೆ ಜೀವ ತುಂಬಲು ಸ್ವಾಯತ್ತೆಯುಳ್ಳ ಆಡಳಿತ ಮಂಡಳಿ ರಚಿಸಿ ಯತ್ನಿಸಬಹುದು. ಆದರೆ ಕೇಂದ್ರದ ವರಿಷ್ಠರಿಗೆ ತಮ್ಮ ಮುಂದಿರುವ ಭಾರೀ ಸಮಸ್ಯೆಗಳೆದುರು ಆಕಾಶವಾಣಿಯ ಪ್ರಶ್ನೆ ಅಲ್ಪವಾಗಿ ತೋರುತ್ತದೆ.

ಕ್ರಮಕ್ರಮವಾಗಿ ರಾಷ್ಟ್ರದಾದ್ಯಂತ ಟೆಲಿವಿಷನ್ ಸ್ಥಾಪಿಸಲು ಸರಕಾರ ನಿರ್ಧರಿಸಿದೆ. ಒಳ್ಳೆಯದೇ. ಆದರೆ ಆಕಾಶವಾಣಿಯ ರೋಗ ಗುಣವಾಗುವುದಕ್ಕೆ ಮುಂಚೆಯೇ ಈ ಟೆಲಿವಿಷನ್ ಬರುತ್ತಿದೆಯಲ್ಲ; ಈ ಅಧಿಕಾರಿಗಳೇ ಹಲವರು ಅದನ್ನು ನಡೆಸುವರಲ್ಲ – ಎಂಬುದೊಂದೇ ಬೇಸರದ ಸಂಗತಿ.

ನಡೆಯುವುದನ್ನು ಸರಿಯಾಗಿ ಕಲಿಯಲಾಗದ ಹೆಳವನಿಗೆ ಹಾರುವ ಬಯಕೆ. “ಅಯ್ಯೋ ಪಾಪ!” ಎನಿಸುವುದು ಸಹಜವಷ್ಟೆ ?

೨೪–೩–೧೯೬೮

# ಹೊನ್ನಶೂಲದಿಂದ ಮುಕ್ತಿ

ಪದ್ಮ ಪ್ರಶಸ್ತಿಗಳನ್ನು (ಶ್ರೀ, ಭೂಷಣ, ವಿಭೂಷಣ) ಮೊನ್ನೆ ಹಂಚಿದರು. ಈ ವರ್ಷದ ಪ್ರಶಸ್ತಿವಿಜೇತರಲ್ಲಿ ಹಲವು ಜನ ಸಾಹಿತಿಗಳಿದ್ದರು. (ಪದ್ಮಶ್ರೀ ಪಡೆದ ಅಂಬಿಕಾತನಯದತ್ತರು ದಿಲ್ಲಿಗೆ ಹೋಗಲಿಲ್ಲ; ಶಿವರಾಮ ಕಾರಂತರು ರಾಷ್ಟ್ರಪತಿಯ ಸಮ್ಮುಖದಲ್ಲಿ ಪದ್ಮಭೂಷಣರಾದರು.)

ಈ ಪ್ರಶಸ್ತಿಗಳಿಗೆ ಹಿಂದೆ ಇದ್ದ ಮೌಲ್ಯ ಈಗ ಇಲ್ಲ. ಸಾಮಾಜಿಕ ಜೀವನದಲ್ಲಿ ಕಳೆದ ಕೆಲ ವರ್ಷಗಳಲ್ಲಿ ಕ್ರಮ ಕ್ರಮವಾಗಿ ಆಗಿರುವ ಮೌಲ್ಯಛೇದನ ಪದ್ಮ ಪ್ರಶಸ್ತಿಗಳ ಬೆಲೆಯನ್ನೂ ಇಳಿಸಿದೆ ಎಂದರೆ, ಆಶ್ಚರ್ಯಪಡಬೇಕಾಗಿಲ್ಲ.

ಆದರೂ ಸಾರ್ವಜನಿಕ ಜೀವನದಲ್ಲಿ ಪದ್ಮ ಪ್ರಶಸ್ತಿಗಳು ಸಾಕಷ್ಟು ಆಳವಾಗಿ ಬೇರು ಬಿಟ್ಟಿವೆ. ಈ ದೇಶದ ಬರೆಹಗಾರರ ಮಟ್ಟಿಗೆ ಹೇಳುವುದಾದರೆ ಸಾಯುವುದಕ್ಕೆ ಮುನ್ನ ಅವರು ಸಾಧಿಸಬೇಕಾದ ಮಹತ್ವಾಕಾಂಕ್ಷೆಗಳು ಮೂರು : ಅಕಾಡಮಿ ಪಾರಿತೋಷಕ, ಪದ್ಮ ಪ್ರಶಸ್ತಿ, ಜ್ಞಾನಪೀಠ ಪಾರಿತೋಷಕ. ಇನ್ನೂ ಒಂದನ್ನು ಸೇರಿಸಬಹುದಾದರೆ, ರಾಜ್ಯಸಭೆಗೆ ಕಲೆ ಸಾಹಿತ್ಯಗಳ ಪ್ರತಿನಿಧಿಯಾಗಿ ನಾಮಕರಣ.

ಈ ಎಲ್ಲ ಸನ್ಮಾನಗಳಿಂದ ಸಾಹಿತಿಯ ಕರ್ತೃತ್ವಶಕ್ತಿಗೆ ದೊರೆಯುವ ಪ್ರೋತ್ಸಾಹವೆಷ್ಟು? ಎಂಬ ಪ್ರಶ್ನೆಯನ್ನು ಮಾತ್ರ ಉತ್ತರಿಸುವುದು ಕಠಿನ.

ಉತ್ತರಕ್ಕಾಗಿ ತಡಕಾಡುವವನು ಇದಿರಿಸಬೇಕಾಗುವ ಇನ್ನೊಂದು ಪ್ರಶ್ನೆ : ಇಂಥ ಸನ್ಮಾನಗಳಿಂದ – ಇವು ನಿರ್ಮಿಸುವ ಹೊಸ ವಾತಾವರಣದಿಂದ – ಬರೆಯುವವನ ಕರ್ತೃತ್ವಶಕ್ತಿಗೆ ಧಕ್ಕೆ ತಗಲುವ ಸಂಭವವುಂಟೆ?

* * * * *

ಎಲ್ಲ ಕಲಾವಿದರನ್ನೂ ಬರೆಹಗಾರರನ್ನೂ ಅಂತರ್ಮುಖಿಗಳನ್ನಾಗಿ ಮಾಡುವಂತಹ ಘಟನೆಯೊಂದು ಇತ್ತೀಚೆಗೆ ಜರಗಿತು. ಅದು, ತಮಗೆ ದೊರೆತ ಸುವರ್ಣ ಪದಕವನ್ನು ಚಿತ್ರಕಾರ ಕೃಷ್ಣ ಖನ್ನಾ ಮಾರನೆಯ ದಿನ ಹಿಂತಿರುಗಿಸಿದ ಸಂಗತಿ.

ಖನ್ನಾ ಅಂದರು :

"ನನಗೆ ನೀಡಲಾದ ಪಾರಿತೋಷಕ ಪಾರಿತೋಷಕವೇ ಅಲ್ಲ. ಅದು ಕಲುಷಿತವಾಗಿತ್ತು. ಅದನ್ನು ನಾನು ಹಿಂತಿರುಗಿಸಲೇಬೇಕಾಯಿತು."

ಕಲಾವಿದನ ಪತ್ನಿ ದೇವಯಾನಿ ಕೃಷ್ಣ (ಸ್ವತಃ ಕಲಾವಿದೆ) ಅಂದರು :

"ಅದನ್ನು ಮನೆಯಲ್ಲಿಟ್ಟುಕೊಂಡು ನಾವು ನಿದ್ದೆ ಮಾಡುವಂತಿರಲಿಲ್ಲ."

ಯಾಕೆ ? ಯಾವ ಅರ್ಥದಲ್ಲಿ ಕಲುಷಿತ ಆ ಪಾರಿತೋಷಕ ?

* * * * *

ಭಾರತದಲ್ಲಿ ಹೊಸದಾಗಿ ಪ್ರಾರಂಭವಾದದ್ದು, ತ್ರೈವಾರ್ಷಿಕ ಚಿತ್ರಪ್ರದರ್ಶನ. ಏರ್ಪಡಿಸಿದ್ದು, ಲಲಿತಕಲಾ ಅಕಾಡಮಿ.

ವಿವಿಧ ದೇಶಗಳ ಕಲಾಕೃತಿಗಳನ್ನು ಪ್ರದರ್ಶನಕ್ಕಾಗಿ ಆರಿಸಲು ಇಬ್ಬರು ಪರಿಣತರು ('ಕಮಿಷನರ'ರು) ನೇಮಿಸಲ್ಪಟ್ಟರು. ಅವರಲ್ಲೊಬ್ಬರು ಕೃಷ್ಣ ಖನ್ನಾ. ಇನ್ನೊಬ್ಬ ಕಮಿಷನರು ಪ್ರದರ್ಶನಕ್ಕಾಗಿ ಖನ್ನಾರ ಎರಡು ಕೃತಿಗಳನ್ನೂ ಆರಿಸಿದರು. ಅಕಾಡಮಿಯ ಕಾರ್ಯಕಾರೀ ಸಮಿತಿ ಆಯ್ಕೆಗೆ ಒಪ್ಪಿಗೆ ನೀಡಿತು. ಆರಂಭದಲ್ಲೇ ಟೀಕೆಯ ಸಣ್ಣದನಿ ಎಲ್ಲಿಂದಲೋ ಕೇಳಿಸಿತೆಂದು, ತಮ್ಮ ಚಿತ್ರಗಳನ್ನು ವಾಪಸು ಪಡೆಯಲು ಖನ್ನಾ ಸಮ್ಮತಿ ಕೇಳಿದರು. ಆದರೆ ಅಕಾಡಮಿ ಒಪ್ಪಲಿಲ್ಲ. ಎರಡು ತಿಂಗಳ ಅವಧಿಯಲ್ಲಿ ಪ್ರದರ್ಶನವನ್ನು ದಿಲ್ಲಿಯ ೨೦,೦೦೦ ಕ್ಕೂ ಹೆಚ್ಚು ಕಲಾಪ್ರೇಮಿಗಳು ನೋಡಿ ಮೆಚ್ಚಿದರು. ಅಂತರರಾಷ್ಟ್ರೀಯ ಖ್ಯಾತಿಯ ನಿರ್ಣಾಯಕ ಮಂಡಳಿಯೊಂದು ಆರು ಜನರಿಗೆ ಸ್ವರ್ಣ ಪದಕಗಳನ್ನು ನೀಡಿತು. ಅವರಲ್ಲೊಬ್ಬರು ಕೃಷ್ಣ ಖನ್ನಾ.

ಪಾರಿತೋಷಕ ವಿತರಣ ಸಮಾರಂಭದಲ್ಲಿ ಪ್ರಧಾನಿ ಇಂದಿರಾ ಗಾಂಧಿ, ಕಮಿಷನರರಲ್ಲಿ ಒಬ್ಬರಾಗಿದ್ದ ಖನ್ನಾ ಪ್ರದರ್ಶನದಲ್ಲಿ ಭಾಗವಹಿಸಬಾರದಿತ್ತು ; ಲೋಕಸಭೆಯಲ್ಲೂ ಬೇರೆ ಕಡೆಗಳಲ್ಲೂ ಪ್ರಶ್ನೆಗಳಿಗೆ ಎಡೆಕೊಡುವಂಥದ್ದು ನಡೆದದ್ದು ದುರದೃಷ್ಟಕರ – ಎಂದರು.

ಆ ಮಾತುಗಳನ್ನು ಕೇಳಿ 'ಅಸುಖಿ'ಯಾಗಿ ಸ್ವರ್ಣ ಪದಕದೊಡನೆ ಮನೆಗೆ ತೆರಳಿದ ಕೃಷ್ಣ ಖನ್ನಾ ನಿದ್ದೆಯಿಲ್ಲದ ರಾತ್ರಿಯನ್ನು ಕಳೆದರು.

ಬೆಳಗಾಗುವ ವೇಳೆಗೆ ಪದಕವನ್ನು ಹಿಂತಿರುಗಿಸುವ ತೀರ್ಮಾನವನ್ನು ಅವರು ಕೈಗೊಂಡಿದ್ದರು.

ನೆರೆದಿದ್ದ ವಿವಿಧ ದೇಶಗಳ ರಾಯಭಾರಿಗಳ ಹಾಗೂ ಕಲಾವಿದರ ಸಮ್ಮುಖದಲ್ಲಿ ತಮ್ಮನ್ನು ಹೀಗಳೆಯಲಾಯಿತು ; "ಕಲಾವಿದರನ್ನು ಗೌರವಿಸಲೆಂದು ಏರ್ಪಡಿಸಿದ್ದ ಸಮಾರಂಭದಲ್ಲಿ ಕಲಾವಿದರನ್ನು ಅವಮಾನಿಸಲಾಯಿತು"– ಇದು ಕೃಷ್ಣ ಖನ್ನಾ ಹೊರಿಸಿರುವ ಆರೋಪ.

* * * * *

ಪ್ರದರ್ಶನದಲ್ಲಿ ನಿರ್ದೇಶಕರಲ್ಲೊಬ್ಬರಾದ ಖನ್ನಾ ಭಾಗವಹಿಸಿದ್ದು ; ಪ್ರಧಾನಿ ಬಹಿರಂಗವಾಗಿ ಅದನ್ನು ಟೀಕಿಸಿದ್ದು – ಇವೆರಡರಲ್ಲೂ ಔಚಿತ್ಯ ಅನೌಚಿತ್ಯಗಳ ಪ್ರಶ್ನೆ ಇದೆ. ಲೋಕಸಭೆ ಮತ್ತಿತರ ಕಡೆಗಳಲ್ಲಿ ಕೇಳಿ ಬರುವ ಪ್ರಶ್ನೆಗಳ ಚಿಂತೆ ರಾಜಕಾರಣಿ ಪ್ರಧಾನಿಗೆ; ನೆರೆದ ಸಭೆಯಲ್ಲಾದ ಮುಖಭಂಗದ ಚಿಂತೆ ಕಲಾವಿದನಿಗೆ....

ಪಾರಿತೋಷಕಗಳನ್ನು ನೀಡಿದ ಮೇಲೆ ಪ್ರಧಾನಿ ಟೀಕೆಯ ಮಾತು ಆಡಿದರೇ

ಹೇಗೆಂಬುದು ಸ್ಪಷ್ಟವಿಲ್ಲ. ಪೀಠಿಕೆಯ ರೂಪವಾಗಿ ಆ ಮಾತು ಬಂದಿದ್ದರೆ ಸ್ವರ್ಣ ಪದಕವನ್ನು ಎಲ್ಲರೆದುರು ನಿರಾಕರಿಸಿ ಸಭೆಗೆ ಮಂಡಿಸಿ ಹೊರಟದ್ದು, ಕಾದಂಬರಿಯ ನಾಯಕನಾಗುವ ಅವಕಾಶ ಬಿಸ್ವಾರಿಗೆ ದೊರೆಯುತ್ತಿತ್ತು.

ಅಥವಾ, ಸ್ವಂತ ಮನಸ್ಸು ಖಚಿತ ನಿಲುವು ತಳೆಯುವುದಕ್ಕೆ ಒಂದು ರಾತ್ರಿ ಬೇಕಾಯಿತೇನೋ....

*   *   *   *   *

ಸ್ವಲ್ಪ ವಿಚಿತ್ರವೆನಿಸುವಂಥದ್ದು ಆ ಸಮಾರಂಭದಲ್ಲಿ ಪ್ರಧಾನಿ ಆಡಿದ ಬೇರೊಂದು ಮಾತು. ಅವರೆಂದರು:

"ಭಾರತದಲ್ಲಿ ಕಲೆಯ ಮಹತ್ವವನ್ನು ನಾವು ಮನಗಂಡಿಲ್ಲ ಎಂದಲ್ಲ. ಆಹಾರ, ವಸತಿ, ಉದ್ಯೋಗ ಇವು ಹೆಚ್ಚು ಮುಖ್ಯವಲ್ಲವೆ ಎಂದು ಕಂಡುಹಿಡಿಯಲು ನಾವು ಆದ್ಯತೆ ನೀಡಬೇಕಾಯಿತು."

ಒಂದು ಕಾಲದಲ್ಲಿ ಶಾಂತಿನಿಕೇತನದಲ್ಲಿ ತುಸು ನರ್ತಿಸಿದ್ದ ಇಂದಿರಾರಿಂದ ಇಂಥ ಮಾತು!

ಪ್ರಧಾನಿ ಗಟ್ಟಿ ಮನಸ್ಸುಮಾಡಿ, ಭಾರತದ ಅನ್ನ – ಆಶ್ರಯ – ಉದ್ಯೋಗಗಳ ಸಮಸ್ಯೆ ಬಗೆಹರಿಯುವ ತನಕ ಕಲಾವಿದರು ಬರೆಹಗಾರರಿಗೆಲ್ಲ ಪ್ರಶಸ್ತಿ ಪಾರಿತೋಷಕ ಗಳನ್ನು ನೀಡುವ ದುಂದು ವೆಚ್ಚವನ್ನು ನಿಲ್ಲಿಸಬೇಕು! ಮಿತವ್ಯಯವೇ ಬದುಕಿನ ಉಸಿ ರಾಗಿರುವ ಈ ಬಡರಾಷ್ಟ್ರದಲ್ಲಿ ಸ್ವರ್ಣ ಪದಕಗಳೆ? ಛೆ! ಛೆ!

ಇಂಥ ತೀರ್ಮಾನವನ್ನೇನಾದರೂ ಕೇಂದ್ರ ಸರ್ಕಾರ ಮಾಡಿದರೆ ಭಾರತದ ಕಲೆ ಸಾಹಿತ್ಯಗಳ ಪಾಲಿಗೆ ಖಂಡಿತವಾಗಿಯೂ ಇದು ವರವೆನಿಸೀತು.

೨೮–೪–೧೯೬೮

# ಹೊಕ್ಕಳ ಬಳ್ಳಿಯ ಉರುಳು

ಮಕ್ಕಳ ಮೇಲೆ ಸರಕಾರಕ್ಕೆ ಕಣ್ಣು. ಅವರಲ್ಲವೆ ನಾಳೆಯ ಪ್ರಜೆಗಳು? ಒಳ್ಳೆಯ ಸಾಹಿತ್ಯ ಕಿರಿಯರ ಕೈಗೆ ದೊರೆತರೆ ಅವರ ಮೊಗ್ಗು ಮನಸ್ಸುಗಳು ಸುಂದರವಾಗಿ ಅರಳುತ್ತವೆ. ಸದಭಿರುಚಿ ರೂಪುಗೊಳ್ಳುತ್ತದೆ. ಯುವಕರಾದಾಗಲೂ ದೊಡ್ಡವರಾದಾಗಲೂ ಶುಚಿಯಾದ ಸಾಹಿತ್ಯವನ್ನೇ ಅವರು ಇಷ್ಟಪಡುತ್ತಾರೆ. ಹೀಗಾಗಲೆಂದು ಎಲ್ಲ ವಿವೇಕಿಗಳೂ ಆಶಿಸುತ್ತಾರೆ. ಸುಸಂಸ್ಕೃತ ಸರಕಾರವಾದರೂ ಅಷ್ಟೆ.

ಮಕ್ಕಳಿಗೋಸ್ಕರ ಒಳ್ಳೆಯ ಸಾಹಿತ್ಯ ಸೃಷ್ಟಿಯಾಗಲೆಂದು ಕೇಂದ್ರ ಸರಕಾರ ಧಾರಾಳವಾಗಿ ಹಣ ಖರ್ಚುಮಾಡುತ್ತದೆ. ಅಂಥ ಸಾಹಿತ್ಯ ಕೃತಿಗಳು ಲಭ್ಯವಾಗಲೆಂದು ಪ್ರತಿ ವರ್ಷ ಸ್ಪರ್ಧೆಗಳನ್ನೇರ್ಪಡಿಸುತ್ತದೆ. ಬಹುಮಾನಿತ ಕೃತಿಗಳ ಸಹಸ್ರ ಪ್ರತಿಗಳನ್ನು ಕೊಂಡು ವಾಚನಾಲಯಗಳಿಗೆ ಹಂಚುತ್ತದೆ. ಈ ಯೋಜನೆಯನ್ನು ಕೇಂದ್ರ ಸರಕಾರ ಹಾಗೂ ರಾಜ್ಯ ಸರಕಾರಗಳು – ಆಯಾ ಶಿಕ್ಷಣ ಇಲಾಖೆಗಳು – ಒಂದಾಗಿ ಕಾರ್ಯಗತಗೊಳಿಸುತ್ತವೆ.

ಹೀಗಾಗಿ ಸ್ಪರ್ಧೆಯ ಪ್ರಕಟಣೆ ಜಾಹೀರಾತು ರೂಪದಲ್ಲಿ ಪತ್ರಿಕೆಗಳನ್ನು ಅಲಂಕರಿಸಿದೊಡನೆಯೇ ನೂರಾರು ಲೇಖಕರು ಕಾರ್ಯಪ್ರವೃತ್ತರಾಗುತ್ತಾರೆ.

* * * * *

ಬಹುಮಾನ ಬಂದವರ ಹೆಸರುಗಳೆಲ್ಲ ಪತ್ರಿಕೆಗಳಲ್ಲಿ ಪ್ರಕಟವಾಗುತ್ತವಷ್ಟೆ? ಇಂಥ ಹೆಸರುಗಳು ಆಗಾಗ್ಗೆ ಬರುತ್ತಲೇ ಇರುವುದರಿಂದ ಎಲ್ಲವನ್ನೂ ಓದುಗರು ನೆನಪಿಡಲಾರರು. ಆದರೂ, ತನ್ನ ಬಳಗದಲ್ಲಿ ಬಹುಮಾನಿತ ಬರೆಹಗಾರ ಹೆಸರುವಾಸಿಯಾಗುತ್ತಾನೆ. ಸ್ಪರ್ಧಿಸಿದವರು ಹಾಗೂ ಸ್ಪರ್ಧಿಸಲು ಇಷ್ಟಪಡುವವರು ಭಾಗ್ಯಶಾಲಿಗಳನ್ನು ಯಾವಾಗಲೂ ನೆನಪಿಟ್ಟುಕೊಳ್ಳುತ್ತಾರೆ.

ಸ್ಪರ್ಧಿಸಲು ಇಚ್ಛಿಸಿ ಬರೆಯತೊಡಗಿದ ಲೇಖಕನೊಬ್ಬ ಸನ್ಮಾನಿತ ಮಹಾನುಭಾವರಿಗೆ ಕೈಜೋಡಿಸಿ ಕೇಳುತ್ತಾನೆ:

"ಈ ಸಾರೆ ಸ್ಪರ್ಧಿಸೋಣಾಂತಿದೀನಿ. ಹೋದ ಸಾರೆ ನಿಮಗೆ ಪ್ರೈಜ್ ಬಂತು ಅಲ್ವೆ, ಸಾರ್?"

ಸನ್ಮಾನಿತರು ನಿಗೂಢವಾಗಿ ಮುಗುಳು ನಗುತ್ತಾರೆ. ಅದರಲ್ಲಿ ನೋವಿನ ಛಾಯೆ ಬೇರೆ.

"ಅಂದರೆ...."

"ಬಹುಮಾನದ ಹಣ ಇನ್ನೂ ನನ್ನ ಕೈ ಸೇರಿಲ್ಲ. ನಿರಾಶರಾಗಬೇಡಿ, ಕಳುಹಿಸಿ."

....ಆ ವರ್ಷ ಆ ಲೇಖಕರ ಕೃತಿ ಪಾರಿತೋಷಕ ಪಡೆಯಿತು.

ಮತ್ತೊಮ್ಮೆ ಬಂತು ಜಾಹೀರಾತು. ಇನ್ನಿಬ್ಬ ಲೇಖಕರು ಅದನ್ನೋದಿ ಶಿಶು ಸಾಹಿತ್ಯ ಸೃಷ್ಟಿಗೆ ಸಿದ್ಧರಾದರು. ಈ ಮೊದಲೇ ಬಹುಮಾನಿತರಾದವರನ್ನು ಕಂಡು ಸ್ಫೂರ್ತಿಪಡೆಯೋಣವೆಂದು ಹುಡುಕುತ್ತ ಬಂದಾಗ ಆ ಇಬ್ಬರೂ ಕಾಣಲು ಸಿಗಬೇಕೆ?

ಉತ್ಸಾಹಿ ಕೇಳುತ್ತಾನೆ:

"ಕಳೆದ ಎರಡು ವರ್ಷಗಳಲ್ಲಿ ಜಯಗಳಿಸಿದವರು ನೀವು. ನನಗಾದರೋ ಅನುಭವ ಸಾಲದು. ಏನೇನು ಮಾಡಬೇಕು ಕೊಂಚ ಹೇಳಿ."

ಅವಾಚ್ಯ ಪದಗಳಲ್ಲಿ (ಮಕ್ಕಳು ಕೇಳಬಾರದು) ಅವರು ಅನುಭವ ಕಥನ ಆರಂಭಿಸಬೇಕೆ? ಹಿಂದಿನ ವರ್ಷ ಬಂದವರಿಗೂ ಈ ವರ್ಷ ದೊರೆತವರಿಗೂ ಸರ್ಕಾರ ಹಣ ಸಂದಾಯ ಮಾಡಿಯೇ ಇರಲಿಲ್ಲ!

"ಆ ನಿಧಿ ಬರದೆ ಬಡವರಾದ ನಾವು ಹಸ್ತಪ್ರತಿಗಳನ್ನು ಅಚ್ಚು ಹಾಕಿಸುವಂತಿಲ್ಲ. ಅಚ್ಚು ಹಾಕದೆ ಇದ್ದರೆ ಸರಕಾರ ನಮ್ಮಿಂದ ಕೊಳ್ಳುವಂತಿಲ್ಲ. ಹೀಗಾಗಿ ಮಕ್ಕಳಿಗಾಗಿ ನಾವು ಬರೆದ ಸಾಹಿತ್ಯ ಅವರ ಕೈ ಸೇರುವ ಸಂಭವವೇ ಇಲ್ಲ!"

"ಅಯ್ಯೋ! ಹೌದೆ?"

"ನಿರಾಶರಾಗಬೇಡಿ, ಇವರೇ. ನೀವೂ ಕಳುಹಿಸಿ. ಬಹುಮಾನ ಬರಲಿ."

—ಹೀಗೆಯೇ, ಇನ್ನೂ ಒಂದು ವರುಷ.

* * * * *

ಇದೇ ಮೊನ್ನೆ, 'ಪರಮಾಣು ಚರಿತ್ರೆ' ಮತ್ತಿತರ ಸೊಗಸಾದ ಪುಸ್ತಕಗಳ ಕರ್ತೃ ಜೆ.ಆರ್. ಲಕ್ಷ್ಮಣರಾಯರು ಬಹುಮಾನ ತಮಗೆ ನೀಡಿದ ಸುಖದ ಬಗ್ಗೆ ಪತ್ರಿಕೆಗಳಲ್ಲಿ ತೋಡಿಕೊಂಡರು. (ಹೀಗೆ ಸ್ಪಷ್ಟ ಮಾತುಗಳನ್ನು ಆಡುವುದಕ್ಕೂ ಈಗಿನ ಕಾಲದಲ್ಲಿ ಧೈರ್ಯ ಬೇಕು. ಸರಕಾರದ ಅಂದರೆ ಅಧಿಕಾರಿಗಳ ವೈರ ಕಟ್ಟಿಕೊಳ್ಳುವ ಕ್ಕುಂಟೆ? ಬಹುಮಾನಗಳಷ್ಟೇ ಅಲ್ಲದೆ, ಎಂದಾದರೊಮ್ಮೆ ಕಣ್ಣು ಮುಚ್ಚುವುದಕ್ಕೆ ಮುಂಚೆ – ಪಥ್ಯ ಆದರೂ ಆಗಬಹುದಲ್ಲ?)

ಮಕ್ಕಳಿಗಾಗಿ ಲಕ್ಷ್ಮಣರಾಯರು ಬರೆದ ಪುಸ್ತಕಕ್ಕೆ ಬಹುಮಾನ ಬಂದು ಎರಡು ವರ್ಷಗಳೇ ಸಂದಿವೆ. ಹಣ ಇನ್ನೂ ಸಂದಾಯವಾಗಿಲ್ಲ. ತಮಗೆ ಬೇಕಾಗಿರುವ ಪ್ರತಿಗಳು ಎಷ್ಟು ಎಂದು ಸರಕಾರ ತಿಳಿಸಿಲ್ಲ. ಬೆಲೆ ನಿಷ್ಕರ್ಷೆ ಮಾಡಿಲ್ಲ. ಹೀಗಾಗಿ ಹಸ್ತಪ್ರತಿ ಅಚ್ಚಿನ ಮನೆಗೆ ಹೋಗಿಲ್ಲ.

ಲಕ್ಷ್ಮಣರಾಯರು ಕಾಗದಗಳನ್ನು ಬರೆದರು. ಆದರೆ, ಉತ್ತರ ನೀಡುವ ಗೊಡವೆಗೇ ಅಧಿಕಾರಿಗಳು ಹೋಗಿಲ್ಲ.

* * * * *

ಹೀಗೆ ಯಾಕೆ ಎನ್ನುವಿರಾದರೆ, ಅಧಿಕಾರಿಗಳು ತಮ್ಮ ಕತೆ ಹೇಳುತ್ತಾರೆ:

ಸ್ಪರ್ಧೆ ಜಾಹೀರಾಗಿ ನವಮಾಸಗಳಾಗುವ ಹೊತ್ತಿಗೆ ಫಲಿತಾಂಶಗಳು ಪ್ರಕಟವಾಗುತ್ತವೆ. ರಾಜ್ಯ ಶಿಕ್ಷಣ ಇಲಾಖೆ ಆ ಬಳಿಕ ವೆಚ್ಚದ ಅಂದಾಜುಗಳನ್ನು ತಯಾರಿಸಿ ಒಪ್ಪಿಗೆಗಾಗಿ ರಾಜ್ಯ ಸರಕಾರಕ್ಕೆ ಕಳುಹಿಸಬೇಕು. ಇದಕ್ಕೆ ಕೆಲವು ತಿಂಗಳು ಹಿಡಿಯುತ್ತದೆ. ಬಹುಮಾನದ ಹಣವನ್ನೆಲ್ಲ ರಾಜ್ಯ ಸರಕಾರ ಮೊದಲು ತನ್ನ ಕೈಯಿಂದ ಹಾಕಬೇಕು. ಬಳಿಕ ಪ್ರಥಮ ಬಹುಮಾನದ ಮೊಬಲಗನ್ನು ಕೇಂದ್ರ ಸರಕಾರದಿಂದ ಪಡೆಯಬೇಕು. ಕೇಂದ್ರ ಸರಕಾರದ ಒಪ್ಪಿಗೆ ಬರುವಾಗ ಇನ್ನೂ ಕೆಲ ತಿಂಗಳು ಕಳೆದಿರುತ್ತವೆ. ಹೀಗೆ ಎಷ್ಟು ಬೇಗ ಎಂದರೂ ಫಲಿತಾಂಶ ಪ್ರಕಟವಾಗಿ ಬಹುಮಾನದ ಹಣ ಕೈಗೆ ಬರಬೇಕಾದರೆ ಮತ್ತೆ ನವಮಾಸಗಳಾಗುತ್ತವೆ.

೧೯೬೭ ರಲ್ಲಾದ ಸ್ಪರ್ಧೆಯದಂತೂ ಇನ್ನೂ ತಡ. ಯಾಕೆಂದರೆ, ಆ ತನಕ ಗ್ರಂಥ ಭಂಡಾರಗಳ ಕ್ಯುರೇಟರ್ ವಶವಲ್ಲಿತ್ತು, ಸ್ಪರ್ಧೆಯ ಆಗುಹೋಗು, ಉತ್ತರಕ್ರಿಯೆ. ೧೯೬೭ರ ಮೇಯಲ್ಲಿ ಶಿಕ್ಷಣ ಇಲಾಖೆಗೆ ಅದು ವರ್ಗಾಯಿಸಲ್ಪಟ್ಟಿತು!

ಹೊಕ್ಕಳ ಬಳ್ಳಿ ಕೊರಳ ಹಾರವಾಗಿ ಗರ್ಭದಲ್ಲಿಯೇ ಶಿಶು ಕಣ್ಣು ಮುಚ್ಚುವುದುಂಟು. ಸರಕಾರದ ಕೆಂಪು ಪಟ್ಟಿಗಳ ನಡುವೆ ಸಿಲುಕುವ ಶಿಶು ಸಾಹಿತ್ಯಕ್ಕೆ ಒದಗುವುದೂ ಇಂಥದೇ ದುರ್ಗತಿ.

ಅದರ ಬದಲು ಸರಕಾರೇತರ ಸಮಿತಿಗಳಿಗೆ ಸಂಸ್ಥೆಗಳಿಗೆ (ಸ್ಪರ್ಧೆ ಇಲ್ಲದೆಯೇ) ಉತ್ತಮ ಶಿಶು ಸಾಹಿತ್ಯವನ್ನು ಸೃಷ್ಟಿಸುವ ಹೊಣೆಯನ್ನು, ಅದಕ್ಕೆ ಬೇಕಾದ ಹಣವನ್ನು ಸರಕಾರ ಒಪ್ಪಿಸಬಹುದಲ್ಲ?

೫–೫–೧೯೬೮

# ಬಣ್ಣದ ಬರೆವಣಿಗೆ

ಹಳೆಯ ಕಾಲದ ರಾಜ ಮಹಾರಾಜರೇ ಇರಲಿ, ಆಧುನಿಕ ಸರ್ವಾಧಿಕಾರಿಗಳೇ ಇರಲಿ, ಅಥವಾ ಆರಿಸಿ ಬಂದ ಜನನಾಯಕರೇ ಇರಲಿ, ಬರೆಯುವವರ ವಿಷಯದಲ್ಲಿ ಅವರಿಗೆ ಆಸಕ್ತಿ ಇದ್ದದ್ದೇ. ಆಕಾಶವಾಣಿ, ಟೆಲಿವಿಷನ್, ಚಲಚ್ಚಿತ್ರ, ಪತ್ರಿಕೆಗಳು ಈ ಬಗೆಯ ಸಮುದಾಯ ಸಂಪರ್ಕ ಸಾಧನಗಳು ಎಷ್ಟಿದ್ದರೂ, ಮೂಲತಃ ಬರೆವಣಿಗೆಯೊಂದು ಬೇಕೇ ಬೇಕು.

ಬರೆದುದು ಅಚ್ಚಾಗುತ್ತದೆ, ಅಚ್ಚಾದುದನ್ನು ಓದುತ್ತಾರೆ, ಇಲ್ಲವೆ ಕೇಳುತ್ತಾರೆ. ಜನಸಮೂಹದ ಮನಸ್ಸಿನ ಮೇಲೆ ಒಂದಲ್ಲ ಒಂದು ಬಗೆಯ ಪರಿಣಾಮವನ್ನು ಬರೆವಣಿಗೆ ಮಾಡಿಯೇ ಮಾಡುತ್ತದೆ.

ಸಮಾಜಹಿತ ಎಂಬುದು ಕಾಲಗಳಿಗೆ ರಾಷ್ಟ್ರಗಳಿಗೆ ಸಂಬಂಧಿಸಿ ಬೇರೆ ಬೇರೆಯಾಗಿರುತ್ತದೆ. ಪರಂಪರಾನುಗತವಾಗಿ ಬಂದ ಕಟ್ಟುಪಾಡುಗಳು ಒಂದು ತೆರನಾದವು. ಪ್ರಕ್ಷೋಭೆಯ ಮೂಲಕ ಕ್ಷಿಪ್ರ ಬದಲಾವಣೆಯುಂಟುಮಾಡಿ ಕಡ್ಡಾಯವಾಗಿ ವಿಧಿಸಲಾಗುವ ಕಟ್ಟುಪಾಡುಗಳು ಇನ್ನೊಂದು ತೆರನಾದವು. ಇಷ್ಟಕ್ಕೂ ಸಾಮಾಜಿಕ ಚೌಕಟ್ಟು ನಿರ್ಮಾಣವಾಗುವುದು ಆಯಾ ರಾಜಕೀಯ ವ್ಯವಸ್ಥೆಯನ್ನು ಆಧರಿಸಿ.

ನಿರ್ದಿಷ್ಟ ಗುರಿಯುಳ್ಳ ರಾಜಕೀಯ ಸೂತ್ರಧಾರರು ಯಾವ ರೀತಿಯ ಬರೆವಣಿಗೆ ತಮ್ಮ ಸಮಾಜಹಿತದ ದೃಷ್ಟಿಯಿಂದ ಅಪೇಕ್ಷಣೀಯ ಎಂದು ಸೂಚಿಸುವುದುಂಟು. ತಮಗೆ ಅನುಕೂಲವಾದುದನ್ನು ಅವರು ಮೆಚ್ಚುತ್ತಾರೆ, ಪ್ರತಿಕೂಲವಾದುದನ್ನು ಅಲ್ಲಗಳೆಯುತ್ತಾರೆ.

ಆದರೆ ಸಾಹಿತ್ಯ, ಶಾಸನ ನಿರ್ದೇಶನಗಳಿಂದ ಸೃಷ್ಟಿಯಾಗುವುದಿಲ್ಲವಲ್ಲ? ಅದೇನಿದ್ದರೂ ವೈಯಕ್ತಿಕ ಕ್ರಿಯೆ, ಆಂತರಿಕ ಪ್ರಕ್ರಿಯೆ. ಆದುದರಿಂದ, ಆಡಳಿತಗಾರನ ದೃಷ್ಟಿಯಲ್ಲಿ ಬರೆಯುವವನು ವಿಕ್ಷಿಪ್ತ ವ್ಯಕ್ತಿ, ಯಾಕೆ – ಸಮಾಜದ ದೃಷ್ಟಿಯಲ್ಲೂ ಆತನೊಬ್ಬ ವಿಚಿತ್ರ ಮನುಷ್ಯನೇ.

* * * * *

ಇಂಥ ಮನುಷ್ಯ ಹೊಗಳಿಕೆಯಿಂದ ಉಬ್ಬುತ್ತಾನೆ. ಆತ ಬರೆದುದನ್ನು ಯಾರಾದರೂ ಮೆಚ್ಚಿಕೊಂಡರೆ ಆತನಿಗೆ ಅದೇ ಸ್ವರ್ಗ. ತೆಗಳಿಕೆಯಿಂದ ಅವನು ಖಿನ್ನನಾಗುತ್ತಾನೆ. ಸ್ವತಃ ಅಸಾಮಾನ್ಯ ವ್ಯಕ್ತಿಯಾದರೂ ಸಾಮಾನ್ಯ ಮನುಷ್ಯರಂತೆಯೇ ಅವನ ವರ್ತನೆ.

ವಿವೇಕಿಯಾದ ಬರಹಗಾರ ತನ್ನ ಹೊಣೆಗಾರಿಕೆಯನ್ನು ಖಂಡಿತ ಬಲ್ಲ. ತನ್ನ ಸಮಾಜದ, ರಾಷ್ಟ್ರದ ಉತ್ಕರ್ಷವನ್ನು ಅವನು ಬಯಸುವುದು ಸಹಜ. ಹೃದಯದ ನೋವಿನಿಂದ ಕೆಲವು ಕಟುಮಾತುಗಳನ್ನು ಬರೆದರೂ ಸದ್ಭಾವನೆ ಸದಿಚ್ಛೆಗಳಿಂದಲೇ ಅವನು ಸದಾ ಪ್ರೇರಿತ.

ಆದರೆ ವಿವೇಕ ಎಲ್ಲರಲ್ಲೂ ಇರುವ ವಸ್ತುವಲ್ಲ. ಕೆಲವರಲ್ಲಿ ಅದು ಹೆಚ್ಚಾಗಿರುತ್ತದೆ, ಕೆಲವರಲ್ಲಿ ಕಡಮೆ, ಮತ್ತೆ ಕೆಲವರಲ್ಲಿ ೦.

ಈ ಕಾರಣದಿಂದ ಸಾಹಿತ್ಯಸೃಷ್ಟಿಯಲ್ಲಿ ಅನೇಕ ಏರುಪೇರುಗಳೂ ಓರೆಕೋರೆಗಳೂ ಇರುತ್ತವೆ.

ಹೀಗಾಗಿ, ಸೃಷ್ಟಿಯಾದ ಸಾಹಿತ್ಯವೆಲ್ಲ ಉತ್ತಮವಾಗುವುದಿಲ್ಲ.

* * * *

ತನ್ನದೇ ಆದ ಸಮಾಜವಾದವನ್ನು ನಿರ್ಮಿಸುತ್ತಿರುವ, ಮಿಲಿಟರಿ ಶಿಶುವಾದ ಬರ್ಮಾ ಸರಕಾರದ ಸಾಂಸ್ಕೃತಿಕ ಮಂತ್ರಿಯ ಅಭಿಪ್ರಾಯದಂತೆ ಕಳೆದ ವರ್ಷ ಬರ್ಮಾದಲ್ಲಿ ಪ್ರಕಟವಾದ ಸಾಹಿತ್ಯಕೃತಿಗಳಲ್ಲಿ "ಶೇಕಡಾ ಹತ್ತು ಮಾತ್ರ ರಾಷ್ಟ್ರಕ್ಕೆ ಉಪಯುಕ್ತ". "ಅದಕ್ಕೂ ಹಿಂದಿನ ವರ್ಷ ಶೇಕಡಾ ಒಂಭತ್ತು ಉಪಯುಕ್ತವಾಗಿತ್ತು."

'ಉಪಯುಕ್ತ' ಎಂದರೆ ಯಾವುದು? 'ಶ್ರಮಜೀವಿ ದೈನಿಕ'ದ ಪ್ರಕಾರ, "ಲೇಖಕನು ಕಾರ್ಮಿಕರ – ರೈತರ ಜೀವನವನ್ನು ಅಭ್ಯಸಿಸಬೇಕು. ಜನರು ಅದನ್ನು ತಿಳಿದುಕೊಳ್ಳಲೆಂದು ಆ ಬಗ್ಗೆ ಬರೆಯಬೇಕು. ಜನಜೀವನವನ್ನು ಪ್ರತಿಧ್ವನಿಸಿದಾಗ ಮಾತ್ರ ಬರೆವಣಿಗೆ ಒಳ್ಳೆಯ ಸಾಹಿತ್ಯವಾಗುತ್ತದೆ, ಒಳ್ಳೆಯ ಕಲೆಯಾಗುತ್ತದೆ."

ಕಳೆದ ಅರ್ಧಶತಮಾನದಲ್ಲಿ ಪರವಾಗಿಯೂ ವಿರುದ್ಧವಾಗಿಯೂ ಲೋಕದಾದ್ಯಂತವಾದ ನಡೆದಿರುವ ವಿಷಯ ಇದು. ಈ ಮಾತನ್ನು ಇನ್ನಷ್ಟು ಒರಟಾಗಿ ನೀರಸವಾಗಿ ಹೇಳಿ ಶ್ರೋತೃಗಳು ಹುಬ್ಬು ಮೇಲೇರಿಸುವಂತೆ ಮಾಡಬಹುದು. ಅಥವಾ ಇನ್ನಷ್ಟು ಸಾಹಿತ್ಯಿಕವಾಗಿ ಕಲಾತ್ಮಕವಾಗಿ ನಿರೂಪಿಸಿ ಕೇಳುವವರು ತಲೆದೂಗುವಂತೆ ಮಾಡಬಹುದು.

ಬರ್ಮದ 'ಗಾರ್ಡಿಯನ್' ರಾಷ್ಟ್ರದ ಸೊತ್ತು; ಆದರೂ ಸರ್ಕಾರಿ ಪತ್ರಿಕೆಯಲ್ಲ. ಅದು ಸಾಹಿತ್ಯದ ಬಗ್ಗೆ ಹೀಗೆ ಹೇಳಿದೆ:

"ಸಾಹಿತ್ಯ, ಯಾವುದೇ ಕಾಲಾವಧಿಯ ಜನತೆಯ ಆಸೆ ಆಕಾಂಕ್ಷೆಗಳಿಗೂ ಹರ್ಷದುಃಖಗಳಿಗೂ ಜಯವಿಜಯಗಳಿಗೂ ಅಭಿವ್ಯಕ್ತಿ ನೀಡುತ್ತದೆ."

ನಿರ್ದಿಷ್ಟ ದೃಷ್ಟಿಯನ್ನು ಲೇಖಕರಲ್ಲಿ ಮೂಡಿಸಹೋಗುವುದು ಕಷ್ಟದ ಕೆಲಸ. 'ಶ್ರಮಜೀವಿ ದೈನಿಕ'ಕ್ಕೂ ಅದರ ಅರಿವು ಇಲ್ಲದಿಲ್ಲ. ಆ ಪತ್ರಿಕೆಯೇ ಸಂಪಾದಕೀಯ ಲೇಖನದಲ್ಲಿ ಹೇಳಿರುವಂತೆ:

“ಸಾಹಿತ್ಯ ಪ್ರಯತ್ನಗಳಿಗೆ ಮನುಷ್ಯ ನಿರ್ಮಿತ ಏಕಪಕ್ಷೀಯ ಎಲ್ಲೆ ಕಟ್ಟುಗಳನ್ನು ಹಾಕಿದರೆ ಅವರಿಂದ ಲೇಖಕರನ್ನು ಬಿಗಿ ಹಿಡಿದಂತಾಗುವುದು; ಪರಿಣಾಮವಾಗಿ ಅವರ ಶೈಲಿ ನೀರಸವಾಗುವುದು; ವಸ್ತು ಬೇಸರ ಹುಟ್ಟಿಸುವುದು. ಸ್ಥಾಪಿತ ಸೈದ್ಧಾಂತಿಕ–ಕಾನೂನುಗಳ ಎಲ್ಲೆಯನ್ನು ಲೇಖಕರು ಮೀರದೆ ಇರುವವರೆಗೆ ಅವರನ್ನು ಅವರ ಪಾಡಿಗೆ ಬಿಡುವುದೇ ಅತ್ಯುತ್ತಮ.”

ಬರ್ಮೀ ಬರೆಹಗಾರ್ತಿಯೊಬ್ಬರಿಗೆ ಹೀಗನಿಸಿದೆ :

“ಸಾಹಿತ್ಯ ಸೃಷ್ಟಿಯೇ ಲೇಖಕನ ಮೊದಲ ಕರ್ತವ್ಯ. ಯಾಕೆಂದರೆ, ಜನತೆಗೋಸ್ಕರ ಕಲೆಯೊಂದನ್ನೇ, ಸಾಹಿತ್ಯವೊಂದನ್ನೇ ನೀಡಬೇಕು – ಕಳೆ ಕಳಪೆಯನ್ನಲ್ಲ. ಒರಟಾದ ರುಚಿಯಾಗದ ಪ್ರಚಾರ ಸಾಹಿತ್ಯ ಜನತೆಯ ಮನಸ್ಸಿಗೆ ಒಪ್ಪಿಗೆಯಾಗುವುದಿಲ್ಲ. ಆ ಕಾರಣದಿಂದಲೇ ಜನತೆಯ ಸೇವೆಯನ್ನು ಅದು ಮಾಡಲಾರದು.”

* * * * *

ಇದು ಸೊಗಸಾದ ಚರ್ಚೆ. ಇಂಥ ವಾದ ವಿವಾದ ಜೀವಂತ ಸಮಾಜದ ಲಕ್ಷಣ.

ಲೇಖಕನ ಕಲಾವಿದನ ಸೃಷ್ಟಿಸ್ವಾತಂತ್ರ್ಯದ ಪ್ರಶ್ನೆ ನಾಗರಿಕತೆಯಷ್ಟೇ ಹಳೆಯದು. ಎಲ್ಲ ದೇಶಗಳಲ್ಲೂ ಎಲ್ಲ ಕಾಲಗಳಲ್ಲೂ ಆ ಬಗೆಗೆ ಮಂಡನೆ ಖಂಡನೆಗಳಾಗಿವೆ. ಸಮಾಜ ಅಥವಾ ರಾಷ್ಟ್ರ ತನ್ನ ಅಧಿಕಾರದ ಆಧಾರದ ಮೇಲೆ ಸಾಹಿತ್ಯ ಸೃಷ್ಟಿಯ ರೂಪುಗಳನ್ನು ನಿರ್ಧರಿಸಲು ಯತ್ನಿಸುತ್ತಿರುವುದೊಂದೇ ಇತ್ತೀಚಿನದು.

ಆದರೆ ಈ ಪ್ರಶ್ನೆಯ ಅಂತಿಮ ಇತ್ಯರ್ಥ ಯಾವ ದೇಶದಲ್ಲಿಯೂ ಆಗಿಲ್ಲ. ಎಲ್ಲಿಯೂ ತಾತ್ಕಾಲಿಕ ಇತ್ಯರ್ಥಗಳು, ಪ್ರಸ್ತುತ ಪರಿಸ್ಥಿತಿಗೆ ಯೋಗ್ಯವಾದ ಇತ್ಯರ್ಥಗಳು.

ಭಾರತ – ಬರ್ಮಾಗಳಿರಲಿ, ರಷ್ಯ – ಚೆಕೊಸ್ಲೊವಾಕಿಯಗಳಿರಲಿ, ಅಮೆರಿಕ – ಫ್ರಾನ್ಸ್‌ಗಳೇ ಇರಲಿ, ಎಲ್ಲ ಕಡೆಗಳಲ್ಲೂ ಇಂಥ ವಿವಾದ ಇದ್ದೇ ಇರುತ್ತದೆ. ಕೆಲವು ಕಡೆ ಬರೆಯುವವರದೇ ಕತ್ತಿವರಸೆ ಆಟ. ಬೇರೆ ಕೆಲವು ಕಡೆ ಸರಕಾರವೂ ಹೋರಾಟದ ಪಟು.

ಸ್ಪಷ್ಟವಾಗುವ ಒಂದು ವಿಷಯವೆಂದರೆ – ಇಂಥ ತಾತ್ತ್ವಿಕ ಘರ್ಷಣೆ ಯಾವುದೇ ಒಂದು ಪೀಳಿಗೆಯ ಇಲ್ಲವೆ ತಲೆಮಾರಿನ ಗುತ್ತಿಗೆಯಲ್ಲ. ನಿನ್ನೆಯ ಲೋಕ ನಮಗಿದನ್ನು ನೀಡಿತು. ನಾಳೆಯ ಲೋಕಕ್ಕೆ ನಾವಿದನ್ನು ನೀಡುತ್ತೇವೆ.

೨೬–೫–೧೯೬೮

## "... ಹೆದರಿಕೊಂಡು ಬರೆಯಬೇಡಿ !"

ಮೇ ೨೭. ನೆಹರೂ ನಿಧನರಾಗಿ ನಾಲ್ಕು ವರ್ಷಗಳಾಗಿ ಹೋದುವು. ರಾಷ್ಟ್ರದ ಅನಭಿಷಿಕ್ತ ಅರಸನಾಗಿದ್ದ, ಬಯಸಿದ್ದರೆ ಸರ್ವಾಧಿಕಾರಿಯೂ ಆಗಬಹುದಾಗಿದ್ದ, ಶಕಪುರುಷ – ಜವಾಹರಲಾಲರು.

ಸಾರ್ವಜನಿಕ ಜೀವನದಲ್ಲಿ, ವೈಯಕ್ತಿಕ ಬದುಕಿನಲ್ಲಿ ಸೊಬಗನ್ನೂ ಸುಭಗತನವನ್ನೂ ಅಪೇಕ್ಷಿಸುವವರಿಗೆ ಜವಾಹರರ ಸ್ಮರಣೆ ಸದಾ ಚೇತೋಹಾರಿ, ಸ್ಫೂರ್ತಿದಾಯಿ.

— ಹೀಗೆ ಬರೆಯುವಾಗ ಒಂದು ಕ್ಷಣ ನಿಂತು ಯೋಚಿಸಬೇಕೆನಿಸುತ್ತದೆ. ಇತಿಹಾಸದ ಎಲ್ಲ ಮಹಾನ್ ವ್ಯಕ್ತಿಗಳ ಬಗೆಗೂ ಜನ ಇದೇ ರೀತಿ ಹೇಳುವರಲ್ಲ?

ನಿಜ ಸಂಗತಿಯೆಂದರೆ ಮನುಷ್ಯ ಮತ್ತೆ ಮತ್ತೆ ಮನುಷ್ಯನಿಂದಲೇ ತನ್ನ ನಂಬುಗೆಗಳ ಬಗೆಗೆ ನೀರು ಗೊಬ್ಬರಗಳನ್ನು ಪಡೆಯುತ್ತಾನೆ. ಸ್ವತಃ ಜವಾಹರಲಾಲರೂ ಅದಕ್ಕೊಂದು ದೃಷ್ಟಾಂತ.

ತಂದೆ ಮೋತಿಲಾಲರ ನಿಧನದ ಬಳಿಕ ನೆಹರೂ ಸಿಂಹಳಕ್ಕೆ ಹೋಗಿದ್ದರು. ಅಲ್ಲಿ ಅನುರಾಧಾಪುರದ ಧ್ಯಾನಮಗ್ನ ಬುದ್ಧನ ಪ್ರತಿಮೆಯನ್ನು ಅವರು ಮೆಚ್ಚಿಕೊಂಡರು. ಮುಂದೆ ಅವರ ಸಿಂಹಳೀಯ ಮಿತ್ರರೊಬ್ಬರು ಆ ಪ್ರತಿಮೆಯ ಛಾಯಾಚಿತ್ರವನ್ನು ಜವಾಹರರಿಗೆ ಕಳುಹಿಸಿಕೊಟ್ಟರು. ಆಗ ಅವರಿದ್ದುದು ಸೆರೆಮನೆಯಲ್ಲಿ. ಅಲ್ಲಿ ತಮ್ಮ ಕೊಠಡಿಯಲ್ಲಿ ಆ ಚಿತ್ರವನ್ನು ಅವರು ಇರಿಸಿಕೊಂಡರು. ಜವಾಹರರ ಅಮೂಲ್ಯ ಸಂಗಾತಿಯಾಯಿತು ಆ ಚಿತ್ರ. ಬುದ್ಧಪ್ರತಿಮೆಯ ಬಲಿಷ್ಠವಾದ ಶಾಂತವಾದ ರೂಪ ಲಕ್ಷಣಗಳನ್ನು ನೋಡುತ್ತ, ಮನಸ್ಸು ಕುಗ್ಗಿದಾಗಲೆಲ್ಲ, ಸ್ಫೂರ್ತಿಯನ್ನೂ ಬಲವನ್ನೂ ಮನಶ್ಶಾಂತಿಯನ್ನೂ ಅವರು ಪಡೆಯುತ್ತಿದ್ದರು.

ಇದೇ ರೀತಿಯಾಗಿ ಶತಮಾನಗಳ ಬಳಿಕ ಇನ್ನೊಬ್ಬ ರಾಷ್ಟ್ರೀಯ ನಾಯಕನಿಗೆ ಗಾಂಧಿಜಿಯಾಗಲೀ ಜವಾಹರರಾಗಲೀ ಸ್ಫೂರ್ತಿ – ಬಲ – ಶಾಂತಿಗಳ ನೆಲೆಯಾಗುವುದಿಲ್ಲ ಎಂದು ಹೇಗೆ ಹೇಳೋಣ?

*   *   *   *   *

ತಲೆತಲಾಂತರಗಳವರೆಗೂ ಉಳಿಯಬೇಕಾದ ಇಂಥ ನೆನಪಿಗೆ ಹಿಂದೆ ಪ್ರತಿಮೆಗಳು ಆಧಾರವಾಗಿರುತ್ತಿದ್ದುವು. ಶಿಲ್ಪಿಗಳ ಕಲ್ಪನೆಯ ಮೂಸೆಯಲ್ಲಿ ಭಗವಾನ್ ಬುದ್ಧ ದೇಶ ವಿದೇಶಗಳಲ್ಲಿ ಹಲವು ಹದಿನೆಂಟು ರೂಪಗಳಲ್ಲಿ ಉದಿಸಿ ಬಂದ. ಈಗಿನ ಶಿಲ್ಪಿಗಳೂ ಆಧುನಿಕ ಇತಿಹಾಸದ ಬರೆವಣಿಗೆಯನ್ನು ಕೈಗೊಳ್ಳುತ್ತಾರೆ, ಸರಕಾರವೋ ಪುರ

ಸಭೆಗಳೋ ಹಣ ನೀಡಿದಾಗ. ಅವರ ಇಷ್ಟ ಸಣ್ಣ ಶಿಲ್ಪಾಕೃತಿಗಳು. ನೆಹ್ರೂ ಮನಸಿನ ಮೊತ್ತಕ್ಕೆ ಅನುಗುಣವಾದ ದುಡಿಮೆ.

ಗಾಂಧೀಜಿ ಭಾರತದಲ್ಲಿ ಆಗಿಹೋದರು. ಆದರೆ, ಇದು ಗಾಂಧೀರಾಷ್ಟ್ರ ಎನ್ನಲು ಈಗ ಏನು ಉಳಿದಿದೆ? ಬುದ್ಧನ ಬೋಧನೆಗಳಂತೆ ಗಾಂಧಿವಾದವನ್ನು ಪರರಾಷ್ಟ್ರಗಳಿಗೆ ರಫ್ತು ಮಾಡುವುದಕ್ಕಷ್ಟೇ ನಾವು ಬಳಸುತ್ತೇವೆ, ಇಲ್ಲಿ ಉಪಯೋಗಿಸುವುದಿಲ್ಲ. ಹಾಗೆಯೇ ಜವಾಹರರ ನಿಷ್ಠೆ ಸಿದ್ಧಾಂತಗಳನ್ನು, ರೀತಿ ನೀತಿಗಳನ್ನು ಕೂಡಾ. ಹೀಗಿದ್ದರೂ ಮುಂದೆಯೊಂದು ದಿನ ಬುದ್ಧ – ಅಶೋಕರಂತೆ ಗಾಂಧಿ – ಜವಾಹರರೂ ಜಗದ್ವಂದ್ಯರಾಗುತ್ತಾರೆ. ಯಾರಿಗೆ ಗೊತ್ತು? ಸ್ವತಃ ತಮ್ಮ ದೇಶದಲ್ಲೂ ಯಾವುದಾದರೊಂದು ಕಾಲಾವಧಿಯಲ್ಲಿ ನಿತ್ಯಪೂಜೆಗೆ ಅವರು ಅರ್ಹರಾಗಬಹುದು.

*   *   *   *   *

ಇಲ್ಲಿ ಗಮನಿಸಬೇಕಾದ ಒಂದು ಅಂಶವಿದೆ. ಹಿಂದಿನ ಕಾಲಕ್ಕಿಂತ, ನಾಳೆಗಾಗಿ ನೆನಪನ್ನು ಕಾಯ್ದಿಡುವುದು ಈಗ ಸುಲಭ. ಜವಾಹರರದೊಂದು ಬಿಂಬ ಭಾರತ ಕ್ಷೇತ್ರದಲ್ಲೂ ಲೋಕವಿಸ್ತಾರದಲ್ಲೂ ಈಗಾಗಲೆ ನೆಲೆ ನಿಂತಿದೆ. ತಲೆಮಾರಿನಿಂದ ತಲೆಮಾರಿಗೆ ಆ ಭಾವಮೂರ್ತಿ ಪಯಣ ಕೈಗೊಳ್ಳುತ್ತದೆ.

ಆ ಮೂರ್ತಿಯನ್ನು ಸದಾ ಸ್ಫುಟಗೊಳಿಸುವ, ಹಸುರಾಗಿಡುವ ಸಾಧನಗಳನ್ನೂ ಜವಾಹರರು ಬಳುವಳಿಯಾಗಿ ನೀಡಿ ಹೋಗಿದ್ದಾರೆ. ಅವರ ಬರೆವಣಿಗೆಯೇ ಆ ಸಾಧನ ಸಂಪದ.

'ಆತ್ಮವೃತ್ತ,' 'ಜಗತ್ಕಥಾವಲ್ಲರಿ,' 'ಭಾರತದರ್ಶನ' – ಈ ನೆಹರೂ ಕೃತಿಗಳು ಭಾರತದ ಎರಡು ಪೀಳಿಗೆಗಳ ಮೇಲೆ ಪ್ರಭಾವ ಬೀರಿದುವು. ದೇಶದ ರಾಜಕೀಯ ಆಗುಹೋಗುಗಳು ಏರುಪೇರುಗಳು ಏನೇ ಇದ್ದರೂ, ಈ ಕೃತಿಗಳು ಅಮರ ಎನ್ನುವುದಕ್ಕೆ ಮತ್ತೆ ಮತ್ತೆ ಆಗುತ್ತಿರುವ ಮುದ್ರಣಗಳೇ ಸಾಕ್ಷಿ.

*   *   *   *   *

ಕೆಲ ವರ್ಷಗಳ ಹಿಂದೆ ಪಾಶ್ಚಾತ್ಯ ಪ್ರಮುಖರೊಬ್ಬರು ಜವಾಹರಲಾಲರ ಬರೆವಣಿಗೆಯ ವಿಷಯವಾಗಿ ಹೇಳುತ್ತ ಹೀಗೆಂದರು:

"ಈಗ ಇಂಗ್ಲಿಷಿನಲ್ಲಿ ಅತ್ಯಂತ ಚೆನ್ನಾಗಿ ಬರೆಯುವ ಆರು ಜನ ಮೇಧಾವಿ ಬರೆಹಗಾರರಲ್ಲಿ ನೆಹರೂ ಒಬ್ಬರು."

ಜವಾಹರರು ಇಂಗ್ಲಿಷಿನಲ್ಲಿ ಬರೆದುದು ಒಂದು ಆಕಸ್ಮಿಕ. ಅವರು ಜನ್ಮ ತಳೆದು ಬೆಳೆದ ಕಾಲಾವಧಿಯಲ್ಲಿ ಅದು ಅನಿವಾರ್ಯವಾಗಿತ್ತು. ಅಷ್ಟಲ್ಲದೆ, ಭಾಷೆಯೊಂದು ವಾಹಕ ಮಾತ್ರ. ಜಗತ್ತಿನ ಹಲವು ಭಾಷೆಗಳಲ್ಲಿ ನೆಹರೂ ಕೃತಿಗಳು ಈಗ ದೊರೆಯುತ್ತವೆ. ಇಂಗ್ಲಿಷ್ ಮೂಲದಿಂದ ಅನುವಾದಿತವಾದರೂ ಅವು ಹೆಸರು ಪಡೆದಿರುವುದು ಭಾರತೀಯ ನಾಯಕನ ಮಹಾನ್ ಕೃತಿಗಳೆಂದು.

ನಿಸರ್ಗದ ಬಣ್ಣನೆಯಿರಲಿ, ಸಾಮಾಜಿಕ – ರಾಜಕೀಯ ಸಿದ್ಧಾಂತಗಳ ಪೃಥಕ್ಕರಣವಿರಲಿ, ದಿನನಿತ್ಯದ ಆಡಳಿತಕ್ಕೆ ಸಂಬಂಧಿಸಿ ಶುದ್ಧ ರಾಜಕೀಯದ ಪ್ರಸ್ತಾಪವೇ ಇರಲಿ, ನೆಹರೂ ಬರೆವಣಿಗೆಯಲ್ಲಿ ಬಳಸುತ್ತಿದ್ದುದು ಶೋಭೆ ತುಂಬಿದ ಶೈಲಿಯನ್ನು. ಅದು ಅದ್ಭುತ, ಅದು ಮೋಹಕ. ಸಂಸ್ಕಾರದ ಸದಭಿರುಚಿಯ ಅವಿನಾಶಿಯಾದ ಮೆರುಗನ್ನು ಆ ಕೃತಿಗಳಲ್ಲಿ ಜನ ಕಾಣುತ್ತಾರೆ.

*　　*　　*　　*　　*

ಜವಾಹರರು ನಿಧನರಾದ ದಿನ ಅವರ ಮೇಜಿನ ಮೇಲೆ ರಾಬರ್ಟ್ ಫ್ರಾಸ್ಟ್ ಕವಿಯ ನಾಲ್ಕು ಸಾಲುಗಳಿದ್ದುವು. ಸ್ವಹಸ್ತಾಕ್ಷರದಲ್ಲಿ ನೆಹರೂ ಅದನ್ನು ಬರೆದು ಇಟ್ಟುಕೊಂಡಿದ್ದರು. ತಮ್ಮ ಪಯಣ ದೂರವಿದೆ, ಇನ್ನೂ ದೂರವಿದೆ ಎಂದು ಸಾರುತ್ತಿದ್ದ ಸಾಲುಗಳು. ವೈಯಕ್ತಿಕ ಜೀವನದಲ್ಲಿ ಅವರ ಒಡನಾಡಿಗಳಾಗಿದ್ದವರೆಲ್ಲ ಕವಿಗಳು, ಕಾದಂಬರಿಕಾರರು, ನಾಟಕಕಾರರು, ವಿಜ್ಞಾನಿಗಳು........

ತಾವು ಅಗ್ರಲೇಖನಗಳನ್ನು ಬರೆಯುತ್ತಿದ್ದ 'ನ್ಯಾಷನಲ್ ಹೆರಾಲ್ಡ್' ದಿನಪತ್ರಿಕೆಯ ಸಂಪಾದಕ ಮಂಡಲಕ್ಕೆ ಅವರೊಂದು ಹಿತವಚನವನ್ನು ನೀಡುತ್ತಿದ್ದರು:

"ನೀವು ಏನೇ ಬರೆದರೂ ಹೆದರಿಕೊಂಡು ಬರೆಯಬೇಡಿ."

ಶತಮಾನಗಳುದ್ದಕ್ಕೂ ಧ್ವನಿಸಿ ಪ್ರತಿಧ್ವನಿಸುವ ವಚನ ಇದು:

"ನೀವು ಏನೇ ಬರೆದರೂ ಹೆದರಿಕೊಂಡು ಬರೆಯಬೇಡಿ."

೨–೬–೧೯೬೪

# ಅಗ್ರಪೂಜೆ ಹೊಟ್ಟೆಗೆ, ಬಟ್ಟೆಗೆ

ಹೊಟ್ಟೆ ತುಂಬಿದರಷ್ಟೇ ಸಾಲದು; ಅಥವಾ ರೊಟ್ಟಿಯೊಂದರಿಂದಲೇ ಮಾನವ ಬದುಕಲಾರ. ಈ ಮಾತುಗಳನ್ನು ಕೇಳಿ ಎಷ್ಟು ದಿನಗಳಾದುವು? ಇಂತಿಷ್ಟೇ ದಿನ ಎನ್ನುವಂತಿಲ್ಲ. ವಾಸ್ತವವಾಗಿ ಇದು ಆಗಾಗ್ಗೆ ಲೋಕದಾದ್ಯಂತ ಕೇಳಿ ಬರುತ್ತಿರುವ ಮಾತು. ಕಲೆ ಸಾಹಿತ್ಯಗಳ ಆರಾಧಕರೂ ಸಂರಕ್ಷಕರೂ ಹೀಗೆ ಉದ್ಗರಿಸುತ್ತಲೇ ಇರುತ್ತಾರೆ.

ಅಂಥ ಉದ್ಗಾರಗಳಿಗೆ ಸರಿಯಾದ ಸಂದರ್ಭ ಒದಗಬೇಕು. ಭಾರತದ ಮಟ್ಟಿಗೆ ಹೇಳುವುದಾದರೆ, ಅಂಥ ಆಲಾಪನೆಗೆ ಇದು ಸುಸಂದರ್ಭ.

ಹೇಗೆ?

*   *   *   *   *

ರಾಷ್ಟ್ರದ ಮುಂಗಡಪತ್ರ ಸ್ವೀಕೃತವಾಯಿತಲ್ಲ? ಅದರಲ್ಲಿ ಶಿಕ್ಷಣಕ್ಕೋಸ್ಕರ ಒದಗಿಸಿರುವ ಹಣದಲ್ಲಿ ಸಾಹಿತ್ಯ ಅಕಾಡಮಿ, ಸಂಗೀತ ನಾಟಕ ಅಕಾಡಮಿ, ಲಲಿತ ಕಲಾ ಅಕಾಡಮಿ – ಈ ಮೂರು ರಾಷ್ಟ್ರೀಯ ಸಂಸ್ಥೆಗಳಿಗಾಗಿ ದೊರೆತಿರುವ ಹಣ ವೆಷ್ಟು? ಆ ಮೊತ್ತ ಬಯಸಿದ್ದಕ್ಕಿಂತ ಹೆಚ್ಚೆ. ಕಡಮೆಯೆ? ರೂಪಿಸಲಾಗಿರುವ ಯೋಜನೆಗಳ ಮೇಲೆ ಆಗುವ ಪರಿಣಾಮವೇನು?

ಈ ವರ್ಷ ತನಗೆ ೨,೨೦,೦೦೦ ರೂ. ಬೇಕೆಂದು ಸಾಹಿತ್ಯ ಅಕಾಡಮಿ ಕೇಳಿತ್ತು. ಸಿಗಲಿರುವುದು ಆ ಹಣಕ್ಕಿಂತ ಒಂದು ಲಕ್ಷ ಕಡಮೆ.

ಕಲ್ಕತ್ತಾ – ಮದರಾಸುಗಳಲ್ಲಿರುವಂತೆ ಬೊಂಬಾಯಿಯಲ್ಲೂ ಅಕಾಡಮಿಯ ಪ್ರಾದೇಶಿಕ ಕಾರ್ಯಾಲಯವನ್ನು ತೆರೆಯಬೇಕೆಂದು ಈ ಮೊದಲೇ ಉದ್ದೇಶಿಸ ಲಾಗಿತ್ತು. ಅಕಾಡಮಿಯ ಹಿರಿಯ ಅಧಿಕಾರಿಯೊಬ್ಬರು ಹೇಳಿರುವಂತೆ, "ದೀರ್ಘಾ ವಧಿ ಯೋಜನೆ ಯಾವುದನ್ನೂ ಈಗ ಆರಂಭಿಸುವಂತಿಲ್ಲ. ಏನಿದ್ದರೂ ಕೈಯಲ್ಲಿರು ವುದನ್ನು ಮಾಡಿ ಮುಗಿಸಬೇಕು."

ಅಖಿಲ ಭಾರತ ಗ್ರಂಥ ಗೋಷ್ಠಿಯನ್ನೂ ಗ್ರಂಥ ಪ್ರದರ್ಶನವನ್ನೂ ಏರ್ಪಡಿಸ ಬೇಕೆಂದು ಯೋಚಿಸಲಾಗಿತ್ತು. ಅದೂ ಈಗ ಆಗುವ ಮಾತಲ್ಲ.

*   *   *   *   *

ಸಂಗೀತ ನಾಟಕ ಅಕಾಡಮಿಯೂ ಹಲವು ಯೋಜನೆಗಳನ್ನು ಹಾಕಿಕೊಂಡಿತು. ಜಾನಪದ ಕಲೆಯ ವಸ್ತುಸಂಗ್ರಹಾಲಯವೊಂದನ್ನು ಸ್ಥಾಪಿಸುವುದು ಆ ಯೋಜನೆ

ಗಳಲ್ಲಿ ಒಂದು. ವಾದ್ಯಗಳನ್ನೂ ಮುಖವಾಡಗಳನ್ನೂ ಅಲ್ಲಿ ಶೇಖರಿಸುವುದು, ಜಾನಪದ ಸಂಗೀತ ಶಾಸ್ತ್ರಕ್ಕೆ ಸಂಬಂಧಿಸಿ ಸಂಶೋಧನೆ ನಡೆಸಲು ಅನುಕೂಲ ಒದಗಿಸುವುದು....ವಸ್ತುಸಂಗ್ರಹಾಲಯದಿಂದ ಆಗಬಹುದಾದ ಒಳ್ಳೆಯ ಕೆಲಸಗಳ ಪಟ್ಟಿಯನ್ನು ಇನ್ನೂ ಬೆಳೆಸಬಹುದು. ಆದರೆ ಏನು ಪ್ರಯೋಜನ? ಸಂಗೀತ ನಾಟಕ ಅಕಾಡಮಿ ಈ ವರ್ಷಕ್ಕೆ ತನಗೆ ೫ ಲಕ್ಷ ರೂಪಾಯಿ ಬೇಕು ಎಂದು ಕೇಳಿತ್ತು. ಅದಕ್ಕೆ ಒದಗಿಸಲಾಗಿರುವುದು ಎರಡು ಲಕ್ಷ ಮಾತ್ರ .......

* * * * *

ಇದ್ದುದರಲ್ಲೇ ಈಗ ಕುಣಿಯಬೇಕು. ಪರಂಪರಾನುಗತ ಜಾನಪದ ಸಂಗೀತವನ್ನು ಧ್ವನಿಮುದ್ರಿಸಿಕೊಳ್ಳುವುದು ಒಂದು ಕಾರ್ಯಕ್ರಮ. ಮುಂದೆ ಸಂಶೋಧನೆ ನಡೆಸುವವರಿಗೆ, ಅಭ್ಯಾಸಮಾಡುವವರಿಗೆ, ಹೊಸದಾಗಿ ಸ್ವರಪ್ರಸ್ತಾರ ಹಾಕಲು ಇಚ್ಛಿಸುವವರಿಗೆ, ಚಲನಚಿತ್ರಗಳಿಗೆ ಹೊಸ ಹಾಡುಗಳನ್ನು ಬರೆಯಬಯಸುವವರಿಗೆ ಈ ಧ್ವನಿಮುದ್ರಿಕೆಗಳು ತುಂಬಾ ಸಹಾಯಕವಾಗುತ್ತವೆ. ದೇಶವೆಲ್ಲ ಸುತ್ತಿ ಧ್ವನಿಮುದ್ರಿಸಿಕೊಳ್ಳುವ ಕಾರ್ಯ ಸಾಕಷ್ಟು ಹಣವಿಲ್ಲದಾಗ ಎಷ್ಟು ಸಾಧ್ಯವಾಗುವುದೋ ಇನ್ನು ನೋಡಬೇಕು.

ಹಣವಿದ್ದರೆ ರಾಜ್ಯಗಳ ನಡುವೆ ಕಲಾವಿದರ ತಂಡಗಳನ್ನು ವಿನಿಮಯ ಮಾಡಬೇಕೆಂಬ ಯೋಜನೆ ಸಂಗೀತ ನಾಟಕ ಅಕಾಡಮಿಯದು. ಆದರೆ, ಈ ಅಕಾಡಮಿ ತಾನೊಂದ ಬಗೆದೊಡೆ ಮೊರಾರಜಿ ದೈವ ಬೇರೊಂದ ಬಗೆದಿದೆ........

ಲಲಿತ ಕಲಾ ಅಕಾಡಮಿಯ ದೋಸೆಯೂ ತೂತೇ. ವಾಸ್ತವವಾಗಿ, ದೋಸೆ ಹುಯ್ಯಲು ಇಲ್ಲಿ ಹಿಟ್ಟೇ ಸಿದ್ಧವಾಗಿಲ್ಲ. ಹೆಂಚು ಮಾತ್ರ ಕಾದಿದೆ! ಶಿಕ್ಷಣ ಖಾತೆ ತನಗಾಗಿ ಎಷ್ಟು ನೀಡುತ್ತದೆಂಬುದು ಈ ಅಕಾಡಮಿಯ ಮುಖ್ಯಸ್ಥರಿಗೆ ಇನ್ನೂ ತಿಳಿದು ಬಂದಿಲ್ಲ.

ಕಲಾಭಿರುಚಿಯನ್ನು ಭಾರತೀಯರಲ್ಲಿ ಬೆಳೆಸಲು ಯೋಜನೆಯೊಂದನ್ನು ಲಲಿತ ಕಲಾ ಅಕಾಡಮಿ ಹಾಕಿಕೊಂಡಿದೆ. ಶ್ರೇಷ್ಠ ಕಲಾಕೃತಿಗಳ ಪ್ರತಿಕೃತಿಗಳನ್ನು ಮಾಡಿಸುವುದು, ರಾಷ್ಟ್ರದ ಎಲ್ಲ ಶಾಲೆಗಳಿಗೆ ಒದಗಿಸುವುದು. ಕಿರಿಯರಲ್ಲಿ ಚಿತ್ರಕಲೆಯ ಬಗೆಗೆ ಸದಭಿರುಚಿ ಮೂಡಿತೆಂದರೆ ಕಲಾಪ್ರಜ್ಞೆಯುಳ್ಳ ಹೊಸ ಪೀಳಿಗೆಯೇ ನಿರ್ಮಾಣವಾಗುತ್ತದಲ್ಲ?

ಇನ್ನೊಂದು ಯೋಜನೆ, ಕೇಂದ್ರ ಕಲಾಶಿಕ್ಷಣ ಸಂಸ್ಥೆಯೊಂದರ ಸ್ಥಾಪನೆ. ಖ್ಯಾತ ಕಲಾವಿದರು ಶಿಕ್ಷಕರ ಪಾತ್ರದಲ್ಲಿ ಕಾಣಿಸಿಕೊಳ್ಳಲು ಅದೊಂದು ವೇದಿಕೆ.

ಕೆಲವು ರಾಜ್ಯಗಳಲ್ಲಿ ಸ್ಟುಡಿಯೋ ಹಾಗೂ ಗ್ಯಾಲರಿ ಉಳ್ಳ ಕಲಾಮಂದಿರಗಳನ್ನು ಸ್ಥಾಪಿಸುವ ಅಪೇಕ್ಷೆ ಲಲಿತಕಲಾ ಅಕಾಡಮಿಗೆ. ಹಾಗೆಯೇ ರಾಷ್ಟ್ರದಾದ್ಯಂತ ಸುತ್ತುವ ಕಲಾಕೃತಿಗಳ ಸಂಚಾರೀಪ್ರದರ್ಶನದ ಏರ್ಪಾಟು.

ಇನ್ನೂ ಯೋಜನೆಗಳನ್ನು ಹಾಕಿಕೊಳ್ಳಬಹುದಾಗಿತ್ತು. ಆದರೆ ಯಾಕೋ ಪಾಪ, ಅಷ್ಟಕ್ಕೇ ನಿಂತರು.

ಇವು ಏನಾಗಬಹುದು, ಎಂದೆ? ಸಾಹಿತ್ಯಕ್ಕಾದುದೇ ಸಂಗೀತ ನಾಟಕಕ್ಕೆ, ಅದೇ ಲಲಿತ ಕಲೆಗೆ!

* * * * *

ದಿಲ್ಲಿಯ ಒಂದು ಪತ್ರಿಕೆಯಲ್ಲಿ ಓದದೇ ಇರುತ್ತಿದ್ದರೆ, ಈ ರಾಷ್ಟ್ರೀಯ ಅಕಾಡಮಿಗಳಿಗಾಗಿ ವ್ಯಯವಾಗುವ ಹಣ ಇಷ್ಟೊಂದು ಕಡಮೆ ಎಂಬುದನ್ನು ನಾನು ನಂಬುತ್ತಲೇ ಇರಲಿಲ್ಲ. ಸಾಹಿತ್ಯ ಅಕಾಡಮಿಯ ಮುಂದಿನ ವರ್ಷದ ಅಂದಾಜು ವೆಚ್ಚ ೨,೨೦,೦೦೦ ಎಂದರೆ ಹೇಗೆ ವಿಶ್ವಾಸ ಹುಟ್ಟೀತು? ಒಂದು ೦ ಬಿಟ್ಟು ಹೋಗಿರಬೇಕು. ಎರಡು ಕೋಟಿ ಇಪತ್ತು ಲಕ್ಷ ಇದ್ದೀತು ಅಂದುಕೊಂಡೆ. ಮತ್ತೊಮ್ಮೆ ಓದಿದೆ. ಅದೇ ಚಿಲ್ಲರೆ ವಿಚಾರ. ಎರಡು ಲಕ್ಷ ಇಪ್ಪತ್ತು ಸಾವಿರವೇ. ಸಿಗುವುದು ಅದರಲ್ಲೂ ಒಂದು ಲಕ್ಷ ಕಡಮೆ!

ರಾಷ್ಟ್ರೀಯ ಅಕಾಡಮಿಗಳನ್ನು ಸ್ಥಾಪಿಸಿದವರು ಜವಾಹರಲಾಲರು. ಅವರ ಬದುಕಿನ ಮಹಾಕಾವ್ಯದಲ್ಲಿ ಕನಸುಗಳದು ಬಲು ದೊಡ್ಡ ಸಂಧಿ.

ಮೊನ್ನೆ ಪ್ರಧಾನಿ ಇಂದಿರಾಗಾಂಧಿ ತಮ್ಮ ರಾಜ್ಯದ ರಾಜಕೀಯದಲ್ಲಿ ಚಂದ್ರಭಾನುಗುಪ್ತರೊಡನೆ ಜಗಳವಾಡಿ ಸಿಟ್ಟಿನಿಂದ ಗುಪ್ತರಿಗೆ ಅಂದರಂತೆ :

"ನನ್ನ ತಂದೆ ಋಷಿಯಾಗಿದ್ದರು; ನಾನು ಋಷಿಯಲ್ಲ – ನೆನಪಿಡಿ!"

ಪಾಪ!

ಉಪವಾಸ ಬಡತನ ರಾಷ್ಟ್ರವನ್ನು ಕಾಡುತ್ತಿರುವಾಗ ಸಾಹಿತ್ಯ – ಸಂಗೀತಗಳೆ? ಎಂದು ದಿಲ್ಲಿಯ ಕೆಲ ಅಧಿಕಾರಿಗಳು ಕೊಂಕು ನುಡಿ ಆಡುವರಂತೆ.

ಅವರ ಮರ್ಜಿ. ಸ್ವಾತಂತ್ರ್ಯ ಬಂದು ಇಪ್ಪತ್ತು ವರ್ಷ ಸಂದರೂ ಹೊಟ್ಟೆಬಟ್ಟೆಯ ಪ್ರಶ್ನೆಯೊಂದೇ ನಮ್ಮನ್ನು ಕಾಡುತ್ತಿದೆಯಲ್ಲ! ಇದು ನಮ್ಮ ದುರದೃಷ್ಟ ಎಂದರೆ ಸಾಕೆ?

೨೩–೬–೧೯೬೮

# ಇವತ್ತಿನ ಇತಿಹಾಸ

ಸ್ವಾತಂತ್ರ್ಯೋದಯದ ಅನಂತರದ ಕರ್ನಾಟಕದ ಇತಿಹಾಸವನ್ನು ಬರೆಸಲು ಮೈಸೂರು ಸರ್ಕಾರ ನಿರ್ಧರಿಸಿದೆ. ಇದು ಇಪ್ಪತ್ತು ವರ್ಷಗಳ ಕತೆಯಾಗುತ್ತದಾದರೂ ವಾಸ್ತವ ವಾಗಿ ಮಹತ್ವದ ಘಟನೆಗಳಾಗಿರುವುದು ನವಮೈಸೂರು ಅಸ್ತಿತ್ವಕ್ಕೆ ಬಂದ ಮೇಲೆ– ಕಳೆದ ಒಂದು ದಶಕದಲ್ಲಿ. ಹೀಗಾಗಿ, ಸರ್ಕಾರ ಬರೆಸಲಿರುವುದು– ನಿನ್ನೆಯ ಕತೆ ಯನ್ನು, ಇವತ್ತಿನ ಕತೆಯನ್ನು.

ಯಾವುದೇ ಪ್ರಾಚೀನ ಕಾಲಾವಧಿಯ ಇತಿಹಾಸವನ್ನು ಬರೆಯುವುದು ಕಷ್ಟದ ಕೆಲಸ. ಕಾರಣ ಸಾಕಷ್ಟು ಮೂಲ ಸಾಹಿತ್ಯದ– ಸಾಕ್ಷ್ಯ ದಾಖಲೆಗಳ– ಅಭಾವ. ಇತ್ತೀಚಿನ ಕಾಲಾವಧಿಯ ಬಗೆಗೆ ಬರೆಯುವುದು ಮತ್ತಷ್ಟು ಕಷ್ಟದ ಕೆಲಸ. ಯಾಕೆಂದರೆ, ಸಾಕ್ಷ್ಯ ದಾಖಲೆಗಳು ಬೆಟ್ಟದಷ್ಟಿವೆ. ಅವುಗಳನ್ನು ಅಗೆದು ಪರಿಶೀಲಿಸಿ ಜರಡಿ ಹಿಡಿದು ಮೂಲ ಎಳೆಗಳನ್ನು ಜೋಡಿಸಿ ಒಂದು ಹಗ್ಗವನ್ನು ನೇಯಬೇಕು. ಆ ಹಗ್ಗ ನಿನ್ನೆಯನ್ನು ನಾಳೆಯೊಡನೆ ಬಂಧಿಸಬೇಕು.

ಇತಿಹಾಸಕಾರನಿಗೂ ಪ್ರಚಲಿತ ಘಟನೆಗಳಿಗೂ ಸಂಬಂಧವಿಲ್ಲ ಎನ್ನುವವರುಂಟು. ಪತ್ರಿಕೆಗಳ ಫೈಲುಗಳು ಇತಿಹಾಸವಾಗುವುದಿಲ್ಲ ಎಂದು ಅವರ ಭಾವನೆ. ಚರಿತ್ರೆಕಾರ ವಸ್ತುನಿಷ್ಠನಾಗಬೇಕಾದರೆ ಸುತ್ತುಮುತ್ತಣ ಕಾವು ಆರಿರಬೇಕು– ಇದು ಅವರ ಅಭಿ ಪ್ರಾಯ. ಯಾವುದೇ ಪ್ರಭಾವಕ್ಕೊಳಗಾಗದಿದ್ದರೆ, ದೂಷಿತ ದೃಷ್ಟಿ ಆತನಿಗಿರ ದಿದ್ದರೆ, ಶಾಸ್ತ್ರೀಯ ವಿವೇಚನೆ ಆತನಿಂದ ಸಾಧ್ಯವಿದ್ದರೆ ಯಾವ ಕಾಲಾವಧಿಯ ಬಗೆ ಗಾದರೂ ಇತಿಹಾಸಕಾರ ಬರೆಯಬಹುದು - ಎಂಬುದು ಇನ್ನೊಂದು ಅಭಿಮತ.

ಸರಕಾರ - ಅಥವಾ ಆಳುವವರು - ಇತಿಹಾಸವನ್ನು ಬರೆಸುವುದು ಸರಿಯೆ? "ಸರಿ" ಎನ್ನುವುದಕ್ಕಿಂತಲೂ "ತಪ್ಪೇನೂ ಇಲ್ಲ" ಎಂಬ ಉತ್ತರ ದೊರೆಯಬಹುದು. ಲೋಕ ದಾದ್ಯಂತ ಹೀಗೆ ಬರೆಯುವುದು ಬರೆಸುವುದು ಅನಾದಿಕಾಲದಿಂದ ನಡೆದು ಬಂದಿರುವ ಪದ್ಧತಿ.

ನಮ್ಮ ರಾಮಾಯಣ ಮಹಾಭಾರತಗಳು ಒಂದು ಬಗೆಯ ಇತಿಹಾಸಗಳೇ (ಗ್ರೀಕ್ ಪುರಾಣ ಕಾವ್ಯಗಳ ಹಾಗೆ). ಬೌದ್ಧಯುಗದಲ್ಲಿ ಕಳಿಂಗವನ್ನು ಜಯಿಸಿ ಬಂದ ದೇವಾನಾಂಪ್ರಿಯ ಅಶೋಕ ಕಲ್ಲಿನಲ್ಲಿ ಕೊರೆಸಿದ್ದೂ ಇತಿಹಾಸದ ಅಧ್ಯಾಯ ವನ್ನೇ.

ಸ್ವತಃ ಬರೆಹಗಾರರಾದ ಅರಸರಿಗೆ ನಮ್ಮಲ್ಲಿ ಕೊರತೆ ಇರಲಿಲ್ಲ. ಅರಸರೂ ಅವರ

ಸಾಹಿತ್ಯಪ್ರಿಯರೂ ಬರೆದ ಕೃತಿಗಳು ಅನೇಕ. ಅವರ ಪರಮ ಸಾಹಸದ ಕತೆಗಳು ಸಂಶೋಧಕನಿಗೂ ಇತಿಹಾಸಕಾರನಿಗೂ ಒಳ್ಳೆಯ ಗ್ರಾಸ ಒದಗಿಸಿವೆ.

ಮೊಘಲರ ಚರಿತ್ರೆ ಬರೆಯುವವರು ಬಾಬರನ ದಿನಚರಿಯ ಮೊರೆ ಹೊಗುತ್ತಾರೆ, ಆರಂಭದ ಎಳೆಗಾಗಿ. ಸಮೀಪದ ಅವಧಿಗೆ ಬಂದರೆ ತನ್ನ ಕನಸುಗಳನ್ನು ಕುರಿತು ಟೀಪೂ ಬರೆದಿಟ್ಟುದೂ ಪ್ರಥಕ್ಕರಣಕ್ಕೆ ವಸ್ತುವಾಗುತ್ತದೆ. ಕೊಡಗಿನ ಅರಸ ದೊಡ್ಡ ವೀರರಾಜ ಬರೆದ 'ರಾಜೇಂದ್ರನಾಮೆ' ಆ ಪರ್ವತ ರಾಜ್ಯದ ಇತಿಹಾಸ ಬರೆಯಲು ಆಧಾರ.

ಆಧುನಿಕ ಭಾರತದ ಇತಿಹಾಸ ರಚನೆಗೆ ಸಾಮಗ್ರಿ ಒದಗಿಸುತ್ತವೆ, ಜವಾಹರ ಕೃತಿಗಳು.

ಸಮ್ರಾಟ ಜೂಲಿಯಸ್ ಸೀಸರ್ ಸ್ವತಃ ಹೆಸರಾಂತ ಬರೆಹಗಾರನಾಗಿದ್ದ. ತನ್ನ ದಿಗ್ವಿಜಯಗಳ ಬಗೆಗೆ ತಾನೇ ಬರೆದಿಟ್ಟು ಹತನಾದ. ಚಕ್ರವರ್ತಿ ಆಗಸ್ಟಸ್ ವರ್ಜಿಲ್‌ಗೆ ಹೇಳಿ ತನ್ನ ಸಾಧನೆಗಳ ಬಗ್ಗೆ ಬರೆಸಿದ. ಸಮ್ರಾಟ ಟ್ರಾಜನ್ ತನ್ನ ೨,೫೦೦ ಹಿಂಬಾಲಕರ ಹೆಸರುಗಳನ್ನು ೧೩೭ ಅಡಿ ಎತ್ತರದ ಅಮೃತಶಿಲೆಯ ಸ್ತಂಭದ ಮೇಲೆ ಕೆತ್ತಿಸಿದ.

ಈ ಸರಣಿಯಲ್ಲಿ ಇತ್ತೀಚಿನ ದೃಷ್ಟಾಂತವೆಂದರೆ ಅಮೆರಿಕದ ಅಧ್ಯಕ್ಷ ಲಿಂಡನ್ ಜಾನ್ಸನ್ನರದು. ೧೯೬೩-೬೮ರ ತಮ್ಮ ಅಧಿಕಾರಾವಧಿಯ ಸಾಧನೆಗಳನ್ನು ದಾಖಲೆ ಮಾಡಲು ಇತಿಹಾಸಕಾರರನ್ನು ಅವರು ನಿಯಮಿಸಿದ್ದಾರೆ. ಒಬ್ಬರಲ್ಲ ಹಲವಾರು ಜನ ಈ ಅವಸರದ ಕೆಲಸಕ್ಕೆ ನೇಮಕಗೊಂಡಿದ್ದಾರೆ. ಬರೆದಂತೆ ಕರಡುಗಳನ್ನು ಮೌಲ್ಯಮಾಪನಕ್ಕೆಂದು ಅಧ್ಯಕ್ಷರ ಕಾರ್ಯಾಲಯಕ್ಕೆ ಕಳುಹಿಸುವಂತೆ ನಿರ್ದೇಶಿಸಲಾಗಿದೆ. ಜಾನ್ಸನ್ನರು ಅಧಿಕಾರವನ್ನು ಬಿಟ್ಟುಕೊಡುವುದಕ್ಕೆ – ಅಂದರೆ ಜನವರಿ ೨೦ ಕ್ಕೆ – ಮುಂಚೆಯೇ ಈ ಇತಿಹಾಸ ಸಿದ್ಧವಾಗಬಹುದು ಎನ್ನಲಾಗಿದೆ. (ಈ ಲೇಖಕರಲ್ಲಿ ಹಲವರಿಗೆ ದೊರೆಯುವ ವೇತನ ದಿನಕ್ಕೆ ೫೦ ರೂಪಾಯಿ.) ಎಲ್ಲ ಅಧ್ಯಾಯಗಳೂ ಸಿದ್ಧವಾದ ಬಳಿಕ, ಟೆಕ್ಸಾಸ್ ವಿಶ್ವವಿದ್ಯಾಲಯದಲ್ಲಿರುವ ಜಾನ್ಸನ್ ಗ್ರಂಥಾಲಯಕ್ಕೆ ಅವನ್ನು ಸಾಗಿಸಲಾಗುವುದು. ಆ ಅಧ್ಯಾಯಗಳನ್ನು ಅಭ್ಯಸಿಸಿಯೇ ನಾಳೆಯ ಇತಿಹಾಸಕಾರರು ಜಾನ್ಸನ್ನರ ಅಧಿಕಾರಾವಧಿಯ ಬಗೆಗೆ ಬರೆಯುತ್ತಾರೆ.

ಈ ಸಂಬಂಧವಾಗಿ ಕುಹಕದ ಒಂದು ಮಾತು ಹೀಗೆ:

"ಒಗ್ಗಟ್ಟಿನಿಂದ ಬಲಗೊಂಡ ಅಮೆರಿಕದಲ್ಲಿ ಸಂತೃಪ್ತಿ ಸುವ್ಯವಸ್ಥೆಗಳೂ ಲೋಕದಲ್ಲಿ ಶಾಂತಿಯೂ ನೆಲೆಸಿರುವುದನ್ನು ಕಂಡು ಅತ್ಯಂತ ಸಮಾಧಾನದಿಂದ ಲಿಂಡನ್ ಜಾನ್ಸನ್ನರು ಅಧಿಕಾರವನ್ನು ಬಿಟ್ಟುಕೊಟ್ಟು ಟೆಕ್ಸಾಸಿನ ತಮ್ಮ ಬಡ ಗುಡಿಸಲಿಗೆ ವಾಸಕ್ಕಾಗಿ ತೆರಳಿದರು...."

ತಮ್ಮ ಕಾಲಾವಧಿಯನ್ನು ಕುರಿತು ಜಾನ್ಸನ್ ಬರೆಸಿದ ಇತಿಹಾಸದ ಕೊನೆಯಲ್ಲಿ ಇಂಥ ಮಾತೊಂದು ಇದ್ದರೆ!

* * * * *

ಏನೇ ಹೇಳಿ, ನಿನ್ನೆ ಇವತ್ತುಗಳನ್ನು ಕುರಿತು ಇತಿಹಾಸ ಬರೆಸುವುದು ಬರೆಯುವುದು ಬಹಳ ಕಷ್ಟದ ಕೆಲಸ. ನಮ್ಮ ರಾಜ್ಯದ ಮಟ್ಟಿಗೆ ಹೇಳುವುದಾದರೆ ಒಂದು ದಶಕದ ಇತಿಹಾಸವೆಂದರೆ ಸಿದ್ದವನಹಳ್ಳಿ ನಿಜಲಿಂಗಪ್ಪನವರ ಆಳ್ವಿಕೆಯ, ಅವರ ನಾಯಕತ್ವದಲ್ಲಿ ಆದ ಸಾಧನೆಗಳ ಇತಿಹಾಸ. ವಿರೋಧಿಗಳ ಟೀಕೆಗೆ ಒಳಗಾಗದಂತೆ ಸರ್ವಸಮ್ಮತವಾಗುವಂತೆ ಅದನ್ನು ಬರೆಸುವುದು ಸುಲಭವಲ್ಲ.

ತನ್ನ ಮೇಲೆ ಪಕ್ಷಪಾತದ ಆರೋಪ ಬರದಿರಲಿ – ಎಂದು ವೀರೇಂದ್ರ ಸಂಪುಟ ಎಚ್ಚರ ವಹಿಸಿದಂತಿದೆ. ಕಳೆದ ಹತ್ತಿಪ್ಪತ್ತು ವರ್ಷಗಳ ಇತಿಹಾಸದ ರಚನೆಯ ಹೊಣೆಯನ್ನು ರಾಜ್ಯದ ಮೂರು ವಿಶ್ವವಿದ್ಯಾಲಯಗಳ ಇತಿಹಾಸ ವಿಭಾಗಗಳ ಮುಖ್ಯಸ್ಥರಿಗೆ ಸರಕಾರ ಬಿಟ್ಟುಕೊಟ್ಟದೆ. ಇದು ಮೆಚ್ಚಬೇಕಾದ ಜಾಣತನ. ಇವರಿಂದ ಈ ಕೆಲಸ ಸಮರ್ಪಕವಾಗಿ ಆಯಿತೆಂದರೆ, ಕನ್ನಡ ಜನಕೋಟಿಯ ಜೀವನದ ಪ್ರಮುಖ ಕಾಲಘಟ್ಟದ ಘಟನೆಗಳ ಬಗೆಗೆ ವಿವಾದಕ್ಕೆ ಆಸ್ಪದವಿಲ್ಲದ ಇತಿಹಾಸ ಸಿದ್ಧವಾದಂತೆಯೇ.

೪–೮–೧೯೬೮

# ಸರಕಾರೀ ನಾಟಕ

ಸ್ವಾತಂತ್ರ್ಯೋತ್ಸವದ ವ್ಯವಸ್ಥಿತ ಸಂಭ್ರಮ, ಆ ಸಂದರ್ಭದಲ್ಲಿಯೇ ಹೂವಿನ ತೋಟದ ದೇವಾಲಯದಲ್ಲಿ ಫಲಪುಷ್ಪಗಳ ಸಮರ್ಪಣೆ, ಇಷ್ಟಕ್ಕೆ ಸರಿಜೋಡಿಯಾಗಿ ಹಿಂದೀ ಭಾಷೆಯಲ್ಲಿ ನಾಲ್ಕು ದಿನ ಸರಕಾರೀ ನಾಟಕಗಳು........

ಕೇಂದ್ರ ಸರಕಾರದ ಗೀತ – ನಾಟಕ ವಿಭಾಗ ಕನ್ನಡಿಗರಿಗೆ ಹೊಸದಲ್ಲ. ಕರ್ನಾಟಕದ ಶ್ರೇಷ್ಠ ನಾಟಕಕಾರರೊಬ್ಬರು – ಶ್ರೀರಂಗರು – ಆ ವಿಭಾಗದ ಮುಖ್ಯಸ್ಥರಾಗಿದ್ದರು, ಹದಿನೈದು ವರ್ಷಗಳಿಗೆ ಹಿಂದೆ, ಸ್ವಲ್ಪ ಕಾಲ.

ಭಾರೀ ಮಹತ್ವಾಕಾಂಕ್ಷೆಯಿಂದ ದೇಶ ಕೈಗೊಂಡ ಪಂಚವಾರ್ಷಿಕ ಯೋಜನೆಗಳ ಸಾಧನೆಗಾಗಿ ಬಾಜಾಬಜಂತ್ರಿ ನುಡಿಸಿ ಹುಮ್ಮಸ್ಸು ಹುಟ್ಟಿಸುವುದು ಆ ವಿಭಾಗದ ಹೊಣೆಗಾರಿಕೆ. ಅದರ ಮುಖ್ಯಸ್ಥನಾದುದರಿಂದ ಆದ್ಯ ರಂಗಾಚಾರ್ಯರಿಗೇನೋ ಉದ್ಯೋಗ ದೊರೆಯಿತು; ನಾಟಕಕಾರ ಶ್ರೀರಂಗರಿಗೆ ಮಾತ್ರ ಸೆರೆಮನೆವಾಸ ಲಭ್ಯವಾಯಿತು. (ಅದು ಕಠಿನ ಸಜೆಯಾದರೆ, ಆಕಾಶವಾಣಿಯ ನಾಟಕ ನಿರ್ದೇಶಕರಾಗಿ ಮುಂದೆ ಅವರು ಅನುಭವಿಸಿದ್ದು ಸಾದಾ ಶಿಕ್ಷೆ. ಶ್ರೀರಂಗರ ಬಿಡುಗಡೆಯಾದುದು ಆ ವೃತ್ತಿಯಿಂದ ಅವರು ದೂರ ಸರಿದಾಗಲೇ!)

ಗೀತ – ನಾಟಕ ಶಾಖೆಯ ಜವಾಬ್ದಾರಿ ಹೆಚ್ಚಿದುದು, ರಾಷ್ಟ್ರದಲ್ಲಿ ಭಾವೈಕ್ಯದ ಕೊರತೆ ಇದೆ ಎಂಬುದು ನಾಯಕಮಣಿಗಳಿಗೆ ಮನವರಿಕೆಯಾದಾಗ. ಅದು ಮತ್ತಷ್ಟು ಹೆಚ್ಚಾದುದು ದೇಶದ ಮೇಲೆ ಪರಕೀಯ ಆಕ್ರಮಣ ನಡೆದಾಗ. ಇದು ಸಾಲದೆಂದು ಭಾರತ ಪ್ರತಿ ವರ್ಷವೂ ಒಂದೊಂದು ಆಸ್ಟ್ರೇಲಿಯಾ ಖಂಡವನ್ನು ಹೆರಬೇಕೆ? ಹೊಣೆಗಳ ಸರಮಾಲೆಗೆ ಶಿಶು ದೈತ್ಯನ ಪಾತ್ರವೂ ಸೇರಿಕೊಂಡು ಹಾರ ಉರುಳಾಗುವಂಥ ಸನ್ನಿವೇಶ........

*  *  *  *  *

ಅಂಥ ಬಿಕ್ಕಟ್ಟಿನ ವೇಳೆಯಲ್ಲಿ ಗೀತ – ನಾಟಕ ವಿಭಾಗದ ಸೂತ್ರಧಾರರಾಗಿ ನೇಮಕಗೊಂಡರು ಕರ್ನಲ್ ಹೇಮಚಂದ್ರ ಗುಪ್ತೆ.

ಕಳೆದ ಹದಿನೈದು ವರ್ಷಗಳಲ್ಲಿ ಈ ಮಿಲಿಟರಿ ಮನುಷ್ಯ ಆ ಕ್ಷೇತ್ರದಲ್ಲಿ ಸಾಧಿಸಿರುವುದನ್ನು ನೋಡಿದರೆ, ಆ ಸ್ಥಾನಕ್ಕೆ ಅವರಿಗಿಂತಲೂ ಉತ್ತಮರಾದವರ ಆಯ್ಕೆ ಸರ್ವಥಾ ಸಾಧ್ಯವಿರಲಿಲ್ಲ ಎನಿಸುತ್ತದೆ.

ಗುಪ್ತೆ ಭಾರತೀಯತ್ವವನ್ನು ಮೈಗೂಡಿಸಿಕೊಂಡಿರುವ ಮಹಾರಾಷ್ಟ್ರೀಯರು.

ಯಾವುದೇ ಕಾರಣಕ್ಕಾಗಿ ಸೈನ್ಯವನ್ನು ಅವರು ಸೇರದೇ ಇದ್ದಿದ್ದರೆ, ಮರಾಠೀ ನಾಟಕ ಮಂಡಳಿಯೊಂದರ ಯಶಸ್ವೀ ಯಜಮಾನರಾಗುತ್ತಿದ್ದರು. ಅಥವಾ, ಚಲನಚಿತ್ರ ನಿರ್ಮಾಪಕರಾಗುತ್ತಿದ್ದರು. ಇಲ್ಲವೆ, ಆಕಾಶವಾಣಿಯಲ್ಲಿ ನಾಟಕ ನಿರ್ದೇಶಕರಾಗುತ್ತಿದ್ದರು. ಆದರೆ ಈಗ ಸಾಧಿಸಿರುವ ಶಿಸ್ತಿನ ಕಾರ್ಯಾಚರಣೆ ಅವರಿಂದ ಆಗುತ್ತಿತ್ತೋ ಇಲ್ಲವೋ ಹೇಳುವುದು ಕಷ್ಟ.

*    *    *    *    *

ಬೆಂಗಳೂರಿನಲ್ಲಿ ಗುಪ್ತೆಯವರ ನಾಟಕೋತ್ಸವವನ್ನು ಉದ್ಘಾಟಿಸುತ್ತ, ರಾಜ್ಯಪಾಲ ಪಾಠಕರೆಂದರು :

"ಬೌದ್ಧಿಕ ತೃಪ್ತಿಯನ್ನೂ ಮನೋರಂಜನೆಯನ್ನೂ ಇಂಥ ನಾಟಕಗಳು ಒದಗಿಸಬಲ್ಲುವು !"

ಈ ಬಗೆಯ ನಾಟಕಗಳು ರಾಷ್ಟ್ರೀಯ ಭಾವೈಕ್ಯವನ್ನೂ ಸಾಧಿಸಬಲ್ಲುವು ; ಸಾಮಾಜಿಕ ದುಷ್ಟ ವಿಪರ್ಯಾಸಗಳನ್ನೂ ಬೊಟ್ಟುಮಾಡಿ ತೋರಿಸಬಲ್ಲುವು – ಎಂದೂ ಅವರು ನುಡಿದರು.

ಮೇಲಿನ ಮಾತುಗಳು ವಾಸ್ತವವಾಗಿ, ಶ್ರೇಷ್ಠ ಕಲೆಗೆ ಸದಾಕಾಲವೂ ಅನ್ವಯಿಸುವಂಥವು. ಸರಕಾರೀ ನಾಟಕಗಳಿಗೆ ಸಂಬಂಧಿಸಿಯೂ ಅಂಥ ಮಾತುಗಳನ್ನಾಡುವುದು ಮುತ್ಸದ್ದಿತನ.

'ಪ್ರಚಾರ'ದ ಹಣೆಪಟ್ಟಿ ತನಗೆ ತಪ್ಪಿದ್ದಲ್ಲ ಎಂಬುವನ್ನು ಕರ್ನಲ್ ಗುಪ್ತೆ ಬಲ್ಲರು. ತಾವು ಸ್ವತಂತ್ರ ಪ್ರವೃತ್ತಿಯವರೆಂಬುದನ್ನು ತೋರಿಸಿಕೊಳ್ಳಲು ಅವರು ಹಿಂಜರಿಯುವುದಿಲ್ಲ. ಅವರ (ಅವರು ನಿರ್ದೇಶಿಸಿದ) ನಾಟಕಗಳಲ್ಲಿ ಸರಕಾರವನ್ನು ಕುರಿತು ಟೀಕೆಗಳೂ ಇವೆಯಂತೆ. ಅದಕ್ಕಾಗಿ ಮೇಲಣ ಅಧಿಕಾರಿಗಳು ಗುಪ್ತೆಯವರನ್ನು ತರಾಟೆಗೆ ತೆಗೆದುಕೊಂಡರು. "ನಿತ್ಯಜೀವನದಲ್ಲಿ ಅಂಥ ಮಾತುಗಳು ಕೇಳುತ್ತವಲ್ಲ" ಎಂದು ಗುಪ್ತೆ ವಾದಿಸಿದರಂತೆ. ಟೀಕೆಗಳಿಲ್ಲದೆ ನಾಟಕ ಪರಿಣಾಮಕಾರಿಯಾಗುವುದಿಲ್ಲ – ಎಂದೇ ಅವರು ಹೇಳಿರಬೇಕು !

ಇದೀಗ ಕಲಾವಿದನನ್ನು ಸದಾ ಕಾಡುವ ಕೂಟಪ್ರಶ್ನೆ. ಬದುಕಿಗೂ ರಂಗಭೂಮಿಗೂ ಸಾಮೀಪ್ಯವಿರಬೇಕಾದರೆ, ಶ್ರೀಮಂತ ನಿರ್ಮಾಪಕನಿಂದಾಗಲೀ ಸರಕಾರಿ ಒಡೆಯರಿಂದಾಗಲೀ ಅಡೆತಡೆಗಳು ಇರಕೂಡದು.

*    *    *    *    *

ಗುಪ್ತೆಯವರು ಮನಸ್ಸಾಕ್ಷಿಯ ತೊಳಲಾಟಕ್ಕೆ ತುತ್ತಾಗುವುದಿಲ್ಲ ಎಂದು ಧಾರಾಳವಾಗಿ ಹೇಳಬಹುದು. ಯಾಕೆಂದರೆ, ಇವರು ಸೈನ್ಯ ಸೇರಿ ಹೊಸ ವ್ಯಕ್ತಿತ್ವವನ್ನು ರೂಪಿಸಿಕೊಂಡಿರುವ ಕಲಾವಿದ. ಇತರರಿಂದ ಆಗದುದನ್ನು ಗುಪ್ತೆ ಮಾಡಿ ತೋರಿಸುತ್ತಿದ್ದರೆ, ಅದಕ್ಕೆ ಅವರ ವಿಶಿಷ್ಟ ವ್ಯಕ್ತಿತ್ವವೇ ಕಾರಣ.

ಅವರದು ಭಾರತದ ವಿವಿಧ ಭಾಗಗಳಿಂದ ಪ್ರತಿಭೆಯೊಂದರ ಆಧಾರದ ಮೇಲೆಯೇ ಆರಿಸಿದ ಹತ್ತು ನಟರು ಹಾಗೂ ನಾಲ್ವರು ನಟಿಯರ ತಂಡ. ಇನ್ನೊಂದು ಹತ್ತು ಜನ ರಂಗಸಜ್ಜಿಕೆ, ಧ್ವನಿ – ದೀಪ ವ್ಯವಸ್ಥೆಗಳ ತಂತ್ರಜ್ಞರು.

ಇವರ ಕಲಾನಿಪುಣತೆಯಾಗಲೀ ತಂತ್ರ ಕೌಶಲವಾಗಲೀ ಸರಕಾರದ ವೇತನ ತುಟ್ಟಿಭತ್ತೆಗಳಿಂದ ಹೊರತಲ್ಲ. ಒಂದು ದೃಷ್ಟಿಯಲ್ಲಿ ಖಾಸಗಿ ಕಂಪೆನಿಗಳ ನಟ ನಟಿಯರಿಗಿಂತ ಇವರು ಹೆಚ್ಚು ಭಾಗ್ಯಶಾಲಿಗಳು. ಉದ್ಯೋಗದ ಭದ್ರತೆ ಇತ್ಯಾದಿ ಇತ್ಯಾದಿ ಇವರಿಗಿವೆ.

ತಮ್ಮ ಹಿಂದಿ ನಾಟಕಗಳೂ ಪ್ರಾದೇಶಿಕ ಭಾಷೆಗಳಲ್ಲಿ ಬರೆಸಲಾಗುತ್ತಿರುವ ನಾಟಕಗಳೂ ಜನಪ್ರಿಯವಾಗಿವೆ ಎಂದು ಗುಪ್ತೆಯವರ ಅಭಿಪ್ರಾಯ. ಎಲ್ಲವೂ ಸೇರಿ ಪ್ರತಿ ವರ್ಷ ದೇಶದಲ್ಲಿ ಏಳುಸಾವಿರದಷ್ಟು ಈ ಬಗೆಯ ನಾಟಕ ಪ್ರದರ್ಶನಗಳಾಗುತ್ತವೆ. ಇದನ್ನು ಇಮ್ಮಡಿಗೊಳಿಸಬೇಕೆನ್ನುವುದು ಗುಪ್ತೆಯವರ ಗುರಿ.

* * * * *

'ಕೋಹಿನೂರ್ ಕಾ ಲುಟೇರಾ,' 'ಸೀಢಾ ಕಿ ಏಕ್ ಶಾಮ್,' 'ಧರ್ಮ ಶಾಲಾ,' 'ಕತ್‌ಗರ್' ನಾಟಕಗಳು ಪ್ರೇಕ್ಷಕರ ಮೆಚ್ಚುಗೆ ಗಳಿಸುತ್ತವೆ, ತಮ್ಮ ಅತ್ಯಂತ ಸಮರ್ಪಕ ರಂಗವಿನ್ಯಾಸಗಳಿಂದ.

ಇಷ್ಟಾದರೂ ಇವು ಶ್ರೇಷ್ಠ ನಾಟಕಗಳೆನಿಸುವುದಿಲ್ಲ; ಇವು ಶ್ರೇಷ್ಠ ನಾಟಕ ಪ್ರದರ್ಶನಗಳು ಮಾತ್ರ.

ಯಾಕೆ ?

ಬೌದ್ಧಿಕ ಜಗತ್ತನ್ನು ನಿರಾಸೆಯ ಹತಾಶಭಾವನೆಯ ಮೋಡಗಳು ಕವಿದಿರುವ ವಾತಾವರಣದಲ್ಲಿ ಶ್ರೇಷ್ಠನಾಟಕಕಾರರನ್ನು ಸಾಮಾಜಿಕ ಪರಿಸರ ಪ್ರೇರೇಪಿಸಲಾರದು.

ಇಂಥ ಪರಿಸ್ಥಿತಿಯಲ್ಲಿ, ಗುಪ್ತೆ ಪ್ರದರ್ಶನಗಳಿಗಿಂತ ಉತ್ತಮವಾದುದು ನಮ್ಮ ಜನರಿಗೆ ದೊರೆಯುವುದು ಸಾಧ್ಯವಿಲ್ಲ.

೨೫–೮–೧೯೬೮



# ಖಚಿತ ಗುರಿ, ಸ್ಪಷ್ಟ ದಾರಿ

ಬೇಸಗೆಯ ರಜೆಗೋಸ್ಕರ ಶಾಲೆಗಳನ್ನು ಮುಚ್ಚಿದ್ದಾರೆ. ಮತ್ತೆ ಕದ ತೆರೆದು ಜೇಡರ ಬಲೆಗಳನ್ನು ಗುಡಿಸಿ ಹೊಸ ಗಾಳಿ ಓಡಾಡುವಂತೆ ಮಾಡುವ ವೇಳೆಗೆ ಪುಸ್ತಕದ ಅಂಗಡಿಗಳ ಮುಂದೆ ಉತ್ತೀರ್ಣರಾದ ಹುಡುಗರು ಕ್ಯೂ ನಿಂತಿರುತ್ತಾರೆ. ಗಣಿತ, ಭೂಗೋಳ, ಚರಿತ್ರೆ, ಸಮಾಜಶಾಸ್ತ್ರ, ಕನ್ನಡ....ಇತ್ಯಾದಿ. ಎಲ್ಲ ಪುಸ್ತಕಗಳೂ ಜೂನ್ ವೇಳೆಗೆ ತಪ್ಪದೆ ಸಿಗುತ್ತವೆನ್ನುವುದು ಭ್ರಮೆ. ಮುದ್ರಣಾಲಯಗಳು ಹಗಲೂ ರಾತ್ರಿ ಸಪ್ಪಳ ಮಾಡಿದರೂ ಕೆಲವು ಪುಸ್ತಕಗಳಾದರೂ ಕೈ ಕೊಡುತ್ತವೆ. ಹಂತ ಹಂತವಾಗಿ ಪಠ್ಯ ಪುಸ್ತಕಗಳ ರಾಷ್ಟ್ರೀಕರಣ ನಡೆದಿರುವಾಗ, ವಿಳಂಬವಾಯಿತೆಂದರೆ ಜನ ದೂರುವುದು ಸರಕಾರವನ್ನು.

ಅವಸರದ ಮುದ್ರಣವೆಂದರೆ, ಮುದ್ರಾರಾಕ್ಷಸ ಕೇಕೆ ಹಾಕುತ್ತಾನೆ. ಅಚ್ಚಿನ ದೋಷಗಳಿಗಿಂತಲೂ ಕಠಿಣವಾದದ್ದು, ಪಠ್ಯಪುಸ್ತಕಗಳನ್ನು ಬರೆಯುವ ಕೆಲವರ ಅಪಕ್ವ ಬೌದ್ಧಿಕಮಟ್ಟ. ಅಂಥವರಿಂದ, ತಿಳಿವಳಿಕೆ ಸಾಲದೆ ತಪ್ಪುಗಳಾಗುತ್ತವೆ. ಕೆಲವೊಮ್ಮೆ ಉದ್ದೇಶಪೂರ್ವಕವಾಗಿ ಕೊಂಕು ಮಾತುಗಳು ಸೇರಿಹೋಗುವುದುಂಟು. ಅಂತಿಮ ಸ್ವೀಕಾರಕ್ಕೆ ಮುನ್ನವೇ ಈ ಪುಸ್ತಕಗಳ ಪರಿಶೀಲನೆ ಮುಗಿಯಬೇಕು. ಪರಿಣತರು ಆ ಕೃತಿಗಳ ಬಗೆಗೆ ಹೊಣೆ ಹೊರಬೇಕು. ಅಷ್ಟಕ್ಕೂ ಘೋರ ತಪ್ಪುಗಳಾದುವೆಂದರೆ ಸಂಬಂಧಪಟ್ಟ ಅಧಿಕಾರಿಗಳು ತಲೆದಂಡ ತೆರಬೇಕು. ಕೆಳಗಿನ ನೌಕರನತ್ತ ಬೊಟ್ಟು ಮಾಡಿ ಯಾರೂ ತಪ್ಪಿಸಿಕೊಳ್ಳುವಂತಿಲ್ಲ.

ಪಠ್ಯಪುಸ್ತಕದ ನಿರ್ಮಾಣ ಮುದ್ರಣವೆಲ್ಲ ಜನವರಿಯ ಅನಂತರ ನಡೆಯುವ ಕೆಲಸ ಎಂಬ ಒಂದು ಭಾವನೆಯುಂಟು. ಖಾಸಗಿ ಪ್ರಕಾಶಕರು ಪಾತ್ರವಹಿಸುತ್ತಿದ್ದಾಗ ಹೀಗಾಗುತ್ತಿತ್ತು. ಒಬ್ಬ ಪ್ರಕಾಶಕನ ಒಂದು ಪುಸ್ತಕ– ಅಲ್ಪ ಸಂಭಾವನೆ ಕೊಟ್ಟು ಯಾರೋ ಅಧ್ಯಾಪಕರಿಂದ ಬರೆಸಿದ್ದು – ಪಠ್ಯವಾಯಿತು ಎಂದಿಟ್ಟುಕೊಳ್ಳೋಣ. ಒಂದು ಲಕ್ಷ ಪ್ರತಿಗಳು ಬೇಕು. ಮೂವತ್ತು ಮೂವತ್ತೈದು ಸಾವಿರವೋ ಅರ್ಧ ಲಕ್ಷವೋ ವೆಚ್ಚ. ಮೊದಲೇ ಕೆಲಸ ಕೈಗೊಂಡು, ಅವಸರಪಡದೆ ಮುದ್ರಿಸಿದರೆ, ಹಣ ಹೆಪ್ಪುಗಟ್ಟುತ್ತದೆ. ಹಣವಾದರೂ ಅಷ್ಟೊಂದು ಎಲ್ಲಿರಬೇಕು ? ಮುದ್ರಣಕ್ಕೆ ಬೇಕಾದ ಕಾಗದವನ್ನು ಆತ ಸಾಲಪಡೆಯುತ್ತಾನೆ. ಅಚ್ಚುಕೂಟದ ಒಡೆಯನಿಗೆ ಸಹಕರಿಸುವಂತೆ ಪ್ರಾರ್ಥಿಸುತ್ತಾನೆ. ಸ್ವಲ್ಪ ಹಣಕ್ಕಾಗಿ ಯಾವುದಾದರೂ ಬ್ಯಾಂಕಿನ ನೆರವು ಪಡೆಯುತ್ತಾನೆ. ಬಡ್ಡಿ ತೆರಬೇಕಲ್ಲ ? ಕೆಲವೇ ದಿನಗಳ ಅವಧಿಯಲ್ಲಿ ವ್ಯವಹಾರ

ಮುಗಿಯುವುದಿದ್ದರೆ ಕೈ ಕಚ್ಚುವುದಿಲ್ಲ. ಅದಕ್ಕಾಗಿ, ಜೂನ್ ೧ ರಂದು ಹುಡುಗರು ಪುಸ್ತಕ ಕೊಳ್ಳುವಂತಿದ್ದರೆ, ಮೇ ೧೫ ರಂದು ಮುದ್ರಣ ಪ್ರಾರಂಭಿಸುತ್ತಾನೆ. ಈ ಗಡಿಬಿಡಿಯಲ್ಲಿ ದೋಷಗಳು ಎಣಿಕೆಗೆ ಸಿಗದಷ್ಟು ಉಳಿಯುತ್ತವೆ. ಬಡಪಾಯಿ ಪ್ರಕಾಶಕನನ್ನು ದೂಷಿಸಿ ಏನು ಫಲ ?

ಸರಕಾರವೇ ಪ್ರಕಾಶಕನಾದಾಗ ಈ ತೊಂದರೆಗಳಿರುವುದಿಲ್ಲವಲ್ಲ ? ಸರಕಾರದ್ದೇ ಮುದ್ರಣಾಲಯಗಳಿವೆ. ಇನ್ನೂ ಕೆಲವನ್ನು ಜಿಲ್ಲೆಗಳಲ್ಲಿ ಒಂದೊಂದರಂತೆ ಸ್ಥಾಪಿಸಬಹುದು. ವರ್ಷವೆಲ್ಲ ದುಡಿಯಬಹುದು – ಮುದ್ರಣಾಲಯ ಹಾಗೂ ತಜ್ಞರು.

ಇದು ಭಾರೀ ಪ್ರಮಾಣದ ಕೆಲಸ ಎಂದು ತಿಳಿದಿರುವುದರಿಂದಲೇ ಪಠ್ಯಪುಸ್ತಕಗಳ ನಿರ್ಮಾಣಕ್ಕಾಗಿಯೇ ಒಂದು ಕಾರ್ಪೊರೇಷನನ್ನು – ಮಂಡಳಿಯನ್ನು ಸ್ಥಾಪಿಸಲು ಸರಕಾರ ಮುಂದಾಗಿರುವುದು. ಆದರೂ ಸರಕಾರೀ ದೇವರ ಕೆಲಸ ಬಲು ನಿಧಾನ. ಮಂತ್ರಕ್ಕಿಂತ ಉಗುಳೇ ಜಾಸ್ತಿ.

ಪ್ರಾಯಶಃ ಜೂನ್ ವೇಳೆಗಾದರೂ ಪಠ್ಯಪುಸ್ತಕ ಕಾರ್ಪೊರೇಷನ್ ಸ್ಥಾಪನೆಯಾದರೆ ಮುಂದಿನ ವರ್ಷ ಸಮಸ್ಯೆಯ ಪರಿಹಾರ ಸುಲಭವಾಗಬಹುದು.

* * * * *

ಎಲ್ಲ ರಾಜ್ಯಗಳಲ್ಲೂ ಹೆಚ್ಚುಕಡಮೆ ಇದೇ ಕಥೆ.

ಕೇಂದ್ರದಲ್ಲಿ ಪಠ್ಯಪುಸ್ತಕಗಳ ರಾಷ್ಟ್ರೀಯ ಮಂಡಳಿಯೊಂದನ್ನು ಸ್ಥಾಪಿಸಿದ್ದಾರೆ. ಶಿಕ್ಷಣ ಪ್ರತಿರಾಜ್ಯಕ್ಕೆ ಸಂಬಂಧಿಸಿದ ವಿಷಯವಾದರೂ ಶಿಕ್ಷಣ ನೀತಿಯನ್ನು ರೂಪಿಸುವ ಹೊಣೆ ಕೇಂದ್ರಕ್ಕೆ ಸೇರಿದ್ದು.

ಅಜಾದರು, ಛಗ್ಲಾರು, ತ್ರಿಗುಣ ಸೇನರು ಮಾಡಲಾಗದ್ದನ್ನು ವರದ ಕಸ್ತೂರಿ ರಂಗ ವಿಜಯೀಂದ್ರರಾಯರು ಮಾಡಲು ಹೊರಟಿದ್ದಾರೆ. ಒಂದು ಕಾಲದಲ್ಲಿ ಅಧ್ಯಾಪಕ ವೃತ್ತಿಯಲ್ಲಿದ್ದವರು. ಶಿಕ್ಷಣಕ್ಕೆ ಸಂಬಂಧಿಸಿ ಏನಾದರೂ ಪ್ರಗತಿಯಾಗುವುದಿದ್ದರೆ ಇವರಿಂದ ಆಗಬೇಕು. ಇವರಿಂದಲೂ ಆಗದೆ ಹೋದರೆ, ಈ ರಾಷ್ಟ್ರದ ಶೈಕ್ಷಣಿಕ ಅರಾಜಕತೆಯನ್ನು ಯಾರೂ ನಿವಾರಿಸಲಾರರು.

ಆದರೂ ರಾಯರ ಒಂದು ಸಲಹೆ ದಿಗ್ಭ್ರಮೆ ಹುಟ್ಟಿಸುವಂತಿದೆ. ಪಠ್ಯಪುಸ್ತಕಗಳ ರಾಷ್ಟ್ರೀಯ ಮಂಡಳಿಯ ಸಭೆಯಲ್ಲಿ ಮಾತನಾಡುತ್ತ ಅವರು, ೬ ರಿಂದ ೧೧ ರ ವಯೋಮಾನದ ವಿದ್ಯಾರ್ಥಿಗಳ ಸಮ್ಮೇಳನವೊಂದನ್ನು ಜರಗಿಸಿ ಪಠ್ಯಪುಸ್ತಕಗಳ ರಚನೆಗೆ ಸಂಬಂಧಿಸಿ ಅವರ ಅಭಿಪ್ರಾಯ ಪಡೆಯಬೇಕು — ಎಂದರು.

ವಿವೇಚಿಸುವ ಗೊಡವೆಗೆ ಹೋಗದೆ ಅಂತಹ ಸಲಹೆಯನ್ನು ರಾಯರು ಮಂಡಿಸಿದರು ಎನಿಸುತ್ತದೆ. ಮಕ್ಕಳನ್ನು ಬಿಡಿ, ಅವರಿಗೆ ಪಾಠ ಹೇಳುವ ಅಧ್ಯಾಪಕರಿಂದಲಾದರೂ ಆ ಬಗ್ಗೆ ಅಭಿಪ್ರಾಯ ಮಂಡನೆ ಸಾಧ್ಯವಾಗುತ್ತದೋ ಇಲ್ಲವೋ ಹೇಳುವುದು ಕಠಿನ. ಬಹಳವೆಂದರೆ, ಅಧ್ಯಾಪಕರ ಸಮ್ಮೇಳನದಲ್ಲಿ ತಜ್ಞರೂ ಭಾಗವಹಿಸಿದರೆ

ಕೆಲವೊಂದು ವಿಚಾರಗಳಿಗೆ ರೂಪುಕೊಡುವುದು ಸಾಧ್ಯವಾಗಬಹುದು. ಇದು ರಾಯ ರಂತಹ ಶಿಕ್ಷಣವೇತ್ತರಿಗೆ ಹೊಳೆಯದೆ ಹೋದುದು ಕಠಿನ.

ಚಿಕ್ಕವಯಸ್ಸಿನ ಹುಡುಗರಿಗಲ್ಲವಾದರೂ ಪ್ರಾಪ್ತವಯಸ್ಕರಿಗೆ ತಮಗೇನು ಬೇಕೆಂಬುದು ತಿಳಿಯುತ್ತದೆ ಎನ್ನೋಣವೆ? ಜಾಧವಪುರ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ಸ್ಮರಣ ಸಂಚಿಕೆಯೊಂದನ್ನು ಸಿದ್ಧಪಡಿಸಿದರು, ಅಧ್ಯಾಪಕರ ನೆರವಿಲ್ಲ ದೆಯೇ. ಅದರಲ್ಲಿ ಗಾಂಧಿಜಿ ಹಾಗೂ ಜವಾಹರಲಾಲರನ್ನು ಅವಹೇಳನ ಮಾಡುವ ಬರೆಹಗಳಿದ್ದುವು. ಲೋಕಸಭೆಯಲ್ಲಿ ಗದ್ದಲವಾಯಿತು. ಆ ಅಂಶಗಳೇನು, ತಿಳಿಸಿ– ಎಂದರು ಒಬ್ಬ ಸದಸ್ಯರು. "ಹೇಳಲು ನನಗೆ ನಾಚಿಕೆಯಾಗುತ್ತದೆ," ಎಂದರು ಶಿಕ್ಷಣ ಸಚಿವರು.

* * * * *

ಒಳ್ಳೆಯ ಪಠ್ಯಪುಸ್ತಕ ಕಡಮೆ ಬೆಲೆಗೆ ಮಕ್ಕಳಿಗೆ ಸಿಗಬೇಕು. ಹೇಗೆ? ಗಣಿತ, ವಿಜ್ಞಾನ ಮುತ್ತಿತರ ಈ ಬಗೆಯ ಪಠ್ಯಗಳು ರಾಷ್ಟ್ರೀಯ ಮಟ್ಟದಲ್ಲೇ ರಚನೆಯಾದರೆ ಪ್ರಾದೇಶಿಕ ಭಾಷೆಗಳಲ್ಲಿ ಪಠ್ಯನಿರ್ಮಾಣಕ್ಕೆ ಅವುಗಳನ್ನು ಆಧಾರವಾಗಿಟ್ಟುಕೊಳ್ಳ ಬಹುದು.

ಒಂದೊಂದು ವಿಭಾಗಕ್ಕೆ ಒಂದೊಂದು ಪುಸ್ತಕ ಎಂಬುದನ್ನು ತೆಗೆದು ಹಾಕಿ, ರಾಜ್ಯಕ್ಕೊಂದೇ ಪುಸ್ತಕವಿರಬೇಕೆಂದು ಮೈಸೂರು ಸರಕಾರ ನಿರ್ಧರಿಸಿರುವುದರಿಂದ ಹೆಚ್ಚಿನ ಪ್ರತಿಗಳು ಮುದ್ರಣವಾಗಿ ಅಗ್ಗದ ಬೆಲೆಗೆ ಪಠ್ಯಪುಸ್ತಕ ದೊರೆಯುವುದು ಕಷ್ಟವಾಗದು.

ಗುರಿ ಖಚಿತವಾಗಿದ್ದರೆ ದಾರಿ ಸ್ಪಷ್ಟವಾಗಿದ್ದರೆ ಎಡವಿ ಬೀಳುವ ಅಗತ್ಯವೆಲ್ಲಿದೆ?

೨೦–೪–೧೯೬೯

# ಸೆನ್ಸಾರ್ ಸಂಸ್ಕಾರ

ರಜತ ಪರದೆಯ ಮೇಲೆ 'ಸಂಸ್ಕಾರ' ಚಿತ್ರದ ಪ್ರದರ್ಶನಕ್ಕೆ ಅವಕಾಶವಿಲ್ಲ. ಮದರಾಸಿನಲ್ಲಿರುವ ಪ್ರಾದೇಶಿಕ ಫಿಲ್ಮ್ ಸೆನ್ಸಾರ್ ಮಂಡಳಿ ಅನುಮತಿ ನಿರಾಕರಿಸಿದೆ. ಮುಂಬಯಿಯಲ್ಲಿರುವ ಕೇಂದ್ರ ಸೆನ್ಸಾರ್ ಮಂಡಳಿ, ಆ ನಿರ್ಧಾರವನ್ನು ಎತ್ತಿ ಹಿಡಿದಿದೆ.

ಕಾರಣ? ಬಹಿರಂಗವಾಗಿ ಸೆನ್ಸಾರ್ ಮಂಡಳಿ ಏನನ್ನೂ ಹೇಳಿಲ್ಲ. ಒತ್ತಾಯಿಸಿದರೆ ಉತ್ತರ ದೊರೆಯಬಹುದು. ಆ ಉತ್ತರ ಏನಿದ್ದೀತು ಎಂದು ಊಹಿಸಿಕೊಳ್ಳುವುದು ಕಷ್ಟವಲ್ಲ. "ಸಮಾಜದ ಒಂದು ನಿರ್ದಿಷ್ಟ ವರ್ಗದ ಮೇಲೆ ಅಹಿತಕರ ಪರಿಣಾಮ........"

ಸವಕಲು ಧ್ವನಿ. ಜನ ಎಷ್ಟು ಸಲ ಈ ದೇಶದಲ್ಲಿ ಇದನ್ನು ಕೇಳಿಲ್ಲ!

*　　*　　*　　*　　*

ಇಪ್ಪತ್ತೈದು ವರ್ಷಗಳಿಗೆ ಹಿಂದೆ ಒಂದು ದಿನ. ಅಹಮ್ಮದ್ ಅಬ್ಬಾಸರು ಬರೆದಿದ್ದ 'ಅಮೃತ' ಎಂಬ ನಾಟಕವನ್ನು ಅಭಿನಯಿಸಲು ಮಿತ್ರರು ನಿರ್ಧರಿಸಿದರು. ವಿಷಯ ಪೋಲೀಸರಿಗೆ ತಿಳಿಯಿತು. ಕಲೆಕ್ಟರರಿಂದ ಕರೆ ಬಂತು: "ನಾಟಕದ ಹಸ್ತಪ್ರತಿಯೊಡನೆ ಬಂದು ಭೇಟಿ ಮಾಡಿ."

ಆಗಿನ್ನೂ ಆಂಗ್ಲ ಸರಕಾರದ ದೌಲತ್ ನಾಟಕದ ಕೊನೆಯ ಅಂಕ.

ಹಸ್ತಪ್ರತಿಯನ್ನು ಕಲೆಕ್ಟರರು ಓದಿ ನೋಡಿದರು. "ನಾಟಕ ಚೆನ್ನಾಗಿದೆ," ಎಂದರು. "ಆದರೆ"– ಎಂದು ರಾಗವೆಳೆದರು.

ನಾಟಕದಲ್ಲಿ 'ಜಾನ್ ಬುಲ್' ಎಂಬ ಪಾತ್ರ ಬರುತ್ತದೆ. "ನನ್ನಲ್ಲಿ ಅಮೃತವಿದೆ. ಬನ್ನಿ ಸ್ವೀಕರಿಸಿ," ಎಂದು ಸಾರುವ ಅಮೃತ ವ್ಯಾಪಾರಿ ಆತ.

"ಆ ಪಾತ್ರ ಒಂದನ್ನು ತೆಗೆದು ಹಾಕಿ, ಉಳಿದ ಭಾಗವನ್ನು ಆಡಬಹುದು."

– ಜಾನ್ ಬುಲ್‌ನ ನಿಷ್ಠಾವಂತ ಕಿಂಕರ ನೀಡಿದ ತೀರ್ಪು.

"ಆ ಪಾತ್ರವೇ ನಾಟಕದ ಜೀವಾಳ...."

ಅಧಿಕಾರಿ ಒಪ್ಪಲಿಲ್ಲ.

*　　*　　*　　*　　*

ಮೇಲಿನದಕ್ಕಿಂತಲೂ ಹದಿನೇಳು ವರ್ಷದ ಹಿಂದಿನ ಮಾತು.

ರವೀಂದ್ರನಾಥ ಠಾಕೂರರ "ವಿಸರ್ಜನ" ಎಂಬ ನಾಟಕ. ಪ್ರದರ್ಶನಕ್ಕೆ ಅದು ಅರ್ಹವೆ ಎಂದು ತೀರ್ಮಾನಿಸುವ ಹೊಣೆ ಹೊತ್ತವರು ಒಬ್ಬ ಪೋಲೀಸ್ ಅಧಿಕಾರಿ.

ನಾಟಕವನ್ನೋದಿ ಆ ಅಧಿಕಾರಿ ಬರೆದರು :

"ಕೆಲವು ಆಕ್ಷೇಪಾರ್ಹ ಭಾಗಗಳನ್ನು ತಿದ್ದಿದರೆ (ಪ್ರದರ್ಶನಕ್ಕೆ) ಅನುಮತಿ ನೀಡಬಹುದು."

ಠಾಕೂರರು ಅದಕ್ಕೆ ಒಪ್ಪಿದರೋ ಇಲ್ಲವೋ ತಿಳಿಯದು. ಪ್ರಾಯಶಃ ಆ ನಾಟಕದ ಪ್ರದರ್ಶನವೇ ಏರ್ಪಡಲಿಲ್ಲ. ಯಾಕೆಂದರೆ ಹಸ್ತಪ್ರತಿ ಪೋಲೀಸ್ ಖಾತೆಯಲ್ಲೇ ಉಳಿದಿತ್ತು, ಕಳೆದ ೪೩ ವರ್ಷಗಳಿಂದ. ಮೊನ್ನೆಯಷ್ಟೇ ಪಶ್ಚಿಮ ಬಂಗಾಲದ ಪೋಲೀಸ್ ಮಂತ್ರಿ, ಹಳೆಯದಾಗಿ ಕಂದು ಬಣ್ಣಕ್ಕೆ ತಿರುಗಿದ್ದ ಹಸ್ತಪ್ರತಿಯ ಹಾಳೆಗಳನ್ನು, ವಿಧ್ಯುಕ್ತವಾಗಿ (ಛಾಯಾಚಿತ್ರಕಾರರ ಸಮ್ಮುಖದಲ್ಲಿ) ವಿಶ್ವಭಾರತಿ ವಿಶ್ವವಿದ್ಯಾಲಯದ ಅಧಿಕಾರಿಗೆ ಒಪ್ಪಿಸಿದರು. ಸಮಾರಂಭದ ಅಧ್ಯಕ್ಷತೆಯನ್ನು ಮುಖ್ಯಮಂತ್ರಿ ವಹಿಸಿದ್ದರು.

(ಈ ಇಬ್ಬರೂ ಶಾಂತಿನಿಕೇತನದ ತನಕ ಪಾದ ಬೆಳೆಸಿ ತಾವೇ ಹಸ್ತಪ್ರತಿಯನ್ನು ವಿಶ್ವವಿದ್ಯಾಲಯಕ್ಕೆ ಮುಟ್ಟಿಸಿ ಬರಬಹುದಾಗಿತ್ತು. ಆದರೆ ಎಷ್ಟೆಂದರೂ ಅವರು ಮಂತ್ರಿಗಳಲ್ಲವೆ? ತಾವಿದ್ದಲ್ಲಿಗೇ ಬನ್ನಿ – ಎಂದು ಕರೆ ಕಳುಹಿಸಿದರು.)

* * * * *

ಪರಕೀಯರ ಆಳ್ವಿಕೆಯಲ್ಲಿನ ಸ್ವಾರಸ್ಯದ ಕಥೆಗಳೆಲ್ಲ, ಹಿಂದಿನ ಒಂದೆರಡು ತಲೆಮಾರಿನವು.

"ಸಂಸ್ಕಾರ"ವನ್ನು ಚಿತ್ರಿಸಿದವರು ಈ ಪೀಳಿಗೆಯವರು. ಚಿತ್ರೀಕರಣ ನಡೆದುದು ಸ್ವತಂತ್ರ ಭಾರತದಲ್ಲಿ.

ಆದರೂ ಯಾಕೆ ನಿಷೇಧ? ಈ ಚಿತ್ರದಲ್ಲಿ ಯಾರೂ ಸರಕಾರವನ್ನು ಜರೆಯುವುದಿಲ್ಲ. ವರ್ಗಸಮರವನ್ನು ಪ್ರಚೋದಿಸುವುದಿಲ್ಲ. ಭಾರತದ ಬಹ್ವಂಶ ಚಿತ್ರಗಳಲ್ಲಿ ಕಾಣುವ ಅತಿ ಶೃಂಗಾರದ ಕುಣಿತ ಕುಲುಕಾಟಗಳೂ ಇಲ್ಲಿಲ್ಲ. ಅಣ್ಣಾದೊರೈ, ಕರುಣಾನಿಧಿಯವರು ಬರೆಯುತ್ತಿದ್ದ ಮಾದರಿಯ ಮೂರ್ತಿಭಂಜಕ ಚಿತ್ರಕತೆಯೂ ಇದಲ್ಲ. ಗಾಂಧಿ ಶತಾಬ್ದಿಯಲ್ಲಿ ಹಿಂಸೆಯನ್ನು ಈ ಚಿತ್ರ ಪ್ರಚೋದಿಸುತ್ತದೆ ಎನ್ನುವಂತೆಯೂ ಇಲ್ಲ.

ಹೀಗಿದ್ದೂ ಯಾಕೆ ಈ ಆಕ್ರೋಶ?

* * * *

ಅನಂತಮೂರ್ತಿಯವರ 'ಸಂಸ್ಕಾರ' ಕನ್ನಡದೊಂದು ವಿಶಿಷ್ಟ ಕಾದಂಬರಿ. ಅದರ ಚಲನಚಿತ್ರ ನಿರ್ಮಾಣವಾದುದೂ ಅದೇ ಬಗೆಯ ವೈಶಿಷ್ಟ್ಯದಿಂದಲೇ. ಕಥೆ ಸಮಾಜದ ಮಡಿವಂತ ಜಾತಿಗೆ ಸಂಬಂಧಿಸಿದೆ – ಎನ್ನುವುದು ಸರಿಯಲ್ಲ. ಭಾರತೀಯ ಸಾಮಾಜಿಕ ಪರಿಸರದ ಮೂಲಭೂತ ಪ್ರಶ್ನೆಗೆ ಸಂಬಂಧಿಸಿದ್ದು ಈ ಕೃತಿ. ಅಷ್ಟೇ ಅಲ್ಲ, ಜಗತ್ತಿನ ಯಾವುದೇ ಸಂಪ್ರದಾಯನಿಷ್ಠ ಸಮಾಜಕ್ಕೂ ಅನ್ವಯವಾಗುವ ಕಥೆ ಇದು.

ಈ ಅಂಶವನ್ನು ಸರಕಾರಿ ಪರಿಶೀಲಕರು ಅರ್ಥಮಾಡಿಕೊಳ್ಳದೆ ಹೋದುದು, ಕಥೆಯ ಚಿತ್ರರೂಪವನ್ನು ಸೆನ್ಸಾರ್ ಮಂಡಳಿಯವರು ಒಪ್ಪದೆ ಹೋದುದು, ದೇಶದ ದುರ್ದೈವ.

ನಮ್ಮ ಚಿತ್ರತಜ್ಞರು ಹಲವರು ನಗ್ನತೆಗೆ ಚುಂಬನಕ್ಕೆ ಅವಕಾಶವಿರಬೇಕು ಎನ್ನುತ್ತಾರೆ. ಆದರೆ ಸಾಮಾಜಿಕ ಸತ್ಯದ ಘಾಟು ಉಸಿರು ಅವರಿಗೆ ಸಹ್ಯವಾಗುವುದಿಲ್ಲ!

* * * * *

ಇಪ್ಪತ್ತು ವರ್ಷಗಳ ಅನಂತರದ ಒಂದು ಕಾಲಾವಧಿ. ಯಾವುದೋ ಸರಕಾರ.

ಸಂಸ್ಕೃತಿಯ ಮಂತ್ರಿಯೊಬ್ಬರು ಹಳೆಯ ದಾಖಲೆಗಳಿಂದ ಒಂದು ಕಡತವನ್ನೆತ್ತಿ ತೆಗೆದು ಪರಿಶೀಲಿಸಿ ೧೯೬೯ರಲ್ಲಿ ಸೆನ್ಸಾರ್ ಬೋರ್ಡ್ ತಿರಸ್ಕರಿಸಿದ 'ಸಂಸ್ಕಾರ' ಚಿತ್ರವನ್ನು ನೋಡಲು ಬಯಸುತ್ತಾರೆ. ಮುಚ್ಚುಮರೆಯಲ್ಲಿ, ಖಾಸಗಿಯಾಗಿ, ಗೀರು ಚುಕ್ಕೆಗಳು ಬಿದ್ದು ಹಳೆಯದಾದ ಫಿಲ್ಮನ್ನು ಯಾರೋ ತಂದು ತೋರಿಸುತ್ತಾರೆ. ಮಂತ್ರಿಯೆನ್ನುತ್ತಾರೆ: "ಇದನ್ನು ಬಹಿರಂಗವಾಗಿ ಪ್ರದರ್ಶಿಸಬಹುದು!"

ಹಾಗೆ ಪ್ರದರ್ಶಿಸುವ ಸ್ಥಿತಿಯಲ್ಲಿ ಇದ್ದರೆ ತಾನೆ ಫಿಲ್ಮ್?

ಕಾಡುವ ಪ್ರಶ್ನೆ ಇಷ್ಟೆ: ಹೀಗಾಗಬೇಕೆ ಈ ನಾಡಿನಲ್ಲಿ? ಈ ದೇಶದಲ್ಲಿ?

೩೦–೧೧–೧೯೬೯

# ‘ ಮನವೆಂಬ ಮರ್ಕಟ ’

ಚಿರಂತನ ಬಾಲ್ಯದ ಅಚ್ಚಿನಲ್ಲಿ ಎರಕಹೊಯ್ದ ಇಂಗ್ಲಿಷ್ ಮೇಷ್ಟ್ರು – ರಾಮಚಂದ್ರ ಮೂರ್ತಿ. ತಲೆಯ ಮೇಲಣ ನುಣುಪು ಕೂದಲು ಒಂದಷ್ಟು ನಾಪತ್ತೆಯಾಗಿದ್ದರೂ ಅವರಿನ್ನೂ ‘ ಹುಡುಗು.’ ಹುಬ್ಬಳ್ಳಿಯ ನಿಷ್ಕಪಟ ಕಠೋರತೆಯ ಹಾಗೂ ಉಡುಪಿಯ ಬೌದ್ಧಿಕ ಚಾಕಚಕ್ಯದ ಕುಲುಮೆಗಳಲ್ಲಿ ಮೈ ಕಾಯಿಸಿಕೊಂಡು ಬೆಂಗಳೂರಿನಲ್ಲಿ ಬೀಡು ಬಿಟ್ಟವರು. ಕರ್ನಾಟಕ ದರ್ಶನವಾದ ಮೇಲೂ ಈ ಜಕ್ಕಣ ಸೃಷ್ಟಿ ಮಿಸುಕಿದ್ದರೆ ನನ್ನಾಣೆ.

ನಮ್ಮ ನಾಡಿನಲ್ಲಿ ಇಂಗ್ಲಿಷ್ ಬೋಧಿಸುವ ಉಪನ್ಯಾಸಕರನ್ನೂ ಆಚಾರ್ಯರನ್ನೂ ಕಂಡಾಗಲೆಲ್ಲ ಶ್ರೀಯವರ ನೆನಪು ಕಾಡುತ್ತದೆ. ಆ ನಂದಾದೀಪದ ಪರಂಪರೆಯಲ್ಲಿ ಉರಿಯುವ ಸಾಲು ದೀಪಗಳನ್ನು ಕಾಣುವ ಆಸೆಯಾಗುತ್ತದೆ.

ಭೇಟಿಯಾದಾಗಲೆಲ್ಲ ಅಂಥ ಭಾವನೆಗೆ ಪುಟ ಕೊಡುವ ವ್ಯಕ್ತಿ, ಮೂರ್ತಿ. ಥೇಮ್ಸ್ ನದಿಯಲ್ಲಿ ಮಿಂದ ಮೇಲೂ ಕಾವೇರಿಯನ್ನು ಪ್ರೀತಿಸುವ ಕುಲ. ಕನ್ನಡದಲ್ಲಿ ಸೊಗಸಾಗಿ ಬರೆಯಬಲ್ಲ ಸಮರ್ಥ. ‘ ನಾಲ್ಕು ದಿನ ಬಾಳುವಂಥದನ್ನು ಬರೆಯಬಹುದಲ್ಲ ಇವರು ? ’

*        *        *        *        *

ಕೆಲವು ದಿನಗಳ ಹಿಂದೆ ಆಕಾಶವಾಣಿಯ ಸುದ್ದಿ ಸಂಪಾದಕ ನಾಗರಾಜರಾಯರು ಆ ಮಾತು ಈ ಮಾತು ಆಡುತ್ತ, ‘ ರಾಮಚಂದ್ರ ಮೂರ್ತಿ ಒಂದು ನಾಟಕ ಬರೆದಿದ್ದಾನೆ ’ ಎಂದರು. ‘ ಹೌದೆ ? ’ ಎಂದೆ ಸಂತುಷ್ಟನಾಗಿ. ದಾರಿಯಲ್ಲಿ ಸಿಕ್ಕಾಗ ಮೂರ್ತಿಯವರನ್ನು ನಿಲ್ಲಿಸಿ ಆ ವಿಷಯ ಕೇಳಬೇಕು ಎಂದುಕೊಂಡೆ.

ದಾರಿಯಲ್ಲಿ ಸಿಗಲಿಲ್ಲ. ಆದರೆ ಮೊನ್ನೆ ರಾತ್ರೆ ಅವರೇ ಬಂದು ಬಾಗಿಲು ತಟ್ಟಿದರು. ನಾನು “ ಬನ್ನಿ,” ಎಂದೆ. ಅವರೂ “ಬನ್ನಿ, ನನ್ನದೊಂದು ನಾಟಕ ಇದೆ,” ಎಂದರು. “ ಬರೆದಿದೀರಿ ಅಂತ ಕೇಳಿದ್ದೆ. ಅದೇನೇ ?” “ಅದೇ ನಾಟಕ.”

ಚೊಚ್ಚಲ ಸಂಭ್ರಮ. ತೊಟ್ಟಿಲಿಗೆ ಹಾಕುವ ದಿನ ಎಲ್ಲ ಮುತ್ತೈದೆಯರೂ ಬರಬೇಕೆಂಬ ಅಪೇಕ್ಷೆ.

ಐದು ನಿಮಿಷಗಳ ಹರಟೆ ಮುಗಿದು ರಾಮಚಂದ್ರ ಮೂರ್ತಿ ಹೊರಟು ನಿಂತಾಗ ನಾನೆಂದೆ :

“ ಪ್ರದರ್ಶನದ ವೇಳೆ ಸ್ವಲ್ಪ ಹುಷಾರಿ, ನೀವು ತಲೆಗೊಂದು ಟೋಪಿಯನ್ನೋ ಹ್ಯಾಟನ್ನೋ ಇಟ್ಟುಕೊಳ್ಳೋದು ಮೇಲು. (ಪ್ರೇಕ್ಷಕರು ಎಲ್ಲಾದರೂ........)”

ಮೂರ್ತಿ ಗಟ್ಟಿಯಾಗಿ ನಕ್ಕರು.

* * * * *

'ಮನಸೆಂಬ ಮರ್ಕಟ' ಜೆ. ಬಿ. ಪ್ರೀಸ್ಟ್ಲಿಯವರ Inspector Calls ನಾಟಕದ ಕನ್ನಡ ರೂಪಾಂತರ. ಪದಶಃ ತರ್ಜುಮೆಯಲ್ಲ. ಅವಳ ಉಡುಗೆ ಇವಳಿಗಿಟ್ಟದ್ದು. ಕನ್ನಡ ಸಮಾಜಕ್ಕೆ – ಯಾಕೆ ಭಾರತೀಯ ಸಮಾಜಕ್ಕೇ ಅನ್ವಯಿಸುವ ಹಾಗೆ ಛಟ್ಟಿ ಇಳಿಸಿದ್ದು. ನಮ್ಮ ದೊನ್ನೆಯಲ್ಲಿ ಬಡಿಸಿದ ಫೈನಾದ ಪೈಸು.

ಎಷ್ಟು ಕುಡಿದರೂ ಮತ್ತು ಏರುವುದಿಲ್ಲ. ಅಲೆಗಳ ಅಬ್ಬರವಿದ್ದರೂ ಇದು ಶಾಂತ ಸಾಗರ. ಪ್ರೇಕ್ಷಕರೆಲ್ಲ ಉಗಿದೋಣಿಯಲ್ಲಿ ರಸಯಾತ್ರಿಕರು.

Inspector Calls ಆಗಲೇ ಎರಡು ದಶಕ ಹಳೆಯದು. ಕಾಲದ ಪರೀಕ್ಷೆಯಲ್ಲಿ ಈ ತನಕ ಪಡೆದಿರುವ ಅಂಕಗಳನ್ನು ನೋಡಿದರೆ, ಇದು ಶತಾಯು ಎನಿಸೀತು.

ಮೂರು ಆಳಗಳ ನಾಟಕ 'ಮನಸೆಂಬ ಮರ್ಕಟ. ಅಂದಿನ ಪ್ರೀಸ್ಟ್ಲಿ ಪ್ರಯೋಗ ಇಂದು ಈಗಾಗಲೇ ಸಂಪ್ರದಾಯ. ನಾವೀನ್ಯವನ್ನೂ ಮೈಗೂಡಿಸಿಕೊಂಡು ಆಂಗ್ಲ ನಾಟಕ ಹೊಸ ಹೊಸ ಬಯಲುಗಳಲ್ಲಿ ಮೇವು ಹುಡುಕಿದೆ.

ಕನ್ನಡದ ಮಟ್ಟಿಗೆ ಇದಿನ್ನೂ ಹೊಸದೇ, ನೂತನ ಪ್ರಯೋಗವೇ.

ಈ ಕಾರಣದಿಂದ, ಬೆಳೆಯುತ್ತಿರುವ ಕನ್ನಡ ರಂಗಭೂಮಿಗೆ ಇದೊಳ್ಳೆಯ ಟಾನಿಕ್.

ಎ. ಎನ್. ಮೂರ್ತಿರಾಯರ 'ಆಷಾಡಭೂತಿ' ಜಾಡು, 'ಮನಸೆಂಬ ಮರ್ಕಟ' ದಲ್ಲಿ ಮತ್ತೊನ್ನೆ ಡೇರೆ ಹೊಡೆದು ಮೆರೆಯುತೊಡಗಿದೆ ಎನ್ನಬಹುದು.

* * * * *

ನಾಟಕದ ರಚನೆಗೆ ಒಬ್ಬನೇ ವ್ಯಕ್ತಿ ಬಹಳ ಮಟ್ಟಿಗೆ ಕಾರಣನಾದರೂ, ಅದರ ಅಂತಿಮರೂಪ ಸಿದ್ಧವಾಗುವುದಕ್ಕೆ ಆ ನಾಟಕದ ಶ್ರೇಷ್ಠ ಪ್ರದರ್ಶನವನ್ನು ನೀಡುವ ಕಲಾವಿದರೂ ಸ್ವಲ್ಪಮಟ್ಟಿಗೆ ಕಾರಣರು.

'ಮನಸೆಂಬ ಮರ್ಕಟ'ವನ್ನು ರಂಗಭೂಮಿಯ ಮೇಲೆ ಸಜೀವಗೊಳಿಸಿದ ಬಳಗ ತನ್ನ ಸಾಧನೆಯ ಬಗೆಗೆ ಹೆಮ್ಮೆಪಟ್ಟುಕೊಳ್ಳಬಹುದು. ಈ ಕಲಾವಿದರು, ತಮ್ಮ ಬೆನ್ನನ್ನು ಇತರರು ತಟ್ಟುವುದಕ್ಕೂ ಅವಕಾಶವಿತ್ತು ತಾವೂ ತಟ್ಟಿಕೊಳ್ಳಬಹುದು.

ರಾಮಚಂದ್ರ ಮೂರ್ತಿ ಪುಣ್ಯವಂತರೆನ್ನಬೇಕು. ಅವರ ಪ್ರಥಮ ಶ್ರೇಣಿಯ ಕಲಾವಿದ ಮಿತ್ರರಿಗೆ ಖ್ಯಾತ ನಾಟ್ಯವಿಲಾಸಿ ಬಿ. ಎಸ್. ನಾರಾಯಣ್ ನಿರ್ದೇಶಕರಾಗಿದ್ದರು. ನಾಟಕ ಶಿಕ್ಷಣಕ್ಕಾಗಿ ಲಂಡನಿನಲ್ಲಿದ್ದಾಗ ಪರೀಕ್ಷೆಯಲ್ಲಿ Inspector Calls ಒಂದು ದೃಶ್ಯವನ್ನು ನಿರ್ದೇಶಿಸಿದ ನಾಣಿ, 'ಮನಸೆಂಬ ಮರ್ಕಟ'ದ ರಂಗಸಜ್ಜಿಕೆಯ ಹೊಣೆಹೊತ್ತಿದ್ದರು. ಒಟ್ಟಿನಲ್ಲಿ, ಪರಿಪೂರ್ಣತೆಯತ್ತ ಬಳಗ ನಡೆಯಿತು ಎಂದರೆ ಸಾಕು.

* * * * *

ಈ ಸುಗ್ರಾಸದಲ್ಲಿ ಪುಟ್ಟ ಹರಳುಗಳು ಇರಲಿಲ್ಲವೆಂದಲ್ಲ. ಅಲ್ಲಲ್ಲಿ ಮಾತುಗಳಿನ್ನೂ ಗ್ರಾಂಥಿಕ ಪೋಷಾಕನ್ನು ಕಳಚಿರಲಿಲ್ಲ. ಹೆಚ್ಚು ಪರಿಣಾಮಕಾರಿಯಾಗಲೆಂದು ನಡುನಡುವೆ ಬಳಸಿದ ಇಂಗ್ಲಿಷ್ ವಾಕ್ಯಗಳು ತಮ್ಮ ಗುರಿಯನ್ನು ಸಾಧಿಸಲಿಲ್ಲ.

What a relief ! ಎಂದು ಉದ್ಗರಿಸುತ್ತಾನೆ ಆನಂದರಾಯ. ಇದರ ಬದಲು 'ಅಬ್ಬ!' ಎನ್ನುವ ಒಂದೇ ಪದದ ಉದ್ಗಾರ ಸಾಕು.

ಇಂಥ ಒಪ್ಪ ಓರಣಗಳಿಂದ ನಾಟಕ ಇನ್ನಷ್ಟು ತೂಕದ್ದಾಗುತ್ತದೆ.

* * * * *

ಪ್ರದರ್ಶನದ ದಿನ 'ಮನವೆಂಬ ಮರ್ಕಟ'ದ ತಂದೆಯ ಸಡಗರವೇ ಸಡಗರ. ಅವರ ತಲೆ ಟೋಪಿಯ ಮರೆಹೊಕ್ಕಿರಲಿಲ್ಲ. ಹಾರ ಹಾಕಿಸಿಕೊಳ್ಳಲೆಂದೇ ಬಂದ ಹಾಗೆ ಮೆರೆಯುತ್ತಿತ್ತು ಅವರ ಕತ್ತು. ಅದೀಗ ಎದೆಗಾರಿಕೆ ಅಂದರೆ !

೨೬-೧೧-೧೯೬೭

# ‘ಒಂದಾನೊಂದು ಊರಲ್ಲಿ’....

ಅಂಚೆ ಹೊತ್ತು ತಂದಿರುವ ಒಂದು ಕಾಗದದಲ್ಲಿ ಹೀಗಿದೆ:

“ಅಂತೂ ಕೊನೆಗೊಮ್ಮೆ ನಿಮಗೆ ಸಂತಸ ಉಂಟುಮಾಡುವಂತಹ ಸುದ್ದಿಯೊಂದನ್ನು ಬರೆಯುತ್ತಿದ್ದೇವೆ. ಈ ದೇಶದಲ್ಲಿ ಅತ್ಯಂತ ಸೊಗಸಾದ ಮಕ್ಕಳ ಪುಸ್ತಕಗಳನ್ನು ಹೊರತರುವ ಕೌತುಕಕಾರಿಯಾದ ಹೊಸ ಕಾರ್‍ಯಕ್ರಮವೊಂದು ಆರಂಭವಾಗಿದೆ. ೧೦–೧೪ ವರ್ಷ ವಯಸ್ಸಿನ ಭಾರತೀಯ ಮಕ್ಕಳಿಗಾಗಿಯೇ ಬರೆಯಲಾದ ಪುಸ್ತಕಗಳು, ಇವು. ವಿದೇಶಗಳಲ್ಲಿ ಪ್ರಕಟವಾಗುವ ಅತ್ಯುತ್ತಮ ಪುಸ್ತಕಗಳಿಗೆ ಸಮಾನವಾಗಿರುತ್ತವೆ. ಗಮನಾರ್ಹವಾದ ವಸ್ತುವೈವಿಧ್ಯ ಇಲ್ಲಿರುತ್ತದೆ: ಸ್ವತಂತ್ರ ಸೃಷ್ಟ್ಯಾತ್ಮಕ ಬರವಣಿಗೆ (ಕಾದಂಬರಿಗಳು, ಸಣ್ಣ ಕಥೆಗಳು), ಕವಿತೆಗಳು, ನಾಟಕ, ಜೀವನವೃತ್ತ, ಯಥಾರ್ಥ ಸಾಹಸ, ವಿಜ್ಞಾನ, ಪ್ರಕೃತಿ ದರ್ಶನ, ಇತಿಹಾಸ, ಪಂದ್ಯಾಟ, ಪ್ರವಾಸ ಕಥನ ಇತ್ಯಾದಿ. ಪುಸ್ತಕಗಳು ೧೪,೦೦೦ ದಿಂದ ೧೫,೫೦೦ ಪದಗಳಷ್ಟು ದೀರ್ಘವಿರುತ್ತವೆ. ವರ್ಣಚಿತ್ರಗಳನ್ನು ಒಳಗೊಂಡಿರುತ್ತವೆ. ಪುಸ್ತಕದಾಹದಿಂದ ಬಳಲುತ್ತಿರುವ ಭಾರತೀಯ ಮಗುವಿಗೆ ರಂಜನೆಯನ್ನೂ ಶಿಕ್ಷಣವನ್ನೂ ಒದಗಿಸುವುದೇ ಉದ್ದೇಶ. ಈ ಯೋಜನೆ, ಆರಂಭದಲ್ಲಿ ಇನ್ನೇನಿಲ್ಲದೆ ಹೋದರೂ, ಹೆತ್ತವರ ಮತ್ತು ಅಧ್ಯಾಪಕರ ಕೃತಜ್ಞತೆಗಾದರೂ ಪಾತ್ರವಾದೀತು.”

ಮೋಹಕವಾದ ಒಕ್ಕಣೆ, ಆಕರ್ಷಕವಾದ ವಿಷಯ. ಇಂಥ ಕಾಗದ ಇಷ್ಟವಾಗದೆ ಏನು?

ಒಂದು ಸಂಗತಿಯೆಂದರೆ ಶಿಶುಸಾಹಿತ್ಯ ಈ ದೇಶದಲ್ಲಿ ಪ್ರಕಟವಾಗುತ್ತಿರುವುದು ಇದೇ ಮೊಟ್ಟ ಮೊದಲು ಎನ್ನುವಂತಿಲ್ಲ. ಸಣ್ಣ ಪ್ರಮಾಣದಲ್ಲಿ ಹಲವಾರು ಪ್ರಕಾಶಕರು ಮಕ್ಕಳ ಪುಸ್ತಕಗಳನ್ನು ಹೊರತಂದಿದ್ದಾರೆ. ಪ್ರಾದೇಶಿಕ ಭಾಷೆಗಳಲ್ಲಿ ಮಕ್ಕಳಿಗಾಗಿಯೇ ಸಾಹಿತ್ಯ ರಚನೆಯಾಗಿದೆ, ಪ್ರಕಟವಾಗಿದೆ.

ಇತ್ತೀಚೆಗೆ ರಾಷ್ಟ್ರದ ವ್ಯಾಪ್ತಿಯಲ್ಲಿ ಶಂಕರರ ಚಿಲ್ಡ್ರನ್ಸ್ ಬುಕ್ ಟ್ರಸ್ಟಿನವರೂ ಕಾರ್‍ಯಾರಂಭಮಾಡಿ ಹತ್ತಾರು ಸೊಗಸಾದ ಪುಸ್ತಕಗಳನ್ನು ನೀಡಿದ್ದಾರೆ.

ಇಂಥವರಲ್ಲೂ ಮೇಲಿನ ಕಾಗದಕ್ಕಿರುವ ಮಹತ್ವವೆಂದರೆ, ಪ್ರಸಿದ್ಧ ಪುಸ್ತಕ ವ್ಯಾಪಾರಿಗಳಾದ ಇಂಡಿಯಾ ಬುಕ್ ಹೌಸಿನವರು ಅದನ್ನು ಬರೆದಿರುವುದು. ದೇಶದ ಪ್ರಮುಖ ನಗರಗಳಲ್ಲಿ ಈ ಸಂಸ್ಥೆಯ ಕೇಂದ್ರಗಳಿವೆ. ರಾಷ್ಟ್ರದಾದ್ಯಂತ ಸುಮಾರು ೨೦೦೦ ಪುಸ್ತಕ ವರ್ತಕರೊಡನೆ ಇವರ ಸಂಪರ್ಕವಿದೆ.

ಮಕ್ಕಳ ಪುಸ್ತಕಗಳನ್ನು ಐದೈದು ಸಾವಿರ ಪ್ರತಿಗಳಷ್ಟು ಅಚ್ಚು ಹಾಕಿಸ ಬೇಕೆಂದು ಇವರ ಯೋಜನೆ. ಅಂದರೆ ಪ್ರತಿಯೊಂದು ಪುಸ್ತಕಕ್ಕೂ ಸುಮಾರು ೨೫,೦೦೦ ಬಾಲ ವಾಚಕರು ದೊರೆತಂತಾಗುತ್ತದೆ.

ಇದು ನಮ್ಮ ಮಕ್ಕಳಿಗೆ ಅರ್ಥವಾಗುವಂತಹ ಒಳ್ಳೆಯ ಇಂಗ್ಲಿಷಿನಲ್ಲಿ ಪ್ರಕಟ ವಾಗುವ ಪುಸ್ತಕಗಳ ಕತೆ. ಸಾಮಾನ್ಯ ಭಾರತೀಯ ಶಿಶುವಿಗೆ ಇದು ತಲಪಬೇಕಾದರೆ ಈ ಕೃತಿಗಳು ದೇಶದ ಎಲ್ಲ ಭಾಷೆಗಳಲ್ಲೂ ಅಚ್ಚಾಗಬೇಕು. ಅವೇ ಬಣ್ಣ, ಅವೇ ಚಿತ್ರ, ಅದೇ ಕಥೆ. ಭಾಷೆ ಮಾತ್ರ ತಾಯ್ನುಡಿ.

ಈ ಯೋಜನೆಯನ್ನೂ ಇಂಡಿಯಾ ಬುಕ್ ಹೌಸಿನವರು ಇಟ್ಟುಕೊಂಡಿದ್ದಾರೆ.

ಕಾಗದದ ಜೊತೆಯಲ್ಲೊಂದು ಜಾಹೀರಾತಿನ ಹಾಳೆ. ಕಾರ್ಯಕ್ರಮದನ್ವಯ ಈಗಾಗಲೇ ಪ್ರಕಟವಾಗಿರುವ ಪುಸ್ತಕಗಳ ಮುಖಚಿತ್ರಗಳು – ಸಂಕ್ಷಿಪ್ತರೂಪದಲ್ಲಿ. ಆ ಬಣ್ಣಗಳನ್ನೂ ಬೊಂಬೆಗಳನ್ನೂ ನೋಡಿ, ೧೦–೧೧ರ ಬಳಗವನ್ನು ಸೇರಲು ಅಣಿಯಾಗುತ್ತಿರುವ ತೇಜಸ್ವಿನಿ ಅಂದಳು : "ಆ ! ಎಷ್ಟು ಚೆನ್ನಾಗಿದೆ ! ತರಿಸ್ತೀಯಾ?"

ಹೂಂ ಎನ್ನುವ ಹೆತ್ತವರು ಸಹಸ್ರಸಂಖ್ಯೆಯಲ್ಲಿ ಈ ದೇಶದಲ್ಲಿ ದೊರೆತರೆ ಪ್ರಕಾಶ ಕರು ಗೆದ್ದಂತೆಯೇ.

ಸಂಸಾರಗಳಲ್ಲಿ ಸಾಕ್ಷರತೆ ಹೆಚ್ಚಿದಂತೆ, ಮಕ್ಕಳಿಗಾಗಿ ಪುಸ್ತಕ ಕೊಳ್ಳಬೇಕೆಂಬ ಪ್ರವೃತ್ತಿ ಬಲಿತಂತೆ, ಪ್ರತಿಯೊಂದು ಪುಸ್ತಕದಂಗಡಿಯಲ್ಲೂ ಮಕ್ಕಳ ವಿಭಾಗವೊಂದು ಅನಿವಾರ್ಯವಾದೀತು.

* * * * *

ಆದರೆ ನಮ್ಮದು ಸ್ವಚ್ಛಂದ ವಾಣಿಜ್ಯದ ದೇಶ. ಇಷ್ಟ ಬಂದವರು ಇಷ್ಟ ಬಂದುದನ್ನು ಬರೆಯಬಹುದು, ಬರೆಸಬಹುದು. ಹಣ ಗಳಿಸುವ ಸಾಧ್ಯತೆ ಇದ್ದರೆ ಎಲ್ಲ ಪ್ರಕಾಶಕರೂ ಮಕ್ಕಳ ಪುಸ್ತಕಗಳನ್ನು ಪ್ರಕಟಿಸಲು ಮುಂದಾಗಬಹುದು. ತರತಮಕ್ಕೆ ಇಲ್ಲಿ ಅವಕಾಶವಿಲ್ಲ ! ಈ ಸಮಾನಾವಕಾಶದ ಫಲವಾಗಿ ಹೊರಬೀಳುವ ಎಷ್ಟೋ ಕೃತಿಗಳು ದೇವರಿಗೇ ಪ್ರೀತಿ.

ಇಂಥವು ಈಗಾಗಲೇ ಪ್ರಕಟವಾಗುತ್ತಿವೆ. ಇಲ್ಲಿ ಭಾಷೆ, ಸಾಹಿತ್ಯಗಳೆಲ್ಲ ಗೌಣ. ಬರೆಯುವವನಿಗೂ ಬೆಲೆಯಿಲ್ಲ. ಇಂಗ್ಲಿಷಿನಲ್ಲಿ ವಿಪುಲವಾಗಿರುವ ಶಿಶುಸಾಹಿತ್ಯದಿಂದ ಅಷ್ಟು ಇಷ್ಟು ಕದ್ದು ಒಂದಿಷ್ಟು ಬಣ್ಣ ಮುಟ್ಟಿಸಿ ತಟ್ಟೆಯಲ್ಲಿಟ್ಟು ಮುಂದಕ್ಕೆ ತಳ್ಳಿದ ರಾಯಿತು. ಇದು ಜಾತ್ರೆ ಬಜಾರಿನ ಮಿಠಾಯಿ. ಅಜೀರ್ಣ ಇತ್ಯಾದಿಗಳಾದರೆ ಅಂಗಡಿ ಯವರು ಹೊಣೆಯಲ್ಲ.

ಹೆತ್ತವರ ಮೇಲೆ ಹೆಚ್ಚು ಜವಾಬುದಾರಿ ಬೀಳುವುದು ಇಲ್ಲಿಯೇ. ತಮಗೆ ಬೇಕಾದ ಪುಸ್ತಕಗಳ ಆಯ್ಕೆಯಲ್ಲಿ ಹಿರಿಯರು ಎಷ್ಟು ಎಚ್ಚರ ವಹಿಸುತ್ತಾರೋ ಅದಕ್ಕಿಂತಲೂ ಹೆಚ್ಚು ವಿವೇಕವನ್ನು ಮಕ್ಕಳಿಗಾಗಿ ಪುಸ್ತಕ ಆರಿಸುವಾಗ ಅವರು ತೋರಬೇಕು.

* * * * *

ಒಂದು ವಿಶಿಷ್ಟ ಶಿಶುಸಾಹಿತ್ಯ ಅಮೆರಿಕದಲ್ಲೂ ಅನೇಕ ಆಂಗ್ಲಾಧೀನ ರಾಷ್ಟ್ರಗಳಲ್ಲೂ ಹೇರಳ ಹಾವಳಿ ನಡೆಸಿದೆ. ಕಠೋರತೆಗೆ ನಿರ್ದಯತೆಗೆ ಕ್ರೌರ್ಯಕ್ಕೆ ಲೈಂಗಿಕ ವೈಪರೀತ್ಯಗಳಿಗೆ ಎಳೆಯರನ್ನು ಅಣಿಗೊಳಿಸುವ ಕಾಮಿಕ್ಸ್ ಇವು. ಒಳ್ಳೆಯ ಶಿಶು ಸಾಹಿತ್ಯ ಆ ದೇಶಗಳಲ್ಲಿ ಸಾಕಷ್ಟಿದ್ದರೂ ಈ ಅಗ್ಗದ ಸರಕು ಅಂಗಡಿಗಳನ್ನು ಸುಲಭವಾಗಿ ಆಕ್ರಮಿಸುತ್ತದೆ.

ಇವರ ಪುನರಾವೃತ್ತಿ ಈ ದೇಶದಲ್ಲಿ ಆಗದೇ ಇರಬೇಕಾದರೆ ಚಿತ್ತಾಕರ್ಷಕ ಸಾಹಿತ್ಯ ಚಿಕ್ಕವರಿಗೆ ವಿಪುಲವಾಗಿ ದೊರೆಯಬೇಕು.

ಹಳೆಯ ತಲೆಮಾರಿನವರನ್ನು ದುರಸ್ತಿಪಡಿಸುವುದಕ್ಕಾಗುವುದಿಲ್ಲ. ಈಗಿನ ಪೀಳಿಗೆಯಂತೂ ಭಗ್ನಮನೋರಥಗಳ ಸಿಕ್ಕುಗಂಟು. ಒಳ್ಳಿತೇನಿದ್ದರೂ ನಾಳೆಯ ಪೀಳಿಗೆಯಿಂದ ಬರಬೇಕು. ಕಲ್ಪನಾಲೋಕದ ಒಂದಾನೊಂದು ಊರು ಬೇರೆಯಲ್ಲ, ತಾವು ನಿಂತಿರುವ ನೆಲ ಬೇರೆಯಲ್ಲ – ಎಂಬ ಭಾವನೆ ಮಕ್ಕಳಲ್ಲಿ ಮೂಡುವಂತಾಗಬೇಕು.

೩–೧೨–೧೯೬೭

# " ಆನೆ ಬಂದಿದೆ, ಆನೆ ಬಂದಿದೆ . . . "

ಆನೆ ಬಂದಿದೆ, ಆನೆ ಬಂದಿದೆ
ಶಾನುಭೋಗರ ಮಗಳ ಮದುವೆಗೆ
ನಾನು ನೋಡಿದೆ, ಗದ್ದೆಯಲ್ಲಿದೆ
ಸೋಗೆ ತಿನ್ನುತಿದೆ....

ಬಾಲ್ಯದಲ್ಲಿ ಕಲಿತ ಹಾಡು ನೆನಪನ್ನು ಕಾಡುತ್ತಿದೆ. ನಿಜವಾಗಿಯೂ ಆ ಕುಗ್ರಾಮಕ್ಕೆ ಒಮ್ಮೆ ಆನೆ ಬಂದಾಗ, ಓಡಿಹೋಗಿ ಅದು ಸೋಗೆ ತಿನ್ನುವುದನ್ನು ನೋಡಿದ್ದೆ. ಶಾನುಭೋಗರ ಮಗಳ ಮದುವೆ ಮಾತ್ರ ಇರಲಿಲ್ಲ. ಅದು, ಮರದ ದಿಮ್ಮಿಗಳ ವ್ಯಾಪಾರಿಯೊಬ್ಬರ ಆಳಾಗಿ ದುಡಿಯುತ್ತಿದ್ದ ಆನೆ.

ಕಾಸನಗಳಲ್ಲೂ ಕಾವ್ಯಗಳಲ್ಲೂ ಮೆರೆದ ಮದಗಜ ಊರಾನೆಯಾಗಿ ಮಾನವನಿಗೆ ಸೇವೆ ಸಲ್ಲಿಸುವ ಚಿತ್ರ ರೋಮಾಂಚಕಾರಿ. ಮಾವುತನಂತೂ 'ಅತಿಮಾನವ.' ಮನೆಯಲ್ಲಿ ಹೆಂಡತಿ ಆತನ ತಲೆಗೂದಲು ಕೀಳಬಹುದು; ಆದರೆ ಹೊರಗೆ ಮಹಾಮೃಗದ ಬೆನ್ನೇರುವ ಆತ 'ಆನೆ ಸರದಾರ.'

ಮದುವೆ ಬೇಡವೆನ್ನುವ ಗಂಡನ್ನು 'ಒಂಟಿ ಸಲಗ' ಎನ್ನುತ್ತೇವೆ. ಕೊನೆಗೊಮ್ಮೆ ಹೆಣ್ಣಿನ ಹಾರಕ್ಕೆ ಆತ ಕತ್ತು ಒಡ್ಡಿದನೆಂದರೆ 'ಖೆಡ್ಡಾ!' ಎಂದು ಉದ್ಗರಿಸುತ್ತೇವೆ. (ಒಲ್ಲೆ ಒಲ್ಲೆ ಎಂದ ನಿಜಲಿಂಗಪ್ಪನವರನ್ನು ಕಾಂಗ್ರೆಸಿನ ಅಧ್ಯಕ್ಷತೆಗೆ ಒಪ್ಪಿಸಿದುದೂ, ಒಂದು ಬಗೆಯ ಖೆಡ್ಡಾವೇ!)

* * * * *

ಬಸ್ಸು ಪತ್ರಿಕೆಯವರನ್ನು ಬೆಂಗಳೂರಿನಿಂದ ಮೈಸೂರಿಗೆ ಒಯ್ದಿತು. ಅಲ್ಲಿಂದ ಐವತ್ತು ಮೈಲುಗಳ ದೂರದ ಖಾರಾಪುರಕ್ಕೆ. ಖಾರಾಪುರಕ್ಕೆ ಒತ್ತಿಕೊಂಡಿರುವುದೇ ಕಾಕನಕೋಟೆ ಕಾಡು.

ಜನವರಿ ಹತ್ತರಂದು ನಡೆಯುವ 'ಖೆಡ್ಡಾ' ಕಾರ್ಯಕ್ರಮಕ್ಕೋಸ್ಕರ ಆಗುತ್ತಿರುವ ಸಿದ್ಧತೆಯನ್ನು ನೋಡಿ ಬರಲೆಂದು ಈ ಪ್ರವಾಸ.

ದಟ್ಟನೆಯ ಕಾಡು ಆರಂಭವಾಗುವಲ್ಲಿ, ಚಟುವಟಿಕೆಯ ಜೇನು ತೊಟ್ಟಿಯಾಗಿರುವ ಖಾರಾಪುರ ಅವಿತುಕೊಂಡಿದೆ, ಕಪಿಲಾ – ಅಥವಾ ಕಪಿನಿ – ನದಿಯ ದಂಡೆಯ ಮೇಲೆ. ಕಾಕನಕೋಟೆಯ ಕಾಡುಗಳಿಂದ ಒಮ್ಮೆಯಲ್ಲ ಇಪ್ಪತ್ತುಮೂರು ಸಲ ಕಾಡಾನೆಗಳನ್ನು ಹಿಡಿದಿದ್ದಾರೆ, ಅರಣ್ಯ ಇಲಾಖೆಯವರು. ಹೈದರನ ಕಾಲದಲ್ಲೂ

ಖೆಡ್ಡಾ ನಡೆದಿತ್ತು. ಆದರೆ ಈ ರಾಜವಿನೋದಕ್ಕೆ ವ್ಯವಸ್ಥಿತ ರೂಪ ಬಂದುದು ೧೮೯೧ ರಲ್ಲಿ. ಕಳೆದ ಸುಮಾರು ನೂರು ವರ್ಷಗಳಲ್ಲಿ ನಮ್ಮ ಕಾಡುಗಳಲ್ಲಿ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡಿರುವ ಆನೆಗಳ ಸಂಖ್ಯೆ ೧೬೦೦.

ಖೆಡ್ಡಾ ಕಾರ್ಯಕ್ರಮಕ್ಕೆ ಒಂದು ತಿಂಗಳಿದೆ ಎನ್ನುವಾಗಲೇ ಆನೆಗಳ ಗುಂಪುಗಳ ಚಲನವಲನದ ಬಗೆಗೆ ವೈರ್‌ಲೆಸ್ ಮೂಲಕ ಖಾರಾಪುರಕ್ಕೆ ವರದಿಗಳು ಬರುತ್ತವೆ. ವಂಶಪಾರಂಪರ್ಯವಾಗಿ ಈ 'ವಿನೋದ'ದಲ್ಲಿ ಭಾಗಿಗಳಾಗಿರುವ ಸುತ್ತುಮುತ್ತಲ ಕಾಡುಕುರುಬರು ಒಂದು ಹಿಂಡನ್ನು ಖಾರಾಪುರದತ್ತ ಅಟ್ಟಿಸಿಕೊಂಡು ಬರುತ್ತಾರೆ. ಅಲ್ಲಿ ಸುತ್ತಲೂ ಆಳವಾದ ಕಂದಕ ತೋಡಿ ನಿರ್ಮಿಸಿರುವ ವಿಸ್ತಾರವಾದ ಬಯಲು ಸೆರೆಮನೆಯಲ್ಲಿ ಹಿಂಡನ್ನು ಹಿಡಿದು ಹಾಕುತ್ತಾರೆ. ಆ ಸೆರೆಮನೆಯೇ ಖೆಡ್ಡಾ ನಂ. ೧.

ಕಪಿಲೆಯ ಆಚೆದಂಡೆಯ ಬೇಗೂರು ಕಾಡಿನಿಂದ ಹಿಂಡುಗಳನ್ನು ಖಾರಾಪುರ ದತ್ತ ಅಟ್ಟಿಸಿಕೊಂಡು ಬರುವ ಪ್ರಯತ್ನ ಕ್ರಮಬದ್ಧವಾಗಿ ಸಾಗುತ್ತಿದೆ. ನದಿ ಯಾವಾಗಲೂ ಆನೆಗಳಿಗೆ ಇಷ್ಟ. ನಿಶ್ಚಿತ ದಿನ ಹತ್ತಿರವಾದಂತೆ ಆನೆಗಳ ಹಿಂಡೂ ನದಿಯನ್ನು ಸಮೀಪಿಸಿರುತ್ತದೆ. ತಪ್ಪಿಸಿಕೊಂಡು ಹೋಗುವುದು ಸಾಧ್ಯವಾಗದಂತೆ ಅವುಗಳ ಹಿಂದೆ ಸಹಸ್ರ ಜನರ ಬೊಂಬಿನ ತಮಟೆ ಕಿರಿಚಾಟ ಸದ್ದು ಗದ್ದಲಗಳ ಬೇಲಿ.

ಖೆಡ್ಡಾದ ದಿನ ಗೊತ್ತುಮಾಡಿದ ವೇಳೆಗೆ ಬೇಗೂರು ಕಡೆಯಿಂದ ಕಾಡಾನೆಗಳು ಹಿಂಡನ್ನು ಕಪಿಲೆಯತ್ತ ಓಡಿಸುತ್ತಾರೆ. ಅವು ನದಿಗೆ ಇಳಿಯುತ್ತಲೇ ಇಪ್ಪತ್ತು ಮೂವತ್ತರಷ್ಟು ಪಳಗಿದ ಆನೆಗಳು, ಅವುಗಳ ಮೇಲೆ ಕುಳಿತ 'ಕರಿಯಪ್ಪಂದಿರು' – ಅರಣ್ಯಶಾಖೆಯ ಬಂದೂಕುಧಾರಿ ಅಧಿಕಾರಿಗಳು ಮತ್ತಿತರರು – ಕಾಡಾನೆಗಳನ್ನು ನದಿ ದಾಟಿಸಿ ಎರಡನೆಯ ಖೆಡ್ಡಾ ಸೆರೆಮನೆಗೆ ನುಗ್ಗಿಸುತ್ತಾರೆ. ಕೊನೆಯ ಆನೆ ಒಳನುಗ್ಗಿದೊಡನೆ ಭೀಮದ್ವಾರವನ್ನು ಮುಚ್ಚುತ್ತಾರೆ. ಇದು ನಾಲ್ವತ್ತು ನಿಮಿಷಗಳ ಕಾಲ ನಡೆಯುವ ಜಲಯುದ್ಧ. ಆ ಯುದ್ಧದಲ್ಲಿ ಪಿಳ್ಳುಮಾನವನಿಗೆ ಗೆಲುವು; ಆತನೆದುರು ನಾಲ್ಕು ಕಾಲುಗಳ ದೈತ್ಯಪ್ರಾಣಿಗೆ ಸೋಲು.

ಖಾರಾಪುರದ ದಂಡೆಯಿಂದ ಗಜಬಂಧನವನ್ನು ಈಕ್ಷಿಸುವ ನಾಗರಿಕ ಮನುಷ್ಯರಿಗೆ, ಬದುಕಿನ ಕೊನೆಯವರೆಗೂ ನೆನಪಿನಿಂದ ಮಾಸದ ಅನುಭವ, ಇದು.

ಒಂದು ವೇಳೆ ಬೇಗೂರು ಕಾಡಿನಿಂದ ಆ ದಿನ ಕಾಡಾನೆಗಳ ಹಿಂಡು ನೀರಿಗಿಳಿಯದೇ ಇದ್ದರೆ, ಮೊದಲನೆಯ ಸೆರೆಮನೆಗೆ ತಂದು ಬಿಟ್ಟಿರುವ ಕಾಡಾನೆಗಳನ್ನು ನೀರಿಗೆ ಅಟ್ಟುತ್ತಾರೆ. ಅವು ಶಾಸ್ತ್ರೋಕ್ತವಾಗಿ ಎರಡನೆಯ ಸೆರೆಮನೆಯನ್ನು ಪ್ರವೇಶಿಸಿ ಶರಣಾಗತವಾಗುತ್ತವೆ. ಎದುರು ದಡದಿಂದಲೇ ಹಿಂಡು ನದಿಗೆ ಇಳಿಯಿತೆಂದರೆ ಮಾರನೆಯ ದಿನ, ಮೊದಲೇ ಕಾಯ್ದಿಟ್ಟ ಹಿಂಡನ್ನು ಸೆರೆಹಿಡಿಯುವ 'ಖೆಡ್ಡಾ' ನಡೆಯುತ್ತದೆ.

* * * * *

ಅನಂತರ ಊರಾನೆಗಳ ನೆರವಿನಿಂದ ಕಾಡಾನೆಗಳನ್ನು ಪಳಗಿಸುವ ಕೆಲಸ. ಅದಾದ ಮೇಲೆ ಹರಾಜು. ಆನೆ, ಸಾಕಬಲ್ಲ ಶ್ರೀಮಂತರಲ್ಲಿ ದುಡಿಯಬಹುದು; ಮಠಗಳ ಸೇವೆ ಮಾಡಬಹುದು; ಸರ್ಕಸಿನಲ್ಲಿ ಸೊಂಡಿಲೆತ್ತಬಹುದು; ಮೃಗಾಲಯದ ಪ್ರಾಣಿಲೋಕದಲ್ಲಿ ಮನೆ ಮಾಡಬಹುದು.

ದಯೆ – ಕ್ರೌರ್ಯಗಳ ಮೀಮಾಂಸೆಗೆ ಇಲ್ಲಿ ಅವಕಾಶವಿದೆಯೋ ಇಲ್ಲವೋ ಹೇಳುವುದು ಕಷ್ಟ. ಆನೆಗಳ ಸಂಖ್ಯೆ ಕಾಡುಗಳಲ್ಲಿ ಹೆಚ್ಚುತ್ತಿರುತ್ತದೆ. (ಅಲ್ಲಿ ಮಿತ ಸಂತಾನ ಯೋಜನೆ ಇಲ್ಲ!) ಆ ಸಂಖ್ಯೆಯನ್ನು ಹತೋಟಿಯಲ್ಲಿಡಬೇಕು. ಹೇಗೆ? ಕೊಲ್ಲುವುದರಿಂದ ಅಲ್ಲ, ಹಿಡಿದು ಪಳಗಿಸಿ ದುಡಿಯುವ ಆಳಾಗಿ ಮಾಡಿ ಅಶ್ವತ್ಥಾಮ ಎಂದು ಹೆಸರಿಡುವುದರಿಂದ. (ಒಂದು ಆನೆಗೆ ಹಯಗ್ರೀವ ಎಂದು ಹೆಸರಿಟ್ಟುದೂ ಉಂಟು. ಅಯ್ಯೋ! ಪಾಪ!)

* * * * *

ರಾಜ್ಯದ ಅರಣ್ಯಗಳನ್ನು ಮನೆತೋಟ ಎಂಬಂತೆ ಮಮತೆಯಿಂದ ನೋಡಿ ಕೊಳ್ಳುತ್ತಿರುವ ಮಂತ್ರಿ, ರಾಚಯ್ಯನವರು. ಜಗದ್ವಿಖ್ಯಾತವಾದ ಖೆಡ್ಡಾ – ಜಗತ್ತಿನಲ್ಲಿ 'ಜಲಖೆಡ್ಡಾ' ನಡೆಯುವುದಂತೂ ಮೈಸೂರಿನಲ್ಲಿ ಮಾತ್ರ – ತಮ್ಮ ನೇತೃತ್ವದಲ್ಲಿ ಏರ್ಪಡುತ್ತದೆಂಬ ಸಹಜ ಅಭಿಮಾನ ಅವರಿಗೆ. ಕಪಿನಿ ಅಣೆಕಟ್ಟು ಪೂರ್ತಿಯಾದಾಗ ಇನ್ನು ಕೆಲವು ವರ್ಷಗಳಲ್ಲಿ ಈ ಪ್ರದೇಶವೆಲ್ಲ ಮುಳುಗಡೆಯಾಗಿ, ಮುಂದೆ ಖೆಡ್ಡಾ ಕಾರ್ಯಕ್ರಮ ಇರುವುದಿಲ್ಲ ಎಂಬ ಕಸಿವಿಸಿಯೂ ಇಲ್ಲದಿಲ್ಲ.

ಆನೆ ಹಿಡಿಯುವ ಕೆಲಸ ಈ ನಾಡಿನಲ್ಲಿ ನಿಂತೇ ಹೋಗುತ್ತದೆಂದು ನಂಬುವುದು ಕಷ್ಟ. ಖೆಡ್ಡಾ ಕಾರ್ಯಕ್ರಮಕ್ಕೆ ಬೇರೊಂದು ತಾಣವನ್ನು ಮನುಷ್ಯ ಹುಡುಕದೆ ಇರಲಾರ. ಕುರುಡರು ಬಣ್ಣಿಸುವುದಕ್ಕಾದರೂ ಬೇಡವೆ ಆನೆ? ಈ ಶತಮಾನದಲ್ಲೂ ಬೇಕು; ಅದರಾಚೆಗೆ, ಆಚೆಗೂ ಬೇಕು.

೧೭–೧೨–೧೯೬೭

# ಭೂಮಿ ಕಂಪಿಸಿತು

ಶನೀಶ್ವರ ರಾಮೇಶ್ವರವನ್ನು ಕಾಡಿದ. ಚಂಡಮಾರುತ ಉಂಟುಮಾಡಿದ ಹಾವಳಿ ಅಲ್ಪ ಸ್ವಲ್ಪವಲ್ಲ. ಬೆಂಗಳೂರು ನೂರಾರು ಹರದಾರಿ ಈಚೆಗಿದ್ದರೂ ವಾತಾವರಣ ಬದಲಾಯಿತು. ಚಳಿ, ಗಾಳಿ, ಮಳೆ – ಮುಟ್ಟಿದರೆ ನೀರು ಜಿನುಗುವಂತೆ ಮಾಡಿದ ಎಡೆಬಿಡದ ಮಳೆ. ಹೊರಗೆಲ್ಲ ಗಿಜಿಬಿಜಿ. ಮೂರು ನಾಲ್ಕು ದಿನ ಸೂರ್ಯದರ್ಶನವೇ ಇಲ್ಲ. ಅದಾದ ಮೇಲೆ ಭಾನುವಾರ ಬೆಳಗ್ಗೆ ಶುಭ್ರವಾದ ಬೆಳಕು. ದಿನವಿಡೀ, ಒದ್ದೆಯಾದುದೆಲ್ಲವೂ ಒಣಗುವಂತಹ ಪ್ರಖರತೆ. ದಿನಗಟ್ಟಲೆ ಮೈ ಮನಸ್ಸು ಮುದುಡಿದ್ದವರಿಗೆ, ಮೂಡಿದ ಜೀವವೂ ಹಿತಕರವೇ. ರಾತ್ರೆ ನಿದ್ದೆ.

ಆದರೆ ಬೆಳಗಿನ ಜಾವ ಅದೇನಾಗಿ ಹೋಯಿತು! ನಗರದ ವಿವಿಧ ಭಾಗಗಳಲ್ಲಿ ಕಿಟಕಿ ಬಾಗಿಲುಗಳು ಅಲುಗಾಡಿದುವು. ಮಂಚಗಳ ಮೇಲಿದ್ದವರು ಕೆಳಕ್ಕೆ ಉರುಳಿದರು. ಸೊಳ್ಳೆ ಪರದೆಗಳು ಮೈಮೇಲೆ ಬಂದವರಂತೆ ಹೊಯ್ದಾಡಿದುವು. ಎಚ್ಚೆತ್ತವರು ಹತ್ತಾರು ಸಲ ಎವೆ ಮುಚ್ಚಿ ತೆರೆಯುವುದರೊಳಗೆ, ಘಟನೆ ನಡೆದು ಹೋಗಿತ್ತು. ಅದು ಕಂಪನ, ಭೂಮಿಯ ಕಂಪನ.

ಗೌರಿಬಿದನೂರಿನಲ್ಲಿ ಭೂಗರ್ಭ ಕಂಪನಗಳನ್ನು ಗುರುತಿಸುವ ವೈಜ್ಞಾನಿಕ ಸಲಕರಣೆಗಳಿವೆ. ಆದರೆ ಅಲ್ಲಿನ ಅಧಿಕಾರಿಗಳು ಬಾಯಿಗೆ ಬೀಗಮುದ್ರೆ ತಗಲಿಸಿಕೊಂಡ ಜನ. ಅವರ ವರದಿ ಏನಿದ್ದರೂ ಮೊದಲು ದಿಲ್ಲಿಗೆ ಹೋಗಬೇಕು, ರಕ್ಷಣಾ ಶಾಖೆಗೆ. ನಗರದ ಒಂದೆರಡು ಪ್ರಯೋಗ ಶಾಲೆಗಳಲ್ಲಿ ಸಾಕಷ್ಟು ಪರಿಣಾಮಕಾರಿಯಾದ ಉಪಕರಣಗಳಿಲ್ಲ. ಜನ ಒಬ್ಬರನ್ನೊಬ್ಬರು ಕೇಳಿದರು: "ಏನಾಯಿತು, ರಾತ್ರೆ? ಅಲ್ರೀ, ಏನಾಯ್ತೂಂತ?" ಕೆಲವರಿಗಂತೂ ಸಂದೇಹ: ಭೂಮಿಯೇ ಕಂಪಿಸಿರಬೇಕು....

ಬೆಳಗಿನ ಪತ್ರಿಕೆಗಳಲ್ಲಿ ಏನೂ ಇಲ್ಲ. ಅದು ನಡೆದದ್ದು ರಾತ್ರಿ ಪಾಳಿಯ 'ಸಂಪಾದಕ'ರೂ ಅವರ ಸಹೋದ್ಯೋಗಿಗಳೂ ನಿದ್ದೆ ಹೋದ ಬಳಿಕ.

* * * * *

ಬೆಳಗ್ಗೆ ರೇಡಿಯೋ ತುಸು ಸುದ್ದಿ ನೀಡಿತು, ಮುಂಬಯಿಯಲ್ಲಿ ಕೊಯ್ನಾದಲ್ಲಿ ಅಲ್ಲಿ ಇಲ್ಲಿ ಭೂಕಂಪ. ಬೆಂಗಳೂರಿನಲ್ಲಿ ನೆಲ ಗುಡುಗಿದ್ದೂ ಆ ವೇಳೆಯಲ್ಲಿಯೇ. ಮಧ್ಯಾಹ್ನದ ಹೊತ್ತಿಗೆ ರೇಡಿಯೋ ತನ್ನ ಪಟ್ಟಿಯಲ್ಲಿ ಈ ಊರನ್ನೂ ಸೇರಿಸಿಕೊಂಡಿತು.

ದಿಗ್ಭ್ರಮೆ ಉಂಟುಮಾಡುವಂತಹ ವಾರ್ತೆ.

ಕಟ್ ಕಟ್ ಕಟ್ ಕಟ್ – ದಿನವೆಲ್ಲ ದೇಶದ ಲೋಕದ ಮೂಲೆ ಮೂಲೆಗಳಿಗೆ

ಸುದ್ದಿ ಹರಡಿತು. ಮುಂಬಯಿಯಲ್ಲಿ ಹೆಂಗಸರು ಮಕ್ಕಳ ಚೀತ್ಕಾರ. ಗಾಬರಿ ಗೊಂಡು ಮೇಲಣ ಅಂತಸ್ತಿನಿಂದ ಕೆಳಕ್ಕೆ ಧುಮುಕಿದ ಒಬ್ಬನ ಸಾವು. ಕೊಯ್ನಾ ನಗರವೇ ನೆಲಸಮ. ಕಳೆದ ಹತ್ತು ವರ್ಷಗಳಲ್ಲಿ ಕೊಯ್ನಾ ನಗರದ ಅಣೆಕಟ್ಟಿನ ನಿರ್ಮಾಣದೊಂದಿಗೆ ಹೊಸದಾಗಿ ಹುಟ್ಟಿದ ಊರು ಕೊಯ್ನಾ ನಗರ. ಹೇಳ ಹೆಸರಿಲ್ಲ ದಂತೆ ನಾಶವಾಗಿತ್ತು. ನೂರಾರು ಜನ ಮೃತರಾಗಿದ್ದರು. ಪಣಜಿಯಲ್ಲೂ ಭೂಮಿ ಕಂಪಿಸಿತ್ತು; ಹೈದರಾಬಾದಿನಲ್ಲೂ. ಉತ್ತರ ಕರ್ನಾಟಕ, ದಕ್ಷಿಣ ಕನ್ನಡ, ಹಳೆಯ ಮೈಸೂರು – ಎಲ್ಲ ಕಡೆಗಳಲ್ಲೂ.

* * * * *

ಭೂಕಂಪ ಭಾರತಕ್ಕೆ ಹೊಸದಲ್ಲ. ಕಳೆದ ೧೫೦ ವರ್ಷಗಳಲ್ಲಿ ಏನಿಲ್ಲವೆಂದರೂ ಏಳು ಸಲ ಈ ನೆಲ ನಡುಗಿದೆ. ಹದಿನೆಂಟನೆಯ ಶತಮಾನದ ನಾಲ್ಕನೆಯ ದಶಕದಲ್ಲಿ ಕಲಕತ್ತೆಯಲ್ಲಿ ಭೂಕಂಪವಾದಾಗ ಮೂರು ಲಕ್ಷ ಜನ ಹತರಾದರಂತೆ. ೧೯೩೪ರ ಬಿಹಾರ್ ಭೂಕಂಪದಲ್ಲೂ ನೂರಾರು ಜನ ಸತ್ತರು. ಮಾರನೆಯ ವರ್ಷ ಕ್ವೆಟ್ಟಾದಲ್ಲಿ ಭೂಕಂಪ ಸಂಭವಿಸಿ ಇಡೀ ನಗರವೇ ಧ್ವಂಸವಾಗಿ ೬೦,೦೦೦ ಜನ ಕೊಲ್ಲಲ್ಪಟ್ಟರು.

ಆಗ ಗಾಂಧಿಜಿ ಅಂದಿದ್ದರು : 'ಇದು ದೇವರ ಶಾಪ' – ಹರಿಜನರಿಗೆ ಮಂದಿರ ಪ್ರವೇಶ ನಿರಾಕರಿಸುತ್ತಿರುವಿರಲ್ಲ, ಅದಕ್ಕೆ ಇದು ಶಿಕ್ಷೆ.

ಈ ಸಲ ಕೊಯ್ನಾ ನಗರದಲ್ಲಿ ಜನ ದಂಡನೆಗೊಳಗಾದರು. ಆದರೆ ನೂತನ ದೇವಾಲಯವಾದ ಕೊಯ್ನಾ ಅಣೆಕಟ್ಟಿನ ಗರ್ಭಗುಡಿ ಮಿಸುಕಲಿಲ್ಲ.

* * * * *

ಯಾವ ಶಿಕ್ಷೆ ? ಯಾವುದಕ್ಕೆ ದಂಡನೆ ?

ಇಂದಿನ ಪತ್ರಿಕೆಗಳು ನೆಲಸಮವಾದ ಕೊಯ್ನಾನಗರದ ದಾರುಣಚಿತ್ರಗಳನ್ನು ತಂದಿವೆ.

ಅಷ್ಟೇ ಅಲ್ಲ, ಸೋಮವಾರ ಮುಂಜಾವದ ಕಂಪನವಾದ ಮೇಲೆ ಹದಿನೇಳು ಘಂಟೆಗಳ ಅವಧಿಯಲ್ಲೇ ಇನ್ನೊಂದು ಕಂಪನವಾದ ಸುದ್ದಿಯನ್ನೂ ತಂದಿವೆ. ಪುಣೆಯ ಹವಾಮಾನ ವೀಕ್ಷಣಾಲಯ, ಮುಂದಿನ ಎರಡು ಮೂರು ದಿನಗಳಲ್ಲಿ ಮತ್ತೆ ಕಂಪನವಾಗಬಹುದೆಂದು ಭವಿಷ್ಯವನ್ನೂ ನುಡಿದಿದೆ.

ನೆಲದ ಗುಡುಗುಟ್ಟುವ ಒಡಲನ್ನು ಕುರಿತು, ವಿಜ್ಞಾನಿಗಳು ಬಹಳಷ್ಟು ಬರೆ ದಿದ್ದಾರೆ. ಅವನ್ನು ಬಲ್ಲವರಿಗೆ ಭೂಕಂಪನ ಅಸಾಮಾನ್ಯವಲ್ಲ, ಅಶಾಸ್ತ್ರೀಯವಲ್ಲ.

ಆಕಾಶ ಬೀಳುತ್ತಿದೆಯೆಂದು ಕುರಿಗಳೋ ಹೇಟೆಗಳೋ ಓಡಿದುವಂತೆ. ನಿಜ ವಾಗಿ ಬಿದ್ದುದು, ಮರದಿಂದೊಂದು ಒಣ ಎಲೆ. ಭೀತನಾದ ಮನುಷ್ಯ ಕುರಿಗಳಿಗಿಂತ ಹೇಟೆಗಳಿಗಿಂತ ಭಿನ್ನನಲ್ಲ. ಆದರೆ ಆಕಾಶ ಬೀಳುತ್ತದೆಂದು ಆತ ಓಡುವುದಿಲ್ಲ. ಅಂತರ್ಗ್ರಹಯಾನಕ್ಕೆ ಅಣಿಯಾಗುತ್ತಿರುವವನು ಮೇಲಿನದೆಲ್ಲವೂ ಭದ್ರವಾಗಿದೆ

ಎಂದು ಇನ್ನೂ ನಂಬಿದ್ದಾನೆ. ಕೆಳಗಿನವರ ಬಗೆಗೇ, ತಾನು ನಿಂತ ನೆಲದ ಬಗೆಗೇ, ಅವನಿಗೆ ಚಿಂತೆ.

ಭೂಕಂಪನ ಅವನನ್ನು ಕೆಣಕಿ ಕೇಳುತ್ತದೆ: ಎಟಕದ ಆಕಾಶವತ್ತ ಕೈಚಾಚುವ ನೀನು, ಕೆಳಗಿನ ನೆಲದ ಬಗೆಗೆ ಯೋಚನೆ ಮಾಡಿದ್ದೀಯಾ?

* * * * *

ಸಣ್ಣತನ, ಮತ್ಸರ, ದ್ವೇಷ - ಎಷ್ಟು ಕಹಿಯನ್ನು ಬೇಕಾದರೂ ಬದುಕಿನಲ್ಲಿ ಬೆರೆಸಬಲ್ಲ ಸಮರ್ಥ, ಮನುಷ್ಯ. ತಾನು ಅವಿನಾಶಿ ಎಂದು ಅವನ ಭಾವನೆ.

ಅಂಥವನಿಗೆ ಸವಾಲು, ಭೂಕಂಪನ....

....ಕಿಟಕಿಯಾಚೆಗೆ ಆಕಾಶವೂ ಕರಿ ಬಿಳಿ ಮೋಡಗಳೂ ಕಾಣಿಸುತ್ತಿವೆ. ಸೂರ್ಯನಿದ್ದರೂ ಪ್ರಖರತೆ ಇಲ್ಲ. ಸಂಜೆ ಮಳೆ ಹನಿಸಬಹುದು. ರಾತ್ರಿ? ರಾತ್ರಿ ನಾಗರಿಕರು ನಿದ್ದೆ ಹೋದಾಗ?

ಈ ವಿಸ್ತರಣದಲ್ಲಿ ಇನ್ನೂ ಖಾಲಿ ಜಾಗವಿದೆ. ಆ ಕಡೆ ಈ ಕಡೆ ಹತ್ತು ಕಡೆ ಮನೆಗಳನ್ನು ಕಟ್ಟುತ್ತಲಿದ್ದಾರೆ. ಮೊನ್ನೆ ನಿನ್ನೆ ಭೂಕಂಪವಾದುದನ್ನು ಅವರು ಬಲ್ಲರು. ಆದರೂ ಕಟ್ಟುವ ಕೆಲಸ ನಡೆದೇ ಇದೆ.

೨೪-೧೨-೧೯೬೨

# ಗಜರಾಜನ ಶರಣಾಗತಿ

ಲಕ್ಷಾಂತರ ರೂಪಾಯಿಗಳ ವೆಚ್ಚ. ಮೂರು ತಿಂಗಳಿಗೂ ಹೆಚ್ಚುಕಾಲ ಸಾವಿರಾರು ಜನರ ದುಡಿಮೆ. ಕುಣಿ ಕಂದಕ ತೋಡಿದರು. ಮರದ ದಿಮ್ಮಿಗಳನ್ನು ನೆಟ್ಟರು. ಆನೆಯಿಂದಲೂ ಮುರಿಯಲಾಗದ ಬೇಲಿ ಕಟ್ಟಿದರು. ಬಂದಿಗಳಾದ ಆನೆಗಳಿಗೆ ತಣುಪು ಇರಲೆಂದು ಎತ್ತರದ ಮರಗಳ ಮೇಲಿಂದ ನೀರು ಚಿಮುಕಿಸುವ ಏರ್ಪಾಟು ಮಾಡಿದರು.

ಖೆಡ್ಡಾ ನಡೆಸಲು ಕಾರಣಗಳಾದರೂ ಏನು? ಒಬ್ಬರೆಂದರು: ಕಾಡಿನಲ್ಲಿ ಆನೆಗಳ ಸಂತಾನಾಭಿವೃದ್ಧಿಯಾದಾಗ ಹತ್ತಿರದ ಊರುಗಳ ಜನರಿಗೆ ಉಪಟಳ; ಅದಕ್ಕಾಗಿ ಅವುಗಳನ್ನು ಹಿಡಿದು ಪಳಗಿಸಬೇಕು. ಇನ್ನೊಬ್ಬರೆಂದರು: ತಲೆತಲಾಂತರಗಳಿಂದ ಕಾಡುಕುರುಬರು ಖೆಡ್ಡಾದಲ್ಲಿ ಭಾಗವಹಿಸುತ್ತಾರೆ; ಈ ಮೂರು ತಿಂಗಳು ಅವರ ಜೀವನೋಪಾಯಕ್ಕೆ ದಾರಿ (ದಿನಕ್ಕೆ ಮೂರು ರೂಪಾಯಿ, ಉಚಿತ ಪಡಿತರ); ಅವರಿಗಾಗಿಯೇ ಖೆಡ್ಡಾ. ಮತ್ತೊಬ್ಬರೆಂದರು: ಹಿಂದೆ ಪ್ರತಿ ವೈಸರಾಯರು ತಮ್ಮ ದೇಶಕ್ಕೆ ಮರಳುವುದಕ್ಕೆ ಮುಂಚೆ ಮನೋರಂಜನೆಗಾಗಿ ಖೆಡ್ಡಾ ಏರ್ಪಡಿಸುತ್ತಿದ್ದರು. ಮನೋರಂಜನೆಯೇ ಮುಖ್ಯ.

ಸತ್ಯಾಂಶ ಹೆಚ್ಚಾಗಿರುವುದು ಮೂರನೆಯ ಕಾರಣದಲ್ಲೇ ಎಂಬುದರಲ್ಲಿ ಸಂದೇಹವಿಲ್ಲ. (ಈ ಸಲ ಮಹಾರಾಜರು, ಉಪ ರಾಷ್ಟ್ರಪತಿ, ರಾಜ್ಯಪಾಲರು, ಮಂತ್ರಿಗಣ – ಹೀಗೆ ಹಲವರಿದ್ದರು.)

ಸಾಲದುದಕ್ಕೆ ಇದು ಅಂತರರಾಷ್ಟ್ರೀಯ ಪ್ರವಾಸೀ ವರ್ಷ. ಹೊರಗಿನಿಂದ ಬಂದವರಿಗೂ ಇದೊಂದು ಅಪೂರ್ವ ವಿನೋದ. (ಒಬ್ಬ ಅಮೆರಿಕನ್ ವೃದ್ಧ ಮುಂಬಯಿ ತಲಪಿ ಅಲ್ಲಿಂದ ಕಾರಿನಲ್ಲಿ ಹೊರಟು ದಾರಿಯಲ್ಲಿ ಕಾರು ಕೆಟ್ಟು ೨೦೦ ಡಾಲರ್ ಖರ್ಚು ಮಾಡಿ, ಕಾಕನಕೋಟೆ ಸೇರಿ, ಹಿಂತಿರುಗಿ ಹೋಗಲು ಯಾವುದಾದರೂ ಬಸ್ಸಿನಲ್ಲಿ ಸೀಟು ಸಿಕ್ಕೀತೇ ಎಂದು ಒದ್ದಾಡುತ್ತಿದ್ದರು.) ಆ ವಿನೋದದ ಪ್ರೇಕ್ಷಕನಾಗಲು ತೆರಬೇಕಾದ ಹಣ, ಟಿಕೆಟಿಗೆ ೫೦೦ ರೂಪಾಯಿ. (ಹೊರಗಿನವರಿಗೆ ಆ ಹಣ ಸ್ವಲ್ಪವೇ. ಈ ದೇಶದ ರೂಪಾಯಿಯ ಬೆಲೆ ಇಳಿವುದಕ್ಕೆ ಮುಂಚೆ ಆಗಿದ್ದರೆ ನೂರು ಡಾಲರ್ ನೋಟು. ಈಗ ಬರೇ ೬೫ ಡಾಲರು.)

ಹಾಗಾದರೆ ಈ ರಾಜವಿನೋದಕ್ಕಾಗಿ ಮನುಷ್ಯ ತೆರುವ ಬೆಲೆ ಬರೇ ಐದುನೂರು ರೂಪಾಯಿಗಳೆ? ಬೇರೆ ಏನನ್ನೂ ಆತ ಬಿಟ್ಟುಕೊಡಬೇಕಾಗಿಲ್ಲವೆ?

*  *  *  *  *

ಇನ್ನೇನು ಕಾರ್ಯಕ್ರಮ ಆರಂಭವಾಗುತ್ತದೆ ಎಂದು ಕಾದಿದ್ದ ಜನ ಒಂದು ದಿಕ್ಕಿನಲ್ಲಿ ಕಾಡಿನ ಮಧ್ಯದಿಂದ ಬೆಂಕಿ ಏಳುತ್ತಿದ್ದುದನ್ನು ಕಂಡರು. ಬೆಂಕಿ ಹಚ್ಚಿ ಆನೆಗಳನ್ನು ಈ ಕಡೆಗೆ ಓಡಿಸುತ್ತಿದ್ದಾರೆ ಎಂದುಕೊಂಡರು. ವಾಸ್ತವ ಸಂಗತಿ ಅದಲ್ಲ. ಒಣಗಿದ ಕೊರಡು ಮೆಳೆಗಳಿಗೆ ತಾನಾಗಿ ಬೆಂಕಿ ಬಿದ್ದಿತ್ತು. (ಯಾವುದೋ ಬೀಡಿ ತುಂಡು, ಸರಿಯಾಗಿ ಆರಿಸದ ಬೆಂಕಿ ಕಡ್ಡಿ.) ಆ ಹೊಗೆ ಬೆಂಕಿ ನೋಡಿ ಕಾಡಾನೆಗಳು ಹುಚ್ಚೆದ್ದು ಓಡಿಹೋಗುವ ಸಂಭವ. ಕೊಂಬು ತಮಟೆ ಬಿದಿರಿನ ಅಟ್ಟೆಗಳೊಂದಿಗೆ ಗದ್ದಲಮಾಡಿ ಆನೆಗಳನ್ನು ಕಪಿಲೆ ನದಿಯತ್ತ ಓಡಿಸಲು ಕಾಡಿನಲ್ಲಿ ಕಾದಿದ್ದವರಿಗೆ ಪ್ರಾಣಭಯ. ಕಾರ್ಯಕ್ರಮ ಆರಂಭಿಸೋಣ ಎಂದರೆ ಅತಿ ಮುಖ್ಯ ವ್ಯಕ್ತಿಗಳು ಕೆಲವರು ಬಂದು ತಲಪಿರಲಿಲ್ಲ. "ಇನ್ನು ಕಾಯುವಂತಿಲ್ಲ, ಅಪಾಯ ಹೆಚ್ಚು" ಎಂದರು ಆನೆಗಳನ್ನು ಅಟ್ಟಲು ಸಿದ್ಧರಾಗಿದ್ದವರು. (ರಾಹುಕಾಲ ಮುಗಿಯಲಿ ಎಂದು ಒಂದೂವರೆಯವರೆಗೂ ಕಾದಿದ್ದರು, ಪಾಪ.) ಅನಗತ್ಯ ತಡವಾಗದಂತೆ ಅರಣ್ಯ ಮಂತ್ರಿ ರಾಚಯ್ಯನವರು 'ಹಸುರು ನಿಶಾನೆ ತೋರಿಸಿದರು.'

ಈ ದಂಡೆಯ ಮೇಲೆ ಪ್ರೇಕ್ಷಕರು. ಎದುರು ದಂಡೆಯ ಕಡೆಗೇ ದೃಷ್ಟಿ. ಕಾಡಿನ ಗರ್ಭದಿಂದ ಅಸ್ಪಷ್ಟವಾಗಿ ಕಲರವ ಕೇಳಿ ಬರತೊಡಗಿತು. ನಿಮಿಷ ನಿಮಿಷಕ್ಕೂ ಸದ್ದು ಹೆಚ್ಚಿತು. ಅಗೋ! ಮನುಷ್ಯ ಮುಟ್ಟದ ಮದಗಜ. ಹಿಂದಿನ ನಾಯಕನಿರಬೇಕು. ಮರಿಗಳು ತಾಯಿಗಳು ತಂದೆಗಳು – ಬಲು ದೊಡ್ಡ ಹಿಂಡು. ತಾವು ಯಾವುದೋ ಆಪತ್ತಿಗೆ ಸಿಲುಕಿಕೊಂಡಿದ್ದೇವೆ, ಎಂದು ಅವು ಬಲ್ಲವು. ಗಜೇಂದ್ರ ಮೋಕ್ಷವೆಲ್ಲ ಗತಕಾಲದ ಕಥೆ. ನದಿ ದಾಟುವ (ಈ ಕಡೆಗೆ ನುಗ್ಗುವ) ಯೋಜನೆ. ಅಗೋ ಮನುಷ್ಯನ ವಶವಿರುವ ಆನೆಗಳು. ಅವುಗಳ ಮೇಲೆ ಧೂರ್ತ ಮಾನವರು. ಗುಂಡುಗಳು, ಬಿದರು ಗುಂಡುಗಳು. ನದಿಯುದ್ದಕ್ಕೂ ಓಡಬೇಕು. ಆಳವಿಲ್ಲ. ಆದರೆ ಬಂಡೆಗಳು ಕೆಳಗೆ. ಒಂದು ಮರಿ ಎಡವುತ್ತದೆ ('ಅಮ್ಮಾ! ಅಮ್ಮಾ!'). ತಾಯಿ ಸೊಂಡಿಲ ನೆರವಿನಿಂದ ಅದನ್ನು ಎತ್ತಿ ನಿಲ್ಲಿಸುತ್ತದೆ. ಮರಿಗಳಿಗೆ ದೊಡ್ಡ ಆನೆಗಳು ತಮ್ಮ ದೇಹದ ಗೋಡೆ ಕಟ್ಟುತ್ತವೆ. ಗೋಳಾಟ ಘೀಳಾಟ. ಸುತ್ತೆಲ್ಲವನ್ನೂ ಸುಡುವ ಕ್ರೋಧ. ನಭ ಮುಟ್ಟುವ ಆಕ್ರಂದನ. ಎರಡು ಮೂರು ಬಾಲ ಎತ್ತಿದುವು. ಜಲಪಾತ. 'ಆನೆಗೆ ಭೇದಿ ಹತ್ತಿಕೊಂಡಿತ್ತು!'

ಸುಮಾರು ಐವತ್ತರಷ್ಟು ಕಾಡಾನೆಗಳು ಒಂದಕ್ಕೊಂದು ಅಂಟಿಕೊಂಡು ಕಪಿಲೆಯ ಮಧ್ಯೆ ನಿಂತುವು. ಯೋಚಿಸಲು ಅವಕಾಶ? ಇಲ್ಲ. ಇಲ್ಲ. ಗುಂಡಿನ ಮಳೆ ಅಪಾಯಕಾರಿ. (ಗುಂಡಿನ ಒಂದು ಚೂರು ಪ್ರೇಕ್ಷಕರ ಸಾಲಿನಲ್ಲಿದ್ದ ಶಾಸಕ ರತ್ನಕುಮಾರರಿಗೂ ತಟ್ಟಿತು.) ಆ ಆನೆಯ ಬಾಯಿಯಿಂದ ರಕ್ತ ಸುರಿಯುತ್ತಿದೆ. ಈ ಆನೆಯ ಕಿವಿಯಿಂದ ಕೆಂಪು ಚಿಮ್ಮುತ್ತಿದೆ. ಆ ಮರಿಗೂ ಗುಂಡು. ದಂಡೆಯ ಆಚೆಗೆ, ನಡು ನೀರಿನಲ್ಲಿ, ಈ ದಡದಲ್ಲಿ ಕ್ಷಣಕ್ಷಣಕ್ಕೂ ಏರಿದ ಉದ್ವಿಗ್ನತೆ. ಒಮ್ಮೆಲೆ

ಹಿಂಡಿನ ಕೆಲ ಆನೆಗಳು ತಾವು ಬಂದಿದ್ದ ದಡದತ್ತ ಧಾವಿಸಿದುವು. ತಪ್ಪಿಸಿಕೊಳ್ಳುವ ಪ್ರಯತ್ನ. ಅವುಗಳ ಮನೆ ಆ ಕಾಡು. ಅಲ್ಲಿಗೆ ಓಡಬೇಕು. ಆದರೆ ಪಳಗಿದ 'ಹಂಸರಾಜ' ಬಿಡಲಿಲ್ಲ; 'ರಾಜೇಂದ್ರ' ಬಿಡಲಿಲ್ಲ. ಮತ್ತೆ ನೀರಿಗೆ. ಅಂಗುಲ ಅಂಗುಲದಂತೆ ಮುಂದುವರಿದು ಈಚೆ ದಂಡೆಯ ಬಯಲು ಪಂಜರದ ಮಹಾದ್ವಾರಕ್ಕೆ. ಅದು ದಾಸ್ಯ ಎಂದು ಅವುಗಳಿಗೆ ತಿಳಿಯದು. ತಪ್ಪಿಸಿಕೊಳ್ಳುವ ದಾರಿಯೇನೋ ಎಂದು ಓಡಿದುವು. ಒಂದರ ಹಿಂದೆ ಒಂದು. ಬಾಗಿಲು ಮುಚ್ಚಿಕೊಂಡಿತು. ಹುಟ್ಟಿದ ಘಳಿಗೆಯಿಂದ ಸ್ವಚ್ಛಂದವಾಗಿ ಬೆಳೆದಿದ್ದ ಆನೆಗಳು ಸ್ವಾತಂತ್ರ್ಯ ಕಳೆದುಕೊಂಡುವು. ಬಳಲಿದ ಮನುಷ್ಯ ಕೇಕೆ ಹಾಕಿದ.

ಮುಂದೆ ಒಂದೊಂದಾಗಿ ವೃತ್ತಾಕಾರದ ದೈತ್ಯ ಪಂಜರವನ್ನು ಹೊಕ್ಕು ಅಲ್ಲಿ ದಾಸ್ಯದ ಸಂಕೋಲೆಗಳನ್ನು ತೊಡಿಸಿಕೊಳ್ಳುವ ಅಧ್ಯಾಯ.

ಖೆಡ್ಡಾ ಮುಗಿಯಿತು. ಮೂರು ದಿನ ಕಳೆದು ಅಂಥದೇ ಮತ್ತೊಮ್ಮೆ ಸೆರೆ ಸಿಕ್ಕ ಆನೆಗಳು ಪಳಗಿದ ಮೇಲೆ ಅವುಗಳ ಹರಾಜು. 'ಅಡಿಕೆ ಕೊಳ್ಳಿರೋ, ಆನೆ ಕೊಳ್ಳಿರೋ.'

* * * * *

ನಮ್ಮ ಬಸ್ಸು ಬೆಂಗಳೂರಿನತ್ತ ಹೊರಟಿತು. ಇನ್ನೂ ಕಾಡು—ಅಗಲ ಕಿರಿದಾದ ದಾರಿ. ದೊಡ್ಡ ಕೆರೆ. ಅಲ್ಲಿ ಅದರಾಚೆಗೆ ನಿಂತಿತ್ತು ದಾಡೆಗಳಿದ್ದ ಭಾರೀ ಆನೆ!

ಹಿಂಡನಗಲಿದ್ದ ಮದಗಜ ಕೆರೆಯ ದಂಡೆಯ ಮೇಲೆ ನಿಂತು ಸೊಂಡಿಲಿನಿಂದ ಕಪ್ಪುಮಣ್ಣನ್ನೆತ್ತಿ ಮೈಮೇಲೆ ಎರಚಿಕೊಳ್ಳುತ್ತಿತ್ತು. ಇಡಿಯ ಲೋಕದ ಮೇಲೆಯೇ ಸಿಟ್ಟು?

ಕಪಿನಿ ಜಲಾಶಯ ಈ ಭೂಭಾಗವನ್ನು ಮುಂದೆ ಆಹುತಿ ತೆಗೆದುಕೊಳ್ಳುತ್ತದೆ. ಪ್ರಾಯಶಃ ಇದೇ ಕೊನೆಯ ಖೆಡ್ಡಾ. ಅಂದ ಮೇಲೆ ಈ ಒಂಟಿ ಆನೆ ಸ್ವಾತಂತ್ರ್ಯ ಕಳೆದುಕೊಳ್ಳದು. ಇದೊಂದೇ ದುಃಖಿಸುತ್ತ ಗೊಂಡಾರಣ್ಯ ಸೇರುತ್ತದೆ. ಸ್ವಜಾತಿ ಬಾಂಧವರು ಕಣ್ಣಿಗೆ ಬಿದ್ದಾಗ ತನ್ನ ಹಿಂಡು ಮನುಷ್ಯರ ವಶವಾದ ಕಥೆಯನ್ನು ಅದು ಘೀಳಿಟ್ಟು ಹೇಳುತ್ತದೆ.

೨೧-೧-೧೯೬೮

# ಕೋಣನ ಮುಂದೆ ಕಿನ್ನರಿ

---

ಪ್ರಬುದ್ಧಕ್ಕೂ ಧಾರವಾಡದ ಗೆಳೆಯರ ನಾಟಕಾಭಿನಯದಿಂದಾದ ರಸಾನುಭವವನ್ನು ಕುರಿತು ಬರೆಯಬೇಕು, ಎಂದುಕೊಂಡಿದ್ದೆ. ಆದರೆ ಈ ಹಾಳೆ ಮಲಿನವಾಗಿದೆ. ಸುತ್ತಲೂ ಸುಟ್ಟ ಟಾರಿನ ಮೋಟಾರು ಬಸ್ಸಿನ ಕೆಟ್ಟ ವಾಸನೆ. ಗುಂಡು ತಗಲಿದ ದೇಹಗಳು. ಬಸಿದ ರಕ್ತ. ಅಶ್ರುವಾಯು ಕೆದಕಿ ಕೆಂಪಾದ ಕಣ್ಣುಗಳು. ಮನುಷ್ಯ ಮೃಗವಾಗಿ ಮಾರ್ಪಟ್ಟ ಅಸಹನೀಯ ಅಸಹ್ಯಕರ ವಾತಾವರಣ.

ಮೊದಲನೆಯ ದಿನ 'ಜೂಜು'; ಎರಡನೆಯ ದಿನ 'ಚಿತ್ರಪಂಜನೆ.'

ವಾಸ್ತವವಾಗಿ, ಮೊದಲನೆಯ ದಿನ ಕರಾಳ ನಾಟಕದ ರಂಗತಾಲೀಮು. ಎರಡನೆಯ ದಿನ ಬಯಲು ನಾಟಕ.

ಗಲಭೆ ಆರಂಭವಾದದ್ದು ಭಾಷೆಯ ಹೆಸರಲ್ಲಿ. ಕಲ್ಲುಗಳ ತೂರಾಟವೇ ನಾಂದಿ. ಅಧ್ಯಾಪಕರ ಅಂಬೋಣದಂತೆ "ನಮ್ಮ ವಿದ್ಯಾರ್ಥಿಗಳು ಅಂಥವರಲ್ಲ." "ಹೊರಗಿನವರು ವಿದ್ಯಾರ್ಥಿಗಳ ಜೊತೆ ಸೇರಿದ್ದರು—" ಇದು ಪೋಲೀಸರ ಆಪಾದನೆ. ಕುಲಪತಿಯವರು ಇಲ್ಲದ ಹೊತ್ತು ಪೋಲೀಸರು ವಿಶ್ವವಿದ್ಯಾನಿಲಯದ ಆವರಣವನ್ನು ಹೊಕ್ಕರು. ಧಾವಿಸಿ ಬಂದ ಕುಲಪತಿ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡಲು ಯತ್ನಿಸಿದರು. ಮಾನವೀಯತೆಗೆ ರಜೆ ನೀಡಿದ್ದ ಕ್ಷೋಭೆಕಾರರ ಮುಂದೆ ವಿವೇಕವಾಣಿ? ಬೇರೆ ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ಸಂಭವಿಸಿದ್ದು ಇಲ್ಲಿಯೂ ಆಯಿತು. ಪೋಲೀಸರು ಅಶ್ರುಬಾಣವೆಸೆದರು. ಲಾಠಿಗಳು ಮಿಕಗಳನ್ನು ಹುಡುಕಿದುವು. ಸೆಂಟ್ರಲ್ ಕಾಲೇಜಿನ ಪ್ರಿನ್ಸಿಪಾಲರು – ಉಪನ್ಯಾಸಕರ ಮೇಲೂ ಕೈಮಾಡಿದರಂತೆ. ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಲು ನೋಡಿದರು. ಹಿಂಸೆಗೆ ಹಿಂಸೆಯದೇ ಮದ್ದು. ಆ ದಿನ ಅತ್ಯಂತ ದುಃಖಿಯಾದ ವ್ಯಕ್ತಿ ಕುಲಪತಿ ಗೋಕಾಕರು.

ನಾಚಿದ ಬೆಂಗಳೂರನ್ನು ಕತ್ತಲು ಆವರಿಸುತ್ತಿದ್ದಂತೆ ಧಾರವಾಡದ ಕರ್ನಾಟಕ ನಾಟ್ಯ ಸಂಘದವರ 'ಜೂಜು' ನಾಟಕದ ಪರದೆ ಸರಿಯಿತು.

* * * * *

ಮಾರನೆಯ ದಿನ ಶಿಕ್ಷಣ ಕ್ಷೇತ್ರದ ಪಾವಿತ್ರ್ಯಭಂಗದ ಪ್ರಶ್ನೆಯಿಲ್ಲ. ಅದು ಬೀದಿ ಕಾದಾಟ. ಬೆಂಗಳೂರು ಹೊಸ ದಾಖಲೆಯನ್ನು ಸ್ಥಾಪಿಸಿತು. ಚಲಿಸುತ್ತಿದ್ದ ಬಸ್ಸುಗಳನ್ನು ನಿಲ್ಲಿಸಿ ಪುಂಡರು ಸೀಮೆ ಎಣ್ಣೆಯನ್ನೋ ಪೆಟ್ರೋಲನ್ನೋ ಸುರಿದು ಬೆಂಕಿ

ಹಚ್ಚಿದವು. ಹಿಂದಿ ಭಾಷೆಯನ್ನು ಕುರಿತ ದ್ವೇಷ? ಮಾತೃಭಾಷೆಯ ಮೇಲಣ ಪ್ರೇಮ? ವಿದ್ಯಾರ್ಥಿಗಳು ಮಾಡಿದರೆ ಇಂಥ ದುಷ್ಕೃತ್ಯವನ್ನು? ಅಥವಾ ವಿಶಿಷ್ಟ ರಾಜಕೀಯ ಪಕ್ಷ ಯಾವುದಾದರೂ ಬಾಡಿಗೆಯ ಬಂಟರನ್ನು ಬಳಸಿತೆ? ಗಲ್ಲಿ ಗಲ್ಲಿಗಳಲ್ಲಿ ಸಣ್ಣ ಹುಡುಗರು ಕಲ್ಲುಗಳನ್ನು ತೂರುತ್ತಾ ಪೋಲೀಸರೊಂದಿಗೆ ಕಣ್ಣುಮುಚ್ಚಾಲೆ ಯಾಡುವುದೆಂದರೇನು? ಹೀಗೆ ಹುಚ್ಚು ಹೊಳೆಯಾಗಿ ಹರಿವದ್ದು ಹತ್ತಿಕ್ಕಿದ್ದ ಯಾವ ಸಹನೆ?

ಬೆಂಗಳೂರು ಈ ತನಕವೂ ತಾನು ಶಾಂತಿಪ್ರಿಯ ನಗರ ಎಂಬ ಆತ್ಮವಂಚನೆಗೆ ಗುರಿಯಾಗಿತ್ತು. ಅಂದು ಲಂಗೋಟಿಯೂ ಇಲ್ಲದೆ ಕೊಚ್ಚೆ ನೀರಲ್ಲಿ ಹೊರಳಾಡಿತು. ಸಂಜೆ ತನಗೆ ತಾನೇ ಹೇಸಿ ಕತ್ತಲೆಯಲ್ಲಿ ಮುಖ ಮರೆಸಿತು.

ಧಾರವಾಡದ ಮಿತ್ರರು 'ಚಿತ್ರ ವಂಚನೆ' ನಾಟಕವನ್ನು ಆಡಲಿಲ್ಲ.

* * * * *

ಜೋಶಿಯವರು ತಮ್ಮ ಮಿತ್ರ ಮಂಡಳಿಯೊಂದಿಗೆ ಕರ್ನಾಟಕದ ರಾಜಧಾನಿಗೆ ಬಂದುದು ಸದುದ್ದೇಶದಿಂದ. ಕರ್ನಾಟಕ ಕುಲಪುರೋಹಿತ ದಿವಂಗತ ಆಲೂರ ವೆಂಕಟರಾಯರ ಹೆಸರಲ್ಲಿ ಸ್ಮಾರಕ ಭವನವೊಂದನ್ನು ಅವರ ತಪೋವನವಾಗಿದ್ದ ಸಾಧನ ಕೇರಿಯಲ್ಲಿ ಸ್ಥಾಪಿಸಬೇಕು ಎಂಬುದು, ಕೃತಿಗಿಳಿಯಲು ತವಕಿಸುತ್ತಿರುವ ಒಳ್ಳೆಯ ಯೋಜನೆ. ಇದನ್ನು ಕಾರ್ಯಗತಗೊಳಿಸಲು ಹವಣಿಸುತ್ತಿರುವುದು, ವೆಂಕಟರಾಯರ ಹರಕೆ ಪಡೆದಿದ್ದ 'ಸಾಧನಕೇರಿ ವಿದ್ಯಾಭಿವೃದ್ಧಿ ಸಂಸ್ಥೆ'. ಇಂಥ ಕೆಲಸಕ್ಕೆ ಹಣ ಸಮಾಜ ದಿಂದ ಬರಬೇಕು. ಸಹಾಯಾರ್ಥ ನಾಟಕ ಆಡಿ ಹಣ ಕೂಡಿಸುವುದು ನಮ್ಮಲ್ಲಿ ಬಳಕೆ ಯಲ್ಲಿರುವ ವಿಧಾನವಷ್ಟೆ?

ಅದಕ್ಕಾಗಿ ಜೋಶಿಯವರು ಕರ್ನಾಟಕ ನಾಟ್ಯ ಸಂಘದ ನೆರವು ಪಡೆದರು. ಅಭಿ ನಯಕ್ಕೆ ಸಿದ್ಧವಾಗಿದ್ದ ಎರಡು ನಾಟಕಗಳೇ 'ಜೂಜು' ಮತ್ತು 'ಚಿತ್ರ ವಂಚನೆ.' (ಮರಾಠಿಯಲ್ಲಿ ಮುಕ್ತಾಬಾಯಿ ದೀಕ್ಷಿತ್ ಬರೆದ ನಾಟಕದ ಕನ್ನಡ ರೂಪಾಂತರ 'ಜೂಜು'; ಇನ್ನೊಂದು ಫ್ರೆಂಚ್ ನಾಟಕಕಾರ ಮೋಲಿಯರ್‌ನಿಂದ ರಚಿತ ವಾಗಿ ಪ್ರಾಯಶಃ ಇಂಗ್ಲಿಷಿನಲ್ಲಿ ಕಾಣಿಸಿಕೊಂಡು ಮರಾಠಿಗೆ ಬಂದು, ಅಲ್ಲಿಂದ ಕನ್ನಡದಲ್ಲಿ ಸಂದದ್ದು. ಎರಡೂ ಸಮರ್ಥ ಲೇಖಕರಾದ ಬೇಂದ್ರೆ ಲಕ್ಷ್ಮಣ ರಾಯರ ಸೃಷ್ಟಿ.)

* * * * *

ಹೊರಗಿನ ಪ್ರಕ್ಷೋಭೆಗೆ ಅಳುಕದ ರವೀಂದ್ರ ಕಲಾಕ್ಷೇತ್ರದ ಭವನವನ್ನು ಬಹು ಭಾಗ ತುಂಬಿದವರು ರಾಜಾಜಿನಗರ ನಿವಾಸಿಗಳು. ಉಳಿದವರು 'ಸ್ಥಳಸಂದಿಗರು.' ನನ್ನ ಹಿಂದಿನ ಸಾಲಿನಿಂದ ಮಾತು ಕೇಳಿಸುತ್ತಿತ್ತು. "ಅರ್ಥವಾಗುತ್ತಾ?"

"Word by word ಆಗೊಲ್ಲ: ಒಟ್ನಲ್ಲಿ ಅರ್ಥವಾಗುತ್ತೆ."

ಕುಲಪುರೋಹಿತರು ಕರ್ನಾಟಕದ ಬೀಜಮಂತ್ರವನ್ನುಚ್ಚರಿಸಿ ಐವತ್ತು ವರ್ಷಗಳಾದ ಮೇಲೆಯೂ ಕನ್ನಡದ ತೊಡಕು !

ಹಾಗೆ ನೋಡಿದರೆ 'ಜೂಜು' ನಾಟಕದಲ್ಲಿ, ಭಾಷೆಗಿಂತಲೂ ಭಾವಕ್ಕೇ ಹೆಚ್ಚುಗಾರಿಕೆ. ಅಭಿನಯದ ಶೋಭೆ, ಪುರಾಣಿಕ ಸಂಸಾರದ ಬಂಡವಾಳ. ಜಿ. ಜಿ. ಪುರಾಣಿಕರು, ಪತ್ನಿ ಪುತ್ರಿಯರು, ಎಳೆಯ ಪುರಾಣಿಕರಿಬ್ಬರು. ಚಿಲಕವಾಡ – ಭಾವ್ರಿಯರು – ಇವರೆಲ್ಲರ ಸಾಂಘಿಕ ಪರಿಶ್ರಮವೇ, ಬೆಳಗಾವಿಯ ಕಲಾ ಕಾಣ್ಕೆ. ನಡುವೆ ನಾಲ್ಕು ಮಾತು ಆಡಿದ ಹಿರಿಯ ಮಾಸ್ತಿಯವರಿಗೆ, ಪುರಾಣಿಕರ ಸುಶಿಕ್ಷಿತ ಸಂಸಾರವೇ ನಾಟಕದಲ್ಲಿರುವುದನ್ನು ಕಂಡು ಸಂತೋಷ. ಆಲೂರ ವೆಂಕಟರಾಯರ ಸ್ಮಾರಕ ಭವನ ನಿರ್ಮಾಣಕ್ಕೆ ಜನ ನೆರವಾಗಬೇಕು – ಎಂಬುದು ಅವರು ನೀಡಿದ ಕರೆ.

ಈಗಿನ ಕಾಲದಲ್ಲಿ ಪರ – ವಿರೋಧ ಚಳುವಳಿಗೆ, ಬಂದ್ – ಘೇರಾವ್‌ಗಳಿಗೆ, ಪುಂಡಾಟಿಕೆಗಳಿಗೆ ಸಾಕಷ್ಟು ಸಂಖ್ಯೆಯಲ್ಲಿ ಜನ ಸೇರುತ್ತಾರೆ. ಈ ಕೂಗಾಟದ ಮಧ್ಯೆ ಬೇರೆ ಯಾವ ಕರೆ ಇವರಿಗೆ ಕೇಳಿಸೀತು ? ರಟ್ಟೆಗಳಲ್ಲಿ ಬಲವಿದ್ದರೆ ಜೀವಂತವಿರುವಾಗಲೇ ಸ್ಮಾರಕಮಾಡಿಸಿಕೊಳ್ಳುವ ಕಾಲ ಇದು. ಆಗಿಹೋದ ಋಷಿಗೋಸ್ಕರ ಈಗ ಪೈಸಾ ಬಿಚ್ಚುವವರು ಯಾರು ?

ಇಷ್ಟಿದ್ದರೂ ಒಳ್ಳೆಯ ನಾಲ್ಕು ಜೀವಗಳಿಗೆ, ವೆಂಕಟರಾಯರ ಹಿರಿಯ ಜ್ಯೋತಿಯಿಂದ ತಮ್ಮ ಹಣತೆಗಳನ್ನು ಅಂಟಿಸಿಕೊಂಡಿದ್ದವರಿಗೆ, ಏನನ್ನಾದರೂ ಮಾಡಬೇಕು ಎಂಬ ಕಾತರ. ಇವರಿಗೆ ಯಶಸ್ಸು ಅವರ ಪುಣ್ಯದಿಂದ ದೊರೆಯಬೇಕು.

೪–೨–೧೯೬೮

# ಪುಟ್ಟ ಪುಟ್ಟ ಹೆಜ್ಜೆ ಇಟ್ಟು....

ಮಿತಾ, ಸುಮಿತಾ, ಮಧುಮಿತಾ, ಸುಚರಿತಾ, ಸುಜಾತಾ, ಶರ್ಮಿಲಾ, ಮೈತ್ರೇಯಿ, ಪೂರ್ಣಿಮಾ, ಚಂದ್ರಿಮಾ, ಚುಂಪಾ – ಹೀಗೆಯೇ ಇನ್ನೂ ಹಲವು ಮೋಹಕ ಹೆಸರುಗಳು. ಚೇತನ್, ಪ್ರವೀಣ್, ಸೋಮದೇವ್, ಬುದ್ಧದೇವ್, ಸುಜಿತ್ – ಇಂಥವೇ ಬೇರೆಯೂ ಕೆಲವು ಸೊಗಸಾದ ನಾಮಧೇಯಗಳು. ಇವರೆಲ್ಲ ೬ ರಿಂದ ೧೬ರ ವರೆಗಿನ ಬಾಲಕ ಬಾಲಕಿಯರು; ಕಲಾವಿದ ಕಲಾವಿದೆಯರು. ನರ್ತನ, ಅಭಿನಯ, ಸ್ವಪ್ನ ಲೋಕದ ವಿಹಾರ. ಪುಟ್ಟ ದೇವತೆಗಳೇ ಅನ್ನಿ.

ಕಲ್ಕತ್ತೆಯ ಕಿರಿಯ ರಂಗಭೂಮಿಯ ಈ ಸದಸ್ಯ ಸದಸ್ಯೆಯರು ಕನ್ನಡನಾಡಿಗೆ ಬಂದರು. ಸಾಮಾಜಿಕ ನೆಮ್ಮದಿಯೂ ಶಾಂತಿಯೂ ಧೂಳೀಪಟವಾಗಿರುವ ದುಃಸ್ವಪ್ನ ನಗರಿ, ಕಲ್ಕತ್ತಾ. ಕೆಲ ದಿನಗಳ ಮಟ್ಟಿಗಾದರೂ ಅಲ್ಲಿಂದ ಹೊರಹೋಗುವ ಅವಕಾಶ ಯಾರಿಗೆ ತಾನೇ ಇಷ್ಟವಲ್ಲ ?

ರೈಲುಗಾಡಿ ಜುಕುಜುಕುಜೂ ಎನ್ನತೊಡಗಿ, ಒಂದೊಂದಾಗಿ ದಿನ ಕಳೆದಂತೆ, ಹೊಸ ಊರುಗಳೂ ನಾಡುಗಳೂ ಬಂದಂತೆ, ಆ ಎಳೆಯರ ಹೊಣೆ ಹೊತ್ತ ಮಧ್ಯವಯಸ್ಕ ಸಮರ ಚಟರ್ಜಿಗೆ ಕಸಿವಿಸಿ, ಆತಂಕ: ಬೆಂಗಳೂರು ತಲಪುವೆವೋ ಇಲ್ಲವೋ, ಪ್ರವಾಸ ಕಾರ್ಯಕ್ರಮ ಯಶಸ್ವಿಯಾಗುವುದೋ ಇಲ್ಲವೋ. (ಟ್ರಾನ್ಸಿಸ್ಟರ್) ರೇಡಿಯೋ ಕಲೆಯ ಕಡು ವೈರಿಯಾಗಿತ್ತು. ಅದು ಪ್ರಸಾರ ಮಾಡುತ್ತಿದ್ದುದು ಕಲಹದ ಸುದ್ದಿಯನ್ನು. ಪತ್ರಿಕೆಗಳ ಮೊದಲ ಪುಟದ ತುಂಬ ಅದೇ: ದ್ರೋಹ, ವಿಶ್ವಾಸಘಾತ, ಅಪವಿತ್ರ ಮೈತ್ರಿ, ಅಂತಃಕಲಹ. ಇವನ್ನೆಲ್ಲ ಅಣಕಿಸುವ ಹಾಗೆ ಭಾಷೆ ಘಟಸರ್ಪವಾಗಿತ್ತು. ಅದರ ಫೂತ್ಕಾರ ಮಾತ್ರಕ್ಕೆ ವಾತಾವರಣ ವಿಷಮಯವಾಗುತ್ತಿತ್ತು.

ಆ ನಾಡಿನಲ್ಲಿ ಈ ನಾಡಿನಲ್ಲಿ ರೈಲು ಸಂಚಾರವಿಲ್ಲ. ಪುಂಡರು ಕಂಬಿಗಳನ್ನು ಕಿತ್ತರು. ಪೋಲೀಸರು ಬಂದರೆಂದು, ತಾವೇ ಕಂಬಿಕಿತ್ತರು. 'ಸುರಕ್ಷಿತ' ಸ್ಥಳದಲ್ಲಿ ಅವಿತುನಿಂತು ಕಣ್ಣುಮುಚ್ಚಾಲೆಯಾಡಿದರು, ಕಲ್ಲೆಸೆದರು. ಇನ್ನೊಂದೆಡೆ ಡಬ್ಬಿಗಳಿಗೆ ಬೆಂಕಿ ಇಟ್ಟರು. ಬಸ್ಸುಗಳಿಗೆ ಉರಿಹಾಕಿದರು. ಅಶ್ರುವಾಯು, ಲಾಠಿ ಪ್ರಯೋಗ, ಗುಂಡೆಸೆತ. ಹೊತ್ತಲ್ಲದ ಹೊತ್ತಿನಲ್ಲಿ ಬೀದಿತುಂಬ ಕತ್ತೆಗಳ ಅರಚಾಟ.

ಚಟರ್ಜಿಗೆ ಅನಿಸಿರಬೇಕು: 'ಇದೊಳ್ಳೆಯ ಪ್ರಾರಬ್ಧ.'

ಮಕ್ಕಳಲ್ಲಿ ತುಸು ದೊಡ್ಡವಕ್ಕೆ ಮುಖ ಸಪ್ಪೆಯಾಗಿದ್ದರೆ ಆಶ್ಚರ್ಯವಿಲ್ಲ. ಚಿಕ್ಕವಂತೂ

ನಾಗರಿಕತೆಯ ನಗಾರಿಯ ಇಂಥ ಸದ್ದುಗದ್ದಲಗಳ ಮಧ್ಯದಲ್ಲೇ ಹುಟ್ಟಿಬೀಳುವ ಜೀವಗಳು........

*   *   *   *   *

ಆ ತಂಡದವರು ಬಂದು ಸೇರಿದ ಬೆಂಗಳೂರು, ಬೆಳಗಿನ ಜಾವದಲ್ಲಿ ಕಿರಿಯರಿಗೆ ಬಲು ಇಷ್ಟವೆನಿಸಿತು. ಹಿತಕರವಾದ ವಾತಾವರಣ, ನಗರ. ಸಿಮೆಂಟಿನಗಾರೆ ಕಟ್ಟಡಗಳ ಜೇನುಕೊಟ್ಟೆ ನಿಜ. ಆದರೂ ಒಳಗೆ ಮಘು, ಉದ್ಯಾನಗಳು. ಅವರೆಲ್ಲ ಬೇರೆ ಬೇರೆ ಊರುಗಳನ್ನು ಕಂಡವರು. ಕೆಲವರು ಬೇರೆ ದೇಶಗಳಿಗೂ ಹೋಗಿ ಬಂದವರು. ಅದು ನರ್ತನ ಪ್ರವಾಸ. ವಂದೇ ಮಾತರಂ ಗೀತೆ ಹುಟ್ಟಿದ ನಾಡಿನವರಲ್ಲವೆ? ಭಾರತ ಮಾತೆಯ ಕಲ್ಪನೆ ಅವರಿಗೆ ಹೊಸದಲ್ಲ. ಆದರೆ ಆಕೆಯ ಪಾದಗಳನ್ನು ಸೀರೆಯ ನೆರಿಗೆಯನ್ನು ಅವರು ಕಾಣುತ್ತಿರುವುದು ಇದೇ ಮೊದಲು. ಸಹಸ್ರಾರು ಮೈಲು ದಕ್ಷಿಣಕ್ಕೆ ಬಂದಂತೆಲ್ಲ ಅವರಿಗೆ ಅನಿಸಿತು : ಎಷ್ಟು ವಿಶಾಲ ಈ ದೇಶ!

ಬೆಂಗಳೂರು ಮುಂಜಾವದಲ್ಲಿ ಒಂದು ರೂಪ ತಾಳಿದ್ದರೆ ಬಿಸಿಲೇರಿದಂತೆ ಹೋಳಿಯ ಬಣ್ಣಗಳನ್ನು ಮೈಗೆ ಬಳಿದುಕೊಂಡಿತು. ಒಳಗಿನ ಅಸವನೆ ಲಕ್ಷ ಲಕ್ಷ ನಿಟ್ಟುಸಿರಾಗಿ, ಉಸಿರಿನ ಬಣ್ಣ ಕಪ್ಪಾಗಿ, ಊರು ಕೆಮ್ಮಿ ಕೆಮ್ಮಿ, ಇರುಳಿನ ಹೊತ್ತಿಗೆ ಗೂರಲು ರೋಗಿಯಂತಾಯಿತು.

ಆದರೂ ಕಲ್ಕತ್ತೆಯ ಮಕ್ಕಳು ಬೆಂಗಳೂರು ಕಂಡರು. ಪುಷ್ಪೋದ್ಯಾನ ನೋಡಿದರು. ಎರಡು ದಿನ ರವೀಂದ್ರ ಕಲಾಕ್ಷೇತ್ರದಲ್ಲಿ ತಮ್ಮ ನರ್ತನ ಅಭಿನಯಗಳಿಂದ ಪ್ರೇಕ್ಷಕರ ಮನಸ್ಸನ್ನು ತಣಿಸಿದರು.

*   *   *   *

ಆ ಆರಾಧನೆಯ ಅರ್ಥವಾಗಬೇಕಾದರೆ ಕಲ್ಕತ್ತೆಯ ಕಿರಿಯ ರಂಗಭೂಮಿಯ ಬಗೆಗೆ ತುಸು ತಿಳಿಯಬೇಕು. ಇಂಥದೊಂದು ರಂಗಮಂದಿರದ ಕನಸನ್ನು ಕಂಡವರು ಬಂಗಾಳದ ಹಿರಿಯ ಕಲಾವಿದ ದಿವಂಗತ ಅವನೀಂದ್ರನಾಥ ಠಾಕೂರ್. ಒಲಿವು ನಲಿವುಗಳ, ಸ್ವಚ್ಛಂದ ಅಭಿವ್ಯಕ್ತಿಯ, ಮರಿಗಳಿಗೆ ತಾನೇತಾನಾಗಿ ಪುಕ್ಕಹುಟ್ಟಿ ಗರಿಗೆದರುವ ಮಾಯಾಲೋಕ ಅದು. ಅವನೀಂದ್ರರ ಆ ಧ್ಯೇಯದಿಂದ, ಸಂದೇಶದಿಂದ ಪ್ರಭಾವಿತರಾಗಿ ಕೆಲವರು ವರ್ಷಗಟ್ಟಲೆ ದುಡಿದು, ಹದಿನೈದು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಮಕ್ಕಳ ರಂಗಭೂಮಿಗಾಗಿ ಆಧುನಿಕ ಕಟ್ಟಡವೊಂದನ್ನು ಸಿದ್ಧಗೊಳಿಸಿದರು. ಅವನ್ ಮಹಲ್ ಎಂದು ಅದನ್ನು ಕರೆದರು.

ಈ ರಂಗಮಂದಿರ ಒದಗಿಸಿರುವುದು, ಎಳೆಯರು ದಿನನಿತ್ಯದ ಓದಿನ ಜೊತೆಗೆ ಬಣ್ಣ, ನೃತ್ಯ, ಸಂಗೀತಗಳಲ್ಲಿ ಮನಸ್ಸನ್ನು ತೋಯಿಸುವ ಅವಕಾಶವನ್ನು. ಕಲ್ಕತ್ತೆಯ ರಂಗಮಂದಿರದ ವಿಸ್ತಾರ ಕಾರ್ಯಕ್ಷೇತ್ರ ಹೀಗಿದೆ: ಮಕ್ಕಳಿಗಾಗಿಯೂ ಅವರ ಹಿರಿಯರಿಗಾಗಿಯೂ ಅತ್ಯಂತ ಪ್ರಯೋಜನಕಾರಿಯಾದ ಪುಸ್ತಕ ಭಂಡಾರ: ಹಾಡುಗಾರಿಕೆ

ಯನ್ನೂ ಪಾದನವನ್ನೂ ಕಲಿಸಿಕೊಡುವ ಸಂಗೀತ ವಿಭಾಗ; ಶಿಲ್ಪರಚನೆ ಕಸೂತಿ ಸಕಾಶೆ ರಚನೆಗಳನ್ನು ಹೇಳಿಕೊಡುವ ವೃತ್ತಿ ವಿಭಾಗ; ಚಿತ್ರಕಲೆಯ ವಿಭಾಗ; ಎಳೆಯರಿಗಾಗಿ ಒಳ್ಳೆಯ ಚಲಚ್ಚಿತ್ರಗಳನ್ನು ತೋರಿಸುವ ಪ್ರದರ್ಶನ ವಿಭಾಗ; ಬೊಂಬೆ ಯಾಟದ ಒಂದು ವಿಭಾಗ ಕೂಡಾ........

* * * * *

ಈ ಕಿರಿಯ ನಟನಟಿಯರ ಕಾರ್ಯಕ್ರಮ ಉರಿಯುವ ಕಲ್ಕತ್ತೆಯ ಬಯಲಿನಲ್ಲಿ ಬಾಡಲು ನಿರಾಕರಿಸುವ ಚಿಗುರು.

—ಹ್ಯಾನ್ಸ್ ಕ್ರಿಶ್ಚಿಯನ್ ಅಂಡರ್ಸನ್ನನ 'ಕೆಂಪು ಪಾದರಕ್ಷೆಗಳು' ಕತೆಯ ಭಾರತೀಯ ರೂಪ 'ಕೆಂಪು ಗೆಜ್ಜೆ.'

—ಪಟ್ಟಣದವರಾದರೇನು ? ಹಳ್ಳಿಯವರಾದರೇನು ? ಎಳೆಯರು ಎಲ್ಲಿದ್ದರೂ ಒಂದೇ ಎಂದು ಸೂಚಿಸುವ 'ಮಕ್ಕಳು ಮಕ್ಕಳೇ.'

—ಎಂದಿದ್ದರೂ ಒಳ್ಳಿತಿಗೇ ಜಯ ಎಂಬ ಸಾರ್ವಕಾಲಿಕ ಸತ್ಯವನ್ನು ಸಾರುವ ನೃತ್ಯ ನಾಟಕ.

—ರಂಗಭೂಮಿಗಾಗಿ ಅಳವಡಿಸಿದೊಂದು ಸಾಹಸ ಕಥೆ.

—ವಿಶ್ವಕವಿ ರವೀಂದ್ರರ ಋತುಚಕ್ರದ ಹರ್ಷವನ್ನು ಕುರಿತ ಭಾವಗೀತೆಗಳ ಹಿನ್ನೆಲೆಯಲ್ಲಿ ನೃತ್ಯರೂಪಕ 'ಆನಂದ.'

—(ಪಾದರಕ್ಷೆಗಳಿಗೆ ಗಾಲಿಗಳನ್ನಿರಿಸಿ) ಜಲಕೇಳಿಯಾಡುವ ಬಾತು ಕೋಳಿಗಳು.

* * * * *

'ಶಿಕ್ಷಣಪೂರ್ವ ಚಳುವಳಿ' ಬೆಂಗಳೂರು ನಗರದಲ್ಲಿ ಹೊಸದಾಗಿ ಹುಟ್ಟಿರುವ ಸಂಸ್ಥೆ. ಕಲ್ಕತ್ತೆಯ ಕಿರಿಯ ರಂಗಭೂಮಿಯವರನ್ನು ಇಲ್ಲಿಗೆ ಕರೆಸಿದ್ದು ಈ ಸಂಸ್ಥೆಯೇ.

ಬಂದ ಸಮರ ಚಟರ್ಜಿ ವ್ಯಕ್ತಪಡಿಸಿದ ಆಶಯವಿಷ್ಟು: 'ನಿಮ್ಮ ನಗರದಲ್ಲಿಯೂ ಕಿರಿಯ ರಂಗಮಂದಿರವೊಂದನ್ನು ನೀವು ಸ್ಥಾಪಿಸಬೇಕು.'

* * * * *

ಕಲ್ಕತ್ತೆಗೆ ಮರಳಿದ ಮಕ್ಕಳನ್ನು ತಾಯ್ತಂದೆಯರು ಕೇಳಬಹುದು :

"ಹೇಗಿದೆ ಬೆಂಗಳೂರು?"

ಮಕ್ಕಳು ಉತ್ತರವೀಯಬಹುದು :

"ಕಿರಿಯ ರಂಗಭೂಮಿ ಒಂದಿಲ್ಲ. ಉಳಿದದ್ದೆಲ್ಲ ನಮ್ಮೂರಿನ ಹಾಗೆಯೇ."

೧೧-೨-೧೯೬೮

# ಪುರುಷೋತ್ತಮನ ಪರಿಚಾರಿಕೆ ಲಕ್ಷ್ಮಿ

ಹೊಸದಾಗಿ ಬರೆದ ಪುಸ್ತಕವನ್ನು ಯಾರಿಗೆ ಅರ್ಪಿಸಬೇಕು? ಪಾಶ್ಚಾತ್ಯಜಗತ್ತಿನ ಪ್ರಮುಖ (ಜನಪ್ರಿಯ) ಬರೆಹಗಾರರಿಗೆ ಅರ್ಪಣೆಯ ಸ್ವಾತಂತ್ರ್ಯವಿತ್ತರೆ ಅವರೆಲ್ಲ ಗ್ರಂಥಗಳ ಆರಂಭದ ಪುಟದಲ್ಲಿ ಈ ಕೆಳಗಿನ ಸಾಲುಗಳನ್ನು ಕಾಣಬಲ್ಲೆವು:

> "ಸ್ನೇಹ – ಔದಾರ್ಯ – ಸಹಕಾರ – ತಿಳಿವಳಿಕೆ – ತಾಳ್ಮೆ – ಪ್ರೋತ್ಸಾಹಗಳಿಂದಲೂ ಅಸಮಾನ ವ್ಯಾಪಾರೀ ಮನೋವೃತ್ತಿಯಿಂದಲೂ ಈ ಕೃತಿಯ ಹಸ್ತಪ್ರತಿಯ ರಚನೆಗೂ ಮಾರಾಟಕ್ಕೂ ಕಾರಣರಾದ ಲಿಟರರಿ ಏಜಂಟ್
> ಶ್ರೀ...........................................................................
> ಇವರಿಗೆ."

* * * * *

ನಮ್ಮ ದೇಶದಲ್ಲಿ ಗ್ರಂಥಕರ್ತನ ಬದುಕಿನಲ್ಲಿ ಪ್ರಧಾನ ಪಾತ್ರಗಳನ್ನು ವಹಿಸುವವರು ಮೂವರು: ಪ್ರಕಾಶಕ, ಪುಸ್ತಕ ವ್ಯಾಪಾರಿ, ಓದುಗ. ಪಶ್ಚಿಮದ ರಾಷ್ಟ್ರಗಳಲ್ಲಿ ಈ ಪಾತ್ರವರ್ಗ ಆರಂಭವಾಗುವುದು ಲಿಟರರಿ ಏಜೆಂಟನಿಂದ. ಆತನಿಗೇ ಪ್ರಥಮ ಪೂಜೆ.

ಕನ್ನಡದ ಅಥವಾ ಇನ್ನಿತರ ಭಾರತೀಯ ಭಾಷೆಗಳ ಲೇಖಕರನ್ನು ದಿಗ್ಭ್ರಮೆಗೊಳಿಸುವಂತಹ ಕೆಲವು ಅಂಕೆ ಸಂಖ್ಯೆಗಳು ಇಲ್ಲಿವೆ.

'ಕಾರ್ಪೆಟ್ ಬ್ಯಾಗರ್ಸ್' ಖ್ಯಾತಿಯ ಹೆರಲ್ಡ್ ರಾಬಿನ್ಸ್‌ಗೆ ಬರೆಯಲಿರುವ ಪ್ರತಿಯೊಂದು ಹೊಸ ಪುಸ್ತಕಕ್ಕಾಗಿ ದೊರೆಯುವ ಮುಂಗಡ ಹಣ ೫೦೦,೦೦೦ ಡಾಲರು. 'ಫಾರ್‌ಎವರ್ ಆಂಬರ್' ರಚಯಿತೆ ಕ್ಯಾಥಲೀನ್ ವಿನ್ಸರ್ ತನ್ನ 'ವಾಂಡರರ್ಸ್ ಈಸ್ಟ್‌ವರ್ಡ್, ವಾಂಡರರ್ಸ್ ವೆಸ್ಟ್' ಕಾದಂಬರಿಯ ಸುಲಭ ಬೆಲೆಯ ಆವೃತ್ತಿಯ ಪ್ರಕಟಣಾಧಿಕಾರಕ್ಕಾಗಿ ೫೦೦,೦೦೦ ಡಾಲರು ಪಡೆದಳು. ನಾರ್ಮನ್ ಮೇಯ್ಲರನ ಮುಂದಿನ ಎರಡು ಕೃತಿಗಳಿಗೆ ಪ್ರತಿಯೊಂದಕ್ಕೂ ೪೫೦,೦೦೦ ಡಾಲರ್ ಪ್ರತಿಫಲ ಕೊಡಲು ಪ್ರಕಾಶಕರು ಒಪ್ಪಿದ್ದಾರೆ. ಅಲ್ಲದೆ, ಈ ಕಾದಂಬರಿಗಳಿಗಾಗಿ ಬೋನಸ್ ರೂಪದಲ್ಲಿ ೧೦೦,೦೦೦ ಡಾಲರು ದೊರೆಯುವ ಸಂಭವವೂ ಇದೆ. ಬ್ರಿಟಿಷ್ ಬರೆಹಗಾರ ಹಂಟರ್ ಡೇವಿಸ್ ತನ್ನ 'ಬೀಟ್ಲ್ಸ್' ಎಂಬ ಜೀವನವೃತ್ತದ ಅಮೆರಿಕನ್ ಆವೃತ್ತಿಗಾಗಿ ಸ್ವೀಕರಿಸಿರುವ ಪ್ರತಿಫಲ ೧೫೦,೦೦೦ ಡಾಲರು.

ಇಲ್ಲಿನ ಸ್ವಾರಸ್ಯದ ಅಂಶವೆಂದರೆ, ವ್ಯವಹಾರ. ಲೇಖಕ ಹಾಗೂ ಪ್ರಕಾಶಕರ ನಡುವೆ ನೇರವಾಗಿ ನಡೆದುದಲ್ಲ. ಇದನ್ನು ಏರ್ಪಡಿಸಿದವರೆಲ್ಲ ಸಾಹಿತ್ಯ ದಲ್ಲಾಳಿಗಳು.

* * * * *

ಇಪ್ಪತ್ತೈದು ವರ್ಷಗಳಿಗೆ ಹಿಂದೆ ಇಂಥ ಏಜೆಂಟರು ಎಲ್ಲಿಯೂ ಇರಲಿಲ್ಲ. ಈಗ ಲಾದರೋ ಈ ದಲ್ಲಾಳಿತನ ಗೌರವದ ಕೆಲಸ. ಸಂಪಾದನೆಯ ವೃತ್ತಿ ಕೂಡಾ. ಗ್ರಂಥಕರ್ತನೊಬ್ಬ ಒಂದು ಕೃತಿಯನ್ನು ರಚಿಸತೊಡಗಿದ ಎನ್ನಿ. ಅದರ ಪ್ರಕಟಣೆಗೆ ಪ್ರಕಾಶಕನನ್ನು ಲಿಟರರಿ ಏಜೆಂಟ್ ದೊರಕಿಸುತ್ತಾನೆ. ಸುಲಭ ಬೆಲೆಯ ಆವೃತ್ತಿ ಗಾಗಿಯೂ ಯಾವುದಾದರೂ ಪ್ರಕಾಶನ ಸಂಸ್ಥೆಯನ್ನು ಗೊತ್ತುಮಾಡುತ್ತಾನೆ. ನಿಯತಕಾಲಿಕೆಗಳಲ್ಲಿ ಧಾರಾವಾಹಿ ಪ್ರಕಟಣೆಗೆ ವ್ಯವಸ್ಥೆ ಮಾಡುತ್ತಾನೆ. ವಿದೇಶೀ ಆವೃತ್ತಿಗಳ ಹಕ್ಕುಗಳನ್ನು ಮಾರಲು ಪತ್ರವ್ಯವಹಾರ ನಡೆಸುತ್ತಾನೆ. ಚಲಚ್ಚಿತ್ರ ನಿರ್ಮಾಪಕ ಸಂಸ್ಥೆಗಳಿಗೆ ಟೆಲಿವಿಷನ್‌ಗಳಿಗೆ ಹಕ್ಕುಗಳನ್ನು ಮಾರುತ್ತಾನೆ. ಆ ಕೃತಿ ಮುಗಿದು ಲೇಖಕನಿಗೆ ಬಿಡುವಿದ್ದಾಗ ಉಪನ್ಯಾಸ ಪ್ರವಾಸಗಳನ್ನು ಏರ್ಪಡಿಸುತ್ತಾನೆ. (ಅಲ್ಲಿ ಟಿಕೆಟ್ ಕೊಂಡು ಭಾಷಣ ಕೇಳುತ್ತಾರೆ.) ಇಷ್ಟಲ್ಲದೆ, ವಿರಾಮದ ಬಳಿಕ ಇನ್ನೊಂದು ಕಾದಂಬರಿ ಬರೆಯಲು ಸಿದ್ಧವಾದೊಡನೆಯೇ, ಪ್ರಕಾಶಕರಿಂದ ಮುಂಗಡ ಹಣವನ್ನು ಕರ್ತೃವಿಗೆ ಕೊಡಿಸುತ್ತಾನೆ.

ಈಯೆಲ್ಲ ದುಡಿಮೆಗಾಗಿ ದಲ್ಲಾಳಿಗೆ ದೊರೆಯುವುದು ಲೇಖಕನ ಒಟ್ಟು ಸಂಪಾದ ನೆಯ ಶೇಕಡಾ ಹತ್ತರಷ್ಟು. ಆತ ತನಗೆ ಸಲ್ಲಬೇಕಾದುದನ್ನು ಮುರಿದುಕೊಂಡೇ ಪ್ರತಿಫಲವನ್ನು ಗ್ರಂಥಕರ್ತನಿಗೆ ಮುಟ್ಟಿಸುತ್ತಾನೆ.

ಬರೆಯಲು ಇಚ್ಛಿಸುವವರಿಗೆಲ್ಲ ಇಂಥ ಅನುಕೂಲತೆಗಳು ಲಭಿಸುತ್ತವೆ ಎಂದಲ್ಲ. ಯಾರು ಜನಪ್ರಿಯರೋ, ಯಾರ ಕೃತಿಗಳಿಗೆ ವಾಚಕರಿಂದ ಹೆಚ್ಚಿನ ಬೇಡಿಕೆ ಇದೆಯೋ ಅಂಥವರೊಡನೆಯೇ ಬಹುತೇಕ ದಲ್ಲಾಳಿಗಳ ಬಹ್ವಂಶ ವ್ಯವಹಾರ.

* * * * *

ಈ ದಲ್ಲಾಳಿಗಳಲ್ಲೂ ಬೇರೆ ಬೇರೆ ಬಗೆಗಳ ಜನರುಂಟು. ಗ್ರಂಥಕರ್ತ ಬರೆಯ ಲಾಗದೇ ಕಷ್ಟದಲ್ಲಿದ್ದರೆ ಆತನಿಗೆ ನೆರವಾಗುವ ಏಜೆಂಟರೂ ಇದ್ದಾರೆ. ಇಂಥ 'ಮಾನವೀಯತೆ' ಇರುವ ದಲ್ಲಾಳಿಗಳ ವಿಷಯದಲ್ಲಿ ಬರೆಹಗಾರರಿಗೆ ವಿಶೇಷ ಗೌರವ. ಲಿಟರರಿ ಏಜೆಂಟರಾಗಿ ಹಲವು ವರ್ಷಗಳಿಂದ ದುಡಿಯುತ್ತಿರುವ ಮಿಸ್ ಡೊನಾಡಿಯೋಗೆ ಹೊಸ ಲೇಖಕರ ಮೇಲೆ ಕಣ್ಣು. ಅಪ್ರಸಿದ್ಧನೊಬ್ಬ ಬರೆದ ಸಣ್ಣ ಕತೆಯನ್ನು ಯಾವು ದಾದರೂ ಸಾಹಿತ್ಯ ನಿಯತಕಾಲಿಕೆಗೆ ಕಳುಹಿಸಲು ಆಕೆ ಹಿಂಜರಿಯುವುದಿಲ್ಲ. ಅಲ್ಪ ಪ್ರತಿಫಲ ಬಂದಾಗ ಅದರಿಂದ ಒಂದು ಪೈಸೆಯನ್ನೂ ಮುಟ್ಟುವುದಿಲ್ಲ. ಪೂರ್ತಿಯಾಗಿ ಲೇಖಕನಿಗೇ ಕೊಡುತ್ತಾಳೆ. ಬರೆಹಗಾರರು ತನಗೆ ಕಳುಹಿಸುವ ಕೃತಿಗಳನ್ನೆಲ್ಲ ಅತ್ಯಂತ ಜಾಗರೂಕತೆಯಿಂದ ಅವಳು ಓದುತ್ತಾಳೆ. ರಾಬರ್ಟ್ ಸ್ಟೋನನ ಪ್ರಥಮ ಕಾದಂಬರಿ

'ಎ ಹಾಲ್ ಆಫ್ ಮಿರರ್ಸ್' ಕಳೆದ ವರ್ಷ ಪ್ರಕಟವಾಗಿ ಜನಪ್ರಿಯವಾಯಿತು. ಆ ಹಸ್ತಪ್ರತಿ ಡೊನಾಡಿಯೋ ಕೈಗೆ ಬಂದಾಗ ಅದಕ್ಕೆ ಪುಟ ಸಂಖ್ಯೆಗಳನ್ನೂ ಹಾಕಿರ ಲಿಲ್ಲ. ಸ್ವತಃ ಆಕೆಯೇ ಆ ಕೆಲಸ ಮಾಡಿದಳು.

* * * * *

ಹಸ್ತಪ್ರತಿಯನ್ನು ಹರಾಜು ಹಾಕುವ ಏಜೆಂಟರುಂಟು. ಅಂಥವರಲ್ಲಿ ಸ್ಕಾಟ್ ಮೆರೆಡಿತ್ ಪ್ರಖ್ಯಾತ. ಅವನ ಕಚೇರಿಯಲ್ಲಿ ಮೂವತ್ತು ಜನರಿದ್ದಾರೆ. (ಲೇಖಕ ಹಸ್ತಪ್ರತಿ ಕಳುಹಿಸಿ ಸ್ವಲ್ಪ ಶುಲ್ಕ ತೆತ್ತರೆ ಅದನ್ನೋದಿ ಅವರು ಅಭಿಪ್ರಾಯ ತಿಳಿಸು ತ್ತಾರೆ.) ಸಿದ್ಧವಾಗುತ್ತಿರುವ ಒಳ್ಳೆಯ ಹಸ್ತಪ್ರತಿಯ ಬಗ್ಗೆ ಮೆರೆಡಿತ್ ಮುಂಚಿತ ವಾಗಿಯೇ, ಬಣ್ಣಿಸುವ ಮಾತುಗಳಲ್ಲಿ ಸುಮಾರು ಇಪ್ಪತ್ತು ಪ್ರಕಾಶಕರಿಗೆ ಬರೆಯು ತ್ತಾನೆ. ಇಂಥ ದಿನ ಹಸ್ತಪ್ರತಿ ಕಳುಹಿಸುತ್ತೇವೆ; ಇಷ್ಟು ದಿನಗಳಲ್ಲಿ ಉತ್ತರ ಕೊಡಿ ಎನ್ನುತ್ತಾನೆ. ಕೃತಿ ರಚನೆ ಮುಗಿದೊಡನೆ ಇಪ್ಪತ್ತು ಪ್ರತಿಗಳನ್ನು ಮಾಡಿಸಿ ಏಕಕಾಲ ದಲ್ಲಿ ಆ ಪ್ರಕಾಶಕರಿಗೆಲ್ಲ ಕಳುಹಿಸುತ್ತಾನೆ. ಎಲ್ಲ ಕಡೆಗಳಲ್ಲೂ ಸಲಹೆಗಾರರು ಆತುರ ಆತುರವಾಗಿ ಆ ಹಸ್ತಪ್ರತಿಯನ್ನು ಓದುತ್ತಾರೆ. ಯಾವ ಪ್ರಕಾಶಕ ಅತ್ಯಂತ ಹೆಚ್ಚು ಪ್ರತಿಫಲ ಕೊಡಲು ಮುಂದೆ ಬರುತ್ತಾನೋ ಆತನಿಗೇ ಮುದ್ರಣದ ಹಕ್ಕು ದೊರೆಯುತ್ತದೆ!

ಚಲಚ್ಚಿತ್ರ ಸಂಸ್ಥೆಗಳಿಗೆ ಕಥಾವಸ್ತುಗಳನ್ನು ಮಾರುವುದರಲ್ಲೇ ನಿಷ್ಣಾತ ರಾದವರಿದ್ದಾರೆ.

ಈ ಏಜಂಟರೆಲ್ಲ ನಗರದಿಂದ ನಗರಕ್ಕೆ ಭೂಖಂಡದಿಂದ ಭೂಖಂಡಕ್ಕೆ ಪ್ರವಾಸ ಮಾಡುವುದು ವಿಮಾನಗಳ ಮೂಲಕ!

* * * * *

ಆ ಜಗತ್ತಿನಲ್ಲಿ ಲಕ್ಷ್ಮಿ ಸರಸೋತಮ್ಮನ ಪರಿಚಾರಿಕೆ, ನಿಜ. ಆದರೆ, ಲಕ್ಷ್ಮಿ ಧೂರ್ತೆ. ತನ್ನ ತಾಳಕ್ಕೆ ಸರಿಯಾಗಿ ಸರಸ್ವತಿ ವೀಣೆ ನುಡಿಸುವಂತೆ ಮಾಡಿದರೂ ಮಾಡಿದಳೇ!

೧೪-೪-೧೯೬೮

# ಐವತ್ತು ಸಾವಿರ ಅಲ್ಲ; ನಾಲ್ಕು ಲಕ್ಷ

ಮಹಾಕವಿ ಕುವೆಂಪು ಅವರಿಗೆ ಭಾರತೀಯ ಜ್ಞಾನಪೀಠದ ಪ್ರಶಸ್ತಿ ಸಂದಿದೆಯೆಂದು ಕನ್ನಡ ಜನಕೋಟಿಗೆ ಸಡಗರ. ತುತೂರಿಯ ಪ್ರಚಾರವಿಲ್ಲದೆ, ಎಡೆಬಿಡದ ಪ್ರವಾಸ ವಿಲ್ಲದೆ, ಅಸಂಖ್ಯ ಭಾಷಣಗಳಿಲ್ಲದೆ, ಬರೆವಣಿಗೆಯೊಂದರ ಆಧಾರದ ಮೇಲೆಯೇ ಮನೆ ಮಾತಾಗಿರುವ ಕವಿಶ್ರೇಷ್ಠ ಕುವೆಂಪು. ಅವರು ಕಾವ್ಯ ಕರ್ಮಶಾಲೆಯ ಸೀಮಿತ ಆವರಣದಿಂದಲೇ ಲೋಕವಿಸ್ತಾರದಲ್ಲಿ ವಿಹರಿಸಿದವರು; ಜನ ಜಂಗುಳಿಯ ಘೋಷ ದಿಂದ ದೂರವಿದ್ದೂ ಜನತೆಯ ಹೃದಯಾಧಿಪರಾದವರು.

ಕುವೆಂಪು, ಕೀರ್ತಿಯನ್ನು ಶನಿ ಎಂದು ಕರೆದ ಕವಿ. ಆ ಶನಿಯಾದರೋ ನಿರ್ಲಜ್ಜ. ಈ ಕವಿಯನ್ನು ಕಾಡುವುದೆಂದರೆ ಅವನಿಗೆ ಪರಮಾನಂದ. ಹಲವು ಪ್ರಶಸ್ತಿ ಪಾರಿತೋಷಕಗಳ ಇವರ ಸರಮಾಲೆಗೆ ಇತ್ತೀಚೆಗೆ ಸೇರಿಕೊಂಡಿರುವುದೇ ಜ್ಞಾನ ಪೀಠದ ಪುರಸ್ಕಾರ. ಇದು ನಮ್ಮ ರಾಷ್ಟ್ರದ ವ್ಯಾಪ್ತಿಯಲ್ಲಿನ ನೋಬೆಲ್ ಬಹುಮಾನ.

* * * * *

ಈ ಸಲದ ಜ್ಞಾನಪೀಠದ ಪ್ರಶಸ್ತಿಯ ಹಣವನ್ನು ಇಬ್ಬರೊಳಗೆ ಹಂಚಿದ್ದಾರೆ: ಮಹಾಕವಿ ಕುವೆಂಪು ಹಾಗೂ ಗುಜರಾತಿನ ಉಮಾಶಂಕರ ಜೋಶಿ.

ಹಂಚಿದ್ದು ಹಣವನ್ನು; ಪ್ರಶಸ್ತಿಯನ್ನಲ್ಲ.

ಆದರೂ ಈ ವರ್ಷದ ಪ್ರಶಸ್ತಿ ಕುವೆಂಪು ಒಬ್ಬರಿಗೇ ಸಲ್ಲಬೇಕಾಗಿತ್ತು; ಉಮಾ ಶಂಕರ ಜೋಶಿಯವರಿಗೆ ಮುಂದಿನ ವರ್ಷ ಕೊಡಬಹುದಾಗಿತ್ತು – ಎಂಬ ಅಭಿಪ್ರಾಯ ಹಲವರಲ್ಲಿದೆ.

ಗೌರೀಶ ಕಾಯ್ಕಿಣಿಯವರ ಪ್ರತಿಕ್ರಿಯೆ ಈ ಅಸಮಾಧಾನಕ್ಕೆ ಅಭಿವ್ಯಕ್ತಿ ಯಂತಿದೆ. ತಮ್ಮ ವಿಶಿಷ್ಟ ಶೈಲಿಯಲ್ಲಿ ಕಾಯ್ಕಿಣಿ ಹೀಗೆ ಬರೆದಿದ್ದಾರೆ:

"....ವಿಲಕ್ಷಣ ಅದ್ಭುತಗಳು ತುಂಬಿದ ಈ ಮಹಾಕಾವ್ಯಕ್ಕೆ (ಶ್ರೀರಾಮಾಯಣ ದರ್ಶನಂ) ಆಧುನಿಕ ಕನ್ನಡ ಕಾವ್ಯೋನ್ನತಿಯ ಶಿಖರವೆಂದು (ಶ್ರೇಷ್ಠ ಭಾರತೀಯ ಮಹಾಕಾವ್ಯವೆಂದು – ನಿ.) ಬಹುಮಾನ ಸಲ್ಲುವದು ಸಾರ್ಥಕವೇ ಸರಿ. ಆದರೆ ಈ ಬಹುಮಾನವನ್ನು ಇನ್ನೊಬ್ಬ ಕವಿಯೊಂದಿಗೆ – ಗುಜರಾತದ ಕವಿಶ್ರೇಷ್ಠನೊಂದಿಗೆ ಹಂಚಿಕೊಡುವ ಅಂದಗೇಡು ಏಕೆ ತೋಚಿತೋ! ಹೀಗೆ ಹಂಚುವದರಿಂದ ಹೊರಡುವ ಅರ್ಥವೆಂದರೆ ಹಿಂದಿನ ಎರಡು ಸಲದಂತೆ ಆಗಿನ ಕವಿಗಳ (ಶಂಕರ ಕುರುಪ ಮತ್ತು ತಾರಾಶಂಕರ ವಂದ್ಯೋಪಾಧ್ಯಾಯ) ಸರಿದೊರೆಗೆ ಕುವೆಂಪು ಬರಲಿಲ್ಲವೆಂದಾಯಿತು.

"ಇದು ದುಷ್ಟ ತರ್ಕ. ಆಯಾ ರಾಜ್ಯದ ಪ್ರಾದೇಶಿಕ ಭಾಷೆಯ ಮಟ್ಟಿಗೆ ಶ್ರೇಷ್ಠವೆಂದು ಪರಿಗಣಿಸಿದ ಸಾಹಿತಿಗೆ ಇಡಿಯ ಬಹುಮಾನ ಸಲ್ಲಬೇಕು. ಹೀಗೆ ಇಬ್ಬಿಬ್ಬರನ್ನು ಕೂಡಿಸಿ ಗುಣ ಗೊತ್ತುಮಾಡುವದೆಂದರೆ ಅದೊಂದು ಮೌಲ್ಯಮಾಪನೆಯ ವಿಡಂಬನೆಯೇ ಸರಿ."

ಇನ್ನೊಂದು ದೃಷ್ಟಿಯಿಂದಲೂ ಈ ಪ್ರಶ್ನೆಯನ್ನು ನೋಡಬಹುದೆನ್ನುವುದಕ್ಕೆ ಪ್ರೊ. ಹಾ. ಮಾ. ನಾಯಕರು ತಮ್ಮ 'ಸಾಹಿತ್ಯ ಸಲ್ಲಾಪ' ಕಾಲಮಿನಲ್ಲಿ ವ್ಯಕ್ತಪಡಿಸಿರುವ ಅಭಿಮತ ಒಳ್ಳೆಯ ಉದಾಹರಣೆಯಾಗಿದೆ. ಅವರೆನ್ನುತ್ತಾರೆ:

"ಎಷ್ಟೋ ಜನ ಈ ಬಹುಮಾನವನ್ನು ಹೀಗೆ ಹಂಚಬಾರದಾಗಿತ್ತು ಎಂದು ಗೊಣಗುತ್ತಾರೆ. ಒಂದೆರಡು ಪತ್ರಿಕೆಗಳೂ ಹಾಗೆ ಬರೆದಿವೆ. ಆದರೆ ಹಂಚಿಕೆಯಾದ ಮಾತ್ರಕ್ಕೆ ಬಹುಮಾನದ ಅಪಮೌಲ್ಯವಾಗುತ್ತದೆಯೇ? ನೋಬೆಲ್ ಪ್ರಶಸ್ತಿಯನ್ನು ಇಬ್ಬರಲ್ಲ ಮೂವರು ಹಂಚಿಕೊಂಡ ಉದಾಹರಣೆಗಳಿಲ್ಲವೆ? ಗೊಣಗುವ ಜನ ಬಹುಮಾನದಲ್ಲೂ ಹಣವನ್ನು ಎಣಿಸುತ್ತಾರೆ; ಆದ್ದರಿಂದಲೇ ಕೊರಗುತ್ತಾರೆ."

* * * * *

ಮಹಾಕವಿ ಕುವೆಂಪು ಅವರೇ ಈ ಬಗ್ಗೆ ಆಡಿರುವುದು ಹೀಗೆ:

"ನನಗೆ ಜ್ಞಾನಪೀಠ ಪ್ರಶಸ್ತಿ ಬಂದುದು ಒಂದು ಲಕ್ಷ ರೂಪಾಯಿ ಬಂದ ಆನಂದವಾಗಿದೆ. ಮಾತ್ರವಲ್ಲ, ನನ್ನ ಸ್ನೇಹಿತರಿಗೂ ಒಂದು ಲಕ್ಷ ಬಂದಿದೆ ಎಂಬ ಸಂತೋಷವೂ ನನ್ನದಾಗಿದೆ. ಬಹುಶಃ ಜೋಶಿಯವರಿಗೂ ಹೀಗೆಯೇ ಆಗಿರಬೇಕು. ತಮಗೆ ಲಕ್ಷದ ಬಹುಮಾನ ಬಂದ ಸಡಗರ; ಜೊತೆಗೆ ತಮ್ಮ ಸ್ನೇಹಿತರಿಗೂ ಆ ಬಹುಮಾನ ಬಂದ ಸಂತೋಷ. ಈಗ ಇದರ ಒಟ್ಟು ಮೊತ್ತ ನಾಲ್ಕು ಲಕ್ಷ."

ತಪ್ಪಿತೆ ಲೆಕ್ಕ? ಏನಿದು ಮಹಾಕವಿಯ ಗಣಿತ?

ಇದ್ದೀತು, ಕುವೆಂಪು ಅಂದಂತೆ ಅವರಿಗೂ ಜೋಶಿಯವರಿಗೂ ದೊರೆತುದು ನಾಲ್ಕು ಲಕ್ಷವೇ ಇದ್ದೀತು!

ಆದರೆ ಮೇಲಿನ ಅವರ ಮಾತಿದೆಯಲ್ಲ? ಅದರ ಬೆಲೆ ಅಕ್ಷರಕ್ಕೆ ಲಕ್ಷ! ಅದು ಸಹೃದಯ ಗೀತ. ಅದರಿಂದ ಒಸರುವ ಸದ್ಭಾವನೆ ಸಾವಿಲ್ಲದ್ದು.

* * * * *

"ಗುಜರಾತಿ ವಿಶ್ವಕೋಶದ ಎರಡನೆಯ ಸಂಪುಟ ಹೊರಬಿದ್ದಿದೆ. ತಮ್ಮ ವಿಶ್ವಕೋಶಕ್ಕೆ ಜ್ಞಾನಗಂಗೋತ್ರಿ ಎಂದು ಅವರು ಹೆಸರಿಟ್ಟಿದ್ದಾರೆ."

—ಈ ಮಾತನ್ನು ಜನವರಿಯ ಕೊನೆಯಲ್ಲಿ ಪ್ರೊ. ಜವರೇಗೌಡರಿಗೆ ನಾನೆಂದೆ. ಅವರೆಂದರು:

"ಜ್ಞಾನಗಂಗೋತ್ರಿ! ಉಮಾಶಂಕರ ಜೋಶಿಯವರು ಮಾನಸಗಂಗೋತ್ರಿ

ಹೆಸರನ್ನು ಬಹಳವಾಗಿ ಮೆಚ್ಚಿದವರು. ಜ್ಞಾನಗಂಗೋತ್ರಿ ಹೆಸರಿಗೆ ಮಾನಸ ಗಂಗೋತ್ರಿ ಮೂಲ!”

* * * * *

ಬಹಳ ಜನರಿಗೆ ತಿಳಿಯದು. ಕುವೆಂಪು – ಜೋಶಿ ಇಬ್ಬರೂ ಹಳೆಯ ಗೆಳೆಯರು. ‘ಶ್ರೀರಾಮಾಯಣದರ್ಶನಂ’ ರಚನೆಯಾಗುತ್ತಿದ್ದಾಗ (೨೦–೨೨ ವರ್ಷಗಳಿಗೆ ಹಿಂದಿನ ಮಾತು) ಉಮಾಶಂಕರ ಜೋಶಿ ಅಹ್ಮದಾಬಾದಿನಿಂದ ಬೆಂಗಳೂರಿಗೆ ಬಂದವರು ಕವಿಯ ವಾಣಿಯಲ್ಲೇ ಆ ಕೃತಿಯನ್ನು ಕೇಳಿದ್ದರು. ಅವರಿಬ್ಬರದು ಚ್ಯುತಿಯಿಲ್ಲದೆ ಬೆಳೆದು ಬಂದ ಸ್ನೇಹ. ಇತ್ತ ಬಂದಾಗಲೆಲ್ಲ ಜೋಶಿ ಮೈಸೂರಲ್ಲಿ ಕುವೆಂಪು ಅವರನ್ನು ಕಾಣುತ್ತಿದ್ದರು. ಜೋಶಿಯವರೂ ದೊಡ್ಡ ಮನುಷ್ಯರು. ಗುಜರಾತಿ ಭಾಷೆಯಲ್ಲಿ ಎಲ್ಲ ಸಾಹಿತ್ಯ ಪ್ರಕಾರಗಳಲ್ಲೂ ಕೃಷಿ ಮಾಡಿ ಯಶಸ್ಸು ಗಳಿಸಿದವರು. ಗುಜರಾತ ವಿಶ್ವವಿದ್ಯಾಲಯದಲ್ಲಿ ಜೋಶಿಯವರು ಗುಜರಾತೀ ಪ್ರಾಧ್ಯಾಪಕರಾಗಿದ್ದರು; ಗುಜರಾತಿ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದರು; ಈಗ ಅವರು ಆ ವಿಶ್ವವಿದ್ಯಾಲಯದ ಕುಲಪತಿ. ವಯಸ್ಸಿನಲ್ಲಿ ಕುವೆಂಪು ಅವರಿಗಿಂತ ಏಳು ವರ್ಷ ಕಿರಿಯರಾದರೂ ಅವರಿಬ್ಬರೂ ಸಮಾನ ಧರ್ಮಿಯರು. ಸಾಹಿತ್ಯ ಸ್ನೇಹಕ್ಕೆ ಇದಕ್ಕಿಂತ ಉತ್ತಮ ಅಡಿಪಾಯ ಬೇರೆ ಬೇಕೆ?

ಕುವೆಂಪು ಮತ್ತು ಉಮಾಶಂಕರರಿಬ್ಬರಿಗೂ ಜ್ಞಾನಪೀಠದ ಪ್ರಶಸ್ತಿಯನ್ನು ನೀಡಿದುದು ಉಚಿತವೇ ಸರಿ. ಅವರ ಪಾಲಿಗೆ ಬಂದಿರುವ ಹಣ ಐವತ್ತು–ಐವತ್ತು ಸಾವಿರಗಳಲ್ಲ; ಅದರ ಮೊತ್ತ ನಿಜವಾಗಿಯೂ ನಾಲ್ಕು ಲಕ್ಷ!

೯–೬–೧೯೬೮

# ಯೌವನದ ಸಿಡಿಮದ್ದು

ಮೊನ್ನೆ ಪ್ರಾಗ್, ನಿನ್ನೆ ಪ್ಯಾರಿಸ್, ಇವತ್ತು ಬೆಲ್‌ಗ್ರೇಡ್. ಯುವಜನರ ವರ್ತನೆ ಲೋಕದ ಶ್ರೀಸಾಮಾನ್ಯನನ್ನು ದಂಗುಬಡಿಸುವಂತಿದೆ. ಈ ದರ್ಶನದ ಅರ್ಥವೇನು? ಕೆಂಗಣ್ಣು ಸುಡುತ್ತಿರುವುದು ಯಾವುದನ್ನು? ಈ ಕತ್ತಲು ದಾಟಿ ಬರಲಿರುವ ಮುಂಜಾವು ಎಂಥದು?

ಕಳೆದ ಕೆಲ ವರ್ಷಗಳಲ್ಲಿ ಜಗತ್ತಿನಾದ್ಯಂತ ರಾಜಧಾನಿಗಳಲ್ಲಿ ಯೌವನದ ಸಿಡಿಮದ್ದು ಉರಿದಿದೆ. ಭಾರತದ ಯುವಜನ ಸ್ತೋಮವೂ ಆ ಬೆಂಕಿಯಲ್ಲಿ ಮೈ ಕಾಯಿಸಿದೆ.

ಗೊತ್ತುಗುರಿ ಇಲ್ಲದೆ ಅಲೆಯುವ ಸೂತ್ರಕಿತ್ತ ಪಟವಾಗಿರುವನಲ್ಲ ಯುವಕ – ಯಾಕೆ? ಅಭಿವೃದ್ಧಿ ಹೊಂದದ ರಾಷ್ಟ್ರವಿರಲಿ, ಶ್ರೀಮಂತ ದೇಶವಿರಲಿ, ಕಮ್ಯೂನಿಸ್ಟ್ ಸಮಾಜವ್ಯವಸ್ಥೆ ಇರಲಿ, ಬಹುಪಕ್ಷ ಪ್ರಜಾಪ್ರಭುತ್ವವಿರಲಿ, ವಿದ್ಯಾರ್ಥಿಗಳೂ ಯುವಕರೂ ಅಸಹನೆಯ ಹೋಳಿಯಲ್ಲಿ ನಿರತರಾದರಲ್ಲ – ಏನು ಕಾರಣ?

* * * * *

ಹಾಗೆ ನೋಡಿದರೆ, ಇದು ಹೊಸ ಕಾಹಿಲೆಯೆ? ಇತಿಹಾಸದ ಪುಟಗಳು ಏನು ಹೇಳುತ್ತವೆ?

೨,೦೦೦ ವರ್ಷಗಳಿಗೂ ಹಿಂದಿನ ಮಾತು. ನಾಗರಿಕತೆಗೆ ದಾರಿದೀಪವಾಗಿದ್ದ ಗ್ರೀಸಿನಲ್ಲೇ ಏನಾಯಿತು? ತನ್ನ ಕಾಲಾವಧಿಯ ಯುವಜನರ ಬಗೆಗೆ ಸಾಕ್ರಟೀಸ್ ಹೀಗೆ ಬರೆದ:

"ಸದ್ವರ್ತನೆ ಇಲ್ಲದವರು, ಆಳುವವರನ್ನು ತುಚ್ಛೀಕರಿಸುವವರು, ವಯಸ್ಸಾದವರ ಬಗೆಗೆ ಅಗೌರವ ತೋರುವವರು."

ಲೋಕವನ್ನೇ ಆಳಲು ಹೊರಟ ಆಂಗ್ಲರ ದ್ವೀಪದಲ್ಲೂ ವಿದ್ಯಾರ್ಥಿಗಳ ಗಲಭೆ ಇದ್ದಿತು. ೧೪೨೨ರಲ್ಲಿ ಹೌಸ್ ಆಫ್ ಕಾಮನ್ಸ್‌ಗೆ ಹೀಗೆ ವಿನಂತಿ ಮಾಡಲಾಯಿತು:

"ಕೊಲೆ, ನರಹತ್ಯೆ, ಅತ್ಯಾಚಾರ, ಕ್ರೌರ್ಯ, ದರೋಡೆ, ಪ್ರಕ್ಷೋಭೆ ಮತ್ತಿತರ ದುಷ್ಕೃತ್ಯಗಳು ಮತ್ತೆ ನಡೆದಿವೆ. ಆಕ್ಸ್‌ಫರ್ಡ್ ನಗರಕ್ಕೆ ಬಂದ ಬಗೆಬಗೆಯ ಜನರು ಇದನ್ನು ಮಾಡಿದ್ದಾರೆ. ಅಲ್ಲದೆ, ವಿಶ್ವವಿದ್ಯಾನಿಲಯದ ಅಧಿಕಾರ ಕ್ಷೇತ್ರದಲ್ಲಿ ವಾಸಿಸುವವರೂ ಈ ಕೃತ್ಯಗಳನ್ನು ಎಸಗಿದ್ದಾರೆ."

ಜರ್ಮನಿ ಮತ್ತಿತರ ರಾಷ್ಟ್ರಗಳಲ್ಲೂ ಇಂಥವೇ ಘಟನೆಗಳಾದುವು.

೧೮೪೮ರ ಫ್ರೆಂಚ್ ಕ್ರಾಂತಿಯಲ್ಲಿ ಯುವಜನರು ಪ್ರಮುಖ ಪಾತ್ರ ವಹಿಸಿದರು. ೧೮೭೧ರ ಪ್ಯಾರಿಸ್ ಕಮ್ಯೂನಿನಲ್ಲಿ ಬೇರೊಂದು ಪೀಳಿಗೆಯ ಯುವಕರು ಭಾಗಿಗಳಾದರು.

೧೯೦೫ರಲ್ಲಿ ರಷ್ಯದಾದ್ಯಂತ ಸಂಘಟಿತವಾದ ಮುಷ್ಕರದಲ್ಲಿ ವಿದ್ಯಾರ್ಥಿಗಳದೇ ಪಾತ್ರ. ಅನಂತರ ೧೯೧೭ರ ರಷ್ಯನ್ ಕ್ರಾಂತಿಯವರೆಗೂ ಎಲ್ಲ ಪ್ರಕ್ಷೋಭೆಗಳಲ್ಲೂ ವಿದ್ಯಾರ್ಥಿಗಳು ಭಾಗವಹಿಸಿದರು.

೧೯೦೦ – ೧೯೧೫ರ ಮಧ್ಯೆ ಅಧ್ಯಯನಕ್ಕೆಂದು ಚೀನದಿಂದ ಜಪಾನಿಗೆ ಹೋಗಿ ಮರಳಿದ ವಿದ್ಯಾರ್ಥಿಗಳು ಜ್ವಾಲಾಮುಖಿಗಳಾದರು. ಮಂಚೂ ರಾಜವಂಶದ ಪತನವಾದುದು ವಿದ್ಯಾರ್ಥಿಗಳ ಪ್ರದರ್ಶನದ ದೆಸೆಯಿಂದಲೇ.

ಲ್ಯಾಟಿನ್ ಅಮೆರಿಕದ ವಿವಿಧ ರಾಷ್ಟ್ರಗಳಲ್ಲಿ ಆಗಾಗ್ಗೆ ಆಗಿರುವ ಕ್ಷಿಪ್ರಕ್ರಾಂತಿಗಳಲ್ಲೆಲ್ಲ ವಿದ್ಯಾರ್ಥಿವೃಂದವೇ ಮುಂಚೂಣಿ.

೧೯೬೦ ರಲ್ಲಿ ದಕ್ಷಿಣ ಕೊರಿಯಾದಲ್ಲಿ ವಿದ್ಯಾರ್ಥಿಗಳ ಪ್ರಕ್ಷೋಭೆಯ ಕಾರಣದಿಂದ ಸರಕಾರ ಉರುಳಿತು. ಅದೇ ವರ್ಷ ಜಪಾನಿನಲ್ಲಿ ಯುವಜನರ ಗಲಭೆ ಕಿಷಿ ಸರಕಾರ ರಾಜಿನಾಮೆ ನೀಡಲು ಕಾರಣವಾಯಿತು.

೧೯೫೬ ರಲ್ಲಿ ಪೋಲೆಂಡ್ – ಹಂಗೆರಿಗಳಲ್ಲೂ ವಿದ್ಯಾರ್ಥಿವೃಂದ ಬೀದಿಗಿಳಿಯಿತು.

ಆಫ್ರಿಕ ಏಷ್ಯಾಗಳ ಬೇರೆ ಬೇರೆ ರಾಷ್ಟ್ರಗಳಲ್ಲಿ ವಿದ್ಯಾರ್ಥಿಗಳ ಮತಪ್ರದರ್ಶನಗಳು ವಿರಾಟ್ ರೂಪ ತಳೆದುವು. ಎರಡು ವರ್ಷಗಳ ಕೆಳಗೆ ಅಧ್ಯಕ್ಷ ಸುಕರ್ನೊ ವಿದ್ಯಾರ್ಥಿಗಳ ವಿರೋಧದಿಂದಾಗಿಯೇ ಗದ್ದುಗೆಯಿಂದ ಕೆಳಕ್ಕಿಳಿಯಬೇಕಾಯಿತು.

ಪ್ರಾಗ್, ವಾರ್ಸಾ, ಪ್ಯಾರಿಸ್, ಬೆಲ್‌ಗ್ರೇಡ್‌ಗಳದಂತೂ ಈ ವರ್ಷದ ಕತೆ.

—ಇತಿಹಾಸದುದ್ದಕ್ಕೆ ಇಣಿಕಿ ನೋಡಿದ ಮೇಲೂ ಆರಂಭದ ಪ್ರಶ್ನೆಗೆ ಮತ್ತೆ ಬರುತ್ತೇವೆ:

ಯುವಜನರಲ್ಲಿ ಕಂಡುಬರುತ್ತಿರುವ ಈ ಅಸಹನೆಗೆ ಏನು ಕಾರಣ?

* * * * *

ಕಳೆದ ಹತ್ತು ವರ್ಷಗಳಲ್ಲಿ ಫ್ರಾನ್ಸ್ ಆರ್ಥಿಕವಾಗಿ ಉಚ್ಛ್ರಾಯ ಸ್ಥಿತಿಗೆ ಏರಿತು. ಜೀವನ ಮಟ್ಟ ಹೆಚ್ಚಿತು. ಕಾಲು ಶತಮಾನದ ಹಿಂದೆ ಲೋಕದೆದುರಲ್ಲಿ ತಲೆಬಗ್ಗಿಸಬೇಕಾಗಿದ್ದ ಫ್ರೆಂಚ್ ಪ್ರಜೆ, ಎದೆಯುಬ್ಬಿಸಿ ಅಭಿಮಾನ ಅಹಂಕಾರಗಳಿಂದ ನಡೆಯುವ ಹಾಗಾಯಿತು. ಆದರೂ, ಹೊಸ ಪೀಳಿಗೆಯ ಎಳೆಯರಿಗೆ ಅಸಹನೆ. ಸಿರಿವಂತಿಕೆಯ ಭೋಗಸಾಮಗ್ರಿಗಳಿದ್ದರೂ ಯಾತರದೋ ಕೊರತೆಯ ಎದೆಕುದಿತ. ಅರಾಜಕತೆಗಾಗಿ ಹಾತೊರೆಯುವ ಪ್ರವೃತ್ತಿ. ಪ್ರತಿಮೆಗಳನ್ನು ನುಚ್ಚುನೂರು ಮಾಡಬೇಕು, ಪೀಠಸ್ಥಲಗಳನ್ನು ಅಲುಗಿಸಿ ಕಂದರಗಳಿಗೆ ಎಸೆಯಬೇಕು........

ಯಾಕಾಯಿತು ಇಂಥ ಪರಿಸ್ಥಿತಿಯ ನಿರ್ಮಾಣ?

ಫ್ರೆಂಚ್ ಮನೋವಿಜ್ಞಾನಿಯೊಬ್ಬರು ವ್ಯಕ್ತಪಡಿಸಿರುವ ಅಭಿಪ್ರಾಯ ಇದು:
“ಹಿಂಸಾಚರಣೆ ಯುವಕನ ಪಾಲಿಗೆ ವೀರ್ಯಸ್ಖಲನವಿದ್ದ ಹಾಗೆ.”

ಆದರೆ ಬಲ್ಲವರು ಬಲ್ಲರು: ಮೇಲಿನದು ಅತ್ಯಂತ ಜಟಿಲ ಪ್ರಶ್ನೆಗೆ ಬಹಳ ಸರಳ ಉತ್ತರ.

ಉತ್ಪಾದನೆ ನಿಂತು ಪ್ರತಿದಿನವೂ ಸುಮಾರು ನಾಲ್ವತ್ತೈದು ಕೋಟಿ ಡಾಲರುಗಳಷ್ಟು ಫ್ರಾನ್ಸಿನಲ್ಲಿ ನಷ್ಟವಾಗುತ್ತಿದೆ. ಹೀಗೆ ನಷ್ಟ ಅನುಭವಿಸಿಯೂ ತಮ್ಮ ರಾಷ್ಟ್ರಕ್ಕಾಗಿ ಪ್ಯಾರಿಸಿನ ಯುವಜನರು ಗಳಿಸುವುದೆಂಥ ಹೆಸರನ್ನು?

ಅಲ್ಲದೆ, ಈ ಕ್ಷೋಭೆ ಇಲ್ಲಿಗೇ ನಿಲ್ಲುತ್ತದೆ ಎಂಬ ಭರವಸೆ ಎಲ್ಲಿದೆ? ಈ ಕೆನ್ನಾಲಿಗೆ ದೂರ ದೂರದ ರಾಷ್ಟ್ರಗಳ ತನಕವೂ ಚಾಚುತ್ತದಲ್ಲ?

* * * * *

ಅಹಿಂಸೆ ಸತ್ಯಾಗ್ರಹಗಳಿಗಿದ್ದ ಗಾಂಧೀ ವ್ಯಾಖ್ಯೆ ಭಾರತದ ಈ ಪೀಳಿಗೆಯ ವಿದ್ಯಾರ್ಥಿಗಳ ಹಾಗೂ ಯುವಕರ ಮೇಲೆ ಪ್ರಭಾವ ಬೀರುವುದಿಲ್ಲ. ಇವರು ಗಾಂಧಿಯನ್ನು ಕಂಡವರಲ್ಲ; ತ್ಯಾಗ – ಸೇವೆಗಳ ಮಾತೆಲ್ಲ ಡಂಭಾಚಾರವೆಂಬುದು ಇವರ ಖಚಿತಾಭಿಪ್ರಾಯ.

ತೇಲುತ್ತಿರುವುದು ಅಶಾಂತ ಸಾಗರದಲ್ಲಿ. ಪಾತಾಳಗರಡಿಯನ್ನು ಇಳಿಬಿಟ್ಟರೂ ತಳ ಸಿಗದ ಆಳ. ಇಂಥದರಲ್ಲಿ ನೀರಿಗೆ ಧುಮುಕಿ ಈಸಿ ದ್ವೀಪಾಂತರವಾಸಿಗಳಾಗಲು ಯುವಜನರು ಆಶಿಸುತ್ತಾರೆ!

ನಮ್ಮ ದೇಶದಲ್ಲಂತೂ ಅವರ ಸಂಖ್ಯೆ ಅದೆಷ್ಟು ದೊಡ್ಡದು! ಪ್ರಥಮ ಪಂಚವಾರ್ಷಿಕ ಯೋಜನಾಂತ್ಯದಲ್ಲಿ ನಾಲ್ವತ್ತು ಲಕ್ಷ ನಿರುದ್ಯೋಗಿಗಳಿದ್ದರು. ತೃತೀಯ ಯೋಜನಾಂತ್ಯದಲ್ಲಿ ನಿರುದ್ಯೋಗಿಗಳ ಸಂಖ್ಯೆ ಒಂದು ಕೋಟಿಗೇರಿತು. ಈಗ ಯೋಜನೆಯಿಂದ ರಜೆ ಪಡೆದಿರುವ ಪ್ರತಿಯೊಂದು ದಿನವೂ ನಿರುದ್ಯೋಗಿಗಳ ಸೇನೆ ವಿಸ್ತಾರಗೊಳ್ಳುತ್ತಲೇ ಇದೆ!

ಸಮಾಜವನ್ನು ಮುನ್ನಡೆಸುವ ಹಿರಿಯರಿಗೂ ಯುವಕರಿಗೂ ಮಧ್ಯೆ ಎಷ್ಟೊಂದು ಆಳ ಅಗಲಗಳ ಕಂದಕ!

ಲೋಕದಾದ್ಯಂತ ಈ ಕಂದಕವನ್ನು ಮುಚ್ಚಬೇಕು, ಹೊಸ ಆದರ್ಶ ನಿಷ್ಠೆಗಳ ಗಾರೆಯಿಂದ. ಹರಿದ ಸೂತ್ರಪಟಕ್ಕೆ ದಾರ ಹೊಸೆಯಬೇಕು, ಹೊಚ್ಚ ಹೊಸ ಬದುಕಿನ ಅರಳೆಯಿಂದ.

೧೬-೬-೧೯೬೮

# ಹೊಸ ಸೋಟ, ಹೊಸ ದಾರಿ

ಒಂದು ಕಾರ್ಡು. ಅದು ಬಿನ್ನಹ ಪತ್ರ. ಇಂಥ ದಿನ ಇಂಥ ಕಡೆ ಕೈಲಾಸಂ ಅವರ 'ಸೂಳೆ' ನಾಟಕವನ್ನು ಆಡುತ್ತೇವೆ; ನಾಟಕ ನೋಡಲು ಇಷ್ಟಪಡುವುದಾದರೆ ದಯವಿಟ್ಟು ತಿಳಿಸಿ; ತಮಗೆ ಬೇಕಾದ ಟಿಕೆಟನ್ನು ತಮ್ಮ ಮನೆಗೆ ಬಂದು ತಲಪಿಸುತ್ತೇವೆ........

ಬೆಂಗಳೂರಿನಂಥ ದೊಡ್ಡ ನಗರದಲ್ಲಿ ನಾಟಕ ನೋಡುವ ಚಟ ಇರುವವರು ಯಾರು, ಯಾರು? ಅಸೋಸಿಯೇಟೆಡ್ ಅಮೆಚೂರ್ ಆರ್ಟಿಸ್ಟ್ ತಂಡದವರು ಕಷ್ಟಪಟ್ಟು, ವಿವಿಧ ನಾಟ್ಯವಿಲಾಸಿ ಸಂಘಗಳ ನೆರವನ್ನೂ ಪಡೆದು ೭೦೦ ವಿಳಾಸಗಳನ್ನು ಕಲೆ ಹಾಕಿದರು. ಏರಿಸಿದ ಅಂಚೆ ದರ ತೆತ್ತು ಕೆಂಪು ಡಬ್ಬದಲ್ಲಿ ಅಷ್ಟು ಕಾರ್ಡುಗಳನ್ನು ತುಂಬಿದರು.

ಇದು ಹೊಸದಾದ – ಆದರೆ ಶಾಸ್ತ್ರೀಯವಾದ – ವಿಧಾನ. ಉತ್ತರಗಳು ಬಂದೇ ಬರುತ್ತವೆಂಬ ಆತ್ಮವಿಶ್ವಾಸದಿಂದ ಕಾದು ಕುಳಿತರು.

ಉತ್ತರಗಳು ಬಂದುವು. ಒಟ್ಟು ಎರಡು. ಏಳುನೂರು ಕಾಗದಗಳಿಗೆ ಪ್ರತಿಯಾಗಿ ದೊರೆತ ಉತ್ತರ ಎರಡು!

ಉಗುಳು ನುಂಗಿಕೊಂಡು ತ್ರೀ–ಎ ಕಲಾವಿದರು (ಅಸೋಸಿಯೇಟೆಡ್ ಅಮೆಚೂರ್ ಆರ್ಟಿಸ್ಟ್ಸ) ತಮ್ಮ ನಾಟಕವನ್ನು ಆಡಿದರು. ರವೀಂದ್ರ ಕಲಾಕ್ಷೇತ್ರದ ಸಭಾಭವನ ತಕ್ಕಮಟ್ಟಿಗೆ ತುಂಬಿತ್ತು.

* * * * *

ತ್ರೀ–ಎ ಬೆಂಗಳೂರಿನ ಹೊಚ್ಚ ಹೊಸ ನಾಟ್ಯವಿಲಾಸಿ ಸಂಘ. ಇದರ ಮುಖ್ಯ ವ್ಯಕ್ತಿ ಎಂಜಿನಿಯರಿಂಗ್ ಪದವೀಧರ, ಯುವಕ ಹಿರಣ್ಣಯ್ಯ. ಇವರು ಎಚ್.ಕೆ.ಎಸ್. ಮೂರ್ತಿ ಮತ್ತಿತರ ಮಿತ್ರರೊಡನೆ ಬೆನ್ನಟ್ಟಿರುವುದು ಮಿಸುನಿ ಜಿಂಕೆಯನ್ನು. ಅಥವಾ ಹುಲಿಯ ಬೆನ್ನಮೇಲೆ ಇವರ ಸವಾರಿ ಎಂದರೂ ಸರಿಯೆ. ತಮ್ಮ ಪ್ರಯೋಗಗಳಿಗೆ ಸಂಬಂಧಿಸಿದ ಪ್ರತಿಯೊಂದರಲ್ಲೂ ಪರಿಪೂರ್ಣತೆಯ ಸಾಧನೆಯೆ ಇವರ ಗುರಿ.

ಇವರೆಲ್ಲ ನಾಟ್ಯಶಾಸ್ತ್ರದ ನಿಷ್ಠುರ ಅಭ್ಯಾಸಿಗಳು. ಇಂಥವೇ ಪ್ರವೃತ್ತಿಯ ನಾಟಕಗಳನ್ನಾಡಬೇಕು, ಈ ಮತದವರೇ ಬರೆದಿರಬೇಕು ಎಂಬ ಪೂರ್ವಾಗ್ರಹಗಳಿಂದ ಇವರು ದೂಷಿತರಲ್ಲ. ಬಯಸುವುದು ಒಳ್ಳೆಯ ನಾಟಕವನ್ನು, ಮಾಡಲಿಚ್ಛಿಸುವುದು ಅದರ ಅತ್ಯಂತ ಸಮರ್ಪಕ ಅಭಿನಯವನ್ನು.

ನಾಟಕಪ್ರಿಯರಿಗೆ – ಪ್ರೇಕ್ಷಕರಿಗೆ ಮೆಚ್ಚುಗೆಯಾಯಿತೆಂದರೆ ಇವರು ಧನ್ಯರು.

* * * * *

ಗುರುಗಳಿಲ್ಲದೆಯೆ ಗಳಿಸಿದ ನಾಟ್ಯಶಾಸ್ತ್ರದ ಅರಿವನ್ನು ಇವರು ಬಳಸುವುದು ಹೀಗೆ:

ಅಭಿನಯಕ್ಕೆಂದು ಒಂದು ನಾಟಕವನ್ನು ಆರಿಸಿಕೊಳ್ಳುವುದು, ಧ್ವನಿ ಅಭ್ಯಾಸ ನಡೆಸುವುದು, ಕೈಗೆತ್ತಿಕೊಂಡ ನಾಟಕವನ್ನು ಸಾಮೂಹಿಕವಾಗಿ ಓದಿ ಚರ್ಚಿಸುವುದು; ಅಗತ್ಯಬಿದ್ದರೆ ಮೂಲಕೃತಿಯನ್ನು ಅಲ್ಲಲ್ಲಿ ಕತ್ತರಿ ಪ್ರಯೋಗಕ್ಕೆ ಗುರಿ ಮಾಡುವುದು; ಪಾತ್ರಗಳನ್ನು ಹಂಚುವುದು; ಉಚ್ಚಾರದಲ್ಲಿ ತೊಡಕುಂಟುಮಾಡುವ ಪದಗಳನ್ನು ಬದಲಾಯಿಸುವುದು; ರಂಗಭೂಮಿಯ ಮೇಲಣ ಅಭಿನಯಕ್ಕೆ ಸಂಬಂಧಿಸಿ ಆಗ ಬೇಕಾದ ಸಿದ್ಧತೆಯನ್ನು ಗುರುತು ಮಾಡಿಕೊಳ್ಳುವುದು; ಬಳಿಕ ಪ್ರತಿದಿನವೂ ರಿಹರ್ಸಲ್.

(ಕೈಲಾಸಂ 'ಸೂಳೆ' ಈ ಬಗೆಯಾಗಿ ಸಿದ್ಧವಾದಳು.)

ತ್ರೀ–ಎ ಕಲಾವಿದರಿಗೆ ಮಂತ್ರಿಗಳು ಬೇಡ, ಪ್ರತಿಷ್ಠಿತರು ಬೇಡ; ಭಾಷಣಗಳ ಗೊಂದಲಕ್ಕೆ ಇವರು ಹೋಗರು, ಹಾರ ತುರಾಯಿಗಳಿಗೂ ಸ್ಥಾನವಿಲ್ಲ.

* * * * *

'ಸೂಳೆ' ಕೈಲಾಸಂರ ಶ್ರೇಷ್ಠ ನಾಟಕ, ವಸ್ತುವಿನ ದೃಷ್ಟಿಯಿಂದ. ಆದರೆ ಅಲ್ಲಲ್ಲಿ ಇರುವ ದೀರ್ಘ ಚರ್ಚೆಗಳೂ ಪ್ರತಿಪಾದನೆಗಳೂ ನಾಟ್ಯವಿಲಾಸಿಗಳ ಪಾಲಿಗೆ ಭಯ ಹುಟ್ಟಿಸುವಂಥವು.

ಸುದೀರ್ಘ ನಾಟಕವನ್ನು ಆಧುನಿಕ ಅಭಿನಯಕ್ಕೆ ಸರಿಹೋಗುವಂತೆ ಹಿರಣ್ಣಯ್ಯ ಮತ್ತು ಮಿತ್ರರು ತುಸು ಕುಗ್ಗಿಸಿದರು.

ಅಭಿನಯದ ದಿನ ಪ್ರೇಕ್ಷಕರಾಗಿ ಬಂದವರಿಗೆಲ್ಲ ಒಂದೊಂದು ಪುಸ್ತಿಕೆಯನ್ನು ನೀಡಿದರು, ಉಚಿತವಾಗಿ. ಪುಸ್ತಕದಲ್ಲಿದ್ದುದು: ಕಾರ್ಯಕ್ರಮದ ಹಾಗೂ ಸಂಘದ ಪರಿಚಯ; ಮದರಾಸು ಸಾಹಿತ್ಯ ಸಮ್ಮೇಳನದಲ್ಲಿ ಕೈಲಾಸಂ ಮಾಡಿದ ಅಧ್ಯಕ್ಷ ಭಾಷಣದಿಂದ ಉಲ್ಲೇಖಗಳು; ಕೈ ತೀರಿಕೊಂಡ ಸಂದರ್ಭದಲ್ಲಿ ಹರೀಂದ್ರನಾಥ ಚಟ್ಟೋಪಾಧ್ಯಾಯರು ಬರೆದ ಲೇಖನ; ಗುಂಡೂ ಭಂಡಾರ – ಕೈಲಾಸಂರ ಎಲ್ಲ ಕೃತಿಗಳ ಪಟ್ಟಿ, ನಾಟಕ ವಿಮರ್ಶೆ ಹಾಗೂ ಪ್ರೇಕ್ಷಕರ ಬಗೆಗೆ ಎರಡು ಲೇಖನಗಳು; ಕೊನೆಯದಾಗಿ ಒಂದು ಪ್ರಶ್ನಾವಳಿ.

* * * * *

ಪ್ರಶ್ನಾವಳಿ ತ್ರೀ–ಎ ನಾಟ್ಯವಿಲಾಸಿಗಳು ಏರ್ಪಡಿಸಲು ಇಚ್ಛಿಸಿರುವ ಅಭಿಮತ ಸಂಗ್ರಹಕ್ಕೆ ಸಂಬಂಧಿಸಿದ್ದು. ಅವರು ಕೇಳುವ ಪ್ರಶ್ನೆಗಳಲ್ಲಿ ಕೆಲವನ್ನು ಉದಾಹರಿಸಬಹುದು:

ನಿಮಗೆ ನಾಟಕ ನೋಡುವ ಚಟವಿದೆಯೆ? ಇದ್ದರೆ, ವರ್ಷಕ್ಕೆ ಎಷ್ಟು ನಾಟಕ

ನೋಡುತ್ತೀರಿ? ನಾಟಕಕ್ಕೆ ಹೋಗುವಂತೆ ನಿಮ್ಮನ್ನು ಪ್ರೇರೇಪಿಸುವುದು ಯಾವುದು? ತಿಂಗಳಲ್ಲಿ ಯಾವ ವಾರ ನಾಟಕ ನೋಡಲು ಅನುಕೂಲ? ನಾಟಕದ ವೇಳೆ ಎಷ್ಟಿರಬೇಕು? ನೀವು ಯಾವುದನ್ನು ಇಷ್ಟಪಡುತ್ತೀರಿ? – ದುಃಖಾಂತ ನಾಟಕವನ್ನೊ? ಪ್ರಹಸನವನ್ನೊ? ಸಾಮಾಜಿಕವನ್ನೊ? ಪೌರಾಣಿಕವನ್ನೊ?....ಈಗಿನ ರಂಗಭೂಮಿ ಚಟುವಟಿಕೆಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು? ನಿಮ್ಮ ಸಲಹೆಗಳೇನು?

ಈ ಅಭಿಮತ ಸಂಗ್ರಹದ ಉದ್ದೇಶ ಸ್ಪಷ್ಟ. ಈ ಗೆಳೆಯರು ಬೆಳಕನ್ನು ಹುಡುಕುತ್ತ ಇರುಳಲ್ಲಿ ಅಲೆದಾಡುತ್ತಿದ್ದಾರೆ.

* * * * *

ನಾಟಕವೆನ್ನುವ ದೃಷ್ಟಿಯಿಂದ 'ಸೂಳೆ' ಅದ್ಭುತವಾಗಿತ್ತು. ಮುಖ್ಯ ಪಾತ್ರದಲ್ಲಿ ಶಾರದಾ, ಸುಬ್ಬುವಾಗಿ ರಂಗನಾಥ್ ಸ್ಮರಣೀಯ ಅಭಿನಯ ನೀಡಿದರು. ಮೊದಲನೆಯ ದಿನ ಪ್ರೇಕ್ಷಕರ (ಲ್ಲಿ ಕೆಲವರ) ಅಪಹಾಸ್ಯದ ಮಾತುಗಳಿಂದ ಕಲಾವಿದರು ಅಧೀರರಾದರೂ, ಎರಡನೆಯ ದಿನ ಆ ತೊಡಕಿಲ್ಲದೆ ನಾಟಕ ಕಳೆಕಟ್ಟಿತು.

ಒಂದೂವರೆ ತಿಂಗಳ ಪರಿಶ್ರಮದ ಫಲವಾಗಿ ಇವರಿಗೆ ಏನು ದೊರೆಯಿತು? ದೊರೆತದ್ದು ಒಂದೇ ಒಂದು – ಅಪಾರ ಅನುಭವ ಸಂಪತ್ತು.

ಇದನ್ನೇ ಬಂಡವಾಳವಾಗಿಟ್ಟು, ಮುಂದುವರಿಯುವ ಆಸೆ ಅವರಿಗೆ.

ಮುಂದಿನ ಬಾರಿ ೭೦೦ ಜನರಿಗೆ ಬಿನ್ನಹ ಕಳುಹಿದಾಗ ೭೦ ಜನರಾದರೂ 'ಬರುತ್ತೇವೆ' ಎಂದರೆ, ತ್ರೀ–ಎ ಕಲಾವಿದರು ಗೆದ್ದಂತೆಯೇ.

೭–೭–೧೯೬೮

# ಗೋರಾ ದೀವಟಿಗೆ

ಮಂಗಳವೇಢೆ ಶ್ರೀನಿವಾಸರಾಯರು ಕರ್ನಾಟಕದ ಅಪರೂಪ ವ್ಯಕ್ತಿ. ಚಿಂತನಶೀಲರಾಗಿ, ಅಂತರ್ಮುಖಿಯಾಗಿ, ಏಕಾಂತವನ್ನು ಬಯಸಬೇಕಾದ ವಯಸ್ಸು. ಆದರೆ ಈ ಪ್ರವೃತ್ತಿ ಕಡುಗಲಿ ಮಂಗಳವೇಢೆಯವರ ಜಾಯಮಾನದಲ್ಲೇ ಇಲ್ಲ. ಅವರ ಸ್ಥಾನ ಕಣಕ್ಕೆ ಸಮೀಪವಾಗಿ. ಉತ್ಸಾಹ ಪುಟಿದಾಗ ಎದ್ದುನಿಂತು ಬೇಲಿ ಹರಿದು ಒಳಕ್ಕೆ ನುಗ್ಗಿದರೂ ನುಗ್ಗಿದರೇ. ಕನ್ನಡ – ಕರ್ನಾಟಕ ಅವರ ಜೀವನದ ಉಸಿರು. ಸತ್ಯ, ನ್ಯಾಯ ಅವರ ಬೊಕ್ಕಸದಲ್ಲಿನ್ನೂ ಹೇರಳವಾಗಿ ಇರುವ ಸವೆಯದ ನಾಣ್ಯಗಳು.

ಫೋನ್ ಮಾಡಿ ಅವರೆಂದರು :

"ನೀವು ಗೋರಾರನ್ನು ಕಾಣಲೇಬೇಕು."

ಸುಂಟರಗಾಳಿಯಂತೆ ಬಂದು ನಮ್ಮ ರಾಜಧಾನಿಯನ್ನು ದಂಗುಬಡಿಸಿದ ವ್ಯಕ್ತಿ ಗೋರಾ. ಆ ಚಿತ್ರದ ಕಲ್ಪನೆಯೇ ರಮ್ಯವಾಗಿರುವಾಗ, ಸ್ವತಃ ಆ ಗಾಳಿಗೆ ಮೈಯೊಡ್ಡುವ ಮನಸ್ಸಿಲ್ಲ ಬರೆಹಗಾರನಿಗೆ.

ಅದೂ ಇದೂ ಹೇಳಿ, "ಒಬ್ಬ ದೊಡ್ಡ ವ್ಯಕ್ತಿ ಇನ್ನೊಬ್ಬ ದೊಡ್ಡ ವ್ಯಕ್ತಿಯ ಬಗೆಗೆ ಬರೆವಂತಾಗುತ್ತದೆ. ದಯವಿಟ್ಟು ನೀವೇ ಗೋರಾರ ಬಗ್ಗೆ ಲೇಖನ ಬರೆದುಕೊಡಿ," ಎಂದೆ.

ಇಂಥವಕ್ಕೆಲ್ಲ ಮನಸೋಲುವವರೆ ಮಂಗಳವೇಢೆ?

"ನೀವು ಅವರನ್ನು ಕಾಣಬೇಕು," ಎಂದರು, ನೀವು ಪದದ ಧ್ವನಿಯನ್ನು ಬಲಪಡಿಸಿ.

ತಲೆ ಬಾಗಿದೆ.

* * * * *

ಪ್ರತಿಭಾವಂತ ವಿದ್ಯಾರ್ಥಿಗಳನ್ನು ನಿರ್ಮಿಸುವ ಡಾ. ನರಸಿಂಹಯ್ಯನವರ ಕರ್ಮಾಗಾರದ ವಸತಿಗೃಹದ ಒಂದು ಕೊಠಡಿ. ಬರಿ ಚಾಪೆಯ ಮೇಲೆ ಕುಳಿತ ಅರುವತ್ತಾರರ ಗೋರಾ.

ಆಶ್ರಮವಾಸ ಹೊಸದೆ ಈ ದೇಶಕ್ಕೆ? ಈ ಶತಮಾನದಲ್ಲೂ ಇಂಥಾದು ಇತ್ತು ; ಗಾಂಧಿ ಎಂಬ ಹೆಸರಿನ ಮಹಾತ್ಮರು ಗುಡಿಸಲಿನಲ್ಲಿ ನೆಲೆಸುತ್ತಿದ್ದರು; ಅಲ್ಲಿಗೆ ರಾಷ್ಟ್ರದ ನಾಯಕಮಣಿಗಳು ವಿನೀತರಾಗಿ ಹೋಗಿ ನೆಲದ ಮೇಲೆ ಕುಳಿತುಕೊಳ್ಳುತ್ತಿದ್ದರು –

ಎಂದೆಲ್ಲ ಆಗೊಮ್ಮೆ ಈಗೊಮ್ಮೆ ಯಾರಾದರೂ ಹಳೆಯ ಕಥೆ ಹೇಳುತ್ತಾರಷ್ಟೆ. ಗೋರಾರು ಆಸೀನರಾಗಿದ್ದ ಸ್ಥಳವನ್ನು ಕಂಡಾಗ ಆ ಕಥೆಯ ನೆನಪು ಕಾಡಿ ತುಸು ಸಂಕಟವಾಯಿತು. ನನ್ನಷ್ಟಕ್ಕೆ ನಗೆಯೂ ಬಂತು.

ಗೋರಾ ಮಾತನಾಡಿದರು. ಮಾತಿನ ಉಸಿರು ತಗಲಿದೊಡನೆ ಸಿಗಿಸಿಗಿ ಪ್ರಜ್ವಲಿಸತೊಡಗಿದ ಒಂಟಿಕೆಂಡ. ಮತಪ್ರಸಾರಕರ ಆವೇಶ. ಮಾತಿನಲ್ಲಿ ಯಾವ ಪದವೂ ವ್ಯರ್ಥವಾಗುವಂತಿಲ್ಲ. ಉದ್ದಕ್ಕೂ ಒಲಿಸಿಕೊಳ್ಳುವ ಧಾಟಿ.

ಅವರೊಡನೆ ಕಳೆದ ಅರುವತ್ತು ನಿಮಿಷಗಳಲ್ಲಿ ವಿದ್ಯುತ್ತು ಸಾಕಷ್ಟು ಪ್ರವಹಿಸಿತ್ತು.

* * * * *

ಕೋಪಾವಿಷ್ಟನಾದ ವೃದ್ಧ. ವೃದ್ಧ ಎನ್ನುವುದು ಲೋಕರೂಢಿ. ಪ್ರಾಯಶಃ ಅರ್ಥವಿಲ್ಲದ ಮಾತು. ಹದಿನೆಂಟರ ಹರೆಯವನ್ನೂ ನಾಚಿಸಬಲ್ಲ ಸಮರ್ಥ ಗೋರಾ.

ಸಿಟ್ಟು ಯಾರ ಮೇಲೆ ? ಯಾಕೆ ?

ದೇಶದ ಸಮಾಜದ ಈಗಿನ ಇರುವಿಕೆಯನ್ನು ಕಂಡು ಅವರಿಗೆ ವ್ಯಥೆ. ಇದರಲ್ಲೂ ಅವರು ಕನಸು ಕಂಡಿದ್ದ ಸ್ವತಂತ್ರ ಭಾರತ. ಹೀಗಾಗಬಾರದಿತ್ತು........

'ಪ್ರವಾಹಕ್ಕಿದಿರು ನೀವು ಹೋಗುತ್ತಿದ್ದೀರಿ–'

ಇದ್ದೀತು; ಹಾಗೆ ಹೋಗುವ ಸಾಮರ್ಥ್ಯ ತಮಗಿದೆ–ಎಂಬುದು ಗೋರಾರ ನಂಬಿಕೆ.

ಘೋಷಣೆಗಳ ಜಗತ್ತಿನಲ್ಲಿ ಅವರೂ ಒಂದು ಘೋಷವನ್ನು ಆಣಿಗೊಳಿಸಿದ್ದಾರೆ.

"ಮಂತ್ರಿ ನೌಕರ; ಪ್ರಜೆ ಯಜಮಾನ."

ಬಡ ಮತದಾರನ ಕಿವಿಗೆ ಬಹಳ ಇಂಪಾದ ಮಾತು. ಕೆಲವರಿಗೆ ಇದು ಕರ್ಣ ಕಠೋರವೆನಿಸಲೂ ಬಹುದು. ಅಂಥವರಿಗೆ ಅದು ಚಿತ್ತವೇಧಕವೂ ಆಗಲೆಂದು ಮತ್ತಷ್ಟು ತೀವ್ರವಾಗಿ ಗೋರಾ ಭೇರಿ ಬಾರಿಸುತ್ತಾರೆ: "ಮಂತ್ರಿ ನೌಕರ; ಪ್ರಜೆ ಯಜಮಾನ!"

ಎಲ್ಲ ಅನ್ಯಾಯಗಳ ವಿರುದ್ಧ ಹೋರಾಡಬೇಕು. ದಂಡೀಯಾತ್ರೆಯಲ್ಲಿ ಉಪ್ಪು ಸಮರಸಂಕೇತವಾದಂತೆ, ಈಗ ಹೂವಿನ ಗಿಡಗಳನ್ನು ಎಳೆದು ಹಾಕಿ ಆ ಸ್ಥಳದಲ್ಲಿ ತರಕಾರಿಯ ಸಸಿ ನೆಡಬೇಕು. ['ಹುಬ್ಬುಗಳು ಗಂಟಿಕ್ಕುತ್ತವೆ. ತುಟಿಗಳ ಮೇಲೆ ಪರಿಹಾಸ್ಯ ಲಾಸ್ಯವಾಡುತ್ತದೆ.']

ಆಂಧ್ರದ ಮುಖ್ಯ ಮಂತ್ರಿ ಬ್ರಹ್ಮಾನಂದರೆಡ್ಡಿಯವರ ನಿವಾಸದಲ್ಲಿ ಹೊಸ ಹೋರಾಟವನ್ನು ಗೋರಾ ನಡೆಸಿದರು. ಸೆರೆಮನೆಯ ರುಚಿ ಅನುಭವಿಸಿ ಬಂದರು.

ಹಿಂಬಾಲಕರು ?

"ವಿದ್ಯಾರ್ಥಿಗಳು ತಮ್ಮ ಅಧ್ಯಯನದ ಒಂದೆರಡು ವರ್ಷಗಳನ್ನು ತಮಗೆ ದಾನ ಮಾಡಬೇಕು, ತಮ್ಮ ಜೊತೆ ಬರಬೇಕು."

ಗೋರಾ ಸೇನೆ? ಯಾಕಾಗಬಾರದು? ಇದು ಮನೆ ಮುರಿಯುವುದಕ್ಕಲ್ಲ, ಕಟ್ಟುವುದಕ್ಕೆ.

* * * * *

ಈ ಪ್ರಜಾಪ್ರಭುತ್ವ ವ್ಯವಸ್ಥೆ ಭಾರತಕ್ಕೆ ಸರಿಹೋಗುವುದಿಲ್ಲ. ಭಾಷಾವಾರು ರಾಜ್ಯಗಳನ್ನು ರಚಿಸಲೇ ಬಾರದಿತ್ತು.

ಮುಂದೆ ?

ಪಕ್ಷಗಳಿಲ್ಲದ ಪ್ರಜಾಪ್ರಭುತ್ವ ಸ್ಥಾಪನೆಗೆ ಪ್ರಯತ್ನಿಸಬೇಕು. ಜನರ ಮನ ಒಲಿಸಬೇಕು. ಆ ಸಂಬಂಧದ ಸಮ್ಮೇಳನವೊಂದನ್ನು ಬೆಂಗಳೂರಿನಲ್ಲಿ ಕರೆಯಬೇಕು.

'ನೀವು ಹೇಳುವುದು ಸರಿ' ಎನ್ನುತ್ತಾರೆ ಎಲ್ಲರೂ; ಆದರೆ ಕ್ರಿಯಾತ್ಮಕವಾಗಿ ಕಿರುಬೆರಳೆತ್ತುವುದಿಲ್ಲ. ಗೋರಾರಿಗೆ ಈ ಬಗ್ಗೆ ವ್ಯಥೆ.

ವಿನೋಬಾಜಿಯ — ಸರ್ವೋದಯವಾದಿಗಳ — ನಿಲುವು ರಾಜಕೀಯವಲ್ಲ; ಇದಕ್ಕಾಗಿಯೇ ಆ ಚಳುವಳಿ ದುರ್ಬಲ — ಎನ್ನುತ್ತಾರೆ ಗೋರಾ.

'ಹುತಾತ್ಮರಾಗುವುದು ನಿಮಗಿಷ್ಟವೆ?'

ಆ ಮಾತು ಕೇಳಿ ಕಣ್ಣುಗಳಲ್ಲಿ ಬೆಳಕು ಮಿಂಚುತ್ತದೆ.

* * * * *

ಗೋರಾ ಅಸಾಧಾರಣ ವ್ಯಕ್ತಿ. ಬೆಂಕಿಯೂ ಇವರದು, ಸುಂಟರಗಾಳಿಯೂ ಇವರದು. ಒಮ್ಮೊಮ್ಮೆ ಸೊಡರಿಗೆ ಗಾಳಿಯನ್ನು ಇದಿರಿಸುವ ಶಕ್ತಿ ಇರುವುದಿಲ್ಲ. ಆರಿಹೋಗಲೂ ಬಹುದು. ಒಮ್ಮೊಮ್ಮೆ ಗಾಳಿ ಅದನ್ನು ಬಡಬಾನಲವಾಗಿ ಮಾಡಲೂ ಬಹುದು.

ಆ ಅರಿವಿದ್ದರೂ ಸೊಡರು ನಗುತ್ತದೆ.

೨೮–೭–೧೯೬೮

# ಶತಾಯು ಪತ್ರಿಕಾ

ನೂರು ವರ್ಷಗಳಿಗೆ ಹಿಂದಿನ ಮಾತು. ಬಂಗಾಳದ ಒಂದು ಕುಗ್ರಾಮ. ಅದರ ನಿಜ ನಾಮಧೇಯವನ್ನು ಜನ ಮರೆತು ಒಂದು ಶತಮಾನಕ್ಕೂ ಮೇಲಾಯಿತೆಂದ ಬಳಿಕ ಆ ಹೆಸರನ್ನು ಹೇಳುವ ಅಗತ್ಯವಾದರೂ ಏನು ? ಭಾರತದ ಸಹಸ್ರ ಸಹಸ್ರ ಹಳ್ಳಿಗಳಲ್ಲಿ ಅದೂ ಒಂದು.

ಅಲ್ಲಿನ ಪ್ರಮುಖ ನಿವಾಸಿಗಳು ಶಿಶಿರಬಾಬು ಸೋದರರು. ಸ್ಥಿತಿವಂತರು, ವಿದ್ಯಾವಂತರು. ಅವರ ತಾಯಿ ಅಮೃತಮಯಿ. ದೊಡ್ಡ ಜೀವ.

ಆಂಗ್ಲರು ದೇಶವನ್ನು ಹಿಂಡಿ ಹಿಪ್ಪೆಮಾಡುತ್ತಿದ್ದ ಕಾಲ. ಇದು ಸಾವೂ ಅಲ್ಲ ಬದುಕೂ ಅಲ್ಲ ಎನ್ನುವಂತೆ ಅಸಹಾಯ ಜನ ದಿನ ಕಳೆಯುತ್ತಿದ್ದರು. 'ಸಿಪಾಯಿ ದಂಗೆ' ವಿಫಲವಾಗಿತ್ತು. ಈ ದೇಶ ಇನ್ನು ಚೇತರಿಸಿಕೊಳ್ಳುವುದು ಸಾಧ್ಯವೇ ಇಲ್ಲ ವೇನೋ ಎನ್ನುವ ನಿರಾಶಾಭಾವನೆ ಮನೆಮಾಡಿತ್ತು.

ವಿಚಾರಿಗಳೂ ಸ್ವಾಭಿಮಾನಿಗಳೂ ದೇಶಪ್ರೇಮಿಗಳೂ ಆಗಿದ್ದ ಶಿಶಿರಬಾಬು ಸೋದರರಿಗೆ, ಗ್ರಾಮೀಣ ಜನರಲ್ಲಿ ಜಾಗೃತಿ ಉಂಟುಮಾಡಬೇಕೆಂಬ ಹಂಬಲ. ಶುಚಿತ್ವ, ಸಾಕ್ಷರತೆ, ಸ್ವಾವಲಂಬನ ಹೀಗೆ ಹಲವು ಪಾಠಗಳನ್ನು ಅವರು ಕಲಿಸಿದರು. ಆಡಿ ಅಲ್ಲ, ಮಾಡಿ. ಊರಿಗಿದ್ದುದು ವಾರಕ್ಕೊಂದು ಸಂತೆ. ನಡುವೆ ಯಾವ ವಸ್ತುವಿನ ಅಭಾವ ಉಂಟಾದರೂ ಆ ದಿನಕ್ಕಾಗಿ ಕಾಯಬೇಕು. ಜೀವನಾವಶ್ಯಕ ವಸ್ತುಗಳು ಯಾವಾಗಲೂ ದೊರೆಯುವ ಬಜಾರ್ ಒಂದನ್ನು ಶಿಶಿರಬಾಬು ಏರ್ಪಡಿಸಿದರು. ಅದಕ್ಕೆ ತಮ್ಮ ತಾಯಿಯ ಹೆಸರಿಟ್ಟರು. ಸುತ್ತುಮುತ್ತಣ ಹತ್ತಿಪ್ಪತ್ತು ಹಳ್ಳಿಗಳ ಜನ ಅಲ್ಲಿಗೆ ಬರತೊಡಗಿದರು.

"ಎಲ್ಲಿಗೆ ಹೋಗಿದ್ದೆ ?"

"ಅಮೃತ ಬಜಾರಿಗೆ."

ಅಂಚೆಯ ಮನೆ ಬಂತು. ಅದನ್ನು 'ಅಮೃತ ಬಜಾರ್ ಅಂಚೆ ಮನೆ' ಎಂದರು. ಸಮೀಪದಲ್ಲಿ ರೈಲು ನಿಲ್ದಾಣ ಬಂತು. 'ಅಮೃತ ಬಜಾರ್ ರೋಡ್', ಎಂದರು.

ಶಿಶಿರಬಾಬುಗಳಿಗೆ ಅನಿಸಿತು, ಜನರಿಗೆ ತಿಳಿಯ ಹೇಳುವ ಪತ್ರಿಕೆಯೊಂದು ಬೇಕು ಎಂದು.

ಬಂಗಾಳಿಯಲ್ಲಿ ಅಂಥದೊಂದು ಪತ್ರಿಕೆಯನ್ನು ಅವರೇ ಹೊರಡಿಸಿದರು. ಹೆಸರು : ‘ ಅಮೃತ ಬಜಾರ್ ಪತ್ರಿಕಾ ’.

* * * * *

ಮೂವತ್ತೊಂದು ರೂಪಾಯಿ ತೆತ್ತು ತಂದ ಮರದ ಮುದ್ರಣ ಯಂತ್ರ, ತಾವೇ ಸಿದ್ಧಗೊಳಿಸಿದ ಮೊಳೆಗಳು, ಮಸಿ, ಕಾಗದದ ಮೇಲೆ ಬರೆಯುವ ವ್ಯವಧಾನ ಇಲ್ಲದಾಗ ಶಿಶಿರಬಾಬು, ಲೇಖನವನ್ನು ಮನಸ್ಸಿನಲ್ಲೇ ಯೋಚಿಸಿ ವಾಕ್ಯಗಳನ್ನು ರಚಿಸಿ ಮೊಳೆ ಜೋಡಿಸುತ್ತಿದ್ದರು; ಅಥವಾ, ಮೊಳೆಗಳನ್ನು ಜೋಡಿಸುತ್ತ ಜೋಡಿಸುತ್ತ ವಾಕ್ಯಗಳನ್ನು ರೂಪಿಸುತ್ತಿದ್ದರು. ಮುದ್ರಣಗೊಳ್ಳುತ್ತಿದ್ದ ಪ್ರತಿಗಳು ಐದುನೂರು.

ಇಂಥ ಸಾಹಸಕ್ಕೆ ಕೈ ಇಕ್ಕಿದವರಿಗೆ ಬಡತನ ಕಟ್ಟಿಟ್ಟದ್ದೇ. ಸತ್ಯ ನ್ಯಾಯಗಳ ಪಕ್ಷಪಾತಿಯಾದ ಪತ್ರಿಕಾಕರ್ತ ಕಣ್ಣೀರಿನ ಅನ್ನವನ್ನೇ ಉಣ್ಣಬೇಕು. ಶಿಶಿರಕಾಂತಿ ಘೋಷರ ಸಂಸಾರ ಎಲ್ಲವನ್ನೂ ಕಳೆದುಕೊಂಡು ಮಹಾ ನಗರಿಯಾದ ಕಲ್ಕತ್ತೆಗೆ ವಲಸೆ ಬಂದಿತು. ಆದರೆ ಒಂದು ಮಾತ್ರ ಅವರಲ್ಲಿ ಅಕ್ಷಯವಾಗಿತ್ತು. ಅದು ಕನಸು, ಸುಂದರ ಕನಸು.

* * * * *

ಪ್ರತಿಷ್ಠಿತರಿಬ್ಬರ ನಡುವೆ ಆರ್ಥಿಕ ವ್ಯವಹಾರವೊಂದು ಕುದುರಲು ಶಿಶಿರಬಾಬು ಕಾರಣರಾದರು. ಅವರಲ್ಲೊಬ್ಬರು – ಅರಸರು – ‘ ಏನನ್ನಾದರೂ ನೀವು ತೆಗೆದುಕೊಳ್ಳಲೇಬೇಕು ’ ಎಂದು ಹಟತೊಟ್ಟರು.

ಶಿಶಿರಬಾಬುಗಳಿಗೆ ಸಂಗೀತದ ಹುಚ್ಚು. “ ತಮ್ಮ ಆಸ್ಥಾನದ ಸಂಗೀತಗಾರರ ಕಚೇರಿ ಕೇಳಲು ಅವಕಾಶ ಕಲ್ಪಿಸಿಕೊಡಿ, ಅಷ್ಟು ಸಾಕು ” ಎಂದರು.

ಆ ಪ್ರಖ್ಯಾತ ಸಂಗೀತಗಾರ ಶಿಶಿರಬಾಬುಗಳ ಮನೆಗೇ ಬಂದು ಹದಿನೈದು ದಿನಗಳಿದ್ದು ಗಾನ ವಾರಿಧಿಯನ್ನೇ ಹರಿಸಿದ. ಆದರೂ ಮಹಾರಾಜರಿಗೆ ತೃಪ್ತಿ ಇಲ್ಲ. ದಂತದ ಕರಂಡಕವೊಂದನ್ನು ಅವರು ಕಳುಹಿಸಿಯೇಬಿಟ್ಟರು.

ಶಿಶಿರಬಾಬು ಕರಂಡಕವನ್ನು ಮಾರಿ ದೊರೆತ ೮೦೦ ರೂ. ಗಳಿಂದ ಮುದ್ರಣ ಯಂತ್ರವೊಂದನ್ನು ಕೊಂಡರು.

* * * * *

“ ದಾದಾ, ಪತ್ರಿಕೆಯನ್ನು ಮತ್ತೆ ಪ್ರಾರಂಭಿಸುವುದು ಸರಿ, – ಆದರೆ ಇದು ಎಷ್ಟು ದಿನ ನಡೆದೀತು ?”

ಸೋದರ ಕೇಳಿದ ಪ್ರಶ್ನೆಗೆ ಹಿರಿಯಣ್ಣ ಉತ್ತರವಿತ್ತರು :

“ ನನಗೆ ಯಾವ ಸಂದೇಹವೂ ಇಲ್ಲ. ನೂರು ವರ್ಷ ಬಾಳ್ತದೆ ಈ ಪತ್ರಿಕೆ. ಜನ ಅದನ್ನು ಬಾಳಿಸ್ತಾರೆ.”

* * * * *

ಅರ್ಧ ಇಂಗ್ಲಿಷಿನಲ್ಲಿ; ಆಳುತ್ತಿದ್ದವರಿಗೆ ಚುರುಕು ಮುಟ್ಟಿಸುವುದಕ್ಕೋಸ್ಕರ. ಅರ್ಧ ಬಂಗಾಳಿಯಲ್ಲಿ; ಜನಸಾಮಾನ್ಯರಿಗೋಸ್ಕರ.

ಆಂಗ್ಲ ಅಧಿಕಾರಿಗಳಿಗೆ ಸಿಟ್ಟು. ಎಂಟೆರ್ದೆಯ ಸಂಪಾದಕನಿಂದ ಎಷ್ಟೊಂದು ತೊಂದರೆ ಅವರಿಗೆ!

ಆಂಗ್ಲ ಲೆಫ್ಟಿನೆಂಟ್ ಗವರ್ನರ್ ಶಿಶಿರಬಾಬುವನ್ನು ಕರೆಯಿಸಿದರು:

"ನಿಮ್ಮ ಅಗ್ರಲೇಖನಗಳನ್ನು ಪ್ರಕಟಣೆಗೆ ಮುಂಚೆ ನಮಗೆ ತೋರಿಸಬೇಕು. ಪ್ರತಿಯಾಗಿ, ಆಡಳಿತ ವಿಷಯದಲ್ಲಿ ನಿಮ್ಮ ಸಲಹೆ ನಾವು ಪಡೆಯುತ್ತೇವೆ."

ಶಿಶಿರಬಾಬು ಒಪ್ಪಲಿಲ್ಲ. "ದೇಶದಲ್ಲಿ ಒಂದಾದರೂ ಪ್ರಾಮಾಣಿಕ ಪತ್ರಿಕೆ ಬೇಡವೆ?" ಎಂದರು.

ಸಿಟ್ಟು ಬೆಂಕಿಯಾದ ಲೆಫ್ಟಿನೆಂಟ್‌ಗವರ್ನರ್ "ಗಂಟು ಮೂಟೆ ಸಹಿತ ನಿಮ್ಮನ್ನು ಕಲ್ಕತ್ತದಾಚೆಗೆ ಓಡಿಸುತ್ತೇವೆ, ಹುಷಾರ್!" ಎಂದು ಬೆದರಿಕೆ ಹಾಕಿದರು.

ಪತ್ರಿಕೆ ಪುಟಕ್ಕಿಟ್ಟ ಬಂಗಾರವಾಯಿತು.

ದೇಶೀಯ ಪತ್ರಿಕೆಗಳು ಸರಕಾರವನ್ನು ಟೀಕಿಸುವಂತಿಲ್ಲ – ಎಂಬ ಕರಾಳ ಶಾಸನ ಬಂತು. ಇಂಗ್ಲಿಷ್ ಹಾಗು ದೇಶೀಯ ಭಾಷೆ ಎರಡರಲ್ಲಿ ಪ್ರಕಟವಾಗುವ ಪತ್ರಿಕೆಯೂ 'ದೇಶೀಯ ಪತ್ರಿಕೆಯೇ' ಎಂದು ವಿವರ ನೀಡಲಾಯಿತು.

ಮಾರನೆಯ ದಿನ 'ಪತ್ರಿಕೆ' ಬರಬೇಕು. ಇದರ ಕತೆ ಮುಗಿದಂತೆಯೇ ಎಂದು ಲೆಫ್ಟಿನೆಂಟ್ ಗವರ್ನರ್ ಬಡಾಯಿ ಕೊಚ್ಚಿದ.

ಬೆಳಗಾಯಿತು. ಸಾಹೇಬನ ಮುಂದೆ 'ಅಮೃತ ಬಜಾರ್ ಪತ್ರಿಕಾ'!

ತೆರೆದು ನೋಡಿದರೆ, ಇಡೀ ಪತ್ರಿಕೆ ಇಂಗ್ಲಿಷಿನಲ್ಲಿ! ಉದ್ದಕ್ಕೂ ಕರಾಳ ಶಾಸನದ ಟೀಕೆ!

* * * * *

ಒಂದು ಶತಮಾನದ ಕಥೆಯ ಆರಂಭದ ರೋಮಾಂಚಕಾರೀ ಅಧ್ಯಾಯದ ಬಗೆಗೆ ಶಿಶಿರಬಾಬು ಅವರ ಪುತ್ರ ತುಷಾರಕಾಂತಿ ಘೋಷ್ – ಎಪ್ಪತ್ತರ ಯುವಕ – ಮೊನ್ನೆ ಮಾತನಾಡುತ್ತಿದ್ದುದನ್ನು ಕೇಳುತ್ತ ಕೇಳುತ್ತ ತಲೆ ಗೌರವದಿಂದ ಬಾಗಿತು.

ಮೈ ಪುಲಕಗೊಳ್ಳಲು ಮನಸ್ಸು ಮೌನವಾಗಿ ನುಡಿಯಿತು:

"ವಂದನೆ! ಅಭಿನಂದನೆ!"

೧೮–೮–೧೯೬೮

# ಏಳು ದಿನ ಪ್ರಾಣಿ ದಯೆ

ಸೊಗಸಾದ ಒಂದು ನಾಯಿ. ಗೋಲ್ಡನ್ ರಿಟ್ರೀವರ್. ಅದರ ಕತ್ತಿನಲ್ಲೊಂದು ಭಿತ್ತಿಪತ್ರ ತೂಗಾಡುತ್ತಿದೆ. "ನನ್ನ ಬಡ ಸ್ನೇಹಿತರಿಗೆ ನೆರವು ನೀಡಿ." ಪಕ್ಕದ ಲ್ಲೊಂದು ರೂಪಿಣಿಯಾದ ಬಾಲಿಕೆ. ಅವಳ ಕೈಯಲ್ಲಿ ಗೋಲಕ. ಸಭಾಂಗಣದ ಪ್ರವೇಶ ದ್ವಾರದಲ್ಲಿ ನಿಂತಿರುವ ಇವರನ್ನು ಜನ ನೋಡುತ್ತಾರೆ. ಗೋಲಕಕ್ಕೆ 'ಕಾಸು' ಹಾಕಿ, ಒಳಕ್ಕೆ ಹೋಗುತ್ತಾರೆ.

ಸಮಾರಂಭಕ್ಕೆ ಬರುತ್ತಿರುವವರಲ್ಲಿ ಹೆಚ್ಚಿನವರು ಶ್ರೀಮಂತರು. ಆ ಭಾರೀ ಕಾರುಗಳ ಎದುರಲ್ಲೂ ಅಂಗಳದಲ್ಲಿ ಯಾವ ಅಳುಕೂ ಇಲ್ಲದೆ ಕತ್ತೆಮರಿಯೊಂದು ಓಡಾಡುತ್ತಿದೆ. ಬ್ರೆಜೀಲಿಯನ್ ಡಾಂಕಿ. ಸ್ಫುರದ್ರೂಪಿ. ಅದರ ಕತ್ತಿನಲ್ಲೂ ತೂಗಾಡುತ್ತಿರುವ ಒಂದು ಭಿತ್ತಿಪತ್ರ: "ನನ್ನ ಬಡ ಸ್ನೇಹಿತರಿಗೆ ನೆರವು ನೀಡಿ." ಆ ಕತ್ತೆಮರಿಯ ಜತೆಯಲ್ಲೂ ಒಬ್ಬಳು ಗೋಲಕಬಾಲಿಕೆ. ಟಣಕ್ ಟಣಕ್ ನಾಣ್ಯಗಳು ಬಿದ್ದು ಆ ಗೋಲಕವೂ ತುಂಬುತ್ತಿದೆ.

ನಾಯಿಗೋಲಕಕ್ಕೆ ಕಾಣ್ಕೆ ತೆತ್ತವರು ಆ ಪ್ರಾಣಿಯ ಮೈದಡವಿದ್ದೂ ಉಂಟು. ಕತ್ತೆಗಾದರೋ ಒಂದು ಮುಗುಳುನಗೆ.

ಇದು ಪ್ರಾಣಿದಯಾ ಸಪ್ತಾಹದ ಉದ್ಘಾಟನಾ ಕಾರ್ಯ. ನೆರೆದ ನೂರರಲ್ಲಿ ತೊಂಭತ್ತು ಜನವೂ ಮಾಂಸಾಹಾರಿಗಳು!

* * * * *

ದೊಡ್ಡ ದೊಡ್ಡ ಹಸುಗಳನ್ನೂ ಎಳೆಗರುಗಳನ್ನೂ ಕರೆದು ತಂದರು. ಪ್ರತಿಷ್ಠಿತರ ಎದುರಿನಲ್ಲಿ ಮೇವು ತಿನಿಸು ನೀಡಿದರು.

ಇದು ಪ್ರಾಣಿದಯಾದರ್ಶನ.

ಬೆದರಿದ ಒಂದು ಹಸು ಹಾಯಲು ಬಂದಿತು.

ಗೋಪಾಲಕ ಅದರ ಹಿಂಬದಿಗೆ ಬಾರಿಸಿದ – 'ಥೂ ನಿನ್ನ....' ಇತ್ಯಾದಿ ಪ್ರಶಸ್ತಿ ದಾನದೊಡನೆ.

* * * * *

ಮುಂದೆ ಏಳು ದಿನ ಪ್ರಶಾಂತ ಬೀದಿಗಳಲ್ಲಿ ಸಡಗರ.

ಯಾವನೋ ಒಬ್ಬ ಸೊರಗಿದ ದನಗಳನ್ನೋ ಎತ್ತುಗಳನ್ನೋ ಹೊಡೆದೊಯ್ಯುತ್ತಿದ್ದ. ಆ ದಾರಿಯಾಗಿ ಅವನಿಗೆ ಬರಹೇಳಿದವರು ಯಾರೊ? ಪ್ರತಿಷ್ಠಿತ ಸಮಾಜದ

ಸೂತ್ರಧಾರಿಣಿಯರು ಗುಂಪನ್ನು ತಡೆದರು. ಪ್ರಾಣಿಗಳನ್ನು ಪರೀಕ್ಷಿಸಿದರು. ಪಶು ವೈದ್ಯರೆಂದರು: "ಈ ಕೆಲ ಪ್ರಾಣಿಗಳು ಕ್ಯಾನ್ಸರ್ ಪೀಡಿತ." (ಅರ್ಬುದ ಅಡರಿದ ಪ್ರಾಣಿಗಳನ್ನು ಕೊಂದು ಮಾಂಸ ಬಡಿಸುವ ಕಟುಕರು!) ಆ ಬಡಪಾಯಿಗಳನ್ನು ಪ್ರಾಣಿದಯಾಸಂಘದ ಕಚೇರಿಯ ಆವರಣಕ್ಕೆ ಒಯ್ದರು. ಪ್ರಾಣಿಗಳನ್ನು ಉಪವಾಸ ಕೆಡವಿದನೆಂದು ಅವುಗಳನ್ನು ಕರೆದೊಯ್ಯುತ್ತಿದ್ದವನನ್ನು ಜರೆದರು.

ವೇಗದ ವಾಹನಗಳ ಮಧ್ಯೆಯೂ ಒಂದು ಜಟಕಾ ಬಂಡಿ. ಸಾಹೇಬ ಅವರ ವಿಧಿ. "ನಿಲ್ಲು! ನಿಲ್ಲು!" ಕುದುರೆಗೆ ಹೊಡೆದು ಹಿಂಸಿಸಿದ ಆತ ಶಿಕ್ಷಾರ್ಹ.

ಎತ್ತಿನ ಬಂಡಿ. ಭಾರತಭೂಮಿಯ ಈ ಯುಗದ ಪ್ರತಿನಿಧಿ.

"ಯಾಕಯ್ಯಾ ಹೊಡೀತಿದೀಯಾ ಎತ್ತಿಗೆ?"

"ಒಡೀದೆ ಇದ್ರೆ ಅದು ಮುಂದ್ಕೆ ಓಗಾಕಿಲ್ರವ್ಮಣ್ಣಿ. ಕಾರುಗಳು ಬತ್ತವೆ, ಲಾರಿಗಳು ಬತ್ತವೆ."

"ಕಾನ್‌ಸ್ಟೇಬಲ್, ಅವನ ಹೆಸರು ವಿಳಾಸ ಬರ್ಕೊಳ್ಳಿ!"

ಇದೊಂದು ಮುಖ, ಇನ್ನೊಂದು–

–"ಈ ಜಟಕಾ ಕುದುರೆ ಹೃಷ್ಟಪುಷ್ಟವಾಗಿದೆ. ಚೆನ್ನಾಗಿ ನೋಡ್ಕೋತಿದಾನೆ. ಪ್ರಥಮ ಪಾರಿತೋಷಕ."

"ಈ ಎತ್ತು ತೃಪ್ತಿಯಿಂದ ಮೆಲುಕಾಡ್ತಿದೆ, ದ್ವಿತೀಯ ಪಾರಿತೋಷಕ."

* * * * *

ವಾರದ ಕೊನೆಯಲ್ಲಿ ಬಹುಮಾನ ವಿತರಣೆ. ಮುದ್ದು ಪ್ರಾಣಿಗಳ – ನಾಯಿ, ಗಿಣಿ, ಕೋತಿ, ಕತ್ತೆ – ಪ್ರದರ್ಶನ ಬೇರೆ. ಮಕ್ಕಳಿಗೆ ಮೋಜು.

ಬಿಡುವಿಲ್ಲದ ದುಡಿಮೆಯ ಮಧ್ಯೆ ಸ್ವಯಂಸೇವಕ – ಸೇವಿಕೆಯರಿಗೆ ಊಟ, ಸಸ್ಯಾಹಾರಿ ಭೋಜನಗೃಹದಲ್ಲಿ. ಆ ದಿನದ ಮಟ್ಟಿಗಾದರೂ ಅಲ್ಲಿಯೇ!

ಹಾಗೆ ಪ್ರಾಣಿದಯಾ ಸಪ್ತಾಹದ ಮುಕ್ತಾಯ. ವರ್ಷದ ಉಳಿದ ದಿನಗಳಲ್ಲಿ ಪ್ರಾಣಿಗಳ ಪಾಡು?

ಕ್ರೌಂಚ ಪಕ್ಷಿಯೇ ಇರಲಿ, ಕುರಿಮರಿಯೇ ಇರಲಿ – ಪ್ರಾಣಿದಯೆ ಈ ಭೂಮಿಯ ಒಂದು ಗುಣವಿಶೇಷ. ಆದರೆ ಉನ್ನತ ಆದರ್ಶಗಳೂ ವಾಸ್ತವತೆಯ ಒರೆಗಲ್ಲಿನ ತೀಡಿಕೆಗೆ ಒಳಗಾಗಬೇಕಲ್ಲ?

ಅದರ ಅರಿವಿದ್ದೂ ಇಲ್ಲದಂತೆ ನಟಿಸುವುದು ಆತ್ಮವಂಚಕಗುಣ.

* * * * *

ಈ ಜಾಡಿಗೆ ಸೇರಿದ್ದು, ಉತ್ತರ ಭಾರತದ ಅನೇಕ ಶಾಲೆ ಕಾಲೇಜುಗಳಲ್ಲಿ ಆಡಳಿತದವರು ಇತ್ತೀಚೆಗೆ ಕೈಗೊಂಡ ಒಂದು ನಿರ್ಧಾರ.

"ಪ್ರಾಣಿಹಿಂಸೆಯಾಗುವುದರಿಂದ ಜೀವಶಾಸ್ತ್ರವನ್ನು ಬೋಧಿಸಬಾರದು."

ಈ ವಿದ್ಯಾಸಂಸ್ಥೆಗಳನ್ನು ನಡೆಸುತ್ತಿರುವವರು ಒಂದು ವಿಶಿಷ್ಟ ಮತದವರು. ಅವರ ಪ್ರಕಾರ ಎಲ್ಲ ಜೀವಿಗಳಲ್ಲೂ ದೇವರು ಮನೆ ಮಾಡಿದ್ದಾನೆ. ಹೀಗಿರುತ್ತ, ವಿಜ್ಞಾನದ ಹೆಸರಲ್ಲಿ ಕಪ್ಪೆಯನ್ನು ಕೊಂದು ಅದರ ಶರೀರ ರಚನೆಯನ್ನು ಅಭ್ಯಸಿಸುವುದೆಂದರೆ? ಆ ಅಕ್ಷಮ್ಯ ಅಪರಾಧಕ್ಕೆ ತಮ್ಮ ವಿದ್ಯಾಸಂಸ್ಥೆಗಳಲ್ಲಿ ಅವಕಾಶವಿರಕೂಡದು.

ಆದರೆ ಜ್ಞಾನದಾಹದ ಶಾಖ ತೀಕ್ಷ್ಣ. ಮನುಷ್ಯರನ್ನೂ ಒಳಗೊಂಡು ಕೋಟ್ಯಂತರ ಪ್ರಾಣಿಗಳ ರಕ್ಷಣೆಯಾಗಬೇಕಾದರೆ ಪ್ರಾಣಿಗಳ ಅಂಗರಚನೆಯನ್ನು ಅಭ್ಯಸಿಸಲೇಬೇಕು. ಅದಕ್ಕೋಸ್ಕರ ಕೆಲ ಪ್ರಾಣಿಗಳ ಬಲಿದಾನವಾದರೂ ಆಗಲೇಬೇಕು.

ಈ ಸಂಬಂಧದಲ್ಲಿ ಒಬ್ಬರು ಕೇಳಿರುವ ಪ್ರಶ್ನೆ ಇದು :

“ವಸತಿಗೃಹದಲ್ಲಿ ವಿದ್ಯಾರ್ಥಿ ಅಸ್ವಸ್ಥನಾದರೆ ಡಾಕ್ಟರಿಗೆ ಕರೆಕಳುಹುವುದಿಲ್ಲವೆ ನೀವು ?”

ಧರ್ಮದ ಹೆಸರಿನಲ್ಲಿ ಇದೂ ಒಂದು ನಾಟಕ. ‘ಏಳು ದಿನಗಳ ಪ್ರಾಣಿದಯೆ’ಯಷ್ಟೇ ರಸಭರಿತ.

೧-೯-೧೯೬೮



# ಅಲೆಯುವ ಆತ್ಮಕ್ಕೆ ತ್ರಾಣ

ದಿನಪತ್ರಿಕೆಗಳಲ್ಲಿ ಪ್ರಕಟವಾದ ಮೂರು ಪ್ಯಾರಾಗಳ ಒಂದು ವಾರ್ತೆ:

"ಟೋಕಿಯೋ ಆಗಸ್ಟ್ ೧೯– ನೇತಾಜಿ ಸುಭಾಷಚಂದ್ರ ಬೋಸರ ಪುಣ್ಯತಿಥಿಯು ಇಲ್ಲಿಗೆ ಸಮೀಪದಲ್ಲಿ, ನೇತಾಜಿಯವರ ಭಸ್ಮವನ್ನು ಕಾದಿಡಲಾಗಿರುವ ರೆಂಕೋಜಿ ದೇವಾಲಯದಲ್ಲಿ ನಿನ್ನೆ ಆಚರಿಸಲ್ಪಟ್ಟಿತು.

"ದೇವಾಲಯದಲ್ಲಿ ಸ್ಮರಣಸೇವೆ ನಡೆಯಿತು. ಜಪಾನಿನ ಉಪವಿದೇಶಾಂಗ ಮಂತ್ರಿ ಎಸ್. ಕುರಾಯ್ಸಿ, ಭಾರತದ ರಾಯಭಾರಿ ಎಸ್. ಕೆ. ಬ್ಯಾನರ್ಜಿ, ಭಾರತೀಯ ರಾಯಭಾರಿ ಕಚೇರಿಯ ಇತರ ಸದಸ್ಯರು, ಹಲವರು ಭಾರತೀಯರು ಮತ್ತಿತರರು ಸೇವೆಯ ವೇಳೆ ಉಪಸ್ಥಿತರಿದ್ದರು.

"ಯುದ್ಧಾನಂತರದ ಪ್ರಧಾನ ಮಂತ್ರಿಯೂ ಅಖಿಲ ಜಪಾನೀ ಸಮಿತಿಯ ಅಧ್ಯಕ್ಷರೂ ಆಗಿರುವ ನೊಬುಸ್ಕೆ ಕಿಶಿಯವರು ತಾವು ಇತ್ತಿರುವ ಒಂದು ಸಂದೇಶದಲ್ಲಿ ಕಳೆದ ಇಪ್ಪತ್ತಮೂರು ವರ್ಷಗಳಿಂದ ರೆಂಕೋಜಿ ದೇವಾಲಯದಲ್ಲಿ ಇಡಲಾಗಿರುವ ನೇತಾಜಿಯ ಭಸ್ಮವನ್ನು ಭಾರತಕ್ಕೆ ಒಯ್ಯಬೇಕು ಎಂದು ನುಡಿದಿರುವರು."

ವಸ್ತುನಿಷ್ಠವಾದ ವರದಿ. ಆದರೂ ಪದಬಂಧನದ ಎಡೆಯಿಂದ ಯಾತನೆಯ ಮರುಕದ, ಅಸಮಾಧಾನದ ಬಿಸಿಯುಸಿರು ತಪ್ಪಿಸಿಕೊಂಡು ಹೊರಬೀಳುವುದನ್ನು ಕಾಣಬಹುದು.

*　　*　　*　　*　　*

ಯಾಕೆ ಈ ತಾಪ?

ಕೆಲವೇ ದಿನಗಳ ಹಿಂದೆ, ಜಪಾನಿನಿಂದ ಮರಳಿದ ಕಾಂಗ್ರೆಸ್ ಅಧ್ಯಕ್ಷ ಸಿದ್ದವನಹಳ್ಳಿ ನಿಜಲಿಂಗಪ್ಪನವರು, ರೆಂಕೋಜಿ ದೇವಾಲಯವನ್ನು ತಾವು ಸಂದರ್ಶಿಸಿ ನೇತಾಜಿ ಭಸ್ಮದ ದರ್ಶನ ಪಡೆದುದಾಗಿ ತಿಳಿಸಿದರು. ಅಲ್ಲಿನ ಅರ್ಚಕ, ಆ ಭಸ್ಮವನ್ನು ಭಾರತ ತರಿಸಿಕೊಳ್ಳಬೇಕು – ಎಂಬ ಆಸೆಯನ್ನು ವ್ಯಕ್ತಪಡಿಸಿದುದಾಗಿಯೂ ಹೇಳಿದರು.

ಭಾರತದಿಂದ ಆಗಿರುವ ಈ ಕರ್ತವ್ಯಲೋಪದ ಅರ್ಥವೇನು? ಎಂಬುದು ಜಪಾನಿನ ಎಲ್ಲ ವಿವೇಕಿಗಳೂ ಕೇಳುತ್ತಿರುವ ಮೌನ ಪ್ರಶ್ನೆ.

ವಾಸ್ತವವಾಗಿ ಇದು ಕರ್ತವ್ಯಲೋಪವೊ? ರಾಜಕೀಯವೊ?

ವಿಮಾನ ಅಪಘಾತದಲ್ಲಿ ಸುಭಾಷಚಂದ್ರರು ಮಡಿದರೆಂಬ ಸತ್ಯಾಂಶವನ್ನು ಭಾರತೀಯರು ಯಾಕೆ ಒಪ್ಪುತ್ತಿಲ್ಲ? ಜಪಾನೀಯರ ಪಾಲಿಗೆ ಇದು ಒಗಟು.

ತಮ್ಮ ಹಿರಿಯ ನಾಯಕನೊಬ್ಬನ ಅವಶೇಷಗಳನ್ನು ತರಿಸಿಕೊಂಡು ಸೂಕ್ತ ಗೌರವ ಏರ್ಪಡಿಸುವಷ್ಟು ಸ್ವಾಭಿಮಾನವೂ ಇಲ್ಲವೆ ಭಾರತದ ಪ್ರಜೆಗಳಲ್ಲಿ? ತನ್ನ ರಾಷ್ಟ್ರದ ನೂತನ ಇತಿಹಾಸವನ್ನೇ ರೂಪಿಸಲು ಯತ್ನಿಸಿದ ಅಪ್ರತಿಮ ವೀರನ ನೆನಪಿಗೆ ಇದೇ ಏನು ಇಂದಿನ ಭಾರತೀಯ ಜನಾಂಗ ಸಲ್ಲಿಸುತ್ತಿರುವ ಕಾಣ್ಕೆ?

ರಾಷ್ಟ್ರಾಭಿಮಾನಿಗಳಾದ ಜಪಾನೀಯರಿಂದ ಈ ಬಗೆಯ ಆತಂಕದ ಬಿಸಿಯುಸಿರು ಹೊರಬಿದ್ದರೆ ಆಶ್ಚರ್ಯವೇನು?

ತಾವು ಕಂಡುದನ್ನು ಕೇಳಿದುದನ್ನು ಪ್ರಾಯಶಃ ಆದಷ್ಟು ಸರಳ ಮಾತುಗಳಲ್ಲಿ ಹೇಳಲು ಯತ್ನಿಸುತ್ತ ನಿಜಲಿಂಗಪ್ಪನವರೆಂದರು:

"ನೇತಾಜಿಯ ಭಸ್ಮವನ್ನು ನಾವು ಯಾಕೆ ತರಿಸಿಕೊಳ್ಳುತ್ತಾ ಇಲ್ಲ ಅಂತ ಅವರಿಗೆ ಆಶ್ಚರ್ಯ ಅನಿಸಿದೆ."

* * * * *

ತನ್ನ ಅಪೂರ್ವ ಕಾಯಕದಿಂದ ಜಗತ್ತನ್ನೇ ಅಚ್ಚರಿಗೊಳಿಸಿದ ಮಹಾನ್ ವ್ಯಕ್ತಿ ಸುಭಾಷಚಂದ್ರ ಬೋಸ್. ಅವರ ಜೀವ ಭಸ್ಮವಾದರೂ, ಆ ಗೆಯ್ಮೆಯ ನೆನಪಿಗೆ ಸಾವಿಲ್ಲ.

ಸತ್ತುದನ್ನು ಯಾರು ಕಂಡರು? ಅಪಘಾತಕ್ಕೀಡಾದ ವಿಮಾನವನ್ನು ಅವರು ಏರಿದುದನ್ನು ನೋಡಿದವರು ಜಪಾನೀಯರು. ನಾಲ್ವರೇ ಪ್ರಯಾಣಿಕರು. ವಿಮಾನ ಉರಿದು ಬಿದ್ದುದನ್ನು ಕಂಡವರೂ ಆ ದೇಶೀಯರೇ. ರೆಂಕೋಜಿ ದೇವಾಲಯದಲ್ಲಿರುವುದು ನೇತಾಜಿಯದೇ ಚಿತಾಭಸ್ಮ ಎನ್ನುವುದಕ್ಕಾದರೂ ಆಧಾರ? ಅದು ಅಪಘಾತದ ಅನಂತರದ ಅವಶೇಷಗಳಿಂದ ಎತ್ತಿದ ಭಸ್ಮ....

ಅಂದ ಮಾತ್ರಕ್ಕೆ ಅವರ ಘನತೆಗೆ ಕುಂದೆ?

ಹಾಗಲ್ಲ. ಸುಭಾಷರು ಗಾಂಧಿ ರಾಜಕೀಯದ ವಿರುದ್ಧ ಬಂಡಾಯವೆದ್ದು ದೇಶ ಬಿಟ್ಟ ವ್ಯಕ್ತಿ. ಮನೆ ಬಿಟ್ಟು ಹೋದ ಮಗನನ್ನು ತಂದೆ, "ನನ್ನ ಪಾಲಿಗೆ ಅವನು ಸತ್ತ ಹಾಗೆ" ಎನ್ನುವುದಿಲ್ಲವೆ? ಹಾಗೆ ಸತ್ತವರು ಸುಭಾಷ. ನಮ್ಮವರೋ ಸೂತಕವೂ ಇಲ್ಲ ಎನ್ನುವ ಜನ. ಅಜಾದ್ ಹಿಂದ್ ಫೌಜಿನ ಚರಿತ್ರಾರ್ಹ ವಿಚಾರಣೆಯೊಂದು ಕೆಂಪುಕೋಟೆಯಲ್ಲಿ ನಡೆಯದೇ ಹೋಗಿದ್ದರೆ, ನೇತಾಜಿಯನ್ನು ಕುರಿತ ಅಧ್ಯಾಯವೇ ಭಾರತದ ಸ್ವಾತಂತ್ರ್ಯ ಇತಿಹಾಸದಲ್ಲಿ ಇರುತ್ತಿರಲಿಲ್ಲವೇನೋ. ನಾಲ್ಕೇ ಸಾಲುಗಳಲ್ಲಿ ಅದು ಮುಗಿಯುತ್ತಿತ್ತೇನೋ........ ಒಪ್ಪಿಕೊಳ್ಳೋಣ: ಸುಭಾಷರ ಸಾಹಸ ದಂತಕಥೆಯಾಗಿ ಜನಜೀವನದಲ್ಲಿ ಶಾಶ್ವತವಾಗಿ ಮನೆಮಾಡಿದ ಮೇಲೂ ಜೀವಂತ ಸಾಯು

ಡರು ತಮ್ಮ ಗಭೀರ ಮೌನದಿಂದ, ಅಸಮಾನ ಉಪೇಕ್ಷೆಯಿಂದ ಆ ವೀರನ ಹಿರಿಮೆಯನ್ನು ಪ್ರತಿಮೆಯನ್ನಾಗಿ ಮಾಡಿ ಪರದೆ ಎಳೆದರು.

ರಾಜಕೀಯ ಕಾರಣಗಳಿಗಾಗಿ, ಸುಭಾಷರ ಹಿಂಬಾಲಕರು ನಾವು ಎಂದು ಕೂಗಾಡಿದವರಿಗೆ ಅದೇ ಬೇಕಿತ್ತು. ಅವರು ಬೇರೆಯೇ ಧ್ವನಿ ತೆಗೆದರು: "ಸುಭಾಷರು ಸತ್ತೇ ಇಲ್ಲ! ಅವರು ಬದುಕಿದ್ದಾರೆ. ಸರಿಯಾದ ಸಮಯದಲ್ಲಿ ಕಾಣಿಸಿಕೊಳ್ಳುತ್ತಾರೆ. ಭಾರತದ ನಾಯಕಮಣಿಯಾಗುತ್ತಾರೆ!"

ಕಠಿಣವಾದ ಅಪಥ್ಯವಾದ ಸತ್ಯ ಸಂಗತಿಗಿಂತಲೂ ಇಂತಹ ಭಾವುಕ ಬಡಬಡಿಕೆಗೇ ಈ ದೇಶದಲ್ಲಿ ಸುಲಭ ಪ್ರಾಶಸ್ತ್ಯ.

"ಆ ಸನ್ಯಾಸಿಯೇ ಸುಭಾಷರು."

ಸನ್ಯಾಸಿಗಳನ್ನು ಜನ ಶೋಧಿಸಿದ್ದೇ, ಶೋಧಿಸಿದ್ದು.

ಈ ವಿಪರ್ಯಾಸವನ್ನು ಕಂಡು ಜಪಾನೀಯರು ಪರಿಹಾಸ್ಯದಿಂದಲೋ ಬೇಸರದಿಂದಲೋ ನಕ್ಕಿದ್ದರೆ ಅವರು ಖಂಡಿತ ಕ್ಷಮ್ಯರು. ಆ ಬಗೆಯ ನಗೆಗೆ ನಾವು ಸರ್ವದಾ ಅರ್ಹರು.

ಇನ್ನೆರಡು ವರ್ಷ ದಾಟಿತೆಂದರೆ, ಸುಭಾಷರ ಜ್ಯೋತಿ ನಂದಿ ಕಾಲು ಶತಮಾನವೆ ಕಳೆದಂತೆ. ಈ ಅವಧಿಯಲ್ಲಿ ಹೊಸದೊಂದು ಪೀಳಿಗೆಯೇ ಇಲ್ಲಿ ಜನ್ಮ ತಳೆದಿದೆ; ಪ್ರಾಯಸ್ಥವಾಗಿದೆ. ಕಂಡರಿಯದ ದೂರದ ನಿನ್ನೆಯನ್ನು ಕುರಿತು ಇವರಾದರೂ ಸತ್ಯನಿಷ್ಠ ನಿಲುವನ್ನು ತಳೆಯುವುದು ಸಾಧ್ಯ.

ಈಗಲಾದರೂ, ಅಲೆಯುವ ಆತ್ಮಕ್ಕೆ ಹುಟ್ಟಿದ ನೆಲದಲ್ಲಿ ತಾಣ ದೊರೆತು, ಸಮಾಧಿ ಏರ್ಪಟ್ಟು, 'ವೀರವನ' ಚಿಗಿತು, ಜನ ಶ್ರದ್ಧಾಂಜಲಿ ಅರ್ಪಿಸುವಂತಾಗಬೇಕು.

೮-೯-೧೯೬೮

# ಅರ್ಧಶತಮಾನದ ಕಥೆ

ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಐವತ್ತನೆಯ ಹುಟ್ಟು ಹಬ್ಬ. ಸಮಾರಂಭದಲ್ಲಿ ಪ್ರೇಕ್ಷಕನಾಗಿ ಕುಳಿತು, ವಯೋವೃದ್ಧರೂ ಜ್ಞಾನವೃದ್ಧರೂ ಆದವರು ಬೀರಿದ ಭಾಷಣಗಳ ಬೆಳಕಿನಲ್ಲಿ ಅರ್ಧಶತಮಾನದಷ್ಟು ಹಿಂದಕ್ಕೆ ನೋಡಲು ಯತ್ನಿಸಿದೆ. ಕಣ್ಣಿಗೆ ಕಟ್ಟಿದ್ದು ನಿನ್ನೆಯ ಕಥೆ. ಆಧುನಿಕ ಕನ್ನಡವೇ ಸುವರ್ಣ ಮಹೋತ್ಸವವನ್ನು ಆಚರಿಸಿದಂತಾಯಿತಲ್ಲ? ಇದು ನಾಡಿನ ಈ ಶತಮಾನದ ಸಾಂಸ್ಕೃತಿಕ ಇತಿಹಾಸದ ಮೊದಲ ಸಂಪುಟದ ಮುಕ್ತಾಯ, ಎರಡನೆಯ ಸಂಪುಟದ ಆರಂಭ.

ಕನ್ನಡವನ್ನು ಕಲಿಸುವುದು ಭಾಷಾ ಪಂಡಿತರಿಗಷ್ಟೇ ಮೀಸಲಾಗಿದ್ದ ಕಾಲ. ಸೆಂಟ್ರಲ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಟೇಟ್ ಸಾಹೇಬರು, ಕನ್ನಡ ಸಂಸ್ಕೃತಗಳನ್ನು ಬಲ್ಲ ಪದವೀಧರರು ಪಾಠ ಹೇಳಬೇಕು ಎಂದು ಬಯಸಿದರು. ಅಂಥವರೊಬ್ಬರಿಗಾಗಿ ಶೋಧ ನಡೆಯಿಸಿದರು. ಆಗ ಕಣ್ಣಿಗೆ ಬಿದ್ದ ವ್ಯಕ್ತಿ – ಸರಕಾರೀ ಕರ್ಮಚಾರಿ ಎ. ಆರ್. ಕೃಷ್ಣಶಾಸ್ತ್ರಿಗಳು.

೧೯೧೫. ಶಾಸ್ತ್ರಿಗಳು ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡದ ಅಧ್ಯಾಪಕರಾದರು. ಅವರೇ ಹೇಳಿರುವಂತೆ, "ಕನ್ನಡ 'ಮುನುಷಿ' ಎಂದು ವಿದ್ಯಾರ್ಥಿಗಳ ಅನಾದರಣೆ ತಿರಸ್ಕಾರ ಹಾಸ್ಯಗಳಿಗೆ ಗುರಿಯಾಗದಂತೆ, ಅವರಿಗೆ ಉಪಯೋಗವಾಗುವ ರೀತಿಯಲ್ಲಿ ಪಾಠ ಹೇಳಿ, ಕನ್ನಡಕ್ಕೂ ಅದರ ಉಪಾಧ್ಯಾಯನಿಗೂ ಒಂದು ಗೌರವವನ್ನು ಸಂಪಾದಿಸಿಕೊಳ್ಳುವುದಕ್ಕೇ ಕೆಲವು ಕಾಲ ಹಿಡಿಯಿತು........"

ಅನಂತರದ ಹೆಜ್ಜೆ 'ಕರ್ಣಾಟಕ ಸಂಘ'ದ ಉದಯ. ೧೯೧೮ರಲ್ಲಿ.

ತಾವು ಹಿಡಿದು ತಂದ ಕೃಷ್ಣಶಾಸ್ತ್ರಿ ನಾಡಿನ ಪುನರುದಯ ಚಳುವಳಿಯ ಸಂಘಟನಾ ಸ್ವರೂಪಕ್ಕೆ ಜನ್ಮದಾತರಾಗುವರೆಂದು ಆಂಗ್ಲ ಮಹಾಶಯ ಟೇಟ್ ಖಂಡಿತ ಭಾವಿಸಿರಲಾರರು.

* * * * *

ಕೃಷ್ಣಶಾಸ್ತ್ರಿಗಳು ಅನಾದೃಶ ಸೂತ್ರಧಾರರು. ತಾವೇ ಸಂಘದ ಅಧ್ಯಕ್ಷರಾಗುವುದರ ಬದಲು ಭೌತಶಾಸ್ತ್ರದ ಅಧ್ಯಾಪಕರಾಗಿದ್ದ ಬೆಳ್ಳಾವೆ ವೆಂಕಟನಾರಾಯಣಪ್ಪನವರನ್ನು ಆ ಪೀಠಕ್ಕೇರಿಸಿದರು. (ಐನ್‌ಸ್ಟೀನನ ಸಿದ್ಧಾಂತಕ್ಕೆ ಸಾಪೇಕ್ಷವಾದ ಎಂದು ಹೆಸರಿಟ್ಟವರು ಬೆಳ್ಳಾವೆ.) ಬರೆಯಬಲ್ಲ ಎಳೆಯರನ್ನು ಹುಡುಕಿ ಹಿಡಿದು, ಅವರಿಗೆ

ಮಾರ್ಗದರ್ಶಕರಾದವರು ಶಾಸ್ತ್ರಿಗಳು. ಬೀಡುಕಬ್ಬಿಣವೂ ಅವರ ಸ್ಪರ್ಶದಿಂದ ಬೆಳ್ಳಿಯಾಯಿತು, ಬಂಗಾರವಾಯಿತು.

"ನಮ್ಮಲ್ಲಿ ಬೆಳ್ಳಿಯಿಲ್ಲ, ಬಂಗಾರವಿಲ್ಲ. ಆದರೆ ಯಾವುದು ಇದೆಯೋ ಅದನ್ನು ನಿರ್ವಂಚನೆಯಿಂದ ಕೊಡುತ್ತೇವೆ."

—ಎಂದರು ಆ ಮಾಂತ್ರಿಕ.

ಆದರೆ ಪಡೆದ ನಾಡು ಬಲ್ಲುದು. ಅವರು ನೀಡಿದ ಪ್ರತಿಯೊಂದು ಹಿಡಿಯೂ ಬೆಳ್ಳಿ ಬಂಗಾರವೇ.

* * * * *

ಹೆಚ್ಚು ಕಡಮೆ ಅದೇ ವೇಳೆಗೆ ಮೈಸೂರಿನ ಮಹಾರಾಜಾ ಕಾಲೇಜಿನಲ್ಲೂ ಕರ್ಣಾಟಕ ಸಂಘ ಹುಟ್ಟಿತು. ಆ ಸಸಿಯನ್ನು ನೆಟ್ಟು ಸಾಕಿದ ತೋಟಗಾರ ಟಿ. ಎಸ್. ವೆಂಕಣ್ಣಯ್ಯನವರು.

ಕೃಷ್ಣಶಾಸ್ತ್ರಿಗಳೂ ವೆಂಕಣ್ಣಯ್ಯನವರೂ ಕನ್ನಡದ 'ಅಶ್ವಿನೀ ದೇವತೆಗಳು.'

ಈ ಎರಡು ನಂದಾದೀಪಗಳಿಂದ ನಾಡೆಲ್ಲ ಬೆಳಗಿದ್ದು ದೊಡ್ಡ ಪವಾಡ. ಎಲ್ಲಿ ನೋಡಿದರಲ್ಲಿ ಕರ್ಣಾಟಕ ಸಂಘಗಳು. ನಾಡಿನ ಒಳಗೂ, ಹೊರಗೂ. ಅಸಂಖ್ಯ ಹಣತೆಗಳಿಂದ ಕನ್ನಡ ಮನೆಯ ಕತ್ತಲು ನಿಶ್ಶೇಷವಾಯಿತು.

ಅದೀಗ ನಾಡು ಪ್ರಾಪ್ತವಯಸ್ಕರವಾದ ಬಗೆ.

* * * * *

ಗುರುರಾವ್ ದೇಶಪಾಂಡೆ – ಆಗ ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿ – ಕರ್ಣಾಟಕ ಸಂಘದ ಪ್ರಥಮ ಕಾರ್ಯದರ್ಶಿ. ಆಗಲೇ ಅವರನ್ನು ಸರದಾರ್ ಎನ್ನುತ್ತಿದ್ದರಂತೆ. ವಾಸ್ತವವಾಗಿ ಈ ಐದು ದಶಕಗಳಲ್ಲಿ ಕಂಡುಬಂದ ಕನ್ನಡ ಹೋರಾಟಗಾರರಿಗೆಲ್ಲ ಅವರು ಸರದಾರರೇ.

ಆ ಬಿರುದಿಗೆ ಅವರೆಷ್ಟು ಅರ್ಹರೆಂಬುದಕ್ಕೆ ಇದೊಂದು ನಿದರ್ಶನ ಸಾಕು :

ಬಿ. ಎಂ. ಶ್ರೀ. ಆಗ ಮೈಸೂರಿನಲ್ಲಿ ಆಂಗ್ಲ ಸಾಹಿತ್ಯದ ಅಧ್ಯಾಪಕರಾಗಿದ್ದರು. ಕರ್ಣಾಟಕ ಸಂಘದ ಉದ್ಘಾಟನೆಗೆ ಅವರನ್ನು ಆಹ್ವಾನಿಸಬೇಕು ಎಂದು ನಿಶ್ಚಯವಾಯಿತು. ಗುರುರಾಯರು ಅವರಿಗೆ ಪತ್ರ ಬರೆದರು. ಬರುತ್ತೇವೆ; ಆದರೆ ತಾವು ಭಾಷಣ ಮಾಡುವುದು ಇಂಗ್ಲಿಷ್ ಭಾಷೆಯಲ್ಲಿ – ಎಂದು ಉತ್ತರವಿತ್ತರು. ಬಿ. ಎಂ. ಶ್ರೀ. ಅವರ ಬಗ್ಗೆ ಕೃಷ್ಣಶಾಸ್ತ್ರಿಗಳಿಗೆ ಮಮತೆ. ಯಾವ ಭಾಷೆಯಾದರೇನು ? ಇಂಗ್ಲಿಷಿನಲ್ಲಿಯೇ ಭಾಷಣ ಮಾಡಲಿ – ಎಂದರು. ದೇಶಪಾಂಡೆಯವರು ಒಪ್ಪಲಿಲ್ಲ. ಬಿ. ಎಂ. ಶ್ರೀಯವರಿಗೆ ಬರೆದೇ ಬಿಟ್ಟರು : 'ಇಂಗ್ಲಿಷಿನಲ್ಲಿ ತಮ್ಮ ಭಾಷಣ ಏರ್ಪಡಿಸಲು ಸಾಧ್ಯವಿಲ್ಲ ಎಂದು ತಿಳಿಸಲು ವಿಷಾದಿಸುತ್ತೇವೆ!'

ಸೇನಾನಿಯಲ್ಲದೆ ಸಾಮಾನ್ಯ ಸೈನಿಕ ತೋರಬಲ್ಲನೆ ಇಂಥ ಧಾರ್ಷ್ಟ್ಯ ?

ಹೊರಗೆ ಹೇಳದೇ ಇದ್ದರೂ, ಶಿಷ್ಯನನ್ನು ಮನಸ್ಸಿನಲ್ಲಿ ಮೆಚ್ಚಿರಬೇಕು, ಕೃಷ್ಣ ಶಾಸ್ತ್ರಿಗಳು.

(ಮುಂದೆ ಕೆಲವೇ ವರ್ಷಗಳಲ್ಲಿ ಬಿ. ಎಂ. ಶ್ರೀ. ಮತಾಂತರಗೊಂಡರು; 'ಕನ್ನಡದ ಕಣ್ವ'ರಾದರು!)

*   *   *   *   *

ಹುಟ್ಟಿದಾಗ ಕಿರುತೊರೆ. ಸಮಾಜ ಸೇರುವ ವೇಳೆಗೆ ಮಹಾನದಿ.

ಎಸ್. ವಿ. ರಂಗಣ್ಣನವರು ಉಡುಪಿ ಹೋಟೆಲಿನ ಕೊಠಡಿಯಲ್ಲಿ ವಿದ್ಯಾರ್ಥಿಯಾಗಿದ್ದ ಕಾಲ. ಕೃಷ್ಣಶಾಸ್ತ್ರಿಗಳ ಉದ್ಯಾನದಲ್ಲಿ ಪುಟಿದ ಕಾರಂಜಿ ಅವರು. ಅಂಗ್ಲ ಕೊಳವೆ, ಕನ್ನಡದ ಸೊಬಗು.

ಕಾಲೇಜಿಗಷ್ಟೇ ಸೀಮಿತವಾಗಿರಲಿಲ್ಲ ಈ ಚಟುವಟಿಕೆ. ಆ ಸಂಘ ಕನ್ನಡ ಸಮಾಜಕ್ಕೆ ಕೇಂದ್ರವಾಯಿತು. ಡಿ. ವಿ. ಜಿ. ಯಂಥ 'ಹೊರಗಿನವರೂ' ಅಲ್ಲಿ ಧ್ವಜ ವಾಹಕರಾದರು.

ಸಂಘದ ಚಟುವಟಿಕೆಗೆ ಮೆರುಗು ದೊರೆತುದು 'ಪ್ರಬುದ್ಧ ಕರ್ಣಾಟಕ' ತ್ರೈಮಾಸಿಕದ ಉದಯದೊಂದಿಗೆ. (ಮುಂದೆ ಆ ನಿಯತಕಾಲಿಕೆ ಮೈಸೂರು ವಿಶ್ವವಿದ್ಯಾಲಯದ ಮೇಲ್ವಿಚಾರಣೆಯಲ್ಲಿ ಮೈಸೂರಿನಿಂದಲೇ ಹೊರಡತೊಡಗಿತು.)

ಕೃಷ್ಣಶಾಸ್ತ್ರಿಗಳಲ್ಲದೆ ಬೇರೆ ಹಲವರ ದಿಗ್ದರ್ಶನವೂ ಕರ್ಣಾಟಕ ಸಂಘಕ್ಕೆ ಮುಂದೆ ದೊರೆಯಿತು. ಕೆ. ವಿ. ಪುಟ್ಟಪ್ಪನವರು, ಕೆ. ವೆಂಕಟರಾಮಪ್ಪನವರು, ಎಲ್. ಗುಂಡಪ್ಪನವರು, ಡಿ. ಎಲ್. ನರಸಿಂಹಾಚಾರ್ಯರು, ಜಿ. ಪಿ. ರಾಜರತ್ನಂ ಅವರು. 'ರತ್ನ'ರು ಹದಿನೆಂಟು ವರ್ಷಗಳ ಕಾಲ ಸಂಘದ ಸಂಚಾಲಕರಾಗಿ ಅದನ್ನು ಪರಿಪುಷ್ಟಗೊಳಿಸಿದರು.

ಸ್ವಾವಲಂಬಿಯಾದ ಸಂಘ ಪ್ರಕಟಿಸಿರುವ ಪುಸ್ತಕಗಳ ಸಂಖ್ಯೆ ಎಪ್ಪತ್ತೆರಡು.

ಬಂಗಾರ ಹಬ್ಬದ ವೇಳೆಗಾದರೋ ಬೆಂಗಳೂರು ವಿಶ್ವವಿದ್ಯಾಲಯದ – ಕವಿ ಕುಲಪತಿ ವಿನಾಯಕರ – ಆಶ್ರಯವೂ, ಆಚಾರ್ಯ ರಂ. ಶ್ರೀ. ಯವರ ನೇತೃತ್ವವೂ ಲಭಿಸಿ ಕರ್ಣಾಟಕ ಸಂಘ ಸುಖಿಯಾಗಿದೆ.

೧೫–೯–೧೯೬೮

# ಸಾವಿಲ್ಲದ ಸಾಹಿತ್ಯ

ಗಾಂಧಿ ಜನ್ಮಶತಮಾನೋತ್ಸವದ ಸಡಗರ. ಸುತ್ತಲೂ ಸೂತ್ರಯಜ್ಞ? ಮೌನ ಸೋಮವಾರ? ಉಪವಾಸ? ನನಗೆ ತಿಳಿಯದು. ಇಂದಿನ ಪೀಳಿಗೆಗೆ ಇದು ಅರ್ಥ ವಾಗುತ್ತದೆನ್ನುವ ನಂಬಿಕೆ ನನಗಿಲ್ಲ.

ನೆನಪುಗಳು ಕಾಡುತ್ತವೆ. ನನ್ನ ಓರಗೆಯವರು ಬದುಕನ್ನು ಅರಿಯತೊಡಗಿ ದಾಗ ಕಿವಿಗಡಚಿಕ್ಕುವ ಘೋಷಗಳು ಗಗನ ಅಡರುತ್ತಿದ್ದುವು. ಅದೆಷ್ಟು ಸಮ್ಮೋಹಕ! ಕಂಠ ಬಿರಿಯುವಂತೆ ಕೂಗಿದ್ದೇ ಕೂಗಿದ್ದು: "ಭಾರತ ಮಾತಾಕಿ ಜೈ!" "ಮಹಾತ್ಮ ಗಾಂಧಿ ಕಿ ಜೈ!" ಅದು ಹಿಂದಿ ಭಾಷೆ ಎಂಬುದೂ ನಮಗೆ ತಿಳಿಯದು. ಆಗ ಎಳೆಯರು ಆಡಿದ್ದೊಂದೇ ನುಡಿ: ಭಾರತೀಯ ಭಾಷೆ. ಜಪಿಸಿದ್ದು ಸ್ವಾತಂತ್ರ್ಯ ಮಂತ್ರ ಒಂದನ್ನೇ.

ಹಿರಿಯರು ಘೋರ ಆಟವನ್ನು ಆಗಲೇ ಆರಂಭಿಸಿದ್ದರು. ಅದು ಪ್ರತಿಫಲಾಪೇಕ್ಷೆ ಇಲ್ಲದ ತ್ಯಾಗದ ಕಥೆ. ಆಳುವ ಪರಕೀಯರಿಗೆ ಸವಾಲು ಹಾಕುವ ಬಿಳಿಯುಡುಗೆಯ ಬಿಳಿಟೋಪಿಯ ಜನ ವೀರಾಗ್ರಣಿಗಳಂತೆ, ಪವಿತ್ರ ಪುರುಷರಂತೆ, ಬೇರೆ ಲೋಕದಿಂದಲೇ ನಡೆದು ಬಂದವರಂತೆ ನಮಗೆ ಕಾಣಿಸುತ್ತಿದ್ದರು.

ಕುಡಿಮೀಸೆ ಚಿಗುರುವ ವೇಳೆಗೆ ಆಹ್ವಾನ ಬಂತು: ಮಾಡು ಇಲ್ಲವೆ ಮಡಿ! ಹೊರಗೆ ರಾಷ್ಟ್ರ ರಾಷ್ಟ್ರಗಳು ಪರಸ್ಪರರ ನಿರ್ನಾಮಕ್ಕೆ ಹೊರಟಿದ್ದ ಅಮಾನುಷ ಯುದ್ಧ. ಒಳಗೆ ಶತಮಾನಗಳ ದಾಸ್ಯವನ್ನು ಕೊನೆಗಾಣಿಸುವ ಧರ್ಮಸಮರ....

ಒಂದು ದಿನ ದೇಶಕ್ಕೆ ಸ್ವಾತಂತ್ರ್ಯ ಬಂದಿತು. ಅದೇನೆಂದು ಅರ್ಥಮಾಡಿಕೊಳ್ಳು ವುದಕ್ಕೆ ಮೊದಲೇ, ಅಮಾವಾಸ್ಯೆ ಕವಿಯಿತು. ಮಹಾತ್ಮನ ಹತ್ಯೆಯಾಯಿತು.

ಆ ದಿನದ ಹುಚ್ಚುಚ್ಚಾರಗಳ ಸೂತ್ರವನ್ನು – ಮೂಲವನ್ನು – ಹುಡುಕಲೆಂದು ಗಾಂಧೀ ಸಾಹಿತ್ಯವನ್ನು ಮತ್ತೆ ನೋಡಿದಾಗ, ಸಾಮಾನ್ಯ ಮನುಷ್ಯನೊಬ್ಬ ದೇವತ್ವ ಕ್ಕೇರಿದ ಯಾತನಾಮಯ ರೀತಿ ಗೋಚರವಾಗುತ್ತದೆ. ಈಗಿನ ಕಾಲದಲ್ಲಿ ಗಾಂಧಿ ಇರುವಂತಿಲ್ಲ. ಪಾರತಂತ್ರ್ಯದ ಅವಧಿಗೆಂದೇ ರೂಪುಗೊಂಡ ಬದುಕು ಅವರದು.

ವಿಚಿತ್ರ ಆಸೆಯೊಂದನ್ನು ಅವರು ವ್ಯಕ್ತಪಡಿಸಿದ್ದರು:

"ನನ್ನ ಬರೆವಣಿಗೆಯನ್ನೆಲ್ಲ ನನ್ನ ಶರೀರದೊಂದಿಗೇ ಸುಡಬೇಕು. ನಾನು ಮಾಡಿರುವುದು ಉಳಿಯುತ್ತದೆ; ಹೇಳಿರುವುದಾಗಲೀ ಬರೆದಿರುವುದಾಗಲಿ ಅಲ್ಲ."

ಆ ಜೀವ ಭಸ್ಮವಾಗಿ ಇಪ್ಪತ್ತು ವರ್ಷಗಳು ಸಂದುವಲ್ಲ? ಏನು ಉಳಿದಿದೆ ಈಗ?

ಅವರು ಮಾಡಿರುವುದನ್ನು ಒಂದೆರಡು ಪೀಳಿಗೆಗಳಷ್ಟೇ ಬಲ್ಲವು. ಅವುಗಳ್ಲ ನಶಿಸುವ ಕಾಲನೇಮಕ್ಕೆ ಗುರಿಯಾಗಿ ನಶಿಸುತ್ತಿವೆ. ಇನ್ನೊಂದು ಗಾಂಧೀ ಕೃತಿಯು ಮಾನವ ನೆನಪುಗಳೊಡನೆ ದಿನ ಕಳೆಯುತ್ತಿವೆ. ಕ್ರಮೇಣ ನೆನಪು ಮಸುಕಾಗುತ್ತಿವೆ. ಮುಂದಿನ ಪೀಳಿಗೆಗೆ ದೊರೆಯುವುದು ದಂತಕಥೆ ಮಾತ್ರ.

ಆದರೆ ಗಾಂಧಿಜಿ ಹೇಳಿರುವುದು, ಅರ್ಥಾತ್ ಬರೆದಿರುವುದು, (ಕಾಗದ ಹಳೆಯದಾದರೂ) ಗ್ರಂಥ ರೂಪದಲ್ಲಿ ಇನ್ನೂ ಉಳಿದಿದೆ!

* * * * *

“ತರ್ಕಶಾಸ್ತ್ರ ಒಂದರಿಂದಲೇ ಮಾನವ ಕುಲ ಬದುಕದು. ಅದಕ್ಕೆ ಕಾವ್ಯವೂ ಬೇಕು” ಎಂದವರು ಗಾಂಧಿಜಿ. ಅವರ ದೃಷ್ಟಿಯಲ್ಲಿ “ನಿಜವಾದ ಎಲ್ಲ ಕಲೆ ಆತ್ಮದ ಅಭಿವ್ಯಕ್ತಿ.”

ಅಲಂಕಾರಗಳ ಗೊಡವೆಗೆ ಎಂದೂ ಹೋದವರಲ್ಲ ಮಹಾತ್ಮರು. ಆದರೂ ಅವರು ಶ್ರೇಷ್ಠ ಬರೆಹಗಾರರು. ಅಕ್ಷರಗಳನ್ನು ಪದಗಳನ್ನು ನಿಶ್ಚಿತ ಉದ್ದೇಶಸಾಧನೆಗಾಗಿ ಅವರಂತೆ ಬಳಸಿದವರು ವಿರಳ. ಸೂಚ್ಯ ಮಾತುಗಳು. ನೇರ ಬರೆವಣಿಗೆ. ಎಲ್ಲವೂ ಕಾಳೇ, ಜೊಳ್ಳು ಇಲ್ಲವೇ ಇಲ್ಲ.

ಬರೆಹ ಸ್ವತಃ ಅವರ ಮೇಲೆ ಬೀರಿದ ಪ್ರಭಾವವಾದರೂ ಎಂಥದು!

ಹೂಬಿಸಿಲಲ್ಲಿ ಮಲಗಿದ್ದ ಮೋಹನದಾಸನ ಯುವಕ ಮನಸ್ಸನ್ನು ಮುಟ್ಟಿ ಎಚ್ಚರಿಸಿದ್ದು, ಲಿಯೊ ಟಾಲ್‌ಸ್ಟಾಯ್‌ಯ “The kingdom of God is within yon.” ರಸ್ಕಿನ್ನನ “Unto the last” ಓದಿದ ಮೇಲಂತೂ “ಆ ತತ್ವಗಳನ್ನು ಆಚರಣೆಗೆ ತರಲು ಸಿದ್ಧನಾಗಿ ಮುಂಜಾವಮೊಡನೆ” ಎದ್ದರು.

ದಕ್ಷಿಣ ಆಫ್ರಿಕಕ್ಕೆ ಹೋದ ಮೊದಲ ವರ್ಷ ಸುಮಾರು ಎಂಭತ್ತು ಪುಸ್ತಕಗಳನ್ನು ಓದಿದೆ ಎಂದು ಒಂದೆಡೆ ಅವರೇ ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ೧೯೧೩ ರಲ್ಲಿ ಅವರನ್ನು ದಕ್ಷಿಣ ಆಫ್ರಿಕದ ಬಿಳಿಯ ಸರಕಾರ ಒಂದು ವರ್ಷದ ಸೆರೆಮನೆವಾಸದ ಶಿಕ್ಷೆಗೆ ಗುರಿಮಾಡಿತು. “ವರ್ಷಗಟ್ಟಲೆ, ಅದೂ ೧೮೯೩ರಿಂದೀಚೆಗೆ ಓದಲು, ಅಭ್ಯಾಸ ಮಾಡಲು ನನಗೆ ಅವಕಾಶವೇ ದೊರೆತಿರಲಿಲ್ಲ. ಒಂದು ವರ್ಷವಿಡೀ ಒಂದೇ ಸಮನೆ ಓದಬಹುದಾದ ಸಾಧ್ಯತೆಯಿಂದ ನಾನು ಸಂತೋಷಭರಿತನಾದೆ.”

ಪ್ಲೇಟೋನ ‘Apology’ ಯನ್ನು ತಮ್ಮ ತಾಯ್ನುಡಿಯಾದ ಗುಜರಾತಿ ಭಾಷೆಗೆ ಗಾಂಧಿಜಿ ಅನುವಾದಿಸಿ ಪ್ರಕಟಿಸಿದರು. ಅದು ನಿಷಿದ್ಧವೆಂದು ದಕ್ಷಿಣ ಆಫ್ರಿಕದ ಸರಕಾರ ಸಾರಿತು (೧೯೦೩). ಭಾರತಕ್ಕೆ ೧೯೧೪ ರ ಕೊನೆಯಲ್ಲಿ ಗಾಂಧಿಜಿ ಮರಳಿದರಷ್ಟೆ. ರಸ್ಕಿನ್ನರ ‘Unto the last’ ನಿಬಂಧದ ಗುಜರಾತಿ ರೂಪಾಂತರವನ್ನು ‘ಸರ್ವೋದಯ’ ಎಂಬ ಹೆಸರಿಟ್ಟು (೧೯೧೯ರಲ್ಲಿ) ಪ್ರಕಟಿಸಿದರು.

ಮೊಟ್ಟಮೊದಲಿನದಾಗಿ ಪ್ರಕಟವಾದುದು ಅವರ ಸ್ವಂತದ ಕೃತಿಯೇ. ಅದು

ಪ್ರಕಟವಾದುದು ೧೯೦೪ ರಲ್ಲಿ. ಹೆಸರು : "ದಕ್ಷಿಣ ಆಫ್ರಿಕದಲ್ಲಿರುವ ಪ್ರತಿಯೊಬ್ಬ ಬ್ರಿಟನ್ನನಿಗೆ ಮನವಿ.'

೧೯೦೯ ರಲ್ಲಿ 'ಹಿಂದ್ ಸ್ವರಾಜ್' ಎಂಬ ಅವರ ಪುಸ್ತಕ ಪ್ರಕಟವಾಯಿತು. ೧೯೩೪ ರಲ್ಲಿ ಅದರ ಪುನರ್ಮುದ್ರಣವಾದಾಗ ಮುನ್ನುಡಿಯಲ್ಲಿ ಗಾಂಧಿಜಿ ಬರೆದರು: "ಇದರಲ್ಲಿ ಪ್ರತಿಪಾದಿತವಾಗಿರುವ ಅಭಿಪ್ರಾಯಗಳನ್ನು ಬದಲಿಸುವ ಅಗತ್ಯವೇನೂ ಕಂಡುಬಂದಿಲ್ಲ."

ಭಾರತದಲ್ಲಿ ಯೆರವಾಡಾ ಸೆರೆಮನೆಯಲ್ಲಿ ಬಂಧಿತರಾದಾಗ ಗಾಂಧಿಜಿ 'ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹ' ಎಂಬ ಪುಸ್ತಕವನ್ನು ಬರೆದರು. ಬಳಿಕ ಆತ್ಮವೃತ್ತವಾದ 'ಸತ್ಯಶೋಧನೆ' ಪ್ರಕಟವಾಯಿತು.

ಇಳಿವಯಸ್ಸಿನಲ್ಲೂ ಅವರು ಕಲಿಯುತ್ತಲೇ ಇದ್ದರು. ೧೯೪೨ ರಲ್ಲಿ ಆಗಾ ಖಾನರ ಅರಮನೆಯಲ್ಲಿ ಸ್ಥಾನಬದ್ಧತೆಯಲ್ಲಿದ್ದಾಗ ಅವರು ಓದುತ್ತಿದ್ದ ಗ್ರಂಥ– ಕಾರ್ಲ್ ಮಾರ್ಕ್ಸ್‌ರ 'ಡಾಸ್ ಕಾಪಿಟಾಲ್'.

* * * * *

ಗಾಂಧಿಜಿ ಸೃಜಿಸಿದ ಸಾಹಿತ್ಯ ವಿಪುಲ.

ದಕ್ಷಿಣ ಆಫ್ರಿಕದಲ್ಲಿ Indian Opinion ; ಭಾರತಕ್ಕೆ ಹಿಂತಿರುಗಿದ ಮೇಲೆ Young India ; ಆ ಬಳಿಕ Harijan – ಈ ಪತ್ರಿಕೆಗಳಲ್ಲಿ ಪ್ರತಿವಾರವೂ ಅವರ ಲೇಖನಗಳು ಅಚ್ಚಾಗುತ್ತಿದ್ದುವು. 'ಹರಿಜನ'ದಲ್ಲಿ ಅವರು ಬರೆದುದೆಲ್ಲ ಮಾರನೆಯ ದಿನವೇ ಆಗಿನ ೩೭ ಆಂಗ್ಲ ಹಾಗೂ ೧೧೫ ದೇಶೀಯ ಭಾಷೆಗಳ ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದುವು.

* * * * *

ಹೀಗೆ ಬರೆಹವನ್ನು ಪರಿಣಾಮಕಾರಿಯಾಗಿ ಬಳಸಿದರೂ "ನನ್ನ ಬರೆವಣಿಗೆ ಯನ್ನೆಲ್ಲ ನನ್ನ ಶರೀರದೊಂದಿಗೇ ಸುಡಬೇಕು," ಎಂದರು ಗಾಂಧಿಜಿ. ಹುಚ್ಚು ಮಾತು! ಗತಪ್ರಾಣವಾದ ಪಾರ್ಥಿವ ದೇಹ ಬೂದಿಯಾಗುತ್ತದೆ – ಆದರೆ ಅಮರರು ಸೃಷ್ಟಿಸಿದ ಸಾಹಿತ್ಯಕ್ಕುಂಟೆ ಸಾವು?

೧೩–೧೦–೧೯೬೮

# ವಿಶ್ವಮಾನ್ಯತೆ

ಯಾವುದೇ ಕ್ಷೇತ್ರದಲ್ಲಿ ಒಬ್ಬ ವ್ಯಕ್ತಿ ನಿರೀಕ್ಷಿಸಬಹುದಾದ ಅಂತಿಮ ಮನ್ನಣೆಯೆಂದರೆ ವಿಶ್ವಮಾನ್ಯತೆ. ಕಳೆದ ಕೆಲವು ದಿನಗಳಲ್ಲಿ ನಾಲ್ಕಾರು ಜನರಿಗೆ ಈ ಮಾನ್ಯತೆ ಲಭಿಸಿದೆ. 'ಶಾಂತಿ'ಗಾಗಿ 'ಸಾಹಿತ್ಯ'ಕ್ಕಾಗಿ ಇಬ್ಬರು ವೃದ್ಧರು ನೊಬೆಲ್ ಪಾರಿತೋಷಕ ಪಡೆದಿದ್ದಾರೆ. ಇವರ ಹೆಸರುಗಳು ಒಂದಕ್ಕಿಂತ ಹೆಚ್ಚು ಕಾರಣಗಳಿಗಾಗಿ ನೆನಪಿಡಬೇಕಾದಂಥವು.

ಫ್ರೆಂಚ್ ನಾಗರಿಕ ರೆನೆ ಕಾಸಿನ್, ಮಾನವ ಹಕ್ಕುಗಳ ಐರೋಪ್ಯ ನ್ಯಾಯಸ್ಥಾನದ ಅಧ್ಯಕ್ಷರು. ವಯಸ್ಸು ೮೧. ಅಮೆರಿಕದ ನೀಗ್ರೋ ನಾಯಕ ಮಾರ್ಟಿನ್ ಲೂಥರ್ ಕಿಂಗ್‌ಗೆ ಶಾಂತಿಗಾಗಿ ನೊಬೆಲ್ ಪಾರಿತೋಷಕ ನೀಡಿದ ಮೇಲೆ ಈ ವರ್ಷಗಳಲ್ಲಿ ಬೇರೆ ಯಾವ ಹೆಸರೂ ಸ್ವೀಡನ್ನಿನ ಅಕಾಡೆಮಿಗೆ ಸಮ್ಮತವಾಗಿರಲಿಲ್ಲ. (ಗಾಂಧಿಜಿಗೆ ದೊರೆಯದ್ದು ಅವರ ಏಕಲವ್ಯ ಶಿಷ್ಯ ಮಾರ್ಟಿನ್ ಲೂಥರ್ ಕಿಂಗ್‌ಗೆ ದೊರಕಿತುವೊಂದು ಸಮಾಧಾನ.) ಸ್ವತಂತ್ರ ಭಾರತದ ಕಪ್ತಾನ ಶಾಂತಿಸಾಧಕ ಜವಾಹರರಾಗಲೀ ಶಾಂತಿದೂತ ವಿನೋಬಾರಾಗಲೀ ಅಕಾಡೆಮಿಯ ದೃಷ್ಟಿಯಲ್ಲಿ ಸತ್ಪಾತ್ರರೆನಿಸಿರಲಿಲ್ಲ. ಈ ಪಾರಿತೋಷಕದ ನೀಡಿಕೆಗೆ ಬಹಿರಂಗವಾಗಿ ಚರ್ಚಿಸದ, ಅಥವಾ ಒಕ್ಕಣೆಯಲ್ಲಿ ಕಾಣಿಸದ 'ರಾಜಕೀಯ' ಕಾರಣಗಳಿರುತ್ತವೆಂಬುದು ಈಗ ಎಲ್ಲರಿಗೂ ತಿಳಿದಿರುವ ವಿಷಯ.

ಒಂದು ರೀತಿಯಲ್ಲಿ ರೆನೆ ಕಾಸಿನ್‌ರಂಥವರಿಗೆ ಪಾರಿತೋಷಕ ನೀಡುವುದರಿಂದ ಹೆಚ್ಚಿನ ತೊಂದರೆಗಳು ಉದ್ಭವಿಸುವುದಿಲ್ಲ. ೮೦ರ ಅನಂತರ ವ್ಯಕ್ತಿ ಸಾಧಾರಣವಾಗಿ ಹೆಚ್ಚು ಚರ್ಚಾಸ್ಪದನಾಗುವುದಿಲ್ಲ! ವಾಸ್ತವವಾಗಿ ಕಾಸಿನ್ ಹೆಸರು ಯಾವುದೋ ತಾಳೆಗರಿ ಓಲೆಯಿಂದ ಹೊರಟು ಬಂದಂತಿದೆ.

ಈ ಮಾತನ್ನು ಪುಷ್ಟೀಕರಿಸುವಂಥ ಸಂಗತಿಯೊಂದು ಸ್ಟೇಟ್ಸ್‌ಮನ್ ಪತ್ರಿಕೆಯಲ್ಲಿ ವರದಿಯಾಗಿದೆ.

ರೆನೆ ಕಾಸಿನ್ ಎಂಬವರಿಗೆ ನೊಬೆಲ್ ಶಾಂತಿ ಪಾರಿತೋಷಕ ಎಂಬ ಸುದ್ದಿ ಬಂದೊಡನೆ ಸ್ಟೇಟ್ಸ್‌ಮನ್ ಪತ್ರಿಕಾಲಯದವರು, ಇತರ ದಿನಪತ್ರಿಕೆಗಳಿಗಿಂತ ತಾವು ತುಸು ಮುಂದಾಗಬೇಕೆಂದು, ಆ ವ್ಯಕ್ತಿಯ ಭಾವಚಿತ್ರಕ್ಕಾಗಿ ಶೋಧ ನಡೆಸಿದರು. ಅವರ ಚಿತ್ರಭಂಡಾರದಲ್ಲಿ ಅದು ಸಿಗಲಿಲ್ಲ. ಫ್ರೆಂಚ್ ರಾಯಭಾರಿ ಕಚೇರಿಯನ್ನು

ಕೇಳಿ ಚಿತ್ರ ದೊರಕಿಸುವ ಕೆಲಸಕ್ಕೆ ಒಬ್ಬ ವರದಿಗಾರನನ್ನು ನಿಯೋಜಿಸಲಾಯಿತು. ಆತ ರಾಯಭಾರಿ ಕಚೇರಿಗೆ ಫೋನ್ ಮಾಡಿದ.

"ನಿಮ್ಮಲ್ಲಿ ರೆನೆ ಕಾಸಿನ್‌ರ ಫೋಟೋ ಇದೆಯೆ ?"

ಅತ್ತ ಕಡೆ ಕ್ಷಣ ಮೌನ. ಬಳಿಕ,

"ಯಾರು ? (ಯಾರ ಫೋಟೋ ಅಂದಿರಿ ?)"

ಉಚ್ಚಾರ ದೋಷವಿರಬಹುದೆಂದು ವರದಿಗಾರ ರೆನೆ ಕಾಸಿನ್ ಹೆಸರಿನ ಅಕ್ಷರಗಳನ್ನು ಬಿಡಿಸಿ ಹೇಳಿದ.

ಫೋನಿನ ಆ ಕೊನೆಯಲ್ಲಿದ್ದ ವ್ಯಕ್ತಿ ಹೇಳಿದ :

"ಕ್ಷಮಿಸಿ. ಆ ಹೆಸರನ್ನು ನಾವು ಕೇಳಿಯೇ ಇಲ್ಲ."

* * * * *

ಸಾಹಿತ್ಯದ್ದು ಶಾಂತಿಯಷ್ಟು ದ್ರವರೂಪದ್ದಲ್ಲ. ಏನಿಲ್ಲವೆಂದರೂ ನೊಬೆಲ್ ಸಾಹಿತ್ಯ ಪಾರಿತೋಷಕ ಪಡೆಯುವವನು ಸಾಹಿತಿಯಾದರೂ ಆಗಿರಬೇಕು. (ಚರ್ಚಿಲ್ ಸಾಹಿತಿಯಾಗಿರಲಿಲ್ಲ. ನೆನಪುಗಳ ಗ್ರಂಥಗಳನ್ನು ಬರೆದಿದ್ದರು ಎನ್ನೋಣ.) ಸಾಹಿತ್ಯ ಕೃತಿಗಳನ್ನು ಆತ ರಚಿಸಿರಬೇಕು.

ಈ ಸಲ ಆ ಮಾನ್ಯತೆ ದೊರೆತಿರುವುದು ಜಪಾನಿನ ಕಾದಂಬರಿಕಾರ ಯಸುನಾರಿ ಕವಬಾಟರಿಗೆ (ವಯಸ್ಸು ೬೯). "ಯುಕಿಗುನಿ" (ಹಿಮಾಚ್ಛಾದಿತ ನೆಲ) ಮತ್ತು "ಸೆಂಬಾಜುರಿ" (ಸಾವಿರ ಕೊಕ್ಕರೆಗಳು) – ಇವೆರಡು ಕವಾಬಾಟರ ಅತ್ಯಂತ ಪ್ರಖ್ಯಾತ ಕೃತಿಗಳು. ಬಹಳ ಹಿಂದೆ ಬರೆದ "ಯುಕಿಗುನಿ" ಎಂಟು ಭಾಷೆಗಳಲ್ಲೂ ಯುದ್ಧಾನಂತರದ ಕೃತಿಯಾದ "ಸೆಂಬಾಜುರಿ" ಏಳು ಭಾಷೆಗಳಲ್ಲೂ ಪ್ರಕಟವಾಗಿವೆ.

"ಜಪಾನೀ ಮನಸ್ಸಿನ ಸಾರವನ್ನು ಬಹು ಸಂವೇದನಾಶೀಲತೆಯಿಂದ ಅಭಿವ್ಯಕ್ತಗೊಳಿಸುವ ಶ್ರೇಷ್ಠ ಕಥನ ಕಲೆ"ಗಾಗಿ ಕವಾಬಾಟರಿಗೆ ನೊಬೆಲ್ ಸಾಹಿತ್ಯ ಪಾರಿತೋಷಕ – ಎಂದು ಅಕಾಡೆಮಿಯ ಪ್ರಕಟಣೆ ತಿಳಿಸಿದೆ.

ಈ ಬಣ್ಣನೆ ಎಲ್ಲ ರಾಷ್ಟ್ರಗಳ ಎಲ್ಲ ಶ್ರೇಷ್ಠ ಸಾಹಿತಿಗಳಿಗೂ ಅನ್ವಯಿಸುವಂಥಾದ್ದು. ಇಲ್ಲಿ ಮೌಲ್ಯಮಾಪನ ಕಷ್ಟದ ಕೆಲಸ. ೧೯೧೩ ರಲ್ಲಿ ರವೀಂದ್ರನಾಥ ಠಾಕೂರರು ವಿಶ್ವವಂದ್ಯರಾದ ಮೇಲೆ ಭಾರತದ ಯಾವ ಸಾಹಿತಿಗೂ ನೊಬೆಲ್ ಪಾರಿತೋಷಕ ದೊರೆಯಲಿಲ್ಲ. ಕಳೆದ ಅರ್ಧ ಶತಮಾನದಲ್ಲಿ ಉತ್ತಮ ಸಾಹಿತ್ಯ ಈ ದೇಶದಲ್ಲಿ ಸೃಷ್ಟಿಯಾಗಲೇ ಇಲ್ಲವೆಂದೆ ಇದರ ಅರ್ಥ? ಖಂಡಿತ ಇರಲಾರದು.

ಅದೇನೇ ಇರಲಿ, ಕಬಾವಾಟ ಈ ದಿನ ಜಗದ್ವಂದ್ಯರಾಗಿದ್ದಾರೆ. ಅವರ ಉತ್ತಮ ಕೃತಿಗಳು ಜಗತ್ತಿನ ಇನ್ನೂ ಅನೇಕ ಭಾಷೆಗಳಲ್ಲಿ ಪ್ರಕಟವಾಗುತ್ತವೆ. ಇದು ಸಾಹಿತಿಗಳೂ ಸಾಹಿತ್ಯಪ್ರಿಯರೂ ಸ್ವಾಗತಿಸುವ ಸಂಗತಿ.

* * * * *

ವಿಜ್ಞಾನದ ವಲಯದಲ್ಲಿ 'ರಾಜಕೀಯ'ದ ಆಟ (ನೊಬೆಲ್ ಪಾರಿತೋಷಕಕ್ಕೆ ಸಂಬಂಧಿಸಿ) ಬಹಳ ಮಟ್ಟಿಗೆ ನಡೆಯುವುದಿಲ್ಲ.

ಉದಾಹರಣೆಗೆ ನಮ್ಮ ಹರಿಗೋವಿಂದ ಖೊರಾನಾ. (ಚಿತ್ರ) ವಯಸ್ಸು–೪೬. ಉಚ್ಚ ಶಿಕ್ಷಣ ಇಂಗ್ಲೆಂಡಿನಲ್ಲಿ. ೧೯೪೮–೪೯ ರ ಅವಧಿಯಲ್ಲಿ ಸ್ವಿಟ್ಜರ್ಲೆಂಡಿನಲ್ಲಿ ಸಂಶೋಧನೆ. (ಅವರ ಸ್ವಿಸ್ ಪತ್ನಿ ಆಗಲೇ ದೊರೆತಿರಬೇಕು.) ಕೆನಡ–ಅಮೆರಿಕಗಳಲ್ಲಿ ದುಡಿಮೆ. ಜೀವರಸಾಯನ ಕ್ಷೇತ್ರದಲ್ಲಿ ಪ್ರಖ್ಯಾತರು. ಕಳೆದ ವರ್ಷ ಆ ಶಾಖೆಯ ಅಂತರರಾಷ್ಟ್ರೀಯ ಸಮ್ಮೇಳನ ಟೋಕಿಯೋದಲ್ಲಿ ಜರಗಿದಾಗ ಖೊರಾನಾ ಆ ಸಮ್ಮೇಳನದ ಉದ್ಘಾಟಕರಾಗಿದ್ದರು. ಪ್ರಯೋಗಶಾಲೆಯ ಸಂಶೋಧನೆಗಳಲ್ಲಿ ನಿರತರಾಗಿದ್ದ ಅವರು ಕಳೆದ ಏಪ್ರಿಲ್ ನಲ್ಲಿ ವಿಜ್ಞಾನಿಗಳ ಸಭೆಯಲ್ಲಿ ತಮ್ಮ ನಿಬಂಧವನ್ನು ಮಂಡಿಸಿದರು. ವೈಜ್ಞಾನಿಕ ಪತ್ರಿಕೆಗಳು "ನೊಬೆಲ್ ಪಾರಿತೋಷಕಕ್ಕೆ ಅರ್ಹವಾದ ನಿಬಂಧ," ಎಂದು ಹೊಗಳಿದುವು.

ಹೀಗೆ ಜನಸಾಮಾನ್ಯರಿಗೆ ಅರ್ಥವಾಗದೆ ಹೋದರೂ, ವಿಜ್ಞಾನಕ್ಷೇತ್ರದಲ್ಲಿ ಹೊಸ ಅಧ್ಯಾಯ ತೆರೆಯುವಂಥ, ತನ್ಮೂಲಕ ಜನಜೀವನದ ಮೇಲೆ ಪರಿಣಾಮ ಬೀರುವಂಥ ಸಂಶೋಧನೆಯನ್ನು ಈ ಮೊದಲೇ ಮಾಡಿದ ಹರಿಗೋವಿಂದರು, ಈಗ ನೊಬೆಲ್ ಪಾರಿತೋಷಕವನ್ನು ಪಡೆದುದರ ಮೂಲಕ ವಿಶ್ವಮಾನ್ಯರಾದರು.

(ಖೊರಾನಾ ಸಂಶೋಧನೆಗಳಿಂದ ಲೋಕಕ್ಕೆ ಏನು ಪ್ರಯೋಜನವಾಗುತ್ತದೆ? "ವಂಶಾನುಗತ ರೋಗಗಳನ್ನು ಹತೋಟಿಯಲ್ಲಿಟ್ಟು ಗುಣಪಡಿಸುವಂಥ ಔಷಧಗಳನ್ನು ತಯಾರಿಸಲು ಖೊರಾನಾ ಸಂಶೋಧನೆ ನೆರವಾಗುತ್ತದೆ.")

ಹರಿಗೋವಿಂದರು ನೊಬೆಲ್ ಪಾರಿತೋಷಕಕ್ಕೆ ಅರ್ಹರು – ಎಂದಿದ್ದಾರೆ ನಮ್ಮ ದೇಶದ ವೈಜ್ಞಾನಿಕ ಅಧಿಕಾರಿಗಳು ಹಲವರು. ಅವರ ಔದಾರ್ಯ! ಡಾಕ್ಟರೇಟ್ ಪಡೆದು ಉದ್ಯೋಗ ಹುಡುಕಿಕೊಂಡು ಖೊರಾನಾ ತಾಯ್ನಾಡಿಗೆ ಬಂದಾಗ ಯಾರೂ ಬಾಗಿಲು ತೆರೆಯಲಿಲ್ಲ. ಎರಡನೆ ದರ್ಜೆಯ ಉದ್ಯೋಗವೂ ಅವರಿಗೆ ದೊರೆಯಲಿಲ್ಲ. ನಿರಾಶರಾಗಿ ಅಮೆರಿಕಕ್ಕೆ ಹೋದರು. ಅಲ್ಲಿನ ಪ್ರಯೋಗಶಾಲೆಗಳಲ್ಲಿ ಸಂಶೋಧನೆ ನಡೆಸಿದರು. ಅಮೆರಿಕದ ಪೌರತ್ವವನ್ನೂ ಸ್ವೀಕರಿಸಿದರು.

೧೯೩೦ ರಲ್ಲಿ ನೊಬೆಲ್ ಪಾರಿತೋಷಕ ಪಡೆದ ಸರ್ ಸಿ. ವಿ. ರಾಮನ್ ನಮ್ಮವರೆಂದು ಬೆಂಗಳೂರಿನ ಪೌರರಿಗೆ ಹೆಮ್ಮೆ. ಖೊರಾನಾಗೆ ಅಂಥವೇ ಪಾರಿತೋಷಕ ಈಗ ದೊರೆತ ಸಂತೋಷದಲ್ಲೂ ಬೆಂಗಳೂರು ಮೆರೆಯಬಹುದು. ಯಾಕೆಂದರೆ, ಉದ್ಯೋಗ ಸಿಗುತ್ತದೇನೋ ಎಂದು ಬೆಂಗಳೂರಿನ ಟಾಟಾ ವಿಜ್ಞಾನಮಂದಿರಕ್ಕೆ ಖೊರಾನಾ ಬಂದಿದ್ದರು. ಇಲ್ಲಿ "ಇಲ್ಲ" ಎಂದರು. ಬದಲು, ಉದ್ಯೋಗ ನೀಡಿದ್ದರೆ, ಒಂದು ಉಪನ್ಯಾಸವನ್ನಷ್ಟೇ ಅವರು ಮಾಡಬೇಕಾಗುತ್ತಿತ್ತು!

೩–೧೧–೧೯೬೮

# ಉಡುಪಿಯ ನವಮಠ

ಶ್ರೀ............ದಾರಿಯಲ್ಲಿ ಸಿಕ್ಕಿದರು. ಚುಟುಕು ಕುಶಲ ಪ್ರಶ್ನೆಗಳಾದ ಮೇಲೆ ಕೇಳಿದರು :

"ನಿಮಗೆ ಆಹ್ವಾನ ಬಂದಿದೆಯೆ?"

ಸಂದರ್ಭ ಸ್ಪಷ್ಟವಾಗಲಿಲ್ಲ.

"ಎಲ್ಲಿಂದ?"

"ಉಡುಪಿಯಿಂದ."

"ಸಾಹಿತ್ಯಗೋಷ್ಠಿ ಆಗುತ್ತೇಂತ ಪತ್ರಿಕೆಗಳಲ್ಲಿತ್ತು. ಅದರ ವಿಷಯ ತಾನೆ?"

"ಹೌದು. ಅಡಿಗರ ಐವತ್ತನೆಯ ಹುಟ್ಟುಹಬ್ಬದ ಸನ್ಮಾನವೂ ಇದೆಯಂತೆ."

"ಬಂದಿಲ್ಲ."

"ನನಗೂ ಇಲ್ಲ."

ಅವರ ಎರಡು ಹುಬ್ಬುಗಳೂ ಪ್ರಶ್ನಾರ್ಥಕ ಚಿಹ್ನೆಗಳಾಗಿದ್ದುವು.

ನಾನು ಮುಗುಳ್ನಕ್ಕು, "ಬರಬಹುದು. ಇನ್ನೂ ದಿನ ಇದೆಯಲ್ಲ," ಎಂದೆ.

ಅವರು ತಲೆಯಲ್ಲಾಡಿಸಿ, "ಸಂಶಯ" ಎಂದರು.

* * * * *

ಅದಾಗಿ ಎಷ್ಟೋ ದಿನಗಳಾದುವು. ನಾಡಿನಲ್ಲಿ ಲಕ್ಷಗಟ್ಟಲೆಯಲ್ಲಿ ಪ್ರತಿವರ್ಷ ಆಮಂತ್ರಣ ಪತ್ರಿಕೆಗಳು ಅಚ್ಚಾಗುತ್ತವೆ. ಎಲ್ಲವೂ ಬರಬೇಕೆಂದು ಹೇಳುವುದಕ್ಕಾದೀತೇ? ಜನಸಮುದಾಯದಲ್ಲಿ ಇವೆಲ್ಲ ಹಂಚಿಹೋಗುತ್ತವೆ. ಕೆಲವು ನಮ್ಮನ್ನು ಹುಡುಕಿಕೊಂಡು ಬರುತ್ತವೆ.

ಅಂಥವುಗಳಲ್ಲಿ ಒಂದು ಎನಿಸಬಹುದಿತ್ತು, ಉಡುಪಿಯ ಆಮಂತ್ರಣ.

ನಾಲ್ಕು ವರ್ಷಗಳ ಹಿಂದಿನ ಸಂದರ್ಭ ನೆನಪಿಗೆ ಬರುತ್ತದೆ. ಕಾರವಾರದ ಸಾಹಿತ್ಯ ಸಮ್ಮೇಳನ. ವೈಚಾರಿಕ ಪ್ರವೃತ್ತಿಯ ಸ್ನೇಹಜೀವಿ ದಾಮೋದರ ಚಿತ್ತಾಲರು ಸ್ವಾಗತಾಧ್ಯಕ್ಷರಾಗಿ ದೊರೆತದ್ದು ಒಂದು ಸುಯೋಗ. ಸಮ್ಮೇಳನ ಹೊಸ ರೀತಿಯಲ್ಲಿ ನಡೆಯಲಿ ಎಂದು, 'ಕಳೆದ ಒಂದು ದಶಕ'ದ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳ ಅವಲೋಕನ ಕಾರ್ಯಕ್ರಮ ಇಟ್ಟುಕೊಂಡೆವು. ನಿಬಂಧ ಮಂಡಿಸಿದವರು ಒಬ್ಬರು. ಮಂಥನ ನಡೆಸಿದವರು ಮೂವರು ನಾಲ್ವರು. ಯಾರು ಯಾರನ್ನು ಕರೆಯಬೇಕು? ವಯಸ್ಸಾಗಿರುವ ಆಧುನಿಕರು. ಮಧ್ಯ ವಯಸ್ಸನ್ನು ಮುಟ್ಟಿರುವ ಪ್ರಗತಿ

ಶೀಲರು. ಒಬ್ಬಿಬ್ಬರನ್ನು ಬಿಟ್ಟು ಯುವಕರೇ ಆಗಿರುವ ಸಭ್ಯರು – ಎಲ್ಲರನ್ನೂ ಕರೆದವು. ಕನ್ನಡ ಸಾಹಿತ್ಯ, ವೇದಿಕೆಯ ಮೇಲೆ ವರ್ಣರಂಜಿತವಾಗಿ ಕಂಡಿತು.

ಕನ್ನಡ ಸಾಹಿತ್ಯ ನಿಂತ ನೀರು ಎಂದವರು ಯಾರು? ಎಲ್ಲ ಮೈಲಿಕಲ್ಲುಗಳೂ ಅಲ್ಲಿದ್ದುವು. ಎಲ್ಲ ಪಥಿಕರೂ ಅಲ್ಲಿದ್ದರು.

ನನ್ನ ಮನಸ್ಸಿಗೆ ಸಮಾಧಾನ ನೀಡಿರುವ ಕೆಲವೇ ಘಟನೆಗಳಲ್ಲಿ ಅದೊಂದು.

* * * * *

ಸಾಹಿತ್ಯ ಪರಿಷತ್ತು ಜೀವಂತ ಸಾಹಿತ್ಯಕ್ಕೆ ರಂಗಭೂಮಿಯಾದೀತು, ಮುಂದಿನ ಸಮ್ಮೇಳನಗಳು ಮತ್ತಷ್ಟು ಉಪಯುಕ್ತವೆನಿಸುವಂತೆ ನಡೆದಾವು – ಎಂದು ಆಶಿಸಿದ್ದೆ. ಹುಸಿಯಾಸೆ. ಪರಿಷತ್ತಿನ ಅಧ್ವರ್ಯುಗಳು ತೇರನ್ನು ಹಿಂದಕ್ಕೆ ತಳ್ಳಿಯೇಬಿಟ್ಟರು!

ಹೋಗಲಿ, ಬೇರೆ ಸಾಹಿತ್ಯ ಸಮಾರಂಭಗಳಲ್ಲಾದರೂ ಕಾರವಾರದ ದಾರಿ ಕಂಡೀತೇನೋ ಅಂದುಕೊಂಡೆ. ಮೈಸೂರು ವಿಶ್ವವಿದ್ಯಾಲಯ ನಡೆಸಿದ ಒಂದು ಸಾಹಿತ್ಯ ಕಾರ್ಯಕ್ರಮವನ್ನು ಬಿಟ್ಟು ಹೊರಗೆಲ್ಲ ಬರೀ ಮರಳು. ತುಳಿದ ಹೆಜ್ಜೆಗಳನ್ನು ಗುರುತಿಸುವುದು ಕಷ್ಟ.

ಯಾರ ದುರ್ದೈವ ಎನ್ನಲಿ?

* * * * *

ಐವತ್ತರ ಮೊಗೇರಿ ಗೋಪಾಲಕೃಷ್ಣ ಅಡಿಗರು, ಹುಚ್ಚುಚ್ಚಾರದ ದಿನಗಳಿಂದಲೂ ನನಗೆ ಸ್ನೇಹಿತರು.

'ಭಾವತರಂಗ'ದ ಮುದ್ರಣಕ್ಕೆಂದು ತುಮಕೂರಿಗೆ ಬಿಳಿಯ ಹಾಳೆಗಳ ರೀಮು ಗಳನ್ನು ಒಯ್ಯಲು ಮಲ್ಲೇಶ್ವರದ ರೈಲು ನಿಲ್ದಾಣಕ್ಕೆ ಅಡಿಗರು ಬಂದಾಗ, ಅಲ್ಲಿ ನಾನಿದ್ದೆ. ಇಪ್ಪತ್ತನಾಲ್ಕು ವರ್ಷಗಳಾದವು ಆ ಮಾತಿಗೆ. ಸಂಜೆಯ ಹೊತ್ತು. ಆದರೂ ನಮ್ಮ ಸುತ್ತೆಲ್ಲ ಮುಂಜಾವದ ಹೂಬಿಸಿಲು.

ಆ ತರಂಗಗಳು ದಂಡೆಗೆ ಅಪ್ಪಳಿಸಿ ಅದೆಷ್ಟೋ ಕಾಲವಾಯಿತು. ಅಡಿಗರು ಕಟ್ಟಿರುವ ಮನೆ ಕನ್ನಡ ಸಾಹಿತ್ಯದ ಅಭಿಮಾನ ಸೌಧ. ಇರುಳನ್ನು ನಿದ್ದೆಯನ್ನು ಅವರ ಚಂಡೆಮದ್ದಳೆ ಓಡಿಸಿವೆ. ಸಾರ್ಥಕವೆನ್ನಿಸುವ ಬದುಕಿನ ಮಧ್ಯಾಹ್ನವನ್ನು ಅಡಿಗರು ಮುಟ್ಟಿದ್ದಾರೆ.

'ಕವಿಗಳಲ್ಲಿ ಕವಿ' ಎಂದು ಆಚಾರ್ಯ ಹರಿದಾಸಭಟ್ಟರಿಂದ ಕರೆಸಿಕೊಂಡ ಅಡಿಗರು ಆ ಪ್ರಶಂಸೆಗೆ ಅಕ್ಷರಶಃ ಅರ್ಹರು.

ಭಾವತರಂಗಕ್ಕೆ ಸಾಕ್ಷಿಯಾಗಿದ್ದ ನಾನು, ಕಾವ್ಯಕಡಲಿನ ಭೋರ್ಗರೆತದ ವೇಳೆ ಯಲ್ಲೂ ಇರಬೇಕಾಗಿತ್ತು............

* * * * *

ಅಡಿಗರ ಮನೆಯಲ್ಲಿ ಓಡಾಡುತ್ತಿರುವವರಲ್ಲೂ ಒಬ್ಬಿಬ್ಬರು ನನ್ನ ಒಳ್ಳೆಯ ಮಿತ್ರರು. ಉಳಿದವರೂ ಸಹೃದಯರೇ ಇರಬೇಕು.

ಹಾಗಿದ್ದೂ ಬೇರೆ ಬಿಡಾರ ಯಾಕಾಯಿತು? ಸಾಹಿತ್ಯದಲ್ಲಿ ಗುಂಪುಗಾರಿಕೆ ಎಂದರೆ ಇದೇ ಏನು? ಪ್ರಗತಿಶೀಲರು ಕೆಲವರು ಮಠಕಟ್ಟಿ ಎಡವಿದ್ದರ ಅನುಕರಣ ಇವರೂ ಮಾಡಬೇಕೆ?

ಪ್ರಾಯಶಃ ಇದು ಮಣ್ಣಿನ ಗುಣವೇನೋ ಎನಿಸುತ್ತಿದೆ. ಗುಡಿಗಳಿಲ್ಲದೆ, ಕಟ್ಟು ಕಟ್ಟಳೆಗಳಿಲ್ಲದೆ, ಜನಿವಾರ ಶಿವದಾರಗಳಿಲ್ಲದೆ ಬದುಕೇ ಇಲ್ಲಿ ಸಾಧ್ಯವಿಲ್ಲವೇನೊ? ಪರಂಪರೆ – ಸಂಸ್ಕಾರ ಎಂದು ಇದಕ್ಕೇ ಹೇಳುವರೇನೋ?

ಅಡಿಗರ ಕಾವ್ಯ ನಾಡಿನ ಸಂಪತ್ತು. ಆ ಕಾರಣದಿಂದ ಅಡಿಗರು ಗುಂಪಿನ ಕವಿ ಹೇಗಾಗಬಲ್ಲರು? ಹೃದಯ ಸಮುದ್ರದ ವಿಸ್ತಾರ ಅವರ ಸುತ್ತು ಕಾಣಿಸಬೇಕೇ ಹೊರತು, ಭರ್ತ್ಸನೆ, ಮಾತ್ಸರ್ಯ, ಅಸಹನೆ, ಇತ್ಯಾದಿ ಜಾಡ್ಯಗಳ ಕುಣಿತ ಹೇಗೆ ಸರಿಯಾದೀತು?

ಹೋಗಲಿ, ಒಳ್ಳೆಯ ದಿನ ಯಾಕೆ ಸಂಕಟ? ದೃಷ್ಟಿ ತೆಗೆಯೋಣ.

೨೪–೧೧–೧೯೬೪

# ಮಾಯಾಲೋಕದಲ್ಲಿ ಮರಣ

ಖ್ಯಾತ ನವ್ಯಕವಿ ವಿಮರ್ಶಕ ನಿಸ್ಸಿಂ ಇಜೆಕೀಲ್ ಒಂದು ಸಂದರ್ಶನದಲ್ಲಿ, ಎಲ್. ಎಸ್. ಡಿ. ಮಾದಕದ್ರವ್ಯ ಸೇವನೆಯ ಬಗೆಗೆ ಹೇಳಿದುದನ್ನು ಆ – ಅವರಿಗೆ ಓದಲು ಕೊಟ್ಟೆ. ಪ್ರತಿಯಾಗಿ, ಲಂಡನ್ನಿನ 'ಪ್ರಾಕ್ಟೀಷನರ್' ಪತ್ರಿಕೆಯಲ್ಲಿ ಪ್ರಕಟವಾಗಿದ್ದ 'ಔಷಧಿ ಚಟ ಮತ್ತು ಕಲಾಪ್ರತಿಭೆ' ಎಂಬ ಲೇಖನವನ್ನು ಗುರುತು ಹಾಕಿ ಅವರು ನನಗೆ ನೀಡಿದರು.

ಎರಡರ ಮುಖ್ಯಾಂಶಗಳೂ ಇಲ್ಲಿವೆ.

* * * * *

"ನೀವು ಮೊದಲ ಬಾರಿ ಎಲ್. ಎಸ್. ಡಿ. ಸೇವಿಸಿದಾಗ ಏನಾಯಿತು ?

"ಎಲ್. ಎಸ್. ಡಿ. ಪರಿಣಾಮ ಬೀರತೊಡಗಿದಾಗ, ಎತ್ತರದ ಅಥವಾ ಬೇರೆಯೇ ಪ್ರಜ್ಞಾವಸ್ಥೆಯಲ್ಲಿ ನಾನಿದ್ದುದು ಖಚಿತವಾಯಿತು. ನನ್ನೊಳಗೆ, ನನ್ನ ಮನಸ್ಸಿನೊಳಗೆ, ಏನೋ ಒಡೆಯುತ್ತಿದ್ದಂತೆ ಭಾಸವಾಯಿತು. ಅದರಲ್ಲೊಂದು ಭಾಗ ಎಂದಿನಂತೆ, ನಿರೀಕ್ಷಿಸುತ್ತ, ಪೃಥಕ್ಕರಿಸುತ್ತ, ವಿಚಾರಗಳಿಗೆ ಧ್ವನಿ ನೀಡುತ್ತ ಕೆಲಸ ಮಾಡುತ್ತಿತ್ತು. ಇನ್ನೊಂದು ಭಾಗ ತೀರಾ ಬೇರೆಯಾದ ನೋಟದಿಂದ ಮನಸ್ಸನ್ನೂ ಶರೀರವನ್ನೂ ಅದರ ಪರಿಸರವನ್ನೂ ನೋಡುತ್ತಿದ್ದಂತೆ ಅನಿಸಿತು....ನಾನು ನಕ್ಕೆ....ಅದು ಅಲೆಯಾಗಿ ಶರೀರವನ್ನು ಬಿರಿದು ಬರುವ ಭೋರ್ಗರೆಯುವ ಶಕ್ತಿ. ಹೊಚ್ಚ ಹೊಸತಿನ, ಅಚ್ಚರಿಯ, ಭಯದ, ಜಾಗೃತಾವಸ್ಥೆಯ ಭಾವನೆಯನ್ನು ನನ್ನಲ್ಲಿ ಅದು ಉಂಟುಮಾಡಿತು."

ಸಾಗರದಾಚೆಯಿಂದ ಬಂದ ಲೇಖನದಿಂದ :

ಸಾಮ್ಯುಅಲ್ ಟೇಯ್ಲರ್ ಕೋಲ್‌ರಿಜ್. ೧೭–೧೮ನೆಯ ಶತಮಾನದ ಕವಿ. ೧೫ನೆಯ ವಯಸ್ಸಿನಲ್ಲೇ ಅಫೀಮು ತಿನ್ನತೊಡಗಿದ. ಅಫೀಮು ಸೇವಿಸಿ ಮತ್ತೇರಿದ್ದ ಅವಸ್ಥೆಯಲ್ಲೇ ಕೋಲ್‌ರಿಜ್ 'ಕುಬ್ಲಾಯಿಖಾನ್' ಕಾವ್ಯವನ್ನು ರಚಿಸಿದ.

ಮಿತ್ರನಿಗೆ ಬರೆದ ಒಂದು ಪತ್ರದಲ್ಲಿ ಕೋಲ್‌ರಿಜ್ ಹೀಗೆ ನುಡಿದ :

"ಎಚ್ಚರಗೊಳ್ಳು ಎಂದು ನನಗೆ ಹೇಳುತ್ತಿದ್ದೀಯೆ. ಎರಡೂ ತೋಳುಗಳಿಗೆ ಲಕ್ವಾ ಬಡಿದವನಿಗೆ, 'ಕೈಗಳನ್ನು ರಭಸವಾಗಿ ತಿಕ್ಕು, ಗುಣವಾಗ್ತದೆ,' ಅನ್ನು. ಅವನು ಉತ್ತರ ಕೊಡುತ್ತಾನೆ: 'ಅಯ್ಯೋ! ನನ್ನ ತೋಳುಗಳನ್ನು ಚಲಿಸೋಕಾಗೋದಿಲ್ಲ. ಅದೇ ನನ್ನ ದೂರು, ಅದೇ ನನ್ನ ಸಂಕಟ!'"

....ಥಿಯೋಫಿಲ್ ಗಾತಿಯರ್ ೧೯ನೆಯ ಶತಮಾನದ ಪ್ರಖ್ಯಾತ ಫ್ರೆಂಚ್ ಪತ್ರಿಕೋದ್ಯೋಗಿ, ವಿಮರ್ಶಕ, ಕವಿ, ಗದ್ಯ ಲೇಖಕ. ಅವನಿಗೆ ಹಾಶಿಷ್ ತಿನ್ನುವ ಚಟ. ಅವನು ಓಡಾಡುತ್ತಿದ್ದ ಬಳಗದಲ್ಲಿ ವಿಕ್ಟರ್ ಹ್ಯೂಗೋ, ಬಾಲ್ಜಾಕ್, ಬಾದಿಲೇಯರ್ ಮತ್ತಿತರರಿದ್ದರು.

ಹಾಶಿಷ್ ಸೇವಿಸಿದಾಗ ಪ್ರಜ್ಞೆಯಲ್ಲಿ ಏರುಪೇರಾಗಿ ಸ್ವಪ್ನಾವಸ್ಥೆಯುಂಟಾಗುತ್ತಿತ್ತು.

“ಆಗ ನನ್ನ ಶ್ರವಣಶಕ್ತಿ ಅದ್ಭುತವಾಗಿ ತೀಕ್ಷ್ಣಗೊಳ್ಳುತ್ತಿತ್ತು. ವರ್ಣಗಳ ಧ್ವನಿ ನನಗೆ ಕೇಳಿಸುತ್ತಿತ್ತು. ಹಸುರು, ನೀಲಿ, ಹಳದಿ ಧ್ವನಿಗಳು ಸುಸ್ಪಷ್ಟ ಅಲೆಗಳಾಗಿ ನನ್ನೆಡೆಗೆ ಬರುತ್ತಿದ್ದುವು.”

....೧೯ನೆಯ ಶತಮಾನದ ಬಾದಿಲೇಯರ್ ಕವಿ, ಹಾಶಿಷ್ ಅಫೀಮುಗಳನ್ನು ಸೇವಿಸುತ್ತಿದ್ದ. ಆದರೆ ಅವನ್ನು ‘ಸೈತಾನನ ಅತ್ಯಂತ ಶಕ್ತಿಶಾಲಿ ಹಾಗೂ ಮೋಹಕ ಆಕರ್ಷಣೆ’ ಎಂದು ಕರೆದು, ‘ಸೇವನೆ ಚಟವಾಗುವುದೆಂದರೆ ನೈತಿಕವಾಗಿ ಆತ್ಮಹತ್ಯೆ ಮಾಡಿಕೊಂಡಂತೆ ಎನ್ನುತ್ತಿದ್ದ.

....ಅದೇ ಶತಮಾನದ ಕತೆಗಾರ ಪೋಪಾನಾ. ೩೧ನೆಯ ವರ್ಷದಲ್ಲಿ ಅವನಿಗೆ ತಡೆಯಲಾಗದ ತಲೆಶೂಲೆ ಉಂಟಾಯಿತು. ಅದರ ನಿವಾರಣೆಗೆ ‘ಈಥರ್’ ಮೂಸತೊಡಗಿದ. ಅದು ಚಟವಾಯಿತು. ಜೊತೆಗೆ ಮಿತಿ ಮೀರಿದ ಮದ್ಯಪಾನವನ್ನೂ ಇತರ ಮಾದಕ ಪದಾರ್ಥಗಳ ಸೇವನೆಯನ್ನೂ ಆರಂಭಿಸಿದ. ೪೦ನೆಯ ವಯಸ್ಸಿನಲ್ಲೇ ಸಾವು ಬಂತು.

....ಆರ್ಥರ್ ರಿಂಬಾದ್ ಹದಿಮೂರನೆಯ ವಯಸ್ಸಿನಲ್ಲೇ ಮೆಚ್ಚುಗೆಗೆ ಪಾತ್ರವಾದ ಕವಿತೆಯನ್ನು ಬರೆದವನು. ೧೬ರಿಂದ ೨೦ರ ತನಕ ಅದ್ಭುತ ಕವಿತೆಗಳನ್ನು ಆತ ರಚಿಸಿದ. ಆದರೆ ಅದು, ಮದ್ಯ, ಮಾದಕ ಔಷಧಿ, ವ್ಯಭಿಚಾರಗಳಿಂದ ತುಂಬಿದ್ದ ಕಾಲಾವಧಿ.

‘ನಿದ್ರಾವಸ್ಥೆಯಲ್ಲಿ ಚಲಿಸುವುದು, ಭ್ರಾಮಕ ಕಾಲ್ಪನಿಕ ದೃಶ್ಯಗಳನ್ನು ಕಾಣುವುದು – ಇಂಥ ಅನುಭವಗಳು ರಿಂಬಾದ್‌ಗೆ ಆಗುತ್ತಿದ್ದುವು.’

ಇಪ್ಪತ್ತು ವಯಸ್ಸಾಗುವುದಕ್ಕೆ ಮೊದಲೇ ಸಾಹಿತ್ಯಕ್ಕೆ ವಿದಾಯ ನುಡಿದ.

....ಇಟಲಿಯ ಅಮೆದಿಯೊ ಮೊದಿಗ್ಲಿಯಾನಿ ೧೯ನೆಯ ಶತಮಾನದ ಖ್ಯಾತ ಚಿತ್ರಕಾರ, ಹಾಶಿಷ್ ಭಕ್ತ.

ಸಮಕಾಲೀನನೊಬ್ಬ ಬರೆದದ್ದು ಹೀಗಿದೆ:

“ಅವನ ಗಲ್ಲ ಸುಂದರವಾಗಿತ್ತು. ನಾವೆಲ್ಲ ಅದನ್ನು ಮೆಚ್ಚಿಕೊಂಡಿದ್ದೆವು. ಆದರೆ ಅನೇಕ ಸಲ ಕುರುಚಲು ಗಡ್ಡ ಅದನ್ನು ಮುಚ್ಚಿರುತ್ತಿತ್ತು. ಮುಖದಲ್ಲಿ ಆಗಲೆ

ಹಾಶಿಷ್ ಹಾಗೂ ಮಿತಿ ಮೀರಿದ ಮದ್ಯಸೇವನೆಯ ಪ್ರತಾಪದಿಂದಾಗಿ ಆಳವಾದ ನೆರಿ ಗೆರೆಗಳು ಮೂಡಿದ್ದುವು."

....ಕವಿ, ಲೇಖಕ, ಚಲಚ್ಚಿತ್ರ ನಿರ್ಮಾಪಕ, ಫ್ರೆಂಚ್ ಅಕಾಡೆಮಿಯ ಸದಸ್ಯ ಜೀನ್ ಕಾಕ್ಟೊ, ಇಪ್ಪತ್ತನೆಯ ಶತಮಾನದ ವರ್ಣರಂಜಿತ ವ್ಯಕ್ತಿ (ಐದು ವರ್ಷಗಳ ಕೆಳಗೆ ಕಾಲವಾದ).

ಕಾಕ್ಟೋ ಒಂದೆಡೆ ಹೇಳಿರುವುದಿದು :

"ಒಂದೇ ಸಮನೆ ಸುಖಾವಸ್ಥೆಯಲ್ಲಿರುವ ವ್ಯಸನಿಯು ಅಧೋಗತಿ ಹೊಂದಿದ್ದಾನೆ ಎಂದು ಯಾರಾದರೂ ಹೇಳುವುದು, ಅಮೃತಶಿಲೆಯನ್ನು ಮೈಕೆಲ್ ಏಂಜಲೋ ಕೆಡಿಸಿದ ಎಂದ ಹಾಗೆ; ಚಿತ್ರ ಬರೆಯುವ ಬಟ್ಟೆಯನ್ನು ರಾಫೇಲ್ ಕೊಳೆ ಮಾಡಿದ ಎಂದ ಹಾಗೆ; ಬರೆಯುವ ಕಾಗದ ಶೇಕ್ಸ್‌ಪೀಯರ್‌ನಿಂದ ಚಿತ್ತಾಯಿತು ಎಂದ ಹಾಗೆ; ಬಾಕ್ (ಸಂಗೀತಗಾರ) ನಿಂದ ಮೌನಭಂಗವಾಯಿತು ಎಂದ ಹಾಗೆ."

ಅಫೀಮು ಶರೀರಕ್ಕೆ ಹಾನಿಕರ ಎಂದು ಕಾಕ್ಟೋ ಹೇಳಿದರೂ ಅದರ ಸೇವನೆಯನ್ನು ಖಂಡಿಸಲಿಲ್ಲ.

"ನಾನು ದ್ರೋಹ ಬಗೆಯುತ್ತೇನೆಂದು ನಿರೀಕ್ಷಿಸಬೇಡಿ," ಎಂದ.

....ಲೇಖನ ಬರೆದಿರುವ ವೈದ್ಯರು ಕೊನೆಯಲ್ಲಿ ಆಡಿರುವ ಮಾತು ಇದು :

"ಹಿಂದಿನ ಕಾಲದ ಮಹಾವ್ಯಸನಿಗಳ ಅಧ್ಯಯನದಿಂದ ನಾವು ಕಲಿಯುವಂಥದು ನಿಸ್ಸಂದೇಹವಾಗಿಯೂ ಬಹಳ ಇದೆ."

* * * * *

ನೀತಿಬೋಧೆ ಏನು ?

ಎತ್ತರದ ಸೂಕ್ಷ್ಮ ಪ್ರಜ್ಞೆಯನ್ನೇರುವುದು, ಅರಿವಿನ ಮಾಯಾಲೋಕದಲ್ಲಿ ವಿಹರಿಸುವುದು, ಬಣ್ಣಗಳ ಧ್ವನಿ ಕೇಳುವುದು ಮಾದಕದ್ರವ್ಯ ಸೇವನೆಯ ಜಟವಿಲ್ಲದೆಯೇ ಸಾಧ್ಯವಾದರೆ ಅದೆಂಥ ಅದ್ಭುತವೆನಿಸಬಹುದು !

೨೨-೧೨-೧೯೬೮

# ಹುಟ್ಟುಹಬ್ಬದ ಶುಭಕಾಮನೆ

ಯೌವನದ ಪ್ರಬುದ್ಧಾವಸ್ಥೆಯಲ್ಲೂ ಎಳೆತನದ ನಾವೀನ್ಯ ಲಭ್ಯವಾಗುವುದು ಒಂದು ವೈಶಿಷ್ಟ್ಯ. ಕನ್ನಡ ಪತ್ರಿಕೆಗಳಲ್ಲಿ ಅಂತಹ ಸೌಭಾಗ್ಯವನ್ನು ಪಡೆದಿರುವುದು 'ಸಂಯುಕ್ತ ಕರ್ನಾಟಕ' ಮಾತ್ರ.

'ಸಂಯುಕ್ತ ಕರ್ನಾಟಕ' ಕನ್ನಡದ ಹಿರಿಯ ಪತ್ರಿಕೆ. ಇನ್ನೊಂದು ದೃಷ್ಟಿಯಲ್ಲಿ ಕಿರಿಯ ಪತ್ರಿಕೆ ಕೂಡಾ. 'ಪ್ರಜಾಧಾನಿ'ಯಲ್ಲಿ ತನ್ನ ಆವೃತ್ತಿಯನ್ನು ಅದು ಆರಂಭಿಸಿ ಹತ್ತು ವರ್ಷಗಳಷ್ಟೇ ಸಂದಿವೆ. 'ಜನವರಿ ೨೬'ರಂದು ಅದರ ಹತ್ತನೆಯ ಹುಟ್ಟುಹಬ್ಬ.

* * * * *

ಗಣರಾಜ್ಯದಿನೋತ್ಸವದ ಸಿದ್ಧತೆ ಆಚರಣೆಗಳ ಮಧ್ಯೆ, 'ಸಂಯುಕ್ತ ಕರ್ನಾಟಕ'ದ ಬೆಂಗಳೂರು ಆವೃತ್ತಿಯ ಜನ್ಮವರ್ಧಂತಿಯ ಸಂತೋಷ ಸಮಾರಂಭ.

ಹುಟ್ಟುಹಬ್ಬದ ಶುಭಾಶಂಸೆಗಳನ್ನು ಸಲ್ಲಿಸಿದವರು ಸಹಸ್ರಾರು ಜನ. ಶ್ರೀ ಸಾಮಾನ್ಯನಿಂದ ಹಿಡಿದು ಮಂತ್ರಿವರ್ಯರ ತನಕ ಜನ ಒಂದು ಪತ್ರಿಕೆಗೆ ಶುಭಾಶಯ ಸಲ್ಲಿಸುವುದರ ಅರ್ಥವೇನು? 'ಸಂಯುಕ್ತ ಕರ್ನಾಟಕ'ದ ಈ ವಿಶಿಷ್ಟ ಅರ್ಹತೆಗೆ ಕಾರಣವೇನು?

ಗಣರಾಜ್ಯದಿನೋತ್ಸವದ ಹಿಂದಿನ ಸಂಜೆ ಏರ್ಪಟ್ಟ ಉಪಹಾರಕೂಟದಲ್ಲಿ ನೆರೆದಿದ್ದ ಗಣ್ಯ ಜನರ ಸಮುದಾಯವೆದುರು, ಆ ಅರ್ಥವನ್ನು – ಕಾರಣವನ್ನು – ಕೈಗಾರಿಕೆ ಹಾಗೂ ವಾರ್ತಾ ಸಚಿವ ಎಂ. ರಾಜಶೇಖರಮೂರ್ತಿಯವರು ಬಿಡಿಸಿ ಹೇಳಿದರು: 'ಸಂಯುಕ್ತ ಕರ್ನಾಟಕ' ಉಳ್ಳವರ ಸೊತ್ತಲ್ಲ. ಅದು ನಡೆದು ಬಂದದ್ದು ಕಷ್ಟದಿಂದ ಕೂಡಿದ ದಾರಿ. ಅದರದು ರೋಮಾಂಚಕಾರಿಯಾದ ಇತಿಹಾಸ. ಅದು ಬದುಕಿರುವುದು, ಬೆಳೆದಿರುವುದು ಜನರ ಬಲದಿಂದಲೇ. 'ಸಂಯುಕ್ತ ಕರ್ನಾಟಕ'ಕ್ಕೆ ವ್ಯಾಪಾರೀ ದೃಷ್ಟಿ ಎಂದೂ ಪ್ರಧಾನವಾಗಿರಲಿಲ್ಲ.'

ಕರಾರುವಾಕ್ಕಾದ ಮಾತಿಗೆ ರಾಜಶೇಖರಮೂರ್ತಿ ಹೆಸರಾದವರು. (ಅಂಕಿ ಸಂಖ್ಯೆಗಳು ಅವರಿಗೆ ಕರತಲಾಮಲಕ.) ಉತ್ಪ್ರೇಕ್ಷೆ ಅತಿಶಯೋಕ್ತಿಗಳಿಗಂತೂ ಅವರ ಬತ್ತಳಿಕೆಯಲ್ಲಿ ಸ್ಥಾನವಿಲ್ಲ. ಇಷ್ಟರ ಮೇಲಿಂದಲೇ ಅವರ ಪ್ರಶಂಸೆಯ ನುಡಿಗೆ ಎಷ್ಟು ಬೆಲೆ ಎಂಬುದು ಸ್ಪಷ್ಟ.

ಸ್ವಾತಂತ್ರ್ಯಪ್ರಾಪ್ತಿಯ ಅನಂತರ ಪತ್ರಿಕೋದ್ಯಮ ಹಿಡಿದಿರುವ ದಾರಿಯನ್ನು

ಗಮನಿಸಿರುವವರಿಗೆ, 'ಸಂಯುಕ್ತ ಕರ್ನಾಟಕ'ದ ಮಹತ್ವವನ್ನು, ವಿಶಿಷ್ಟ ಗುಣ ವನ್ನು ಅರಿತುಕೊಳ್ಳುವುದು ಕಷ್ಟವಲ್ಲ.

* * * * *

ಬೆಂಗಳೂರು ತಲಪುವ ವೇಳೆಗಾಗಲೇ 'ಸಂಯುಕ್ತ ಕರ್ನಾಟಕ' ನಾಡಿನ ಬಲಾಢ್ಯ ಶಕ್ತಿ ಎನಿಸಿತ್ತು. ಆ ಪತ್ರಿಕೆ ಹಾಗೂ ಅದರ ಸೂತ್ರಧಾರರು ಇರಿಸಿಕೊಂಡಿದ್ದ ಗುರಿಗಳು ಎರಡು: ಸ್ವತಂತ್ರ ಭಾರತ ಮತ್ತು ಏಕತಂತ್ರ ಕರ್ನಾಟಕ. ೧೯೫೬ ರಲ್ಲಿ ಎರಡನೆಯ ಉದ್ದೇಶವೂ ಈಡೇರಿತು.

ಆ ಗುರಿಸಾಧನೆಗಾಗಿ ದುಡಿದಿದ್ದ 'ಸಂಯುಕ್ತ ಕರ್ನಾಟಕ' ನೂತನ ರಾಜ್ಯದ ರಾಜಧಾನಿಯಲ್ಲಿ ಪ್ರಕಟಣೆ ಆರಂಭಿಸಲು ತೀರ್ಮಾನಿಸಿದ್ದು ಅತ್ಯಂತ ಸ್ವಾಭಾವಿಕ. ತರ್ಕಬದ್ಧ. ಡಾ. ರಂ. ರಾ. ದಿವಾಕರರ ದೂರದೃಷ್ಟಿಗೆ ಇದು ನಿದರ್ಶನ.

ಈ ಜನನ ಮೊದಲಿನದಕ್ಕಿಂತ ಭಿನ್ನ. ಮೂವತ್ತನಾಲ್ಕು ವರ್ಷಗಳಿಗೆ ಹಿಂದೆ ಇದ್ದುದು ಹತ್ತುಸಾವಿರ ರೂಪಾಯಿಗಳ ಸಾಲದ ಹೊರೆ. ಬೆಂಗಳೂರು ಆವೃತ್ತಿ ಯನ್ನು ಹೊರಡಿಸಿದ ವೇಳೆಗಾದರೋ ಲೋಕಶಿಕ್ಷಣ ಟ್ರಸ್ಟ್ ಒಂದು ಬಲಾಢ್ಯ ಸಂಸ್ಥೆ. ಅದು ದಿನಪತ್ರಿಕೆಯನ್ನು, ಸಾಪ್ತಾಹಿಕ 'ಕರ್ಮವೀರ,' ಮಾಸಿಕ 'ಕಸ್ತೂರಿ'ಗಳನ್ನು, ಜನಪ್ರಿಯಗೊಳಿಸಿತ್ತು. ಹಲವು ಗ್ರಂಥಗಳ ಕಾಣ್ಕೆಯನ್ನೂ ನೀಡಿತ್ತು. ಅಂತಹ ಸಂಸ್ಥೆಗೆ ಹೊಸ ಆವೃತ್ತಿಯ ಪ್ರಕಟಣೆ ಕಷ್ಟವಾಗಿರಲಿಲ್ಲ.

ಅಂಥದರಲ್ಲೂ ಪಾದಕ್ಕೆ ಚುಚ್ಚಿದ ಮುಳ್ಳಾಗಿದ್ದುದು, ಈ ಪತ್ರಿಕೆಯನ್ನು ನಡೆ ಸುವವರು 'ಹೊರಗಿನವರು' ಎಂಬ ಭಾವನೆ. ಎಲ್ಲ ಬಗೆಯ ಏಕೀಕರಣವಾದರೂ ಭಾವನೆಯ, ಹೃದಯದ ಏಕೀಕರಣ ಉಳಿದಿತ್ತು. ಈಗಲೂ ಉಳಿದಿದೆ. ಆ ಕಾಣದ ಗೋಡೆಯನ್ನು ಕೆಡವಿ ನಾಲ್ಕು ದಿಕ್ಕುಗಳಲ್ಲೂ ಹೈಚಾಚುವುದು ಯೋಚಿಸಿದಷ್ಟು ಸುಲಭವಲ್ಲ. ಅದು ನಿಧಾನವಾಗಿಯಾದರೂ ನಿರಂತರವಾಗಿ ಸಾಗಬೇಕಾದ ಕೆಲಸ. ಅದಕ್ಕೆ ಬೇಕಾಗಿರುವುದು ಸಮಗ್ರನೋಟ, ಸೇವಾದೃಷ್ಟಿ. 'ಸಂಯುಕ್ತ ಕರ್ನಾಟಕ' ಹಾಗೂ ಅದರ ಒಡನಾಡಿ ಪತ್ರಿಕೆಗಳು – ಆ ಎಲ್ಲ ಪತ್ರಿಕೆಗಳ ಸಂಚಾಲಕರು – ಪ್ರೇರಿತರಾಗಿರುವುದು ಆ ಸದಾಶಯದಿಂದಲೇ.

* * * * *

೨೬ ನೆಯ ದಿನಾಂಕ ರಾಷ್ಟ್ರಜೀವನದಲ್ಲಿ ಪವಿತ್ರವಾದ ದಿನ. ಪದ್ಧತಿಯ ಕಾರ್ಯ ಕ್ರಮಗಳನ್ನು ಮುಗಿಸಿ ರಾಜ್ಯಪಾಲ ಗೋಪಾಲ ಸ್ವರೂಪ ಪಾಠಕರೂ ಮುಖ್ಯಮಂತ್ರಿ ವೀರೇಂದ್ರ ಪಾಟೀಲರೂ 'ಸಂಯುಕ್ತ ಕರ್ನಾಟಕ'ದ ಹುಟ್ಟುಹಬ್ಬದ ಆಚರಣೆಯಲ್ಲಿ ಭಾಗವಹಿಸಿದರು. ಬೆಂಗಳೂರು ಆವೃತ್ತಿಯನ್ನು ದಶಕದ ಹಿಂದೆ ಉದ್ಘಾಟಿಸಿದವರು ರಾಜ್ಯದ ಆಗಿನ ಮುಖ್ಯಸ್ಥ ಶ್ರೀ ಜಯಚಾಮರಾಜ ಒಡೆಯರು. ಈಗಿನ ರಾಜ್ಯ ಪಾಲರು ಕಾರ್ಯಕ್ರಮದ ಹಿರಿತನಕ್ಕೆಂದು ಬಂದುದು ಸಂದರ್ಭೋಚಿತವಾಗಿತ್ತು.

'ಪ್ರಜಾಸತ್ತೆಯಲ್ಲಿ ಪತ್ರಿಕಾ ಸ್ವಾತಂತ್ರ್ಯ ಮಹತ್ವಪೂರ್ಣವಾದದ್ದು. ಪತ್ರಿಕೆ ನಡೆಸುವ ಮಾಲಿಕರಲ್ಲಿ ಉನ್ನತ ಗುಣಸಂಪನ್ನತೆಗಳು ಅಗತ್ಯ.'

'ರಾಷ್ಟ್ರೀಯ ಪತ್ರಿಕೆಗಳನ್ನು ಉಳಿಸಿಕೊಂಡು ಹೋಗುವ ಹೊಣೆ ಜನತೆಯದು.'

'ಪ್ರಜಾಪ್ರಭುತ್ವ ಉಳಿದಿರುವುದು ಪತ್ರಿಕೆಗಳಿಂದ. ಅದರ ಭವಿಷ್ಯವೂ ಪತ್ರಿಕೆಗಳನ್ನು ಅವಲಂಬಿಸಿದೆ.'

'ರಾಷ್ಟ್ರದ ಸಾಮಾಜಿಕ ಆರ್ಥಿಕ ಸಾಂಸ್ಕೃತಿಕ ಬೆಳವಣಿಗೆಗಳಲ್ಲಿ ಪತ್ರಿಕೆಗಳ ಪಾತ್ರ ಮಹತ್ವದ್ದು.'

'ಯಾವುದೇ ದೇಶದ ಸಂಸ್ಕೃತಿಯ ಏಳ್ಗೆ ಪತ್ರಿಕೆಗಳಿಂದ ಮಾತ್ರ ಸಾಧ್ಯ.'

—ಸಮಾರಂಭದಲ್ಲಿ ಕೇಳಿಸಿದ ಈ ಎಲ್ಲ ಮಾತುಗಳು, ರೋಟರಿ ಯಂತ್ರಗಳ ಗರ್ಜನೆಯನ್ನೂ ಮೀರಿಸಿ ನಿನದಿಸುವಷ್ಟು ಶಕ್ತಿ ಪಡೆದಿದ್ದುವು.

'ಸಂಯುಕ್ತ ಕರ್ನಾಟಕ'ಕ್ಕಂತೂ ಇವು ಬೋಧಿಸುವ ಮಂತ್ರಗಳಲ್ಲ, ನಿತ್ಯ ಗಾಯತ್ರಿ.

* * * * *

ಮುಖ್ಯಮಂತ್ರಿ ವೀರೇಂದ್ರ ಪಾಟೀಲರು 'ಸಂಯುಕ್ತ ಕರ್ನಾಟಕ'ದಿಂದ ತಾವು ಕನ್ನಡ ಕಲಿತೆನೆಂದು ನುಡಿದುದು ಹೃದಯಸ್ಪರ್ಶಿಯಾಗಿತ್ತು. ನಿಜಾಮರ ಆಳ್ವಿಕೆಯಲ್ಲಿ ಕನ್ನಡ ಜನಾಂಗದ ಭಾಷೆ ಸಂಸ್ಕೃತಿಗಳು ಲಯವಾಗತೊಡಗಿದ್ದ ಕಾಲ. ಆಗ ಕನ್ನಡ ಭಾಷೆಯನ್ನು ಜೀವಂತವಾಗಿ ಇರಿಸಿದವರು ಕನ್ನಡ ತಾಯಂದಿರು ಹಾಗೂ 'ಸಂಯುಕ್ತ ಕರ್ನಾಟಕ' ದಿನಪತ್ರಿಕೆ.

ಪತ್ರಿಕೆಯ ಹುಟ್ಟುಹಬ್ಬದ ದಿನ ಇದಕ್ಕಿಂತ ಹೆಚ್ಚು ಬೆಲೆಯ ಶುಭಕಾಮನೆ ಬೇರೆ ಬೇಕೆ?

ಅನಂತಕಿರಣದ ದಿವಾಕರರು "ಸಮೃದ್ಧ ಕರ್ನಾಟಕ ಕನಸನ್ನು ನನಸು ಮಾಡುವುದಕ್ಕಾಗಿ 'ಸಂಯುಕ್ತ ಕರ್ನಾಟಕ' ದುಡಿಯುತ್ತಿದೆ" ಎಂದರು. ಇದು ಹುಟ್ಟುಹಬ್ಬದ ಪವಿತ್ರ ನಿವೇದನೆ.

೯–೨–೧೯೬೯

# ಬೇಕು – ಬೇಡದ ಮನಸ್ಸು

ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಏರ್ಪಡಿಸಿದ 'ಪ್ರಬುದ್ಧ ಕರ್ನಾಟಕ'ದ ಚಿನ್ನದ ಹಬ್ಬದ ಸಮಾರಂಭಗಳಲ್ಲಿ, ಕನ್ನಡ ಕಾದಂಬರಿಗಳ ಪ್ರಪಂಚವನ್ನು ಕುರಿತ ವಿಚಾರಗೋಷ್ಠಿ ಹೆಚ್ಚಿನ ಆಸಕ್ತಿ ಕೆರಳಿಸಿತು. ಕಾದಂಬರಿ ಬಹುಜನ ಅಕ್ಷರಸ್ಥರಿಗೆ ಸಮೀಪವಾಗಿರುವುದು ಆ ಬಗೆಯ ಕುತೂಹಲಕ್ಕೆ ಒಂದು ಕಾರಣ; ಕಾದಂಬರಿ ಪ್ರಪಂಚದಲ್ಲಿನ ನವ್ಯತೆಯನ್ನು ಕುರಿತು ನಡೆದ ಬಿಸಿಯಾದ ವಿಚಾರವಿನಿಮಯ ಇನ್ನೊಂದು ಕಾರಣ.

ಕನ್ನಡ ಕಾದಂಬರಿಗಳ ಪ್ರಪಂಚದಲ್ಲಿನ ಸಾಮಾಜಿಕ ಸಮಸ್ಯೆಗಳು, ಇತಿಹಾಸ, ಪ್ರಾದೇಶಿಕತೆ, ರಾಷ್ಟ್ರೀಯತೆ – ಈ ಅಂಶಗಳನ್ನು ಕುರಿತು ಡಾ. ತಿಪ್ಪೇರುದ್ರಸ್ವಾಮಿ, ಕೊರಟಿ, ರಾಮರಾವ್, ಎಲ್. ಎಸ್. ಶೇಷಗಿರಿರಾವ್ ಮಾತನಾಡಿದರು.

ಈ ಬಗೆಯ ವರ್ಗೀಕರಣ ಅರ್ಥ ಕಳೆದುಕೊಂಡಿದೆ ಎಂದರು 'ಸಂಸ್ಕಾರ'ದ ಅನಂತಮೂರ್ತಿ. ವಿವೇಚನೆಯುಳ್ಳವರಿಗೆ ಆಹ್ವಾನವಾಗಿತ್ತು ಅವರು ಮಂಡಿಸಿದ ಅಭಿಪ್ರಾಯ.

ಆದರೆ ವರ್ಗೀಕರಣದ ಮಾತನ್ನು ಅಲ್ಲಿಗೇ ನಿಲ್ಲಿಸುವಂತಿಲ್ಲ. 'ಹೊಸತನ'ವನ್ನು ಕುರಿತು ವಿಚಾರಗಳನ್ನು ಮುಂದಿರಿಸಿದ ವಿಮರ್ಶಕ ಗಿರಡ್ಡಿ ಗೋವಿಂದರಾಜರಿಗೆ ಬೇರೊಂದು ಬಗೆಯ ವರ್ಗೀಕರಣ ಬಲು ಇಷ್ಟ. ನವೋದಯ, ಪ್ರಗತಿಶೀಲ, ನವ್ಯ – ಎಂದು ಸಾಹಿತ್ಯಕೃತಿಗಳನ್ನು ವಿಂಗಡಿಸದೆ ಅವರಿಗೆ ಸಮಾಧಾನವಿಲ್ಲ.

ಈ ಬಗೆಯ ವಿಂಗಡಣೆ ಎಷ್ಟರಮಟ್ಟಿಗೆ ಸಾಧು? ಎಷ್ಟರ ಮಟ್ಟಿಗೆ ಅಗತ್ಯ?

*　　*　　*　　*　　*

ಕನ್ನಡ ನವೋದಯ ಕಾಲದಲ್ಲಿ ಬೆಳಕಿಗೆ ಬಂದವರು ಯಾರೂ – ಈಗ ಹಿರಿಯರೆನಿಸಿಕೊಂಡಿರುವವರು – 'ನಾನು ನವೋದಯ ಲೇಖಕ,' 'ನನ್ನದು ನವೋದಯ ಕೃತಿ' ಎನ್ನುವುದಿಲ್ಲ.

ನವೋದಯವಾಗಿ ಕಾಲು ಶತಮಾನದಮೇಲೆ 'ಪ್ರಗತಿಶೀಲ' ಎಂಬ ಪದ ಬಳಕೆಗೆ ಬಂತು. ಪ್ರಗತಿಶೀಲ ಸಾಹಿತಿಗಳು ಎಂದು ಕೆಲವರು ಕರೆಯಲ್ಪಟ್ಟರು. ಆ ಗಾಳಿ ಬೀಸಿ ಈಗ ಕಾಲು ಶತಮಾನವೇ ಕಳೆದಿದೆ. ಯಾರೂ 'ನಾನು ಪ್ರಗತಿಶೀಲ' ಎಂದು ಕರೆದುಕೊಳ್ಳುತ್ತಿಲ್ಲ; 'ನನ್ನದು ಪ್ರಗತಿಶೀಲ ಕೃತಿ' ಎನ್ನುವುದಿಲ್ಲ.

ನಾವು ಬೇರೆಯೇ ಬಿಡಾರದ ಬಿಕ್ಕುಗಳೆಂದು ಈಗ ಹಟತೊಟ್ಟಿರುವವರು, ಈ ಹತ್ತು ಹದಿನೈದು ವರ್ಷಗಳಲ್ಲಿ ನವ್ಯಕಹಳೆಯನ್ನು ಮೊಳಗಿಸಿದವರು ಮಾತ್ರ.

ತಲೆದೂಗುವ ಹಾಗಿತ್ತು ಗಿರಡ್ಡಿಯವರ 'ಸ್ವಧರ್ಮ'ನಿಷ್ಠೆ. ಸಾಹಿತ್ಯದ ಸಹಜ ಅವಸ್ಥಾಂತರ, ಪ್ರವಾಹ ಅನಿವಾರ್ಯವಾಗಿ ತಲಪಿರುವ ಬೇರೊಂದು ಮಜಲು, ಕಣ್ಪಟ್ಟಿಯ ಕಾರಣದಿಂದ ಗಿರಡ್ಡಿಯವರಿಗೆ ವಿಕೃತವಾಗಿ ತೋರುತ್ತವೆ. ನೂತನ ಧರ್ಮದ ಅನುಯಾಯಿಗೆ ಸಹಜವಾಗಿರುವ ಅಸಹನೆ, ಅಸಹಿಷ್ಣುತೆ, ತಾವು ಈಸಾಡುವ ನೀರಷ್ಟೇ ಮಹಾನದಿ ಎಂಬ ಭ್ರಮೆಗೆ ಗಿರಡ್ಡಿಯವರನ್ನು ಒಳಗು ಮಾಡಿವೆ.

ಸಾಹಿತ್ಯದಲ್ಲಿ ಸ್ವಜನಪಕ್ಷಪಾತ ಹಾವಳಿ ಉಂಟುಮಾಡುವುದಕ್ಕೆ ಮೇಲಿನ ಧೋರಣೆ ಕಾರಣವಾಗುತ್ತದೆ.

* * * * *

ಲೋಕದಲ್ಲಿ ಸಾಮಾಜಿಕ ಬೆಳವಣಿಗೆ ಏಕಪ್ರಕಾರವಾಗಿಲ್ಲ. ಅತ್ಯಾಧುನಿಕ ವೈಜ್ಞಾನಿಕ ಬೆಳವಣಿಗೆಯೊಂದಿಗೆ ಕುರುಡು ನಂಬಿಕೆಗಳ ಸಮಾಜವೂ ಸಹಬಾಳ್ವೆ ನಡೆಸುತ್ತದೆ. ಒಂದೊಂದು ರಾಷ್ಟ್ರದಲ್ಲಿ ಒಂದೊಂದು ಗುಣಕ್ಕೆ ಅಗ್ರಸ್ಥಾನ. ಭಾರತ ದಂತಹ ರಾಷ್ಟ್ರಗಳಲ್ಲಿ ಬೇರೆ ಬೇರೆ ಶತಮಾನಗಳು ಒಟ್ಟಾಗಿ ಕಾಣಸಿಗುತ್ತವೆ. ಆ ಕಾರಣದಿಂದ ಇಲ್ಲಿನ ಸಾಹಿತ್ಯ ತನ್ನದೇ ಆದ ರೂಪವನ್ನು ತಳೆಯುತ್ತದೆ.

— ಹೆಚ್ಚುಕಡಮೆ ಈ ಬಗೆಯಾಗಿ ಅನಂತಮೂರ್ತಿಯವರು ಮಾಡಿದ ಪೃಥಕ್ಕರಣ, ನಿಜವನ್ನು ಕುರಿತ ಶೋಧನೆಗೆ ನೆರವಾಗುವಂತಿತ್ತು.

ಬದುಕಿನ ವಿಸ್ತಾರವನ್ನು ಬಿಟ್ಟು ಶೂನ್ಯದಲ್ಲಿ ಸಾಹಿತ್ಯ ಸೃಷ್ಟಿಯಾಗುವುದಿಲ್ಲ. ಬರೆಯುವ ಲೋಕದ ಬಹ್ವಂಶ ಜನರೆಲ್ಲ ಒಪ್ಪುವ ಮಾತು. ಆ ಬದುಕೋ ನಂಬಿದವರ ನಾಕ – ನರಕ. ಒಬ್ಬೊಬ್ಬರದು ಒಂದೊಂದು ದೃಷ್ಟಿ. ಆ ಕಾರಣದಿಂದಲೇ ಸಾಹಿತ್ಯ ದಲ್ಲಿ ವೈವಿಧ್ಯ.

ತಮ್ಮ ದೃಷ್ಟಿಯೊಂದೇ ಸರಿಯಾದದ್ದು – ಎನ್ನುವ ಛಲಕ್ಕೂ ಮೂರು ಕಾಲಿನ ಮೊಲಕ್ಕೂ ವ್ಯತ್ಯಾಸವಿಲ್ಲ.

...."ಹೊಸತು – ಹಳತು ಎಂದು ಹೇಳುವುದಕ್ಕಾಗುವುದಿಲ್ಲ. ಸಾಹಿತ್ಯ ತನ್ನ ಕೆಲಸವನ್ನು ಸಮರ್ಪಕವಾಗಿ ಮಾಡಿದೆಯೋ ಎಂಬುದು ಮುಖ್ಯ,"

— ಎಂದರು ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದ ಪ್ರೊ. ಇನಾಂದಾರರು.

ಗುಣದೋಷಗಳ ಮೌಲ್ಯ ಮಾಪನಕ್ಕೆ, ಸಮರ್ಪಕತೆಯ ಮಾನದಂಡ ಸಹಾಯಕ ವಾಗುತ್ತದೆ.

* * * * *

ಹೀಗಿರುತ್ತ, ನವೋದಯ, ಪ್ರಗತಿಶೀಲ, ನವ್ಯ ಎಂದು ಪ್ರತ್ಯೇಕ ಚೀಟಿಗಳನ್ನು

ಅಂಟಿಸುವುದೇಕೆ? ಸಾಹಿತ್ಯ – ಎಂದರೆ ಸಾಲದೆ? ಕಾಲದ ಪರೀಕ್ಷೆಯಲ್ಲಿ ಯಾವ ಕೃತಿ ಶ್ರೇಷ್ಠ, ಯಾವುದು ಅಲ್ಲ ಎಂಬುದು ನಿರ್ಧಾರವಾಗಿಯೇ ಆಗುತ್ತದೆ.

ಅನಂತಮೂರ್ತಿಯವರ ಚಿಂತನಪರತೆ, ಹಣೆಪಟ್ಟಿಗಳ ಅಗತ್ಯವಿಲ್ಲ – ಎಂಬ ನೆಲೆಗೆ ಅವರನ್ನು ತಂದು ನಿಲ್ಲಿಸಿದೆ.

[‘ ಪ್ರಗತಿಶೀಲರು ಮಠ ಸ್ಥಾಪಿಸಬಾರದು. ಪ್ರಗತಿಶೀಲತೆ, ಬಾವುಟ ಹಿಡಿದವರ ಗುತ್ತಿಗೆಯಲ್ಲ ’–ಎಂಬ ಮಾತೂ ಹಿಂದೆ ಕೇಳಿಸಿತ್ತು.]

ಪ್ರಾಮಾಣಿಕರಾದ ಎಲ್ಲ ಲೇಖಕರ ಹಂಬಲ ಒಂದೇ – ಒಳ್ಳೆಯ ಸಾಹಿತ್ಯವನ್ನು ಸೃಷ್ಟಿಸುವುದು.

ಅನಂತಮೂರ್ತಿ ಅಂದರು :

“ತೆರೆದ ಮನಸ್ಸು ಮುಖ್ಯ. ಬರೆಯುವವರಿಗೆಲ್ಲ ತೆರೆದ ಮನಸ್ಸು ಇರಬೇಕು.”

ಇದು ಹೊಸ ಅಂಶವಲ್ಲ. ತೆರೆದ ಮನಸ್ಸಿಗಾಗಿ, ನಾಗರಿಕತೆ ಹುಟ್ಟಿದಂದಿನಿಂದ ಒಳ್ಳೆಯವರು ಹಂಬಲಿಸುತ್ತ ಬಂದಿದ್ದಾರೆ. ಮುಚ್ಚಿದ ಮನಸ್ಸಿಗೂ ತೆರೆದ ಮನಸ್ಸಿಗೂ ತಾಕಲಾಟ ಎಲ್ಲ ಕಾಲಗಳಲ್ಲಿಯೂ ನಡೆದಿದೆ.

ಬದುಕಿನ, ಕಾಲದ ಸಹಸ್ರ ಸಮಸ್ಯೆಗಳಿಗೆ ಉತ್ತರ ದೊರೆಯುವುದೂ ತೆರೆದ ಮನಸ್ಸಿನಿಂದಲೇ. ಇದೊಂದು, ಎಂದೂ ಬದಲಾಗದ ಸರಳ ಸತ್ಯ.

೨೭–೨–೧೯೬೯

# ಸಾಹಿತ್ಯದ ಅಂಗಡಿ

ಕನ್ನಡದಲ್ಲಿ ಪ್ರಕಟವಾದ ಯಾವ ಪುಸ್ತಕವೇ ಆಗಲಿ ಕೇಳಿದೊಡನೆ ದೊರೆಯುವ ಪುಸ್ತಕದ ಅಂಗಡಿ ಎಲ್ಲಿಯಾದರೂ ಇದೆಯೆ ?

ಕೊಳ್ಳಲು ಬಯಸುವವನಿಗೆ ಮಾರ್ಗದರ್ಶಿಯಾಗಬಲ್ಲ ಪುಸ್ತಕ ವ್ಯಾಪಾರಿ ಯಾರಾದರೂ ಈ ನಾಡಿನಲ್ಲಿ ಇರುವನೆ ?

ಮೊದಲನೆಯ ಪ್ರಶ್ನೆಗೆ 'ಇಲ್ಲ' ಎಂಬುದು ನೇರ ಉತ್ತರ. ಎರಡನೆಯದು ಸ್ವಲ್ಪ ಜಟಿಲವಾದದ್ದು.

ಯಾಕೆ ? ಕನ್ನಡ ನವೋದಯದೊಂದಿಗೆ ಹುಟ್ಟಿದ ಪ್ರಕಾಶಕರೆಲ್ಲ ಕವಿ ಕಾವ್ಯ ಪಕ್ಷಪಾತಿಗಳು. ಕೆಲವರಂತೂ ಸ್ವತಃ ಬರೆಹಗಾರರು. ಸಹೃದಯ ವಿಮರ್ಶಕರ ಪಾತ್ರವನ್ನೂ ವಹಿಸಿ ಮನ್ನಣೆಯನ್ನು ಗಳಿಸಿಕೊಂಡವರು. ಆಗ ಪ್ರಕಾಶನ ಕಾರ್ಯವೂ ಸಾಹಿತ್ಯ ಸೇವೆಯಾಗಿತ್ತು. ಮುಂದೆ ಬಂದದ್ದು ಅನಿವಾರ್ಯ ಘಟ್ಟ. ಹಣ ಹಣಿಕಿನೋಡಿತು. ಪ್ರಕಾಶನ ಕೆಲವರ ಪಾಲಿಗೆ ವಾಣಿಜ್ಯ ವೃತ್ತಿಯಾಯಿತು. ಸಾಹಿತ್ಯಸೇವೆಯ ಗೊಡವೆಗೆ ಹೋಗದೆ ಆ ಜನ ಪುಸ್ತಕಲೋಕದ ಉದ್ದಿಮೆದಾರರಾದರು. ಹೀಗಾಗಿ, ಪುಸ್ತಕ ಕೊಳ್ಳಲು ಬಯಸುವವನಿಗೆ ಮಾರ್ಗದರ್ಶನ ನೀಡುವ ಸಾಮರ್ಥ್ಯ ಉಳ್ಳ ಪ್ರಕಾಶಕರೂ ಇದ್ದಾರೆ; ಆ ಬಗೆಯ ಜ್ಞಾನವಿಲ್ಲದೆ ದುಡ್ಡಿನ ಲೆಕ್ಕಾಚಾರವನ್ನಷ್ಟೆ ಮಾಡುವವರೂ ಇದ್ದಾರೆ; ಆ ಬಗೆಯ ಲೆಕ್ಕದಲ್ಲಿ ಪರಿಣತರಾಗಿರುವುದರ ಜೊತೆಗೆ ಸಾಹಿತ್ಯದಲ್ಲಿ ಪರಿಶ್ರಮ ಉಳ್ಳ ಕೆಲವರೂ ಇದ್ದಾರೆ.

ಹೀಗಿದ್ದರೂ, ಪುಸ್ತಕ ಪ್ರಕಾಶನ ಕ್ಷೇತ್ರದಲ್ಲಿ ಎಲ್ಲವೂ ತೃಪ್ತಿಕರ ಎನ್ನುವುದು ಕಷ್ಟ.

* * * * *

ಇಟಲಿ ದೇಶದಲ್ಲಿ ಎಲ್ಲವೂ ತೃಪ್ತಿಕರವಾಗಿಲ್ಲ. ಈ ನಡುವೆ ಪುಸ್ತಕ ಕೊಳ್ಳುವವರ ಸಂಖ್ಯೆ ಅಲ್ಲಿ ಕಡಮೆಯಾದಂತೆ ಕಂಡಿತು. ಇದಕ್ಕೆ ಕಾರಣ ರೇಡಿಯೋ ಟೆಲಿವಿಷನುಗಳ ಹೆಚ್ಚಳ. ಜ್ಞಾನ ಮನೋರಂಜನಗಳೆರಡೂ ಸುಲಭವಾಗಿ ದೊರೆಯುವಾಗ ಓದುವ ಶ್ರಮದ ಅಗತ್ಯವೇನು ? ಇದೇ ಪ್ರವೃತ್ತಿ ಬೆಳೆದರೆ ಪುಸ್ತಕ ಜಗತ್ತು ಕುಗ್ಗುವ ಭಯ.

ಅದನ್ನು ಮನಗಂಡ ಇಟಲಿಯ ಪುಸ್ತಕ ವ್ಯಾಪಾರಿಗಳ ಸಂಘ 'ವಾಚಕರ ಸಪ್ತಾಹ'ವನ್ನು ಇತ್ತೀಚೆಗೆ ಆಚರಿಸಿತು. ಓದುಗನ ಪಾಲಿಗೆ ಪುಸ್ತಕದ ಅಂಗಡಿ

ಸೂಚಿಗಲ್ಲಾಗಬೇಕು; ಪುಸ್ತಕದ ವ್ಯಾಪಾರಿಗೂ ಗ್ರಾಹಕನಿಗೂ ನಡುವೆ ಸ್ನೇಹ ಸಂಬಂಧ ಬೆಳೆಯಬೇಕು. ತಾವು ಓದುಗರ ಮಿತ್ರರು, ಮಾರ್ಗದರ್ಶಿಗಳು ಎನ್ನುವ ಭಾವನೆಯನ್ನು ಪುಸ್ತಕ ವ್ಯಾಪಾರಿಗಳು ಬೆಳೆಸಿಕೊಳ್ಳಬೇಕು – ಇವಿಷ್ಟು 'ಪುಸ್ತಕದ ಸಪ್ತಾಹ'ದ ಉದ್ದೇಶಗಳು.

ಪುಸ್ತಕದಂಗಡಿಗಳಲ್ಲಿ ಸಹಾಯಕರಾಗಿ ದುಡಿಯುವವರಿಗೋಸ್ಕರ ವಿಶೇಷ ಶಿಕ್ಷಣ ತರಗತಿಗಳು ಅಲ್ಲಿ ಈಗ ಆರಂಭವಾಗಿವೆ. ದೇಶದಲ್ಲಿರುವ ಪುಸ್ತಕದಂಗಡಿಗಳ ಬಗ್ಗೆ ಪರಿಶೀಲನೆ ಕಾರ್ಯ ನಡೆದಿದೆ. ಅಂಗಡಿಗಳನ್ನು 'ಆಧುನಿಕವಾದ ಯಶಸ್ವಿಯಾದ ಸಾಹಿತ್ಯ ಕೇಂದ್ರಗಳಾಗಿ' ಮಾಡುವುದೇ ಈ ಎಲ್ಲ ಚಟುವಟಿಕೆಯ ಉದ್ದೇಶ.

(ಅಂಥ ಕೇಂದ್ರಗಳಲ್ಲಿ ರೇಡಿಯೋ – ಟೆಲಿವಿಷನ್ ಸೆಟ್ಟುಗಳು ಇದ್ದರೂ ಆಶ್ಚರ್ಯಪಡಬೇಕಾಗಿಲ್ಲ!)

ಸಾಕ್ಷರತೆಯಲ್ಲಿ ಸಂಪದಭಿವೃದ್ಧಿಯಲ್ಲಿ ಮುಂದುವರಿದಿರುವ ಇಟಲಿ ದೇಶದಲ್ಲೇ ಹೀಗಾದರೆ, ಇದೇ ಈಗ ತೊದಲತೊಡಗಿರುವ ರಾಷ್ಟ್ರಗಳಲ್ಲಿ ಹೇಗಿರಬೇಡ?

ರೇಡಿಯೋ ಟೆಲಿವಿಷನುಗಳ ಆಕರ್ಷಣೆಯಿಂದ ಪುಸ್ತಕವ್ಯಾಪಾರಕ್ಕೆ ನಮ್ಮಲ್ಲಿ ತೊಂದರೆಯುಂಟಾಗಿಲ್ಲ. ಸಿನಿಮಾರಂಜನೆಗಾಗಿ ಪುಸ್ತಕವನ್ನು ಬಲಿಕೊಡುವವರು ಕೆಲವರಿರಬಹುದು. ಆದರೆ ಬಣ್ಣದ ಹೆಣ್ಣಿನ ರಕ್ಷಾಕವಚವನ್ನು ಬಿಟ್ಟರೆ ಕನ್ನಡ ಪುಸ್ತಕಗಳಲ್ಲಿರುವ ಆಕರ್ಷಣೆ ಏನು?

ಪುಸ್ತಕದಂಗಡಿಗೆ ಬರೆಯುವವರು ಆಗಾಗ್ಗೆ ಬರುವುದು, ಓದುಗ ತನ್ನ ಲೇಖಕನನ್ನು ಅಲ್ಲಿ ಆಕಸ್ಮಿಕವಾಗಿ ಭೇಟಿಯಾಗುವುದು – ಇಂಥವೆಲ್ಲ ಒಳ್ಳೆಯವೇ. ಪುಸ್ತಕದ ಅಂಗಡಿ ಒಂದು ಸಾಹಿತ್ಯಕೇಂದ್ರವಾಗಿ ರೂಪುಗೊಳ್ಳುವುದು ಈ ರೀತಿಯಾಗಿ.

ಓದುಗ ಎಂತಹ ಪುಸ್ತಕಗಳನ್ನು ಬಯಸುತ್ತಾನೆ? ಯಾವ ಯಾವ ಪುಸ್ತಕಗಳು ಆತನಿಗೆ ಅಗತ್ಯ? ಒಳ್ಳೆಯ ಕೃತಿ ಪ್ರಕಟವಾದೊಡನೆ ಅದು ಅವನಿಗೆ ದೊರೆಯುವಂತೆ ಮಾಡುವ ವಿಧಾನ ಯಾವುದು? ಪುಸ್ತಕ ವ್ಯಾಪಾರಿಗಳು ಪರಸ್ಪರ ಸಹಕರಿಸಿ, ಪ್ರಾತಿನಿಧಿಕ ಸ್ವರೂಪದ ಅಂಗಡಿಗಳು ನಾಡಿನ ನಾನಾ ಭಾಗಗಳಲ್ಲಿ ತಲೆ ಎತ್ತುವಂತೆ ಮಾಡುವುದು ಸಾಧ್ಯವಿಲ್ಲವೆ?

ಸಮಗ್ರ ಪರಿಶೀಲನೆಯಿಂದ, ತನಿಖೆಯಿಂದ ಮೇಲಿನ ಪ್ರಶ್ನೆಗಳಿಗೆಲ್ಲ ಉತ್ತರ ದೊರೆಯಬಹುದು.

ಈ ರೀತಿ ವಿಚಾರ ಮಾಡುವುದು ಜನತೆಯ ಸಾರಸ್ವತ ಆರೋಗ್ಯಕ್ಕೆ ಸಾಧಕ.

* * * * *

ಬಾಧಕವಾದ ಪರಿಸ್ಥಿತಿಯನ್ನು ಮಾತ್ರ ಈಗ ನಾವು ಕಾಣುತ್ತೇವೆ. ನಮ್ಮ ಪ್ರಕಾಶಕರೂ ವ್ಯಾಪಾರಿಗಳೂ – ಗ್ರಂಥಕರ್ತರೂ ಕೂಡ – ಪ್ರವಾಹಪತಿತರು. ನೀರಿನ ಸೆಳೆತ ಎಲ್ಲಿಗೆ ಒಯ್ಯುತ್ತದೋ ಅಲ್ಲಿಗೆ ಪಯಣ. ಸಹಸ್ರ ಕೈಗಳ ದುಡಿಮೆ, ಒಮ್ಮತ,

ಅಣೆಕಟ್ಟು ನಿರ್ಮಾಣ ಇವೆಲ್ಲ ನಮ್ಮ ಪುಸ್ತಕ ವ್ಯಾಪಾರಿಗಳ ಮಟ್ಟಿಗೆ ಅರ್ಥವಿಲ್ಲದ ಮಾತುಗಳು.

ನೀತಿ ನಿಯತ್ತುಗಳು? ಈ ವಿಷಯದಲ್ಲಿ ಸಮಾಜಕ್ಕೂ ಸಾಹಿತ್ಯಕ್ಕೂ ತೀರಾ ಹತ್ತಿರದ ಸಂಬಂಧ! ನೀತಿ ನಿಯಮಗಳನ್ನು ಪುಸ್ತಕ ವ್ಯಾಪಾರಿಗಳಾದರೂ ಪಾಲಿಸ ಬೇಕು ಎಂದು ಶಾಸಕಾಂಗ ವಿಧಿಸಿಲ್ಲವಲ್ಲ? ಅಸೂಯೆ, ಅಹಿತಕರ ಮೇಲಾಟ – ನಮ್ಮ ಪುಸ್ತಕವ್ಯಾಪಾರ ಲೋಕದ ಪ್ರಧಾನ ಪ್ರವೃತ್ತಿಗಳು. ಒಬ್ಬರ ಪ್ರಕಟಣೆಗಳನ್ನು ಇನ್ನೊಬ್ಬರು ಮಾರುವುದಿಲ್ಲ; ಇವರ ಪ್ರಕಟಣೆಗಳನ್ನು ಅವರು ಮುಟ್ಟುವುದಿಲ್ಲ. ಯಾವುದೋ ಸಂಘವೋ ಸಂಸ್ಥೆಯೋ ತನ್ನ ಗ್ರಂಥಭಂಡಾರಕ್ಕಾಗಿ ಕೆಲವು ನೂರು ಪುಸ್ತಕಗಳನ್ನು ಕೊಳ್ಳಬಯಸಿದರೆ ಅದರ ಪ್ರತಿನಿಧಿ ಹಾಗೂ ಪುಸ್ತಕ ವ್ಯಾಪಾರಿ ಕೆಲ ನಿಮಿಷಗಳ ಮಟ್ಟಿಗೆ ಗಾಢ ಮಿತ್ರರಾಗುತ್ತಾರೆ. ಅಂಗಡಿಯ ಮೇಜಿನ ಕೆಳಗಡೆಯಿಂದ ಹಸ್ತಲಾಘವ ನಡೆಯುತ್ತದೆ.

ಇಲ್ಲಿ ಅತ್ಯಂತ ಖೇದದ ವಿಷಯವೆಂದರೆ ಅಂಗಡಿಕಾರ ಒಳ್ಳೆಯ ಪುಸ್ತಕಗಳನ್ನು ಒದಗಿಸದಿರುವುದು. ಗ್ರಂಥ ಭಂಡಾರಕ್ಕೆ ಯಾವ ಪುಸ್ತಕವಾದರೇನು? ಮೊತ್ತ ಮುಖ್ಯ; ಕೊಡುವವನಿಗೂ ಪಡೆಯುವವನಿಗೂ ಆಗುವ ಲಾಭ ಮುಖ್ಯ. ಪರ್ಸೆಂಟೇಜುಗಳ ಆ ಅಮಂಗಳ ಗ್ರಹಕ್ಕೆ ಹತ್ತುಕಡೆಗಳಿಂದ ನಿತ್ಯವೂ ಯಾನ.

ಈ ಸನ್ನಿವೇಶದಲ್ಲಿ ಒಳ್ಳೆಯ ಕೃತಿಗಳನ್ನು ರಚಿಸುವವನು ತನಗೆ ಪ್ರಕಾಶಕರು ದೊರೆಯಲಿಲ್ಲವೆಂದು ಪ್ರಲಾಪಿಸಿದರೆ, ಸದಭಿರುಚಿಯುಳ್ಳ ಓದುಗ ತನಗೆ ಬೇಕಾದ ಪುಸ್ತಕಗಳು ಸುಲಭವಾಗಿ ಸಿಗುತ್ತಿಲ್ಲ ಎಂದು ವ್ಯಥೆ ಪಟ್ಟರೆ ಅದು ಸಾಮಾನ್ಯ ಸಂಗತಿ. ಹೀಗೆ ಆಗದಂಥ ಪರಿಸ್ಥಿತಿ ನಿರ್ಮಾಣವಾಗುವುದೇ ಅಸಾಧಾರಣ ಸಂಗತಿ.

೧೬–೩–೧೯೬೯

# ಶಿಕ್ಷಣಲೋಕದ ಹೊಸ ಅಧ್ಯಾಯ

ಷಣಗಳಿಂದ ಆಗದ ಕೆಲಸವನ್ನು ಎಷ್ಟೋ ಸಲ ಅಂಕೆ ಸಂಖ್ಯೆಗಳು ಸಾಧಿಸುತ್ತವೆ. ಈ ಕೆಳಗಿನ ವಿವರ ಗಮನಾರ್ಹ.

೧೯೫೬ ರಲ್ಲಿ ನೂತನ ರಾಜ್ಯೋದಯವಾದಾಗ ಪ್ರಾಥಮಿಕ ಶಾಲೆಗಳ ವಿದ್ಯಾರ್ಥಿಗಳ ಸಂಖ್ಯೆ ೧೮·೫ ಲಕ್ಷ. ಹನ್ನೆರಡು ವರ್ಷಗಳಾದ ಮೇಲೆ ಈಗ ಆ ಸಂಖ್ಯೆ ೩೭ ಲಕ್ಷ. ಆಗ ೫೮,೦೦೦ ಪ್ರಾಥಮಿಕ ಶಿಕ್ಷಕರಿದ್ದರು; ಈಗ ೯೫,೦೦೦ ಜನರಿದ್ದಾರೆ. ಹಿಂದೆ ಪ್ರೌಢಶಾಲೆಗಳ ವಿದ್ಯಾರ್ಥಿ ಸಂಖ್ಯೆ ೧,೯೭,೦೦೦; ೪ ಲಕ್ಷ ಈಗ. ೫,೨೭೨ ಜನ ಪ್ರೌಢಶಾಲಾ ಅಧ್ಯಾಪಕರು ಆಗ ಇದ್ದರು; ಈಗ ೨೦,೦೦೦ ಇದ್ದಾರೆ. ಆಗ ಶಿಕ್ಷಣ ಖಾತೆ ೯·೭ ಕೋಟಿ ರೂಪಾಯಿ ಖರ್ಚು ಮಾಡುತ್ತಿತ್ತು. ಈಗ ೩೬.೨ ಕೋಟಿ ಖರ್ಚು ಮಾಡುತ್ತಿದೆ. ೧೯೬೯-೭೦ ರಲ್ಲಿ ಈ ವೆಚ್ಚ ೪೬ ಕೋಟಿಗಳಷ್ಟಾಗುತ್ತದೆ.

ಈ ಅಂಕೆ ಸಂಖ್ಯೆಗಳು ಸೃಷ್ಟಿಸುವ ಚಿತ್ರ ಅಸಾಧಾರಣವಾದದ್ದು.

ಆ ಚಿತ್ರವನ್ನು ನಿರೂಪಿಸಿದ ವಿದ್ಯಾಸಚಿವ ಶಂಕರಗೌಡರು, ಕಳೆದ ಹನ್ನೆರಡು ವರ್ಷಗಳಲ್ಲಿ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣದಲ್ಲಿ ಆಗಿರುವ ಬೆಳವಣಿಗೆ 'ಅದ್ಭುತ' ಎಂದರು, ವಿಧಾನಮಂಡಲದಲ್ಲಿ.

ಅವರು ಅದ್ಭುತ ಎಂದುದು ಅತಿಶಯೋಕ್ತಿಯಲ್ಲ. ಅದು ವಸ್ತುಸ್ಥಿತಿಯ ಸಮರ್ಪಕ ಬಣ್ಣನೆ.

* * * * *

ಸಂಖ್ಯಾಚಿತ್ರವೇ ಇರಲಿ, ನುಡಿಚಿತ್ರವೇ ಇರಲಿ ಶಂಕರಗೌಡರು ಕುಶಲ ಕಲಾವಿದ. ಪದಗಳ ಬಳಕೆಯನ್ನು ಲೀಲಾಜಾಲವಾಗಿ ಅವರು ಮಾಡುತ್ತಾರೆ. ಮಾತು ನೇರ, ಸ್ಪಷ್ಟ. ಅಂಥವರ ಕೈಯಲ್ಲಿ ಭಾಷೆ ಪ್ರಭಾವಶಾಲಿಯಾಗುತ್ತದೆ; ನಿರ್ದಿಷ್ಟ ವಿಚಾರಗಳ ಮಂಡನೆ ಶಾಸ್ತ್ರೀಯ ರೂಪ ತಳೆಯುತ್ತದೆ.

ಅಷ್ಟು ಗೋಡೆಯ ಮೇಲೆ ದೀಪವಿಡುವ ರಾಜಕೀಯ ಗೌಡರಿಗೆ ತಿಳಿಯದು. ಆ ಕಾರಣದಿಂದ, ಅವರು ಏನೇ ಹೇಳಿದರೂ ಆ ಮಾತುಗಳಲ್ಲಿ ಕಸುವಿರುತ್ತದೆ.

ಶಿಕ್ಷಣ ಖಾತೆಯ ಮುಂಗಡ ಬೇಡಿಕೆಯನ್ನು ಕುರಿತ ಚರ್ಚೆಯಲ್ಲಿ ಅನೇಕ ಶಾಸಕರು ಭಾಗವಹಿಸಿದರು. ಶಿಕ್ಷಣ ಸಮಸ್ಯೆಯ ಬಗೆಗೆ ತಿಳಿವಳಿಕೆಯನ್ನಾಗಲಿ ಪಾಂಡಿತ್ಯವನ್ನಾಗಲಿ ಹೆಚ್ಚಿನವರು – 'ಯಾರೂ' ಎಂದರೂ ಸರಿಯೆ – ಪ್ರದರ್ಶಿಸಲಿಲ್ಲ. ಅದು, ಇದು, ಸ್ಥಳೀಯ ಕೊರತೆಗಳು, ಅಲ್ಪ ಸಮಾಧಾನ, ಆತ್ಮತೃಪ್ತಿ....ಆಡಳಿತದ

ರಾಜಕೀಯದಲ್ಲಿ ಶಿಕ್ಷಣದ ವಿಷಯವಾಗಿ ಅಧ್ಯಯನ ನಡೆಸಲು ಶಾಸಕ ಮಹಾಶಯರಿಗೆ ಬಿಡುವೇ ಇಲ್ಲವೇನೊ ಎನ್ನುವ ಹಾಗಿತ್ತು.

ಆ ಕೆಲಸವನ್ನೂ ಶಂಕರಗೌಡರೇ ಮಾಡಿದರು. ಮಂತ್ರಿಗೆ ಆತ್ಮಸಮರ್ಥನೆಯೆ ಪ್ರಧಾನ ಎಂದು ಅವರು ಭಾವಿಸಿದವರಲ್ಲ. "ಅದ್ಭುತ" ಎನ್ನುವುದರ ಜೊತೆಗೆ ಲೋಪ ದೋಷಗಳನ್ನೂ ಅವರು ತೋರಿಸಿಕೊಟ್ಟರು. ಶೈಕ್ಷಣಿಕ ಚಟುವಟಿಕೆ ಬೃಹತ್ ಪ್ರಮಾಣದಲ್ಲಿ ವಿಸ್ತಾರಗೊಂಡಿದೆಯೆಂದು ಶಂಕರಗೌಡರು ಸಂತೋಷಿಸುತ್ತಾರಾದರೂ "ವಿಸ್ತಾರಕ್ಕನುಗುಣವಾಗಿ ಗುಣ ಕಾಪಾಡಲಾಗಲಿಲ್ಲ" ಎಂದು ಅವರಿಗೆ ವ್ಯಥೆ. ಅನಕ್ಷರತೆಗಿಂತ ಸಾಕ್ಷರತೆ ಮೇಲು – ಎನ್ನಬಹುದು, ಅಷ್ಟೆ. ಅಧ್ಯಾಪಕರಲ್ಲಿ ಶ್ರದ್ಧಾ ವಂತರಲ್ಲದವರೂ ಇರುವರೆಂಬುದನ್ನು ಶಂಕರಗೌಡರು ಬಲ್ಲರು. ಗುರುವೃತ್ತಿಗೆ ಕಳಂಕ ತರುವವರನ್ನು ದಂಡಿಸುವುದಕ್ಕೂ ಅವರು ಸಿದ್ಧ. ಖಾಸಗಿ ಶಾಲೆಗಳು, ಅಲ್ಲಿ ಇಲ್ಲಿ ಕೆಲವನ್ನು ಬಿಟ್ಟರೆ, ಚೆನ್ನಾಗಿ ಕೆಲಸ ಮಾಡುತ್ತಿವೆ. ಸ್ವಹಿತಕ್ಕಾಗಿ ಶಾಲೆಗಳನ್ನು ಬಳಸುವ ಕೆಲವರಿರುವರೆಂದು, ಎಲ್ಲ ಶಾಲೆಗಳನ್ನೂ ಖಂಡಿಸಿ, ಶಾಲೆಗಳ ರಾಷ್ಟ್ರೀಕರಣ ವಾಗಲಿ ಎನ್ನುವುದು ಒಂದು ಬಗೆಯ ಮನೋವಿಕಾರ. ಇಷ್ಟು ವರ್ಷ ಕಳೆದರೂ ಶಿಕ್ಷಣಕ್ರಮದಲ್ಲಿ ಏಕರೂಪತೆ ಸಾಧ್ಯವಾಗಿಲ್ಲ ಎಂದು ಅವರಿಗೆ ಬೇಸರ. ಆ ಬಗ್ಗೆ ಯೋಗ್ಯ ಕ್ರಮ ಕೈಕೊಳ್ಳಬೇಕು ಅನ್ನುವ ತವಕ....

* * * * *

ಬೋಧನೆ ತಾಯ್ನುಡಿಯಲ್ಲಿ ನಡೆದಾಗಲೆ ವಿದ್ಯಾಭ್ಯಾಸ ಅರ್ಥಪೂರ್ಣವಾಗು ತ್ತದೆ, ಪರಿಣಾಮಕಾರಿಯಾಗುತ್ತದೆ – ಎಂಬುದು ಶಂಕರಗೌಡರ ದೃಢ ನಂಬುಗೆ.

ಅವರೆಂದರು :

"ಶಿಕ್ಷಣದ ಎಲ್ಲ ಮಟ್ಟಗಳಲ್ಲೂ ಮಾಧ್ಯಮ ಕನ್ನಡವಾಗಲೇಬೇಕು. ಅದು ನಮ್ಮ ನಿರ್ಧಾರ. ಅದರಲ್ಲಿ ಬದಲಾವಣೆ ಇಲ್ಲ."

ಕನ್ನಡ ಮಾಧ್ಯಮ ತರಗತಿಗಳಿಗೆ ವಿದ್ಯಾರ್ಥಿಗಳು ಸಾಕಷ್ಟು ಸಂಖ್ಯೆಯಲ್ಲಿ ಬರು ತ್ತಿಲ್ಲವಲ್ಲ, ಯಾಕೆ? ಪ್ರಶ್ನೆಯನ್ನು ರೂಪಿಸಿ ಅದಕ್ಕೆ ಅವರೇ ಉತ್ತರ ನೀಡಿದರು :

"ರಾಜ್ಯದ ಆಡಳಿತ ಭಾಷೆ ಪೂರ್ಣವಾಗಿ ಕನ್ನಡವಾಗುವವರೆಗೆ, ರಾಜ್ಯ ಪಬ್ಲಿಕ್ ಸರ್ವಿಸ್ ಕಮಿಷನ್‌ನ ಪರೀಕ್ಷಾ ಭಾಷೆ ಕನ್ನಡವಾಗುವವರೆಗೆ, ಕನ್ನಡ ಮಾಧ್ಯಮ ತೆಗೆದುಕೊಳ್ಳುವಂತೆ ವಿದ್ಯಾರ್ಥಿಗಳ ಮನ ಒಲಿಸುವುದು ಕಷ್ಟ."

—ಇದು ನೋಯುತ್ತಿರುವ ಸ್ಥಳವನ್ನೇ ಬೊಟ್ಟು ಮಾಡಿ ಆಡಿರುವ ಮಾತು.

ಶಿಕ್ಷಣಕ್ಷೇತ್ರದ ಪ್ರಮುಖ ಪ್ರಶ್ನೆಯೊಂದು ಇತ್ಯರ್ಥವಾಗಬೇಕಾದರೆ, ನಾಡಿನ ನುಡಿ ರಾಜ್ಯಭಾಷೆಯಾಗಬೇಕಾದುದು ಅತ್ಯಗತ್ಯ. ಆ ಸ್ಥಾನಮಾನ ಅದಕ್ಕೆ ದೊರೆ ತಾಗಲೇ ನಮ್ಮ ರಾಜ್ಯದಲ್ಲಿ ಕನ್ನಡ ಸಮಾಜದ ಎಲ್ಲ ಹಂತಗಳಲ್ಲೂ ವಿರಾಜಮಾನ ವಾಗುತ್ತದೆ.

ಈ ನಿಷ್ಠುರ ಸತ್ಯವನ್ನು ಬೆಳಕಿಗೆ ಹಿಡಿದು, ಆಳುವ ಪಕ್ಷ ಆತ್ಮವಿಮರ್ಶೆ ಮಾಡಿಕೊಳ್ಳಲು ಶಂಕರಗೌಡರು ಕಾರಣರಾಗಿದ್ದಾರೆ.

ಕನ್ನಡದ ಮೇಲಣ ಅಭಿಮಾನ ವಿದ್ಯಾಮಂತ್ರಿಗಳನ್ನು ಹಿಂದಿ – ಇಂಗ್ಲಿಷುಗಳ ದ್ವೇಷಿಯಾಗಿ ಮಾಡಿಲ್ಲ. ಆ ಎರಡು ಭಾಷೆಗಳ ಮಹತ್ವವನ್ನು ಅವರು ಬಲ್ಲರು. ಆದರೂ ಅಧ್ಯಯನದ ಮಟ್ಟಿಗೆ ಹೇಳುವುದಾದರೆ, ಸ್ನಾತಕೋತ್ತರ ಶಿಕ್ಷಣವನ್ನೂ ಕನ್ನಡ ಮಾಧ್ಯಮದ ಮೂಲಕ ನೀಡುವುದು ಸಾಧ್ಯ ಎಂಬುದು ಅವರ ವಿಶ್ವಾಸ. ತಾಯಿನುಡಿಯಲ್ಲಿ ಪಠ್ಯಪುಸ್ತಕಗಳ ರಚನೆ ವಿವಿಧ ವಿಷಯಗಳಲ್ಲಿ ವ್ಯಾಪಕವಾಗಿ ಈಗ ನಡೆದಿರುವುದನ್ನು ಗಮನಿಸಿದರೆ, ಈ ನಾಡಿನ ಯುವಕರಿಗೆ ಸ್ನಾತಕೋತ್ತರ ಶಿಕ್ಷಣವೂ ಕನ್ನಡದಲ್ಲೀ ದೊರೆಯಲು ಬಹಳ ವರ್ಷ ಕಾಯಬೇಕಾಗಿಲ್ಲ ಎನಿಸುತ್ತದೆ.

* * * * *

ಮುಂದಿನ ವರ್ಷದಿಂದ ಎರಡು ವರ್ಷಗಳ ಪಿ. ಯು. ಸಿ. ಶಿಕ್ಷಣ ಜಾರಿಗೆ ಬರುತ್ತದೆ. ಇದು ಅಗತ್ಯವೆಂದು ಕಂಡುಬಂದಿರುವ ಸುಧಾರಣೆ.

ಹಾಗೆಯೆ ಪಠ್ಯಪುಸ್ತಕಗಳ ರಾಷ್ಟ್ರೀಕರಣವೂ ಪೂರ್ಣವಾಗುತ್ತದೆ. ಖಾಸಗಿ ಪ್ರಕಾಶಕರಿಗೆ ಪುಸ್ತಕಗಳನ್ನು ಒಪ್ಪಿಸಲು ಆಸ್ಪದವಿದ್ದ ಕಾಲದಲ್ಲಿ ಆ ಏರ್ಪಾಡಿನಿಂದ ಒಳಿತೂ ಇತ್ತು, ಕೆಡುಕೂ ಇತ್ತು. ಒಳ್ಳೆಯ ಪುಸ್ತಕಗಳ ಆಯ್ಕೆಗೆ ಅವಕಾಶವಿದ್ದರೆ, ಸಂದಿಗೊಂದಿಗಳ ದಾರಿ ಹಿಡಿದು ಕೆಟ್ಟ ಪುಸ್ತಕಗಳು ತೂರಿ ಬರುವುದೂ ಸಾಧ್ಯವಿತ್ತು. ರಾಷ್ಟ್ರೀಕರಣದಿಂದ ಅಕ್ರಮ, ಭ್ರಷ್ಟಾಚಾರ ಇತ್ಯಾದಿಗಳನ್ನು ತಡೆದಿದ್ದೇವೆ ಎಂದು ಸರಕಾರ ಸಮಾಧಾನಪಡಬಹುದಾದರೂ, ಈಗ ತನ್ನ ಹೊಣೆ ಹೆಚ್ಚಿನದು ಎಂಬುದನ್ನು ಅದು ಮನವರಿಕೆ ಮಾಡಿಕೊಂಡು ಹೆಚ್ಚು ಎಚ್ಚರದಿಂದ ವರ್ತಿಸಬೇಕಾಗುತ್ತದೆ. ಪಠ್ಯಪುಸ್ತಕಗಳ ನಿರ್ಮಾಣಕ್ಕಾಗಿ ಮಂಡಳಿಯೊಂದು ರಚನೆಯಾಗಿ ಹಿರಿಯ ಅಧಿಕಾರಿಯೊಬ್ಬರು ಅದರ ಮುಖ್ಯಸ್ಥರಾದರೆ, ಲೋಪದೋಷಗಳಿಲ್ಲದ ಕೆಲಸ ಸಾಧ್ಯವಾಗುತ್ತದೆ.

ಶಿಕ್ಷಣಲೋಕದ ಹೊಸ ಅಧ್ಯಾಯವನ್ನು ಹೆಚ್ಚು ಉತ್ಸಾಹ ಲವಲವಿಕೆಗಳಿಂದ ಬರೆಯುವ ಆಸಕ್ತಿಯನ್ನು ವಿದ್ಯಾಮಂತ್ರಿ ಶಂಕರಗೌಡರು ತೋರಿದ್ದಾರೆ.

೨೩–೩–೧೯೬೯

# ಚಿರಂಜೀವಿ ಸಾಹಸ

ಜಾರ್ಜ್ ಆಲ್ಬರ್ಟ್ ಡ್ಯೂಕ್ ಮತ್ತು ಪಿನಾಕಿ ಚಟರ್ಜಿ....

ಕಪ್ಪು ಮಸಿಯಿಂದಲ್ಲ, ಎಂದೆಂದೂ ಮಾಸದ ಬಂಗಾರದ ದ್ರಾವಕದಿಂದ ಆ ಹೆಸರುಗಳನ್ನು ಬರೆದಿಡಬೇಕು.

ಜವ್ವನಿಕೆಯ ಅದಮ್ಯ ಚೇತನಕ್ಕೆ ಶ್ರೇಷ್ಠತಮ ನಿದರ್ಶನ – ಡ್ಯೂಕ್ ಮತ್ತು ಪಿನಾಕಿ.

ಕಡಲ ತೆರೆಗಳ ಮೇಲೆ ಹಾಯಿದೋಣಿಯಲ್ಲಿ ಸಾವಿರಾರು ಮೈಲುಗಳ ದೂರ ತೇಲಿ ಹೋಗುವ ಆಸೆ. ಇದೆಂತಹ ಹುಚ್ಚು ?

ಪ್ರಶ್ನೆಗೆ ಉತ್ತರವಿಲ್ಲ. ಮನುಷ್ಯ ಮನುಷ್ಯನಾದ ದಿನದಿಂದಲೂ ಸಾಹಸದೊಂದು ಸೆಲೆ ಅವನ ಕುಲಕ್ಕೆ ಮೆರುಗು ನೀಡಿದೆ. ಚಿಗುರು ಮೀಸೆಯ ವಯೋಮಾನದಲ್ಲಂತೂ ಆ ಸೆಲೆ ಗಗನಕ್ಕೆ ಚಿಮ್ಮುತ್ತದೆ.

* * * * *

ಎಷ್ಟು ದಿನಗಳಾದುವೊ ನೆನಪಿಲ್ಲ. ರಭಸದಿಂದ ಧುಮ್ಮಿಕ್ಕಿ ಹರಿಯುವ ಬ್ರಹ್ಮಪುತ್ರಾ ನದಿಯಲ್ಲಿ ದೋಣಿ ತೇಲಿಸುತ್ತ ಸಾಗರದ ತನಕ ಹೋಗಬೇಕೆಂದು ಯುವಕರಿಬ್ಬರು ಹೊರಟರು. ವಯಸ್ಸು ಇಪ್ಪತ್ತೊ, ಇಪ್ಪತ್ತೊಂದೊ. ಒಂದು ದಿನವನ್ನು ಅವರು ನದಿಯಲ್ಲಿ ಕಳೆದಿದ್ದರೊ ಇಲ್ಲವೊ. ನಾವೆ ಯಾವುದೋ ಬಂಡೆಗೆ ಬಡೆದು ನುಚ್ಚುನೂರಾಯಿತು. ಎಳೆಯರು ನೀರು ಪಾಲಾದರು........

ಆ ದುರಂತವನ್ನು ದೇಶ ಅದೆಷ್ಟು ಬೇಗನೆ ಮರೆಯಿತು !

ಡ್ಯೂಕ್ ಮತ್ತು ಪಿನಾಕಿ ತಮ್ಮ ದೋಣಿಯಲ್ಲಿ ಹೂಗ್ಲಿ ನದೀಮುಖದಿಂದ ವಿಸ್ತಾರ ಜಲರಾಶಿಯಾಚೆಗಿನ ಅಂದಮಾನ್ ದ್ವೀಪಗಳಿಗೆ ಅಭಿಮುಖವಾಗಿ ಹೊರಟಾಗ, ಹಿಂದಿನ ಆ ಇಬ್ಬರ ನೆನಪಾಗಿ ಮನಸ್ಸು ಅಳುಕಿತು.

ಪರ್ವತಾರೋಹಣ. ಯಾರೂ ಅಡರದ ಶಿಖರ. ಹೆಜ್ಜೆಯ ಮೇಲೆ ಹೆಜ್ಜೆ ಇಟ್ಟು ಇವರು ಹೋಗುತ್ತಿದ್ದರೆ, ಹೆಪ್ಪುಗಟ್ಟಿದ ಬೂಟು ಕಾಲಿಗೆ ತಗಲುತ್ತದೆ. ಅದೆಂದೋ ಹಿಂದೆ ಸಾಹಸಕ್ಕೆಳಸಿದ ಪರ್ವತಾರೋಹಿಯ ಕೊರಡು ಶವ. ಯಾವುದೋ ದಾಖಲೆಯಿಂದ ಸಂಶೋಧಕರು ಓದಿ ಹೇಳುತ್ತಾರೆ: ಇಂಥ ಸಂವತ್ಸರದಲ್ಲಿ ಈ ದೇಶದ ಈ ಹೆಸರಿನ ಯುವಕ ಶಿಖರಾರೋಹಣಕ್ಕೆಂದು........

ಅಥವಾ ಅಂತರ್ಗ್ರಹಯಾನಕ್ಕೆ ತೆರಳಿದವರು. ಅಲ್ಲೇ ವ್ಯೋಮದಾಚೆಗೆ ಶೂನ

ದಲ್ಲಿ ಸಿಲುಕಿಕೊಳ್ಳುವ ಸಂಭವ. ಮುಂದೆಂದೋ ವಾರಾವತ್ತ ರಾಮ ಇಲ್ಲಿಗೆ ಬರಬೇಕು. ಅಹಲ್ಯೆ ಪ್ರೈತಳೆಯಬೇಕು.

ಶಾಪ? ಖಂಡಿತ ಅಲ್ಲ. ಇದು ತಾನಾಗಿ ಕರೆಸಿಕೊಳ್ಳುವ ಆಪತ್ತು. ಆದರೆ....

*   *   *   *   *

ಡ್ಯೂಕ್ ಮತ್ತು ಪಿನಾಕಿ ತಮ್ಮ ಕತೆಯನ್ನು ಈಗ ಹೇಳಿದ್ದಾರೆ. ಟೆಲಿವಿಷನ್, ರೇಡಿಯೋ, ಲಕ್ಷ ಲಕ್ಷ ಪ್ರಸಾರ ಸಂಖ್ಯೆಯ ಪತ್ರಿಕೆಗಳಲ್ಲಿ? ಧಾರಾವಾಹಿ ಲೇಖನಗಳು?....ಊಹೂಂ. ಇದು ಇನ್ನೂ ಮನೆಮನೆಯಲ್ಲಿ ನಮ್ಮಲ್ಲಿಲ್ಲ........ಆದರೂ ಶ್ರೋತೃಗಳು ಬೆರಗಾಗುವಂತೆ ತಮ್ಮ ಕತೆಯನ್ನು ಈ ಯುವಕರಿಬ್ಬರು ನಿವೇದಿಸಿದ್ದಾರೆ.

ಆರು ಗಜ ಉದ್ದದ ಪುಟ್ಟ ದೋಣಿ. ನಮ್ಮ ದೇಶದಲ್ಲಿಯೇ ಅದರ ನಿರ್ಮಾಣ. ಹೂಗ್ಲಿಯ ದಾರಿ ಅತ್ಯಂತ ಕಷ್ಟದ್ದು, ಅಪಾಯಕಾರಿ. ಅದು ಮುಗಿದು ಬಂಗಾಳ ಕೊಲ್ಲಿಗೆ ಪ್ರವೇಶ. ಅಲ್ಲಿಂದ ಮುಂದೆ ದಡ ಕಾಣದ ಜಲರಾಶಿ.

ದೋಣಿಗೊಂದು ಹೆಸರು! ಅಡ್ಮಿರಲ್ ಕನ್ಹೋಜಿ ಆಂಗ್ರೆ. ಆತ ಶತಮಾನಗಳ ಹಿಂದಿನ ಮರಾಠಾ ನಾವಿಕ. ಪೋರ್ಚುಗೀಸ್ ಕಡಲುಗಳ್ಳರೊಡನೆ ಸಾಗರದ ಮೇಲೆ ಹೋರಾಡಿದವನು. ತನ್ನ ನೆಲದ ಜಲದ ಸ್ವಾತಂತ್ರ್ಯಕ್ಕಾಗಿ ಪ್ರಾಣವನ್ನು ಮುಡಿಪಿಟ್ಟ ಕಲಿ.

ಇಲ್ಲೂ ಹೋರಾಟವುಂಟು. ತೆರೆಗಳಿಗಿದಿರು, ಕೆರಳಿದ ಪ್ರಕೃತಿಗಿದಿರು. ಅಲ್ಲದೆ ಆಗಿನಂತೆ ಇವಕ್ಕೂ ಬರೇ ಹಾಯಿಗಳು. ಘಂಟೆಗೊಂದು ಮೈಲಿನಂತೆ ಪಯಣ. ಹಗಲೂ ಇರುಳೂ. ಟ್ರಾನ್ಸಿಸ್ಟರ್ ರೇಡಿಯೋ ಒಂದೇ ಇವರ ಜತೆಗಾರ.

ಈ ಸಾಹಸದ ಪ್ರೇರಕ ಶಕ್ತಿಯಾಗಿದ್ದ ಜಗತ್ತಿನ ಜಲಸಂಧಿಗಳ ದೊರೆ ಮಿಹಿರ್ ಸೇನ್ ಆದಿಯಾಗಿ ಅಸಂಖ್ಯ ಮಿತ್ರರು, ಆರಾಧಕರು ಹರ್ಷೋದ್ಗಾರಗಳಿಂದ ಬೀಳ್ಕೊಟ್ಟಿದ್ದರು. ಕಡಲ ಭೋರ್ಗರೆತದಲ್ಲಿ ಉದ್ಗಾರಗಳು ಅದೆಷ್ಟು ದಿನ ಪ್ರತಿಧ್ವನಿಸಬಹುದು?

ಕೆಲ ದಿನಗಳಾದ ಮೇಲೆ ರೇಡಿಯೋ ಸುದ್ದಿ ತಂದಿತು. ‘ಆಂಗ್ರೆ ಅದೃಶ್ಯವಾಗಿದೆ’ ಎಂದು ಭೂಮಿಯ ಮೇಲಿದ್ದವರ ಭಾವನೆ. ಪ್ರತಿ ದಿನವೂ ಅದೇ ಸುದ್ದಿ ಕೇಳುತ್ತ ಪಿನಾಕಿಗೆ ಕಳವಳ. ಡ್ಯೂಕ್‌ಗೂ ಅಷ್ಟೇ. ಕಡೆಗೂ ನೌಕೆಗಳೂ ವಿಮಾನಗಳೂ ಶೋಧ ನಡೆಸಿ, ‘ಆಂಗ್ರೆ ತನ್ನ ದಾರಿ ಹಿಡಿದು ಸಾಗಿದೆ’ ಎಂದು ನೆಲದ ಮೇಲಣ ಜನಕ್ಕೆ ಸುದ್ದಿ ಕೊಟ್ಟವು.

ನಿರ್ದೇಶಿತ ದಾರಿಯಿಂದ ಆಂಗ್ರೆ ಸ್ವಲ್ಪದೂರ ಸರಿದದ್ದು ನಿಜ. ಸಮುದ್ರದೊಳಗಿನ ಪ್ರವಾಹಗಳಿಂದ ಹಾಗಾಯಿತು. ಬರ್ಮಾದ ದಂಡೆಯತ್ತ ದೋಣಿ ತೇಲಿತ್ತು.

ಪಥನಿರ್ದೇಶವನ್ನು ಸರಿಪಡಿಸಿದ ಮೇಲೆ ಪ್ರಯಾಣ ಕ್ರಮಬದ್ಧವಾಯಿತು. ಡ್ಯೂಕ್ ಮೈಸೂರಿಗೆ ಬಂದು, ಕೇಂದ್ರ ಆಹಾರ ಸಂಶೋಧನಾಲಯದಿಂದ ದೀರ್ಘಕಾಲ ಬಾಳುವ ಆಹಾರವನ್ನು ಒಯ್ದಿದ್ದ. ಅದರ ಸೇವನೆ. ದೋಣಿಗೊಂದು ಬಟ್ಟೆಯ

ಛಾವಣಿ ಇತ್ತು. ಗಾಳಿಗೆ ಅದು ಹರಿದು, ಹಗಲೆಲ್ಲ ಬಿಸಿಲು ಅನುಭವಿಸಬೇಕಾಯಿತು.

ಸಣ್ಣಪುಟ್ಟ ಕಾರಣಗಳಿಗಾಗಿ ಅವರಿಬ್ಬರ ನಡುವೆ ಜಗಳಗಳಾಗುತ್ತಿದ್ದುವು. ಗಂಟೆಗಟ್ಟಲೆ ಅವರು ಮಾತನಾಡದೆ ಕುಳಿತಿರುತ್ತಿದ್ದರು.

ಅಂತೂ ಒಂದು ತಿಂಗಳು ದಾಟಿತು. ಮಾರ್ಚ್ ೨ರಂದು, ಹದಿನೈದು ಮೈಲುಗಳ ಆಚೆಗಿದ್ದ ನೆಲ ಅವರ ದೃಷ್ಟಿಗೆ ಬಿತ್ತು. ಪ್ರಿಪೇರಿಸ್ ದ್ವೀಪಗಳನ್ನು ಅವರು ಸಮೀಪಿಸಿದ್ದರು. ಆನಂದೋದ್ವೇಗದಿಂದ ಜಾರ್ಜ್ ಮತ್ತು ಪಿನಾಕಿ ಒಬ್ಬರನ್ನೊಬ್ಬರು ಅಪ್ಪಿಕೊಂಡರು. ಓಲಾಡಿದ ದೋಣಿಗೂ ಸಂತೋಷವಾಗಿತ್ತು. ಆದರೂ ಅದು ಮೈಮರೆಯಲಿಲ್ಲ; ಬುಡ ಮೇಲಾಗಲಿಲ್ಲ.

ಮತ್ತೂ ಮೂರು ದಿನ ನಿರ್ಜನ ದ್ವೀಪವನ್ನು ದಾಟಿ, ತಿಮಿಂಗಿಲಗಳಿದ್ದ ನೀರ ಮೇಲಿಂದ ಹಾದು, ಅಂತೂ ಕೊನೆಗೆ ಪೂರ್ವ ದ್ವೀಪದ ದಂಡೆಯನ್ನು ಮುಟ್ಟಿದರು. ಏಳು ಅಂತಸ್ತಿನ ದೀಪಸ್ತಂಭವನ್ನೇರಿ ತ್ರಿವರ್ಣ ಧ್ವಜವನ್ನು, ಸಂಶೋಧಕರ ಕ್ಲಬ್ಬಿನ ಬಾವುಟವನ್ನು, ನೌಕಾ ಚಿಹ್ನೆಗಳನ್ನು ಏರಿಸಿದರು. ಅಲ್ಲಿನ ಜನರ ಸಂಭ್ರಮವೇ ಸಂಭ್ರಮ!

* * * * *

ಈ ಘಟನೆ ನಡೆದು ಕೆಲ ದಿನಗಳು ಸಂದಿವೆಯಾದರೂ ಆ ಯುವಕರಿಬ್ಬರ ಸಾಹಸಯಾನದ ನೆನಪು ಇಂದಿಗೂ ರೋಮಾಂಚನ ಉಂಟುಮಾಡುತ್ತದೆ.

ನಮ್ಮ ಎಳೆಯರಲ್ಲಿ ನಾನಾ ಬಗೆಯವರಿದ್ದಾರೆ: ಮೇಧಾವಿಗಳು, ಆತ್ಮವಿಶ್ವಾಸವಿಲ್ಲದವರು, ನಾಳೆಯಲ್ಲಿ ನಂಬುಗೆ ಕಳೆದುಕೊಂಡವರು, ಅಸಹನೆಯ ನಿಗಿನಿಗಿ ಕೆಂಡಗಳು, ನ್ಯಾಯದ ಪಕ್ಷ ಹಿಡಿದು ಹೋರಾಡುವವರು, ಒಳಿತು–ಕೆಡುಕುಗಳ ವಿವೇಚನೆ ಇಲ್ಲದವರು, ಪ್ರಾಣವನ್ನು ತೃಣವಾಗಿ ಕಂಡು ಮಹಾಸಾಹಸಕ್ಕೆ ಕೈ ಇಕ್ಕುವವರು....

ಜಾರ್ಜ್ ಅಲ್ಬರ್ಟ್ ಡ್ಯೂಕ್ ಮತ್ತು ಪಿನಾಕಿ ಚಟರ್ಜಿ. ಹಿಂದಿನ ಸೋಲುಗಳನ್ನು ಮರೆಸುತ್ತದೆ ಇವರ ಗೆಲುವಿನ ಕಥೆ.

೧೩–೪–೧೯೬೯

# ಕಿರಿಯರಿಗೆ ಲೈಂಗಿಕ ಶಿಕ್ಷಣ

ನಮ್ಮ ಶ್ರೀಮತಿಯವರು (ವೈದ್ಯರು) ಮಾತುಕತೆಗೆ ನಾಂದಿ ಹಾಡಿದರು :

"ಡಾ. ನರಸಿಂಹಯ್ಯ ಸಿಕ್ಕಿದ್ರು."

ರಾಜಧಾನಿಯ ಶಿಕ್ಷಣಕ್ಷೇತ್ರದ ವಿಶಿಷ್ಟ ಧುರೀಣರು, ನ್ಯಾಷನಲ್ ಕಾಲೇಜಿನ ಪ್ರಿನ್ಸಿಪಾಲ್ ಡಾ. ನರಸಿಂಹಯ್ಯ.

ಮುಂದಿನ ವಾಕ್ಯವನ್ನು ನಿರೀಕ್ಷಿಸುತ್ತ ತಲೆ ಎತ್ತಿದೆ.

"ವಿದ್ಯಾರ್ಥಿನಿಯರಿಗೆ ಲೈಂಗಿಕ ಶಿಕ್ಷಣಕ್ಕೆ ಸಂಬಂಧಿಸಿ ಉಪನ್ಯಾಸಗಳನ್ನು ಕೊಡಬೇಕಂತೆ."

ಅಂದರೆ ಏನು ? – ಎಂದು, ಹತ್ತಿರದಲ್ಲೇ ಇದ್ದ ಮಗಳು ಕೇಳಲಿಲ್ಲ. ಅವಳ ಕಿವಿಗಳು ಮಾತ್ರ ನಿಮಿರಿಯೇ ಇದ್ದುವು.

ಮುಗುಳು ನಕ್ಕು ನಾನೆಂದೆ :

"ವಿಷಯ ಚೆನ್ನಾಗಿದೆ!"

* * * * *

ಸ್ವಲ್ಪ ಸಮಯದ ಹಿಂದೆ ಒಂದು ವಾರ್ತೆಯನ್ನೋದಿದ ನೆನಪು. ಅದು ಪಶ್ಚಿಮ ಜರ್ಮನಿಯಿಂದ ಬಂದದ್ದು.

ಅಲ್ಲಿ ಈ ವರ್ಷ ಎಲ್ಲ ಶಾಲೆಗಳಲ್ಲೂ ಹೊಸತೊಂದು ಪಠ್ಯಪುಸ್ತಕ ಜಾರಿಗೆ ಬರುತ್ತದೆ. ಅದನ್ನು ಸಿದ್ಧಪಡಿಸಿರುವುದು ಶಿಕ್ಷಣ ಶಾಖೆಯಲ್ಲ, ಆರೋಗ್ಯ ಶಾಖೆ.

ಅದೊಂದು 'ಲೈಂಗಿಕ ಅಟ್ಲಾಸು.' ಅದರಲ್ಲಿ ಹನ್ನೆರಡು ಮುಖ್ಯ ಅಧ್ಯಾಯಗಳಿರುತ್ತವೆ. ವರ್ಣ ನಕಾಶೆಗಳೂ ಭಾವಚಿತ್ರಗಳೂ ಇರುತ್ತವೆ. ಅಟ್ಲಾಸು ಮನುಷ್ಯನನ್ನು ಆತ ಇರುವಂತೆ ತೋರಿಸುತ್ತದೆ. ಮಗು ಹುಟ್ಟುವುದನ್ನು ಕುರಿತ ಹಳೆಯ ಕಟ್ಟು ಕಥೆಗಳು ಅದರಲ್ಲಿ ಇರುವುದಿಲ್ಲ.

ಅಷ್ಟೇ ಅಲ್ಲ. ಗುಹ್ಯರೋಗಗಳ ಪೂರ್ತಿ ವಿವರವೂ ಅದರಲ್ಲಿರುತ್ತದೆ. ಗರ್ಭನಿರೋಧಕ ಕ್ರಮಗಳನ್ನೂ ಅದು ಒಳಗೊಂಡಿರುತ್ತದೆ.

ಶಾಲೆಯ ಮೊದಲನೆಯ ತರಗತಿಯಿಂದಲೇ ಈ ಪುಸ್ತಕದ ಆಧಾರದ ಮೇಲೆ ಶಿಕ್ಷಣ ಆರಂಭವಾಗುತ್ತದೆ. ಆಗ ಮಗುವಿನ ವರ್ಷ ಆರು. 'ಅಟ್ಲಾಸ'ನ್ನು ಆಗಲೇ ಮಕ್ಕಳ ಕೈಗೆ ಕೊಡುವುದಿಲ್ಲ. ವಿದ್ಯಾರ್ಥಿಗಳೇ ಪುಸ್ತಕವನ್ನು ಓದಲು ಬಿಡುವುದು ಯಾವಾಗ ಎಂಬುದು ಇನ್ನೂ ನಿರ್ಧಾರವಾಗಿಲ್ಲ. ಪಶ್ಚಿಮ ಜರ್ಮನಿಯ

ಹತ್ತು ರಾಜ್ಯಗಳ ವಿದ್ಯಾಸಚಿವ ಶಾಖೆಗಳು ಸೇರಿ ವಿಚಾರವಿನಿಮಯ ನಡೆಸಿ, ಆ ನಿರ್ಧಾರವನ್ನು ಕೈಗೊಳ್ಳುತ್ತವೆ.

—ಯಾವ ದೇಶದ್ದಾದರೇನು ? ವಾರ್ತೆ ಗಹನವಾದದ್ದು ಗಂಭೀರವಾದದ್ದು.

ತಜ್ಞರು ಕೈಕೊಂಡು ಸರಕಾರ ಅನುಷ್ಠಾನಕ್ಕೆ ತರುತ್ತಿರುವ ಈ ಧೀರ ನಿರ್ಧಾರ ಎಷ್ಟು ಜನರಿಗೆ ಒಪ್ಪಿಗೆಯಾಗಬಹುದು ? ಎಷ್ಟು ಜನ ಹೆತ್ತವರು ಅಯ್ಯೋ ಎಂದು ಹಣೆ ಚಚ್ಚಿಕೊಳ್ಳಬಹುದು ?

ಕಾದು ನೋಡಬೇಕು.

*　*　*　*　*

ಪೋಲಿನದು ಪಶ್ಚಿಮದ ಮಾತಾಯಿತು ಪೂರ್ವದಿಕ್ಕಿಗೆ ಬರೋಣ. ರಷ್ಯಕ್ಕೆ.

ಲೈಂಗಿಕ ಶಿಕ್ಷಣಕ್ಕೆ ಸಂಬಂಧಿಸಿ 'ಲಿಟರರಿ ಗೆಜೆಟ್' ಪತ್ರಿಕೆಯ ಸಂಪಾದಕರಿಗೆ ಬರೆದ ಕಾಗದದಲ್ಲಿ ಒಬ್ಬರು ತಾಯಿ ಹೀಗೆ ಹೇಳಿದ್ದಾರೆ :

"ನಮ್ಮ ಯುವಜನಾಂಗಕ್ಕೆ ಈಗಾಗಲೇ ಲೈಂಗಿಕ ವಿಷಯವಾಗಿ ಸಾಕಷ್ಟು ಪರಿಜ್ಞಾನವಿದೆ! (ಲೈಂಗಿಕ ಪ್ರಶ್ನೆಗಳನ್ನು ಕುರಿತು ಅನೇಕ ಪುಸ್ತಕಗಳನ್ನು ಪ್ರಕಟಿಸಿದರೆ) ಅವುಗಳನ್ನು ಮೊದಲು ಓದುವವರು ಅಪ್ರಬುದ್ಧರೇ. ಅವರಲ್ಲಿ ಅನಾರೋಗ್ಯಕರ ಭಾವನೆಗಳನ್ನು ಅವು ಪ್ರಚೋದಿಸುತ್ತವೆ."

ಆದರೆ ಆ ಪತ್ರಿಕೆಯ ಅದೇ ಸಂಚಿಕೆಯಲ್ಲಿ ಡಾ. ಖೊದಾಕೋವ್ ಎಂಬ ಮನೋರೋಗ ತಜ್ಞರು ಬೇರೆಯೇ ಬಗೆಯ ಅಭಿಪ್ರಾಯವನ್ನು ಮಂಡಿಸಿದ್ದಾರೆ.

ಅವರ ಅಭಿಮತದಂತೆ –

"ಎಳೆಯರಿಗೆ ಲೈಂಗಿಕ ಶಿಕ್ಷಣವನ್ನು ನೀಡುವುದಷ್ಟೇ ಅಲ್ಲ, ಪ್ರೀತಿಸುವುದು ಹೇಗೆ ಎಂಬುದನ್ನೂ ಹೇಳಿಕೊಡಬೇಕು. ಮಾನವನ ಭಾವನೆಗಳು ಸಿದ್ಧತಯಾರಿಯ ವಸ್ತುಗಳಾಗಿ ದೊರೆಯುವುದಿಲ್ಲ. ಒಬ್ಬನ ಇಡೀ ಜೀವನದುದ್ದಕ್ಕೂ ಅವು ಬೆಳೆಯುತ್ತ ಅಭಿವೃದ್ಧಿಗೊಳ್ಳುತ್ತ ಹೋಗುತ್ತವೆ. 'ಅಕಾಲಿಕ' ಜ್ಞಾನದಿಂದ ಎಳೆಯರನ್ನು 'ರಕ್ಷಿಸಲು' ಯತ್ನಿಸಿದರೆ ಆ ಗುರಿ ವಿಫಲವಾಗುತ್ತದೆ."

ಆ ಡಾಕ್ಟರು ಅಂತಹ ನಿರ್ಧಾರಕ್ಕೆ ಬಂದಿರುವುದು ನಿರೀಕ್ಷೆ, ಅಧ್ಯಯನಗಳ ಬಳಿಕ.

ಅವರು ಇತ್ತೀಚೆಗೆ ೨೦ ವರ್ಷಕ್ಕಿಂತ ಕೆಳಗಿನ ಒಂದು ಸಾವಿರ ಕಿರಿಯರನ್ನು ಪ್ರಶ್ನಿಸಿ ಉತ್ತರ ಪಡೆದರು. ಅವರಲ್ಲಿ ಶೇಕಡಾ ೧೨ ಮಂದಿ, ಹತ್ತು ವರ್ಷ ವಯಸ್ಸು ಆಗುವಾಗಲೇ 'ಜೀವನದ ನಿಜಸಂಗತಿಗಳ'ನ್ನು ಅರಿತಿದ್ದರು. ಶೇಕಡಾ ೨೫ ಮಂದಿಗೆ ಆ ಸಂಗತಿಗಳು ತಿಳಿದುದು ೧೨ ನೆಯ ವಯಸ್ಸಿನಲ್ಲಿ, ಶೇಕಡಾ ೨೦ ಮಂದಿಗೆ ೧೪ ವರ್ಷ ಆಗುವ ಹೊತ್ತಿಗೆ.

ಅಂತೂ ಹದಿನಾಲ್ಕಕ್ಕೆ ಮುಂಚೆ ಲೈಂಗಿಕ ವಿಷಯಗಳನ್ನು ತಿಳಿದವರು ೫೭೦

ಜನ. ಇವರಲ್ಲಿ ಮೂರರಲ್ಲೆರಡು ಭಾಗ ವಯಸ್ಕರಾದ ಮೇಲೆಯೇ ತಮ್ಮ 'ಜ್ಞಾನ'ವನ್ನು ಪಡೆದಿದ್ದರು. ಮೂವತ್ತನಾಲ್ಕು ಜನ ಮಾತ್ರ ತಾಯಿ ತಂದೆಯರಿಂದಲೇ ತಿಳಿದುಕೊಂಡಿದ್ದರು.

ಮಕ್ಕಳಿಗೆ ಸರಿಯಾದ ತಿಳಿವಳಿಕೆ ನೀಡದೇ ಇದ್ದರೆ ಏನಾಗುತ್ತದೆ? ಈ ವಿಷಯದಲ್ಲಿ ಡಾ. ಖೊದಾಕೋವ್ ಖಡಾಖಂಡಿತವಾಗಿ ನುಡಿದಿದ್ದಾರೆ:

"ಗಂಡಸು – ಹೆಂಗಸಿನ ನಡುವಣ ಜಟಿಲ, ಕ್ಲಿಷ್ಟ ಬಾಂಧವ್ಯವನ್ನು ತಿಳಿಯಹೇಳುವುದು ತಪ್ಪೆಂದು ಮಡಿವಂತರು ಭಾವಿಸುವುದಾದರೆ, ಒರಟು ಲೈಂಗಿಕ ಪ್ರಯೋಗಗಳನ್ನು ಕಿರಿಯರು ನಡೆಸುವುದು ಅನಿವಾರ್ಯವಾಗುತ್ತದೆ."

ಅಪಾಯ ತಟ್ಟುವುದು ಲೈಂಗಿಕ ಜ್ಞಾನದಿಂದಲ್ಲ, ಅದರ ಅಭಾವದಿಂದ.

* * * * *

ಏನೇ ಕಾರಣಕ್ಕಾಗಿ (ಹೆಚ್ಚಾಗಿ ಆರ್ಥಿಕ) ಮದುವೆ ಮುಂದಕ್ಕೆ ಹೋಗಬಿದ್ದರೆ, ಭಾರತದಲ್ಲಿ ಸಾಧಾರಣವಾಗಿ ಚಿಕ್ಕವಯಸ್ಸಿನಲ್ಲೇ ಪಾಣಿಗ್ರಹಣ ನೆರವೇರುತ್ತದೆ.

ರಷ್ಯದಲ್ಲಿ ೧೮–೨೨ ರ ಅಂತರದಲ್ಲೇ ಅನೇಕ ಕಿರಿಯರು ವಿವಾಹವಾಗುತ್ತಾರೆ ಎಂದರೆ ನಮಗೆ ಆಶ್ಚರ್ಯವಾಗಬಹುದು.

ಪ್ರೇಮದ ಶಾರೀರಿಕ ಮಾನಸಿಕ ಪರಿಜ್ಞಾನವಿಲ್ಲದೆಯೇ ಎಳೆಯರನ್ನು ಮದುವೆಯಾಗಲು ಬಿಡುವುದು ಸರಿಯೆ? ಎಂದು ಖೊದಾಕೋವ್ ಕೇಳುತ್ತಾರೆ.

"ಕಾಲಕ್ರಮೇಣ ಲೈಂಗಿಕ ಸಾಮರಸ್ಯ ಸಾಧಿತವಾಗುತ್ತದೆ ಎನ್ನುವುದು ಭ್ರಮೆ."

– ಇದು ಆ ತಜ್ಞರ ಎಚ್ಚರಿಕೆ. ಅವರು ಮತ್ತೂ ಹೇಳುತ್ತಾರೆ:

"ಆ ಸಾಮರಸ್ಯ ಸಾಧಿತವಾಗದೇ ಇದ್ದರೆ ಕುಟುಂಬ ಒಡೆಯುತ್ತದೆ; ಮೌನದ ಶಂತ ಕಾರಸ್ಥಾನದ ಫಲವಾಗಿ ದುರಂತ ಪ್ರಾಪ್ತವಾಗುತ್ತದೆ."

ಅವರು ತೋರುವ ದಾರಿ ಇದು: ಆರೋಗ್ಯ ಸೇವಾವ್ಯವಸ್ಥೆಯಲ್ಲೇ ಸಾಕಷ್ಟು ಬೋಧನೆ ಇರಬೇಕು; ಆ ವಿಷಯವಾಗಿ ನೇರನುಡಿಯ, ಮಾಹಿತಿ ಒದಗಿಸುವ ಅನೇಕ ಪುಸ್ತಕಗಳು ಬೇಕು....

* * * * *

ಪರದೇಶದ ಮಾತಲ್ಲ ನಮ್ಮ ದೇಶದ್ದು. ಸ್ಥಿತಿಗತಿ ನಮ್ಮ ಮನೆಯದೇ. ಕಿರಿಯರಿಗೆ ಲೈಂಗಿಕ ಶಿಕ್ಷಣ ನೀಡಬೇಕೆ? ಬೇಡವೆ?

ಬೇಕು ಎಂದಾದರೆ ಎಷ್ಟು?

೧೧–೫–೧೯೬೯

# "ಮದುವೆ ಮಾಡಿ ನೋಡು"

ಮಲೆನಾಡಿನಲ್ಲೊಂದು ಮದುವೆ. ಮಹಾಕವಿ ಕುವೆಂಪು ನೇತೃತ್ವ.

ವಧು, ಕವಿ ಪುತ್ರಿ ಇಂದುಕಲಾ. ವರ, ಕಡಿದಾಳ್ ತಮ್ಮಯ್ಯಗೌಡರ ಪುತ್ರ ಸುರೇಂದ್ರ.

ಇನ್ನೂ ಒಂದು ಜೋಡಿ : ಗೀತಾ – ಪುರುಷೋತ್ತಮ್.

ಶಿವಮೊಗ್ಗೆಯ ಗೌಡಸಾರಸ್ವತ ಕಲ್ಯಾಣ ಮಂಟಪದಲ್ಲಿ ಸಮಾರಂಭ.

ಭಾಗವಹಿಸಿ ಬಂದವರು ವಿವರಿಸಿರುವುದು ಹೀಗೆ :

"ಶ್ವೇತವಸ್ತ್ರಾಲಂಕೃತ ವೇದಿಕೆ. ಎತ್ತರದಲ್ಲಿ ಸೀತೆ ರಾಮಲಕ್ಷ್ಮಣರ ಚಿತ್ರ. ಅದರ ಕೆಳಗೆ ರಾಮಕೃಷ್ಣ ಪರಮಹಂಸ – ಶಾರದಾ ದೇವಿಯರ ಭಾವಚಿತ್ರಗಳು. ಈ ಚಿತ್ರಗಳ ಕೆಳಗೆ, ವೇದಿಕೆಯ ಮೇಲೆ 'ಶ್ರೀ ರಾಮಾಯಣ ದರ್ಶನಂ' ಕೃತಿ. ಎರಡು ಬದಿಗಳಲ್ಲೂ ಬೆಳಗುತ್ತಿದ್ದ ದೀಪಗಳು. ಪುಷ್ಪಾಲಂಕಾರ. ನೆರೆದಿದ್ದವರು ಬೀಗರು, ಹತ್ತಿರದ ಬಂಧುಗಳು, ಆಪ್ತಸ್ನೇಹಿತರು. ಆತ್ಮೀಯತೆ, ಭಕ್ತಿ, ಕುತೂಹಲ ಬೆರೆತ ಭಾವ. ("ಪುಟ್ಟಪ್ನೋರು ಹೊಸ ಥರ ಮದುವೆ ಮಾಡಿಸ್ತಾರಂತೆ.") ಮಾಂಗಲ್ಯ ಸಂಬಂಧಮಾಲಿಕೆಗಳನ್ನು ಎದುರಿಗೆ ಇರಿಸಿದ್ದರು. ಅವುಗಳಿಗೆ ಪೂಜೆ ನಡೆಯಿತು. ಬೇರೆಯೇ ಬಗೆಯ ಪೌರೋಹಿತ್ಯ ; ಬೇರೆಯೇ ಮಂತ್ರ. ಉಪನಿಷತ್ತಿನಿಂದ ಶ್ಲೋಕಗಳನ್ನು ಆರಿಸಿದ್ದವರು ಕುವೆಂಪು. 'ಮಂತ್ರಮಾಂಗಲ್ಯ' ಪುಸ್ತಕದಲ್ಲಿ ಅವು ಅಚ್ಚಾಗಿದ್ದುವು. ಶುಭ ಮುಹೂರ್ತದಲ್ಲಿ, ಡಾ. ಪ್ರಭುಶಂಕರ್ (ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ನಿರ್ದೇಶಕರು) 'ಮಂತ್ರಮಾಂಗಲ್ಯ'ವನ್ನು ಓದಿದರು. ಮಹಾಕವಿಯೂ ಆಗಾಗ್ಗೆ ದನಿಗೂಡಿಸಿದರು. ಪಠಣ, ಮಾಂಗಲ್ಯಧಾರಣೆ, ವರ್ಣಮಾಲಿಕೆಗಳ ಪುಷ್ಪಹಾರಗಳ ವಿನಿಮಯ, ಮಂತ್ರಾಕ್ಷತೆ, ಹಿರಿಯರ ಆಶೀರ್ವಾದ. ಮದುವೆ ಮುಗಿಯಿತು. 'ಮಂತ್ರಮಾಂಗಲ್ಯ'ದ ಪ್ರತಿಗಳನ್ನು ಅತಿಥಿಗಳಿಗೆ ಉಚಿತವಾಗಿ ಹಂಚಲಾಯಿತು. ಫಲತಾಂಬೂಲ ಸ್ವೀಕರಿಸಿ ಅತಿಥಿಗಳು ತೆರಳಿದರು."

ಈ ಸರಳ ವಿವಾಹದಲ್ಲಿ ಬಳಸಿದ್ದು ಹೊಚ್ಚ ಹೊಸ ವಿಧಾನವನ್ನು. ವೆಚ್ಚ ಕಡಮೆ ಎನ್ನುವುದೂ ಈಗಿನ ಕಾಲದಲ್ಲಿ ಗಮನಿಸಬೇಕಾದ ಅಂಶವೇ.

ವಾಸ್ತವವಾಗಿ ಮಹಾಕವಿ ಹಾಕಿಕೊಟ್ಟಿರುವ ಮೇಲ್ಪಂಕ್ತಿ ಇದು – ಸಮಾಜಕ್ಕೆ.

* * * * *

ಇತ್ತೀಚೆಗೆ ನನ್ನ ಕೈಸೇರಿದ ಒಂದು ಕರೆಯೋಲೆಯಿಂದ :

"ಆತ್ಮೀಯರೇ,

"ಗ್ರಾಮಾಂತರ ಬಂಧುಗಳಲ್ಲಿ ಐಕ್ಯತೆ, ಸಹಕಾರ ಹಾಗೂ ಸಾಮೂಹಿಕ ಭಾವನೆಗಳು ಬೆಳೆಯಲೆಂಬ ಆಶಯದಿಂದ ಕಳೆದ ನಾಲ್ಕಾರು ವರ್ಷಗಳಿಂದ ನಾವು ಸಾಮೂಹಿಕ ವಿವಾಹಗಳನ್ನು ನಡೆಸಿಕೊಂಡು ಬರುತ್ತಿದ್ದೇವೆಂದು ತಮಗೆ ತಿಳಿಸಲು ಹರ್ಷವೆನಿಸುತ್ತದೆ. ಈಗ ನಡೆಯುತ್ತಿರುವುದು ನಾಲ್ಕನೇ ಬಾರಿ.

"ನಮ್ಮ ಯೋಜನೆಯಂತೆ ಇದೇ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೮೯೧ನೇ ಶ್ರೀ ಸೌಮ್ಯನಾಮ ಸಂವತ್ಸರ ವೈಶಾಖ ಬಹುಳ ಏಕಾದಶಿ ಸೋಮವಾರ ಬೆಳಗ್ಗೆ ಗಂ. ೭–೫೬ ರಿಂದ ೯–೩೭ರ ವರೆಗೆ ಸಲ್ಲುವ ಶುಭ ಮಿಥುನ ಲಗ್ನದಲ್ಲಿ ಗಿರಿಯಾಪುರ ಗ್ರಾಮದಲ್ಲಿರುವ ಶ್ರೀ ಮಲ್ಲಿಕಾಂಬಾ ಅಮ್ಮನವರ ದೇವಾಲಯದ ಆವರಣದಲ್ಲಿ ಗುರುಹಿರಿಯರ ಅಪ್ಪಣೆಯಂತೆ ಸಾಮೂಹಿಕ ವಿವಾಹಗಳನ್ನು ನಡೆಸಲು ನಿರ್ಧರಿಸಲಾಗಿದೆ.

"ತಾವು ತಮ್ಮ ಇಷ್ಟಮಿತ್ರರೊಂದಿಗೆ ಸಕಾಲಕ್ಕೆ ದಯಮಾಡಿಸಿ ವಧೂವರರನ್ನು ಆಶೀರ್ವದಿಸಿ ಫಲತಾಂಬೂಲಾದಿಗಳನ್ನು ಸ್ವೀಕರಿಸಬೇಕಾಗಿ ಕೋರುತ್ತೇವೆ.

"ಇಂತು, ಸದಸ್ಯರು, ನವಜೀವನ ದರ್ಶನ ಮಂಟಪ ಮತ್ತು ಗ್ರಾಮಸ್ಥರು."

ಕರೆಯೋಲೆಯಲ್ಲಿ ವಧೂವರರ ವಿವರಗಳಿವೆ. ಒಟ್ಟು ಹದಿನೈದು ಜೊತೆ. ಸೋಮಶೇಖರಾರಾಧ್ಯ – ಶಕುಂತಲರಿಂದ ಆರಂಭವಾಗಿ ಮೃತ್ಯುಂಜಯ – ದಾಕ್ಷಾಯಣಮ್ಮನವರ ತನಕ.

ಮಹೋತ್ಸವಕ್ಕೊಂದು ಕಾರ್ಯಕ್ರಮ :

ಸಂಜೆ ೬ ರಿಂದ ೭ ಮಂಟಪಕ್ಕೆ ವಧೂವರರ ಆಗಮನ; ೭ ರಿಂದ ೮ ಪೂಜಾದಿ ಶಾಸ್ತ್ರಗಳು, ೮ ರಿಂದ ೧೧ ಊಟೋಪಚಾರಗಳು ; ೧೧ ರಿಂದ ೧೨ ಬಿಡುವು.

ಮಾರನೆಯ ದಿನ ಮುಂಜಾನೆ ೧ ರಿಂದ ೫ ಮುಹೂರ್ತ ಪೂರ್ವಭಾವಿ ಶಾಸ್ತ್ರಗಳು ; ೫–೩೦ ರಿಂದ ೭–೩೦ ಸ್ನಾನಾದಿಗಳು ; ೭–೫೬ ರಿಂದ ೯–೩೭ ಮುಹೂರ್ತ ; ೯–೩೭ ರಿಂದ ೧೨ ಸಭಾಕಾರ್ಯಗಳು ; ಮಧ್ಯಾಹ್ನ ೧೨ ರಿಂದ ೩ ಊಟೋಪಚಾರಗಳು ; ೩ ರಿಂದ ೫ ಬಿಡುವು (ಯಾರಿಗೆ?) ; ೫ರಿಂದ ೬ ವಧೂವರರನ್ನು ಬೀಳ್ಕೊಡುವುದು.

— ಸಮಾರಂಭವನ್ನು ಏರ್ಪಡಿಸಿದ ನವಜೀವನ ದರ್ಶನ ಮಂಟಪದ ಆದರ್ಶ ಮೆಚ್ಚತಕ್ಕದ್ದು. ಇಲ್ಲಿ ಆದ್ಯಗಮನ ಐಕ್ಯತಾಯದ ಕಡೆಗೆ. ಜೊತೆಗೆ, ಸಮಾಜದಲ್ಲಿ ಸಹಕಾರ ಹಾಗೂ ಸಾಮೂಹಿಕ ಭಾವನೆಗಳು ಬೆಳೆಯಬೇಕೆಂಬ ಸದುದ್ದೇಶ. ಉಳಿದುದೆಲ್ಲ ಸಾಂಪ್ರದಾಯಿಕ.

ಇಲ್ಲಿ ಗುರುತಿಟ್ಟುಕೊಳ್ಳಬೇಕಾದ ಅಂಶವೆಂದರೆ, ಮಲೆನಾಡಿನ ಒಂದಂಗವಾದ ಚಿಕ್ಕಮಗಳೂರು ಜಿಲ್ಲೆಯ ಹಿರೇನಲ್ಲೂರು ಹೋಬಳಿಯ ಗಿರಿಯಾಪುರದಲ್ಲಿ ಈ ಬಗೆಯ

ಸಾಮೂಹಿಕ ವಿವಾಹೋತ್ಸವ ಜರಗುತ್ತಿರುವುದು ಇದು ನಾಲ್ಕನೆಯ ಬಾರಿ. ವರ್ಷ ದಿಂದ ವರ್ಷಕ್ಕೆ ಈ ಸಮಾರಂಭ ಜನಪ್ರಿಯವಾಗುತ್ತ ನಡೆದಿದೆ.

* * * * *

ಹಸಿರು ಮಲೆನಾಡಿನಿಂದ ಒಣನೆಲದ ಕಲಬುರ್ಗಿಗೆ.

ಸಿದ್ಧರಾಮಪ್ಪ – ಕಸ್ತೂರಮ್ಮ ; ಚಂದ್ರೇಶ್ – ಮುತ್ತಮ್ಮ ಈ ಎರಡು ಜೋಡಿ ಗಳಿಗೆ ಹೊಸ ಪದ್ಧತಿಯ ಮದುವೆ ಏರ್ಪಟ್ಟಿತು, ಮೊನ್ನೆ. ಆ ಸಮಾರಂಭದ ಹಿರಿತನ ವಹಿಸಿದವರು ಭಾರತೀಯ ಭೀಮಸೇನೆಯ ಅಧ್ಯಕ್ಷ ಬಿ. ಶ್ಯಾಮಸುಂದರ್.

ಪುರೋಹಿತರಿಲ್ಲ, ಮಂತ್ರಘೋಷಗಳಿಲ್ಲ. ಬದಲು, 'ಜಯ ಭೀಮ್ !' 'ಜಯ ಭೀಮ್ !' ಜಯಕಾರ. ಈ ಘೋಷಗಳ ನಡುವೆ ಹಾರಗಳ ವಿನಿಮಯ.

— ಹಾಗೂ ನಾಯಕ ಶ್ಯಾಮಸಂದರರ ಭಾಷಣ.

ಗಾಳಿ ಎತ್ತ ಕಡೆಗೆ ಬೀಸುತ್ತದೆ ಎಂಬುದನ್ನು ಸೂಚಿಸುತ್ತದೆ ಈ ಸಂಗತಿ.

* * * * *

ಹೊರಗೆ ತಮಿಳುನಾಡಿನಲ್ಲಿ ಕಳಗಂ ಮಿತ್ರರು ಇಂತಹ ಸರಳ ಮದುವೆಗಳನ್ನು ಆಚರಣೆಗೆ ತಂದು ಹತ್ತಾರು ವರ್ಷಗಳೇ ಸಂದಿವೆ. ಕಮ್ಯೂನಿಸ್ಟರ ಪ್ರಾಬಲ್ಯವಿರುವ ಕೇರಳ, ಆಂಧ್ರ, ಬಂಗಾಳಗಳಲ್ಲಂತೂ 'ಸುಲಗ್ನ ಸಾವಧಾನ, ಸುಮುಹೂರ್ತ ಸಾವ ಧಾನ' ಮಂತ್ರಗಳಿಲ್ಲದೆಯೇ ಮದುವೆಗಳು ಬಹಳ ವರ್ಷಗಳಿಂದ ಆಗಾಗ್ಗೆ ನಡೆಯುತ್ತ ಬಂದಿವೆ. ಉತ್ತರದಲ್ಲಿ ನೂರಾರು ಜೋಡಿಗಳಿಗೆ ಒಮ್ಮೆಲೇ ಮದುವೆಮಾಡಿಸುವ ಪದ್ಧತಿ ಕೆಲವೆಡೆ ಇದೆ. ಬೆಟ್ಟದ ಮೇಲೆಯೋ ರೆಜಿಸ್ಟ್ರಾರರ ಮುಂದೆಯೋ ಸುಲಭ ವಿವಾಹಗಳನ್ನು ಏರ್ಪಡಿಸಿಕೊಳ್ಳುವವರೂ ಇದ್ದಾರೆ.

ಇವತ್ತು ಹೀಗಿದೆ. ನಾಳೆ ಹೇಗಿದ್ದೀತು ಎಂದು ಊಹಿಸಿಕೊಳ್ಳುವುದು ಕಷ್ಟ ವಾಗಲಾರದು.

೨೫-೫-೧೯೬೯

# ಸುಸ್ತೋ ಜನಮೇಜಯ್

ದಿಲ್ಲಿಯ 'ದಿಶಾಂತರ್' ನಾಟ್ಯವಿಲಾಸಿ ಸಂಘದವರು ಶ್ರೀರಂಗರ 'ಕೇಳು ಜನಮೇಜಯ' ನಾಟಕದ ಹಿಂದಿ ಭಾಷಾಂತರವನ್ನು ಬೆಂಗಳೂರಿನಲ್ಲಿ ಅಭಿನಯಿಸಲಿದ್ದಾರೆ ಎಂದು ಕೇಳಿದಾಗ ಸಂತೋಷಪಟ್ಟೆ. ನನ್ನ ಪಾಲಿಗೆ ಅದು ಕೆಂಪುಮಸಿಯಲ್ಲಿ ಗುರುತು ಹಾಕಿಡುವ ದಿನ.

ಎಂತಹ ಪರಿಣತರು ಆಡಿದರೇನು? ಅಭಿನಯಿಸುವ ಸ್ಥಳ ಬೆಂಗಳೂರು ತಾನೆ? ಆ ಸಂಜೆ ರವೀಂದ್ರ ಕಲಾಕ್ಷೇತ್ರಕ್ಕೆ ಹನಿ ಹನಿಯಾಗಿ ಜನ ಬಂದರು. ಹ-ನಿ-ಹ-ನಿಯಾಗಿ. ಹಿಂದೀ ನಾಟಕವೆಂದು ಉಪೇಕ್ಷೆ ಎನ್ನೋಣವೆ? ಸರಿಯಲ್ಲ, ಹಿಂದಿ ಮನೋರಂಜನೆಯನ್ನು ನಗರದಲ್ಲಿ ಬಯಸುವವರ ಸಂಖ್ಯೆ ಸಹಸ್ರ ಸಹಸ್ರ. ಶ್ರೀರಂಗರ ನಾಟಕವೆಂದು ಅಲಕ್ಷ್ಯವೆ? ಇರಬಹುದು, ಸ್ವಲ್ಪ ಮಟ್ಟಿಗೆ. ಆದರೆ ದೊಡ್ಡ ಪತ್ರಿಕೆಗಳು ಪೂರ್ವಭಾವಿಯಾಗಿ ನೀಡಿದ್ದ ಪ್ರಚಾರವನ್ನು ಗಮನಿಸಿದರೆ, ಈ ಸಂದಣಿ ಏನೂ ಸಾಲದು. ಸಭಾಭವನ ತೀರಾ ಬರಿದಾಗಿರಲಿಲ್ಲ ಎಂಬುದೊಂದೇ ಸಮಾಧಾನ.

ಹಿಂದಿನ ದಿನ ಕನ್ನಡ ಸಾಹಿತ್ಯಕಲಾ ಸಂಘದವರು ಅದೇ ನಾಟಕವನ್ನು ಆಡಿದ್ದರು, ಮೂಲದಲ್ಲಿ. ನೋಡಿದವರು ಹೇಳಿದಂತೆ, 'ಚೆನ್ನಾಗಿ ಆಡಿದ್ದರು.' ಆ ಕಾರಣದಿಂದ ಮತ್ತಷ್ಟು ಕುತೂಹಲ.

* * * * *

ಸೂತ್ರಧಾರರಾಗಿ ಓಂ ಶಿವಪುರಿ ಅಪರಿಚಿತ ಪ್ರೇಕ್ಷಕ ಗಣವನ್ನು ಇದಿರಿಸಿದ ಮೊದಲ ಕ್ಷಣ ಇಷ್ಟದೇವತೆಯನ್ನು ಪ್ರಾರ್ಥಿಸಿದರೋ ಇಲ್ಲವೋ ತಿಳಿಯದು. ಆದರೆ ಕೆಲವೇ ನಿಮಿಷಗಳಲ್ಲಿ ಆರಂಭದ ಪ್ರತಿಕ್ರಿಯೆ ದೊರೆತೊಡನೆ, 'ಗೆದ್ದೆ!' ಎನಿಸಿರಬೇಕು ಅವರಿಗೆ. ಅವರೊಬ್ಬರೇ ಅಲ್ಲ, ಭಾಗವಹಿಸಿದ ಆರೂ ಮಂದಿ, ಪಾತ್ರವಹಿಸದ ನಿರ್ದೇಶಕರು ಕೂಡಾ. ಎಂಥ ಗೆಲುವು! ತೊಂಭತ್ತು ನಿಮಿಷಗಳ ಕಾಲ ಪ್ರೇಕ್ಷಕರು ಸೆರೆಯಾಳುಗಳಾದರು.

ಮಾತು ಧ್ವನಿ ಹಾವ ಭಾವ – ಸಮಗ್ರ ಅಭಿನಯ – ಶ್ರೇಷ್ಠತಮ. ಆ ನಾಟಕದ ವೀಕ್ಷಣೆ ಒಂದು ರಸಾನುಭವ. ಮರೆಯಲಾಗದ್ದು.

* * * * *

'ಕೇಳು ಜನಮೇಜಯ' ಶ್ರೀರಂಗರ ಒಳ್ಳೆಯ ನಾಟಕಗಳಲ್ಲಿ ಒಂದು. ಆಡಳಿತಾಂಗದಲ್ಲಿ ನಾಟಕಾಧಿಕಾರಿಯಾಗಿ, ಆಕಾಶವಾಣಿಯಲ್ಲಿ ಆಜ್ಞಾಧಾರಕ ನಾಟಕಕಾರ

ನಾಗಿ, ಕೆಲವು ವರ್ಷ ದುಡಿದು, ಸರಕಾರೀ ಪಂಜರದಿಂದ ಹೊರಬಿದ್ದ ಮೇಲೆ ಸೃಷ್ಟಿಸಿದ ಶ್ರೇಷ್ಠ ನಾಟಕಗಳಲ್ಲಿ ಇದೊಂದು.

ನಾಟಕದ ಕಥೆ? ಶ್ರೀರಂಗಸಾಹಿತ್ಯದಲ್ಲಿ ಅಂಥದನ್ನು ಹುಡುಕಬಾರದು. ವಿಚಾರ? ಸಾಕಷ್ಟು, ಸಾಕೆನಿಸುವಷ್ಟು. ಸಮಸ್ಯಾ ನಾಟಕವೆನ್ನಿ, ಪ್ರಯೋಗ ನಾಟಕವೆನ್ನಿ. ಅದೊಂದು ವಜ್ರ.

ಆದರೆ ಸಾಣೆ ಹಿಡಿಯದ್ದು. ಶ್ರೀರಂಗರ ಕೊರತೆ – ಭಾಷೆ. ಉತ್ತರ ಕರ್ನಾಟಕ ದಲ್ಲಿ ಇದ್ದಷ್ಟು ಕಾಲವೂ 'ನಡೀತಿತ್ತು'. ಏಕೀಕೃತ ಕನ್ನಡ ನಾಡಿನ ರಾಜಧಾನಿಯಲ್ಲಿ ನೆಲೆಸಿದ ಮೇಲೆ ಭಾಷೆ ಶ್ರೀರಂಗರ ಮೇಲೆ ಮತ್ತಷ್ಟು ಮುನಿದಿದೆ. ಆಡು ಭಾಷೆ ಕರಗತವಾಗದೇ ಹೋದರೆ ಸಾಮಾಜಿಕ ನಾಟಕ ಅರೆಜೆಂದ ಅನ್ನ. ಮಾತಿನ ಮಾಧುರ್ಯ ಇಲ್ಲದೇ ಹೋದಾಗ, ಎಂಥ ಅಭಿನಯ ಇದ್ದರೇನು ? ರಂಗಸಜ್ಜಿಕೆ ಇದ್ದರೇನು ? ಸಾಲು ಗಳನ್ನು ಕಲಾವಿದರು ಎಷ್ಟು ಚೆನ್ನಾಗಿ 'ಗಟ್ಟಿಸಿದ'ರೇನು ? ಪ್ರೇಕ್ಷಕರ ಪಾಲಿಗೆ ನಾಟಕ 'ನಮ್ಮದಾಗುವುದಿಲ್ಲ.'

* * * * *

ಆದರೆ 'ಸುನೋ ಜನಮೇಜಯ' ನಾಟಕದ ವೈಖರಿಯೇ ಬೇರೆ. ಇದು ಕಲಸು ಭಾಷೆಯಲ್ಲ. ಅಪ್ಪಟ ಹಿಂದಿ. ಕನ್ನಡದಂತೆ, ಇತರ ಭಾಷೆಗಳಂತೆ ಹಿಂದಿ ಯಲ್ಲೂ ಪ್ರಭೇದಗಳಿವೆ. ಬೇರೆ ರೀತಿಯ ಹಿಂದಿಯಲ್ಲೂ ಇದೇ ನಾಟಕವನ್ನು ಬರೆಯ ಬಹುದು. ಆದರೆ 'ಸುನೋ ಜನಮೇಜಯ' ನಾಟಕದಲ್ಲಿ ಬಳಸಲಾಗಿರುವ ಹಿಂದಿ ಯಲ್ಲಿ ತೊಡರುಗಳಿಲ್ಲ, ತೊಡಕುಗಳಿಲ್ಲ. ಇಲ್ಲಿ ಭಾವಕ್ಕೆ ಭಾಷೆ ಅಧೀನ. ಪದಗಳ ಪ್ರವಾಹ, ನಾದಮಾಧುರ್ಯ ಮೂಲದಲ್ಲಿ ಇಲ್ಲದ್ದು. ಶ್ರೀರಂಗ ಕಟ್ಟಳೆಗಳ ಕಠೋರ ತೆಯ ಶಾಖ ದಿಲ್ಲಿಯ ನಾಟ್ಯವಿಲಾಸಿಗಳಿಗೆ ತಗಲುವುದಿಲ್ಲವೆಂದೇ ಈ ನಾಟಕ ಬೆಳಗಿದೆ ಎನ್ನಬೇಕು.

ಹಾಗೆ ನೋಡಿದರೆ, 'ಸುನೋ ಜನಮೇಜಯ' ಶ್ರೀರಂಗಕೃತಿಯೆಂದು ಕನ್ನಡಿ ಗರು ಗುರುತಿಸುವಂತೆಯೇ ಇಲ್ಲ. ಇಲ್ಲಿ ಕನ್ನಡತನವಿಲ್ಲ. ಮುಂದಾಳುವಿನ ಟೋಪಿ ಯೊಂದಿಲ್ಲವಾದರೆ ಭಾರತೀಯತೆಯೂ ಇಲ್ಲವೆನ್ನಬಹುದು. ತಿರುಳು ಎಲ್ಲ ದೇಶಗಳಿಗೂ ಅನ್ವಯಿಸುವಂಥಾದ್ದು. ಎಲ್ಲಾ ಕಾಲಗಳಿಗೂ ಕೂಡ. ಇದು ಮೂಲ ಹಿಂದಿ – ಎಂದು ಬೇಕಾದರೂ ಹೇಳಬಹುದು, ಅಥವಾ, ಫ್ರೆಂಚ್ ನಾಟಕವೊಂದರ ಭಾಷಾಂತರ ಎನ್ನಲೂಬಹುದು.

ಸುಪ್ರಸಿದ್ಧ ನಾಟಕಕಾರನ ಕೃತಿ ಎನ್ನುವ ಕಾರಣದಿಂದ ನಾಟಕ ಇಲ್ಲಿ ಕಳೆಕಟ್ಟು ವುದಿಲ್ಲ. ಇಷ್ಟು ಒಳ್ಳೆಯ ನಾಟಕದ ಕರ್ತೃ ಎಂಬ ಕಾರಣದಿಂದ ನಾಟಕಕಾರ ಪ್ರಖ್ಯಾತನಾಗುತ್ತಾನೆ.

* * * * *

ಆ ದೃಷ್ಟಿಯಿಂದ ಇದೊಂದು ಹೊಸ ಅನುಭವ. ಇಲ್ಲಿ ಆದುದು ಭಾರತೀಯ ನಾಟಕಕಾರ ಶ್ರೀರಂಗರ ದರ್ಶನ. ಕನ್ನಡದವರಿಗೆ ಪರಿಚಿತರಾದ ನಾಟಕಕಾರರಲ್ಲ. ಬೇರೆಯೇ ವ್ಯಕ್ತಿ.

ಬೆಳೆದ ಕೊರಕಲು ನೆಲದಿಂದ ಎತ್ತಿ ರಾಷ್ಟ್ರವ್ಯಾಪ್ತಿಯ ಉದ್ಯಾನದಲ್ಲಿ ದೃಷ್ಟಿ ಸೆಳೆಯುವ ಸ್ಥಾನ ದೊರಕಿಸಿಕೊಡುವುದು ಭಾರೀ ಸೇವೆ, ಸಾಧನೆ.

ಅದು ಸಾಧ್ಯವಾಗಿರುವುದು ಬಿ. ವಿ. ಕಾರಂತರ ಸಮರ್ಪಿತ ದುಡಿಮೆಯಿಂದ. ಈ ಕನ್ನಡಿಗ, ಭಾರತದ – ಅಥವಾ ವಿಶ್ವದ – ನಾಟಕ ಲೋಕಕ್ಕೇ ತನ್ನನ್ನು ತಾನು ಧಾರೆ ಎರೆದಿರುವ ವ್ಯಕ್ತಿ. ಕನ್ನಡ ನಾಡಿನಲ್ಲಿ ಬಡತನದ ಬಾಲ್ಯ, ಶಿಕ್ಷಣ ಮುಂದುವರಿಸಲೆಂದು ಉತ್ತರದತ್ತ ಪಯಣ, ಅಲ್ಲಿನ ಬದುಕಿನಲ್ಲಿ ಬೆರೆತು ಹೋದಾಗಲೂ ಹುಟ್ಟಿದ ನೆಲದ ನೆನಪು. ಈ ಕಾರಂತರಿಗೆ ಕನ್ನಡ ನಾಡಿನಿಂದ ಏನಾದರೂ ಉಪಕಾರವಾಗಿದೆಯೋ ಹೇಳುವುದು ಕಷ್ಟ. ಒಂದಿಷ್ಟಾದರೂ ಋಣವತ್ತಾದರೂ ಆಗಿದ್ದರೆ, ನೂರು ಪಾಲಷ್ಟನ್ನು ಈಗಾಗಲೇ ಅವರು ಮರುಸಂದಾಯ ಮಾಡಿದ್ದಾರೆ.

'ಕೇಳು ಜನಮೇಜಯ' 'ಸುನೋ ಜನಮೇಜಯ್' ಆಗಿರುವುದು ಎನ್. ಸಿ. ಜೈನ್ ಹಾಗೂ ಬಿ. ವಿ. ಕಾರಂತರ ಪರಿಶ್ರಮದಿಂದ. ಮೂಲ ಭಾಷೆಯ ಮೇಲೂ ಅನುವಾದಗೊಳ್ಳುವ ಭಾಷೆಯ ಮೇಲೂ ಪ್ರಭುತ್ವ ಇರುವವರು ಎಷ್ಟು ಒಳ್ಳೆಯ ಕೃತಿಯನ್ನು ಸಿದ್ಧಪಡಿಸಬಲ್ಲರು ಎನ್ನುವುದಕ್ಕೆ 'ಸುನೋ ಜನಮೇಜಯ್' ನಿದರ್ಶನ.

'ದಿಶಾಂತರ' ನಾಟ್ಯವಿಲಾಸಿಗಳು ಇನ್ನೊಂದು ಅಂಶವನ್ನು ಖಚಿತಪಡಿಸಿದ್ದಾರೆ. ಒಳ್ಳೆಯ ನಾಟಕ ದಕ್ಷ ನಿರ್ಮಾಪಕರ ಕೈಗೆ ದೊರೆತಾಗ ಮಾತ್ರ ನಾಟಕಕಾರನ ಜನ್ಮ ಸಾರ್ಥಕವಾಗುತ್ತದೆ. ಇಲ್ಲದೆ ಹೋದರೆ ಆತನ ಕೊರಗು ನೂರ್ಮಡಿಸುತ್ತದೆ.

'ದಿಶಾಂತರ್' ಬಳಗ ನಾಟಕ ಶಿಕ್ಷಣಶಾಲೆಯಲ್ಲಿ ತರಬೇತು ಪಡೆದವರು. ಅಂತಾರಾಷ್ಟ್ರೀಯ ಖ್ಯಾತಿಯ ಅಲ್ಕಾಜಿಯವರ ಕೆಳಗೆ ನುರಿತವರು. ಅಭಿನಯದ ಶಾಸ್ತ್ರವನ್ನು ಬಲ್ಲವರು ಈ ಜನ. ಮೂಲತಃ ಆಸಕ್ತಿ ಶ್ರದ್ಧೆಗಳಿದ್ದರೂ ಇಚ್ಛಾಶಕ್ತಿ – ಅನುಭವ – ಉತ್ಸಾಹ – ಪರಿಶ್ರಮಗಳಿಲ್ಲ ಬೆರೆತಾಗಲೇ ಒಳ್ಳೆಯ ನಾಟಕ ನಿರ್ಮಾಣ ಸಾಧ್ಯವೆಂಬುದನ್ನು ತಿಳಿದವರು. ಈ ಅರಿವು ನಾಡಿನ ನಾಟ್ಯವಿಲಾಸಿಗಳಲ್ಲಿ ಹೆಚ್ಚಿದಷ್ಟೂ ರಂಗಭೂಮಿಯ ಆಯುಸ್ಸು ಬಲಗೊಳ್ಳುತ್ತದೆ.

೧೫–೬–೧೯೬೯

# ಗುಡಿಸಲಿಂದ ಗಂಗೋತ್ರಿಗೆ

ಜೀವನವೃತ್ತಗಳನ್ನು ಓದುವುದೆಂದರೆ ಅದೊಂದು ಬಗೆಯ ಅನುಭವ. ಆತ್ಮಕಥೆಗಳ ವಾಚನವಂತೂ ಯಾವಾಗಲೂ ವಿಶಿಷ್ಟಾನುಭವ.

'ಹೋರಾಟದ ಬದುಕು' ಅಂಥದೊಂದು ಆತ್ಮವೃತ್ತ. ಇಲ್ಲಿ ಕಲಿ, ದೇಜಗೌ. ೩೮೧ ದೊಡ್ಡ ಪುಟಗಳನ್ನು ಸುರಮ್ಯ ಕಾದಂಬರಿಯಂತೆ ಓದಬಹುದು, ಒಂದೇ ಉಸಿರಿಗೆ.

ಶಿಲಾಯುಗದ್ದೆನ್ನಬಹುದಾದ ಕತ್ತಲಗವಿಯಿಂದ ಅಂತರಿಕ್ಷ ವೀಕ್ಷಣೆಯ ಬೌದ್ಧಿಕ ಸೌಧಕ್ಕೆ ಐವತ್ತು ವರ್ಷಗಳ ದೂರ. ಆ ದೂರವನ್ನು ದೇವೇಗೌಡ ಜವರೇಗೌಡರು ಕ್ರಮಿಸಿರುವ ಬಗೆ ಅವರಿಗೇ ಅನಿಸಿರುವಂತೆ ಒಂದು ಪವಾಡ. ಯಥಾರ್ಥ ಬದುಕು ಕೆಲವೊಮ್ಮೆ ಕಲ್ಪಿತ ಕತೆಗಿಂತಲೂ ಹೆಚ್ಚು ವಿಚಿತ್ರ, ವಿಸ್ಮಯಕರ. ಈ ಗ್ರಂಥದಲ್ಲಿರುವುದು ಅಂತಹ ಜೀವನ ಚಿತ್ರಣ. ಆ ಕಾರಣದಿಂದಲೇ ಅದಕ್ಕೆ ಕಾದಂಬರಿಯ ಮೆರುಗು.

* * * * *

"ಹುಟ್ಟಿದ್ದು ಕುರಿಮಂದೆಯ ನಡುವೆ; ಬೆಳೆದದ್ದು ದನದ ಕೊಟ್ಟಿಗೆಯಲ್ಲಿ.... ತಿಂದದ್ದು ಕರಿಚಿಕ್ಕ, ಕುಡಿದದ್ದು ಅಂಬಲಿ, ಉಟ್ಟದ್ದು ಚಿಂದಿ."

ಇಂಥದೊಂದು ಮುಗ್ಧ ಚೇತನ ಲೋಕವಿಸ್ತಾರದಲ್ಲಿ ಚಲಿಸತೊಡಗಿ, ವಿದ್ಯಾವಂತನಾಗಿ, ಅಧ್ಯಾಪಕ, ಉಪಪ್ರಾಧ್ಯಾಪಕ, ಪ್ರಸಾರಾಂಗದ ಮುಖ್ಯಾಧಿಕಾರಿ, ಪ್ರಿನ್ಸಿಪಾಲ್, ಪ್ರಾಧ್ಯಾಪಕ – ಅದರೊಂದಿಗೆ ಕೆಲವು ಸಾಲುಗಳನ್ನೇ ಕಬಳಿಸುವ ಹೊಣೆಗಾರಿಕೆಗಳು – ಹೀಗೆ ಸಾಗಿಬಂದಿರುವ ರೀತಿ ರೋಮಾಂಚಕಾರಿಯಾದದ್ದು; ಸಹಸ್ರ ಸಹಸ್ರ ಜನರಿಗೆ ಬೆಳಕು ನೀಡುವಂಥಾದ್ದು.

"ಆತ್ಮಕಥೆ ಮಹಾಮಹಿಮರಿಗೆ ಮಾತ್ರ ಮೀಸಲಾದದ್ದಲ್ಲ." ಈ ದೇಜಗೌ ನುಡಿ ಸತ್ಯ. ಸಿಂಹಗಳಿಗಷ್ಟೇ ಕಾದಿಟ್ಟಿದೆ ಕಾಡು? ಅವರೇ ಹೇಳಿಕೊಳ್ಳುತ್ತಾರೆ: "ನನ್ನದು ಆದರ್ಶದ ಬಾಳಲ್ಲ; ಆದರ್ಶವನ್ನು ಕಣ್ಣೆದುರಿಗಿಟ್ಟುಕೊಂಡು ದುಡಿದ ಬಾಳು." ಅಂಥ ಬಾಳೇ ಆದರ್ಶವಾಗಬಹುದು ಇತರರಿಗೆ.

ಸಾಗಿಬಂದ ಹೆಜ್ಜೆಗಳನ್ನು ಗುರುತಿಸಲು ಹೊರಟ ಅವರೆನ್ನುತ್ತಾರೆ: "ಮರೆತದ್ದೇ ಅಪಾರ; ನೆಪ್ಪು ಕಂಡದ್ದು ಒಂದೆರಡು ಹನಿ."

ಹನಿಗಳೇ ಇಷ್ಟಾದರೆ ಎಷ್ಟಿರಬೇಡ ಹಳ್ಳ?

* * * * *

‘ಹೋರಾಟದ ಬದುಕ’ನ್ನೋದಿದವರು ಚಕಿತರಾಗುತ್ತಾರೆ. ಇಲ್ಲಿ ಕಂಡು ಬರುವ ಪ್ರಾಮಾಣಿಕತೆ ಸತ್ಯನಿಷ್ಠೆ ದಂಗುಬಡಿಸುವಂಥದು.

"ಬದುಕು ಗುಣದೋಷಗಳ ಕಲಬೆರಿಕೆ. ದೋಷಗಳನ್ನು ನಿರೂಪಿಸುವಾಗ ಕೈ ಸಹಜವಾಗಿಯೆ ನಡುಗುತ್ತದೆ, ಮನಸ್ಸು ಹಿಂಜರಿಯುತ್ತದೆ, ಧೈರ್ಯ ಕುಸಿಯುತ್ತದೆ. ಆದರೂ ನನ್ನರಿವಿಗೆ ನಿಲುಕಿದ ದೋಷ ದೌರ್ಬಲ್ಯಗಳನ್ನೆಲ್ಲ ಸೂಚ್ಯವಾಗಿಯೊ ಅಡಕವಾಗಿಯೊ ಸ್ಪಷ್ಟವಾಗಿಯೊ ತಿಳಿಸಿದ್ದೇನೆಂಬ ವಿಶ್ವಾಸ ನನಗಿದೆ."

ತಪ್ಪು ಯಾರು ಮಾಡಿದರೂ ತಪ್ಪೇ. ಹಾಗೆಂದು ಅದನ್ನು ಒಪ್ಪಿಕೊಳ್ಳುವುದು ಹಿರಿಯ ಗುಣ. ದರ್ಶನದ ರೂಪುರೇಖೆಗಳು ಸುಸ್ಪಷ್ಟವಾಗಿ ಮೂಡತೊಡಗಿದಂತೆ ದರ್ಪಣದಲ್ಲಿ ಎಲ್ಲವೂ ಕಾಣಿಸುತ್ತದೆ, ಎಲ್ಲವೂ. ಆಗ ಪ್ರಭಾವಳಿಯ ಮಾದಕ ಗುಂಗಿನಲ್ಲಿ ಕುರುಡರಾಗುವವರೇ ಹೆಚ್ಚು. ಆಗಲೂ ಅರಿವಿನ ಕಣ್ಣು ಯಾರಿಗೆ ತೆರೆದಿರುತ್ತದೆಯೋ ಅವರು ಅಸಾಮಾನ್ಯರು. ದೇಜಗೌ ಕಂಡುಬರುವುದು ಅಂತಹ ಶ್ರೇಷ್ಠರ ಸಾಲಿನಲ್ಲಿ.

‘ಗರ್ವಿಗೆ ಗರ್ವಿ, ವಿನಯಿಗೆ ವಿನಯಿ’ಯಾದ ದೇಜಗೌ, ತಮ್ಮ ಬಗೆಗೆ ಎಷ್ಟು ನಿಷ್ಠುರರೋ ಇತರರ ಬಗೆಗೂ ಅಷ್ಟೇ. "ಕೆಲ ಮಿತ್ರರಿದ್ದಾರೆ – ಅವರಿಗೆ ಒಂದು ದಿನ ಊಟ ಹಾಕಿದರೆ ಸಾಲದು, ಒಂದೆರಡು ಸಾರಿ ಕಾಣಿಕೆ ತೆತ್ತರೆ ಸಾಲದು – ಏಕಚಕ್ರ ನಗರದ ಬಕಾಸುರನಂತೆ, ಇಗ್ಗಲೂರಿನ ಮಾರಮ್ಮನಂತೆ ಸರದಿಯ ಮೇಲೆ ದಕ್ಕಿನ ಮರಿಗಾಗಿ ಹಾತೊರೆಯುತ್ತಾರೆ; ಒಂದು ದಿನ ತಪ್ಪಿದರೆ ಸಾಕು, ಊರೂರನ್ನೆ ಮುಕ್ಕುವುದಾಗಿ ಹೆದರಿಸುತ್ತಾರೆ."

ಓದುತ್ತ ಸ್ಪಷ್ಟವಾಗುವ ಅಂಶವಿದು. ನಮ್ಮ ಸಮಾಜದ ಈಗಿನ ಇರುವಿಕೆಯಲ್ಲಿ ಯಾವುದೇ ಆದರ್ಶವನ್ನು ಮುಂದಿಟ್ಟು ಸಾಧನೆಯ ದಾರಿ ಹಿಡಿದವನಿಗೆ ನೂರು ಜನ ಮಿತ್ರರಾಗುತ್ತಾರೆ, ನೂರು ಜನ ವೈರಿಗಳಾಗುತ್ತಾರೆ. ಧ್ಯೇಯ ಹಿರಿದಾದಷ್ಟೂ ವ್ಯಕ್ತಿತ್ವ ಪ್ರಬಲವಿದ್ದಷ್ಟೂ ಮೆಚ್ಚುವವರ ಸಂಖ್ಯೆಯೊಡನೆ ನಿಂದಕರ ಸಂಖ್ಯೆ ಸೆಣಸಾಡುತ್ತದೆ. ಸ್ತುತಿ – ನಿಂದೆಗಳೆರಡನ್ನೂ ಸಮಭಾವದಿಂದ ಕಾಣುವವರು ಮುಗಿಲೆತ್ತರಕ್ಕೆ ಏರುತ್ತಾರೆ. ಕುತ್ಸಿತ ಟೀಕೆ ಬಂದಿತೆಂದು ಬೆದರುವವರು ಕಾಲದ ಕಸದ ಬುಟ್ಟಿಯಲ್ಲಿ ಕರಗಿ ಹೋಗುತ್ತಾರೆ. ಅಳುಕದೆ ಆತ್ಮಬಲದಿಂದ ಮುಂದೆ ನಡೆವವರು ಗುರಿಮುಟ್ಟುತ್ತಾರೆ.

ಆ ತೆರನಾದ ಧೀರತೆ ದೇಜಗೌ ಅವರಿಗೆ ಮೈಗೂಡಿರುವ ಗುಣ........

ಚಿರಂತನತೆಯನ್ನು ಪಡೆದಿರುವ ವಚನಗಳಂತಿವೆ, ಈ ಮಾತುಗಳು : "ಆಸರೆ ಸಿಕ್ಕಿದಾಗ ನೇಸರು ಮರೆಯಲಿಲ್ಲ ; ಗುರಿಯೆಟಕಿದಾಗ ಏಣಿ ಒದೆಯಲಿಲ್ಲ ; ತಾರಸಿ ಮನೆಯ ವಾಸ ದೊರಕೊಂಡಾಗ ಗುಡಿಸಲು ಬೇಸರವಾಗಲಿಲ್ಲ...."

* * * * *

ವೈಯಕ್ತಿಕ ಜೀವನ ಕಥೆಗೆ ಆಳ ಎತ್ತರ ವಿಸ್ತಾರಗಳನ್ನು ಒದಗಿಸಿರುವುದು ದೇಜಗೌಗೆ ದೊರೆತಿರುವ ಕನ್ನಡದ ಪೌರೋಹಿತ್ಯ ಪಟ್ಟ. ಅವರ ಗುರುಸ್ಥಾನದಲ್ಲಿರುವ ಮಹಾಕವಿ ಕುವೆಂಪು ಅಂದರು: "ಕನ್ನಡಕ್ಕಾಗಿ ಕೈಯೆತ್ತು, ನಿನ್ನ ಕೈ ಕಲ್ಪವೃಕ್ಷ ವಾಗುತ್ತದೆ; ಕನ್ನಡಕ್ಕಾಗಿ ಕೊರಳೆತ್ತು, ಅಲ್ಲಿ ಪಾಂಚಜನ್ಯ ಮೊಳಗುತ್ತದೆ; ಕನ್ನಡ ಕ್ಕಾಗಿ ಕಿರುಬೆರಳೆತ್ತಿದರೂ ಸಾಕು, ಅದು ಗೋವರ್ಧನ ಗಿರಿಧಾರಿಯಾಗುತ್ತದೆ."

ಆ ಸಂದೇಶ ದೇಜಗೌ ಬದುಕಿನಲ್ಲಿ ಹಾಸುಹೊಕ್ಕಾಗಿ ಅವರಿಂದ ನುಡಿಸಿದೆ:

"ಕನ್ನಡವೆಂಬ ತ್ರ್ಯಕ್ಷರಿಯೆ ನನ್ನ ಗಾಯತ್ರಿ; ಕನ್ನಡವೇ ನನ್ನ ತಾಯಿ ತಂದೆ, ಅದೇ ನನ್ನ ಬಂಧು ಬಳಗ, ಅದೇ ನನ್ನ ಜಾತಿ, ಅದೇ ನನ್ನ ಗತಿ ಮತಿ. ಯಾರ ಸಭೆ ಯಲ್ಲಿಯೇ ಆಗಲಿ, ಯಾರ ಸಮ್ಮುಖದಲ್ಲಿಯೇ ಆಗಲಿ, ಕೀಳರು ಕನ್ನಡವನ್ನು ಹೀಗಳೆ ದರೆ ನಾನು ನನ್ನ ಹೆಸರನ್ನು ಸಾರ್ಥಕಪಡಿಸಿಕೊಂಡೇನು!"

* * * * *

ಸಹಸ್ರಾರು ಪುಟಗಳ ಗದ್ಯವನ್ನು ನಾಲ್ವತ್ತೆರಡು ಗ್ರಂಥಗಳನ್ನು, ಬರೆದಿರುವ ದೇಜಗೌ ಲೇಖನಿ ಕಾಠಿನ್ಯ–ಮಾರ್ದವತೆಗಳ ಸಮ ಎರಕವನ್ನು ಸಾಧಿಸಿದೆ. 'ಸ್ವಸಂತೋಷಕ್ಕಾಗಿ ಸ್ವಪ್ರಯೋಜನಕ್ಕಾಗಿ' ಈ ಆತ್ಮಕಥೆಯನ್ನು ಬರೆದೆ, ಎಂದಿದ್ದಾರೆ ದೇಜಗೌ. ಇತರರು ಇದನ್ನು ಓದಬೇಕಾದುದೂ ಅದೇ ಕಾರಣಗಳಿಗಾಗಿ.

ಕಿರಿಯ ಜವರಪ್ಪನಿಗೆ ಆಸೆ ಇತ್ತಂತೆ: "ದೊಡ್ಡವನಾದ ಮೇಲೆ ಕುರಿಗಳ ಹಿಂಡನ್ನು ತುಂಬಾ ಹೆಚ್ಚಿಸಬೇಕು. ನಾಲ್ಕಾರು ಟಗರುಗಳನ್ನು ಪ್ರತ್ಯೇಕವಾಗಿ ಮೇಯಿಸಬೇಕು." ಈಗಲಾದರೋ ಅವರು ಕನ್ನಡ ಕುಲದ ಕುರಿಗಾಹಿ.

ಅವರ ಬಿರುಗಾಳಿಯ ಬಾಳ್ವೆಯಲ್ಲಿ ಪ್ರಶಾಂತರಾಗಿ ಕಾಲ ಸವೆದವರು "ಸುಖ ದುಃಖ ಸಮಭಾಗಿನಿ ಸಹಧರ್ಮಿಣಿ ಸಾವಿತ್ರಮ್ಮ." ಅವರಿಗೆ ಈ ಗ್ರಂಥ ಅರ್ಪಿತ ವಾಗಿದೆ.

ಇದೀಗ ದೇಜಗೌ ಮೇಲೆ ಹೊರಿಸಬಹುದಾದ ಸ್ವಜನ ಪಕ್ಷಪಾತದ ಒಂದು ಆರೋಪ!

೨೯–೬–೧೯೭೯

# 'ಇದು ವಿಜ್ಞಾನ ಯುಗ'

ಕೆಲವು ಪದಗಳಿರುತ್ತವೆ. ಯಾವುದಾದರೂ ಕಾರಣದಿಂದ ಅವು ನೆನಪಿಗೆ ಬಂದುವೆಂದರೆ ಮತ್ತೆ ಮತ್ತೆ ಕಾಡುತ್ತವೆ, ಯಾವುದೋ ಹಾಡಿನ ಪಲ್ಲವಿಯ ಹಾಗೆ. ಕಿತ್ತು ಅಮುಕಿ ಆಳಕ್ಕೆ ತಳ್ಳಿದರೂ ಮೇಲಕ್ಕೆ ಪುಟಿಯುತ್ತವೆ. ಅವಿನಾಶಿ ಪದಗಳು.

ಅಂಥದೊಂದು ಅನುಭವ ಇವತ್ತಿನದು.

ಪ್ರಾತಃಕಾಲದ ಅನಿವಾರ್ಯ ವಾಚನದ ವೇಳೆಯಲ್ಲಿ ವೈಜ್ಞಾನಿಕ ವಾರ್ತೆಯೊಂದು ಹಲ್ಲಿಗೆ ಸಿಕ್ಕಿತು. ಮೆಲುಕುತ್ತಲಿದ್ದಾಗ ಒಳಗಿನ ಗವಿಯಿಂದ ಧ್ವನಿಹೊರಟಿತು.

" ಇದು ವಿಜ್ಞಾನ ಯುಗ!"

ಎಂದೋ ಹೀರಿಕೊಂಡಿದ್ದ ಪದಗಳು. ಯಾವುದೋ ಉಪನ್ಯಾಸದಿಂದ, ಲೇಖನದಿಂದ. ಯಾರು ಆಡಿರಬಹುದು ಆ ಪದಗಳನ್ನು? ಯಾರು ಬರೆದಿರಬಹುದು? ವಿದ್ಯಾರ್ಥಿಗಳ ಚರ್ಚಾಕೂಟದಲ್ಲಿ ಸ್ಪರ್ಧೆ ಆರಂಭಿಸುವ ಬಗೆ?

ಇನ್ನೊಬ್ಬರ ನೆನಪಾಗುತ್ತಿದೆ. ಜವಾಹರಲಾಲ್ ನೆಹರು. ಅವರಿಗೆ ಬಹಳ ಪ್ರಿಯವಾಗಿದ್ದ ಪದಗಳು: ಸೈನ್ಸ್ ಆ್ಯಂಡ್ ಟೆಕ್ನಾಲಜಿ. ವಿಜ್ಞಾನ ಮತ್ತು ತಂತ್ರಜ್ಞಾನ. ಸಂದರ್ಭ ದೊರೆತಾಗಲೆಲ್ಲ ಅದರ ಪ್ರಸ್ತಾಪವನ್ನು ಅವರು ಮಾಡಿದ್ದೇ ಮಾಡಿದ್ದು. ಮಂತ್ರ ಉಚ್ಚರಿಸುತ್ತಿದ್ದ ಪುರೋಹಿತ ಅವರು. ತಲೆದೂಗುವಂತಹ ಧರ್ಮನಿಷ್ಠೆ ಅವರದು. ತಾವು ಕಂಡ ದೇವರಲ್ಲಿ ಭಾರತ ಜನಕೋಟಿಗೆ ನಂಬುಗೆ ಹುಟ್ಟಿಸಲು ಅವರು ಯತ್ನಿಸಿದ್ದೇ ಯತ್ನಿಸಿದ್ದು.

* * * * *

ಜವಾಹರಲಾಲರು ಸೂಲಗಿತ್ತಿ ಪಾತ್ರವಹಿಸಿ ಬೆಳಕು ಕಾಣಿಸಿದ ಅನೇಕ ಉಪಯುಕ್ತ ಸಂಸ್ಥೆಗಳಲ್ಲಿ ಒಂದು. ಕೇಂದ್ರ ವೈಜ್ಞಾನಿಕ ಸಂಶೋಧನಾ ಸಂಸ್ಥೆ. ಸದ್ದುಗದ್ದಲಗಳಿಲ್ಲದೆ ಅದು ಮಾಡುತ್ತಿರುವುದು ಬಹಳ ಬೆಲೆಯುಳ್ಳ ಕೆಲಸ.

ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿ ಅದರ ಹಿರಿಯ ಅಧಿಕಾರಿ ದೇಶಪಾಂಡೆಯವರು ಹಲವು ವರ್ಣಗಳ ಹೊರಮೈ ಇದ್ದ ನಿಯತಕಾಲಿಕವೊಂದನ್ನು ನನ್ನತ್ತ ತಳ್ಳಿ ಕೇಳಿದರು:

" ಇದನ್ನು ನೋಡಿದ್ದೀರಾ ?"

ದೇವನಾಗರಿ ಲಿಪಿಯಲ್ಲಿ ಹೆಸರು. 'ವಿಜ್ಞಾನ ಪ್ರಗತಿ.' ಹಿಂದೀ ಭಾಷೆ. ಸ್ವಾರಸ್ಯಕರ ಲೇಖನಗಳು. ಬರೆವಣಿಗೆ, ಚಿತ್ರ – ಎರಡೂ.

ನಾನೆಂದೆ :

"ಚೆನ್ನಾಗಿದೆ ಅಲ್ಲವೆ ?"

"ಹೂಂ. ಇದು ಸಿಎಸ್‌ಆರ್‌ಐ ಯವರ ಪತ್ರಿಕೆ. ದೇಶದ ಪ್ರತಿಯೊಂದು ಭಾಷೆಯಲ್ಲೂ ಇದನ್ನು ಪ್ರಕಟಿಸಬೇಕೂಂತಿದಾರೆ."

ದೇಶೀಯ ಭಾಷೆಗಳಲ್ಲಿ ಇಂತಹ ಸಾಹಿತ್ಯವನ್ನು ಪ್ರಚುರಗೊಳಿಸುವುದಕ್ಕೋಸ್ಕರ ಕೇಂದ್ರ ವೈಜ್ಞಾನಿಕ ಸಂಶೋಧನಾ ಸಂಸ್ಥೆ ನೇಮಿಸಿರುವ ರಾಷ್ಟ್ರವ್ಯಾಪ್ತಿಯ ಪುಟ್ಟ ಸಮಿತಿಯ ಸದಸ್ಯರು ದೇಶಪಾಂಡೆ. ವಿಜ್ಞಾನವನ್ನು ಜನಪ್ರಿಯಗೊಳಿಸಲು ಭಾರೀ ಯೋಜನೆಯನ್ನು ಈ ಸಮಿತಿ ಹಾಕಿಕೊಳ್ಳುತ್ತಿದೆ.

ಅದು ಯೋಗ್ಯವಾದದ್ದೇ. ಕಷ್ಟದ್ದು ಕೂಡಾ. ಬಡ ಭಾರತದಲ್ಲಿನ್ನೂ ಅನಕ್ಷರತೆ ನಿರ್ನಾಮವಾಗಿಲ್ಲ. ೨೨ ವರ್ಷಗಳಿಗೆ ಹಿಂದೆ ಸ್ವಾತಂತ್ರ್ಯದಿನದಂದು, ಹತ್ತಾರು ಕೆಲಸಗಳನ್ನು ನಾವು ಮಾಡಿಯೇ ತೀರುವೆನೆಂದು ಪ್ರತಿಜ್ಞೆ ಕೈಗೊಂಡೆವಷ್ಟೆ? ಅದಕ್ಕೋಸ್ಕರ ಸಮರ್ಪಣಭಾವದಿಂದ ದುಡಿಯುವ ಮಾತು ಕೊಟ್ಟೆವಷ್ಟೆ? ಅಂಥ ಕೆಲಸಗಳಲ್ಲಿ ಒಂದು, ಅನಕ್ಷರತೆಯ ನಿರ್ಮೂಲನ.

ಈ ಅಕ್ಷರಸೌಧದ ನಿರ್ಮಾಣಕ್ಕಾಗಿ ಒಂದೊಂದೇ ಇಟ್ಟಿಗೆಯನ್ನು ನೀರಲ್ಲಿ ತೋಯಿಸುತ್ತಿದ್ದೇವೆ. ಆ ಬಗೆಯ ಇಟ್ಟಿಗೆಗಳಲ್ಲಿ ಕೂಡಾ ವಿಜ್ಞಾನವನ್ನು ಅರ್ಥಮಾಡಿಕೊಳ್ಳಬಲ್ಲಂಥವು ಎಷ್ಟು ? ವಿಜ್ಞಾನವೆಂದರೇನು ಕಥೆಯೆ, ಕಾದಂಬರಿಯೆ – ಬಾಯಲ್ಲಿ ಹಾಕಿಕೊಂಡು ಕುರುಕುವುದಕ್ಕೆ? ಅದಕ್ಕಾಗಿಯೇ ವಿಜ್ಞಾನವನ್ನು ಪ್ರಚುರಗೊಳಿಸುವ ಪ್ರಯತ್ನವಾಗಬೇಕು.

ನಾನೆಂದೆ : "ಕನ್ನಡದಲ್ಲಿ ಇಂಥ ಕೆಲಸ ಎಷ್ಟು ನಡೆದರೂ ಸಾಲದು."

* * * * *

ಹಿಂದಿಯಲ್ಲಿ ಈಗಾಗಲೇ ಆರಂಭವಾಗಿದ್ದು, ಇತರ ಕೆಲ ಭಾಷೆಗಳಲ್ಲೂ ಸ್ವಲ್ಪ ಮಟ್ಟಿಗೆ ಕಾರ್ಯಗತವಾಗತೊಡಗಿರುವ ಈ ಯೋಜನೆಯ ಹೊಳವು ಹೀಗಿದೆ :

'ವಿಜ್ಞಾನ ಪ್ರಗತಿ' ಮಾಸಪತ್ರಿಕೆ; ತಿಂಗಳಿಗೊಮ್ಮೆ ಕಿರಿಯರಿಗೋಸ್ಕರವೇ ಪ್ರಕಟವಾಗುವ 'ಬಾಲ ವಿಜ್ಞಾನ'; ವೈಜ್ಞಾನಿಕ ವಾರ್ತೆಗಳನ್ನು ಒಳಗೊಂಡ ಬುಲೆಟಿನ್‌ಗಳು (ವೂರನೆಯದು ಪತ್ರಿಕೆಗಳಲ್ಲಿ ಪ್ರಕಟಿಸುವುದಕ್ಕೋಸ್ಕರ); ಮತ್ತು ವಿಜ್ಞಾನ ಸಂಬಂಧದ ಪುಸ್ತಿಕೆಗಳು.

ಇವನ್ನೆಲ್ಲ ಭಾರೀ ಪ್ರಮಾಣದಲ್ಲಿ ಪ್ರಕಟಿಸಿ ಗ್ರಾಹಕರಿಗೆ ಮುಟ್ಟುವಂತೆ ಮಾಡುವುದು ಸಂಬಂಧಪಟ್ಟವರ ಉದ್ದೇಶ.

ಪ್ರಕಟನೆ ದೊಡ್ಡ ಕೆಲಸವಲ್ಲ; ಕಷ್ಟಕರವಾದದ್ದು ವಾಚಕರ ಕೈಗೆ ಅವು ಬೀಳುವಂತೆ ಮಾಡುವುದು.

ಈ ಮಾರಾಟ ವ್ಯವಸ್ಥೆ ಅಸಮರ್ಪಕವಾಗಿರುವುದರಿಂದಲೇ ಅಚ್ಚಾಗುವ ಒಳ್ಳೆಯ ಸಾಹಿತ್ಯ ಎಷ್ಟೋ ವೇಳೆ ಉಗ್ರಾಣಗಳಲ್ಲೇ ಉಳಿದು ಗೆದ್ದಲುಗಳಿಗೆ ಆಹಾರವಾಗುತ್ತದೆ.

* * * * *

ಶಿಕ್ಷಣಮಂತ್ರಿಶಾಖೆಯ ಸೂತ್ರಧಾರರಾಗಿರುವ ಡಾ. ವಿಜಯೀಂದ್ರ ಕಸ್ತೂರಿ ರಂಗ ವರದರಾಜರಾಯರಿಗೆ, ರಾಷ್ಟ್ರದ ಎಲ್ಲ ಭಾಷೆಗಳ ಮೇಲೂ ಮಮತೆ. ಜ್ಞಾನ ಮಾತೃಭಾಷೆಯ ಮೂಲಕವೇ ವಟುಗಳಿಗೆ ದೊರೆಯಬೇಕು ಎನ್ನುವ ದೃಢನಂಬುಗೆ ಅವರದು. ಆ ಕಾರಣದಿಂದ ದೇಶೀಯ ಭಾಷೆಗಳ ಬೆಳವಣಿಗೆಯತ್ತ ಅವರ ವಿಶೇಷ ಗಮನ.

ರಾಜ್ಯಾಂಗದ ಪ್ರಕಾರ ದೇಶದ ಭಾಷೆಗಳೆಲ್ಲಕ್ಕೂ ಸಮಾನ ಸ್ಥಾನ, ಸಮಾನ ಗೌರವ. ಆದರೂ ಹಿಂದಿಗೆ ಮಹಿಷಿಪಟ್ಟ. (ಈ ಕಿರಿಯ ರಾಣಿಯೇ ಪ್ರಭುತ್ವದ ದೃಷ್ಟಿಯಲ್ಲಿ ಹಿರಿಯವಳು.) ದೇಶದ ಅತಿ ಹೆಚ್ಚು ಜನ ಮಾತನಾಡುವ ಭಾಷೆ ಹಿಂದಿ. ಅದನ್ನು ಕಡೆಗಣಿಸಿ – ಎಂದು ಹೇಳುವುದು ಹೇಗೆ ? ಇತರ ಭಾಷೆಗಳ ವಿಷಯದಲ್ಲೂ ಏಕರೀತಿಯ ಆದರವಿರಲಿ – ಎಂದಷ್ಟೇ ನಾವು ಆಗ್ರಹಿಸಬಹುದು.

* * * * *

ತೊಡಕು ಅಡಕವಾಗಿರುವುದು ಇಲ್ಲಿಯೇ. ಇತರ ಭಾಷೆಗಳಿಗೆ, ರಾಜ್ಯಗಳಿಗೆ ದಿಲ್ಲಿ ದೂರ. ಹಿಂದಿಗೆ ಹಾಗಲ್ಲ. ಬೇರೆ ಬೇರೆ ಭಾಷೆಗಳಿಂದ ಸಂಪಾದಕರನ್ನು ದೊರಕಿಸಿ ಕೊಂಡು, ದಿಲ್ಲಿಯಲ್ಲಿಯೇ ಅಚ್ಚುಕೂಟಗಳನ್ನು ಸ್ಥಾಪಿಸಿ, ಸಾಹಿತ್ಯವನ್ನೆಲ್ಲ ಅಲ್ಲಿಂದಲೇ ಹೊರತರಬಹುದು. ಆದರೆ ಅಂಥ ಸಾಹಿತ್ಯಕ್ಕೂ ಗ್ರಾಹಕರಿಗೂ ನಡುವೆ ಭಾರಿ ಕಂದಕವೇ ಇರುತ್ತದೆ.

ಅದರ ಬದಲು ಹಿಂದೀತರ ರಾಜ್ಯಗಳಲ್ಲಿ ಅಲ್ಲಲ್ಲಿನ ರಾಜಧಾನಿಗಳಲ್ಲಿ ಈ ಬಗೆಯ ಪ್ರಕಟನೆಗಳನ್ನು ಸಿದ್ಧಪಡಿಸಿದರೆ, ಶಾಲಾ ಕಾಲೇಜು, ಸಾರ್ವಜನಿಕ ವಾಚನಾಲಯ ಇತ್ಯಾದಿಗಳ ಮೂಲಕ ಅವು ಓದುಗರ ಮನೆ ಸೇರಬಹುದು; ಇಲ್ಲದೆ ಹೋದರೆ, ದಿಲ್ಲಿಯಲ್ಲಿ ಪುಸ್ತಕಗಳು ಸಿದ್ಧವಾದರೂ ಕೆಂಪು ಪಟ್ಟಿಯೇ ಅದರ ಕೊರಳಿಗೆ ಉರುಳಾಗ ಬಹುದು. ಇಂಥ ದುರವಸ್ಥೆಯನ್ನು ತಪ್ಪಿಸಲು ಇರುವುದೊಂದೇ ದಾರಿ: ಹೊಣೆ ಯನ್ನು ಹಂಚಿಕೊಳ್ಳುವುದು. ಅಧಿಕಾರವನ್ನು ವಿಕೇಂದ್ರೀಕರಿಸುವುದು. ಅಂಥ ಕೆಲಸ ವನ್ನು ಈಗಾಗಲೇ ಮಾಡುವವರಿಗೆ (ಉದಾಹರಣೆಗೆ ಕನ್ನಡದ 'ವಿಜ್ಞಾನಲೋಕ') ಒಪ್ಪಿಸುವುದು. ಖಾಸಗಿ ಪ್ರಕಾಶಕರ ನೆರವು ಪಡೆಯುವುದು.

ಹೀಗೆ ಮಾಡದೆ, ಸರಕಾರೀ ಮುದ್ರೆಯೊಂದೇ ಬಲ ಎನ್ನುವುದಾದರೆ, "ಇದು ವಿಜ್ಞಾನ ಯುಗ" ಎನ್ನುವುದೆಲ್ಲ ಅರ್ಥಶೂನ್ಯ ಮಾತಾಗುವುದು; ವೈಜ್ಞಾನಿಕ ಸಾಹಿತ್ಯ ಸೃಷ್ಟಿಯ ಪ್ರಯತ್ನ ನಗೆಗೀಡಾಗುವುದು.

೧೩–೭–೧೯೬೯

# ‘ ರಾಜಧಾನಿ ’ಯಲ್ಲಿ ‘ ಸಂಸ್ಥಾನ ’

ಸೊಗಸಾದೊಂದು ಆಮಂತ್ರಣ ಪತ್ರಿಕೆ. ಮೈಸೂರು ವಿಶ್ವವಿದ್ಯಾನಿಲಯದವರು ಕಳುಹಿಸಿದ್ದು. ಮೂರು ಭಾಷೆಗಳಲ್ಲಿ ಮುದ್ರಣ – ಕನ್ನಡ, ಇಂಗ್ಲಿಷ್, ಹಿಂದಿ....

ಕರೆದಿರುವುದು ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆಯ ಉದ್ಘಾಟನಾ ಸಮಾರಂಭಕ್ಕೆ. ದಿ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯನ್ ಲ್ಯಾಂಗ್ವೇಜಸ್. ಹಿಂದಿಯಲ್ಲಿ: ಕೇಂದ್ರೀಯ ಭಾರತೀಯ ಭಾಷಾ ಸಂಸ್ಥಾನ್.

ಮೈಸೂರು ಆಳರಸರ ಸಂಸ್ಥಾನವಾಗಿದ್ದಾಗ ರಾಜಧಾನಿಯಾಗಿ ಮೆರೆದಿತ್ತು ಮಹೀಶೂರ ನಗರ. ಈಗ ಆ ‘ ರಾಜಧಾನಿ ’ಯಲ್ಲೇ ಒಂದು ‘ ಸಂಸ್ಥಾನ ’ದ ಉದ್ಘಾಟನೆ !

ಭಾರತೀಯ ಭಾಷೆಗಳ ಸಂಸ್ಥೆ (ಸಂಸ್ಥಾನ). ಏನು ಇದರ ಉದ್ದೇಶ ?

* * * * *

ಎರಡು ತಿಂಗಳ ಹಿಂದೆ, ಭಾರತೀಯ ಭಾಷೆ ಸಾಹಿತ್ಯ ಸಂಸ್ಕೃತಿಗಳ ಸಂಗಮವನ್ನು ಬಯಸುವ ಅಂತರ್‌ಭಾರತಿಯನ್ನು ಬೆಂಗಳೂರಲ್ಲಿ ಉದ್ಘಾಟಿಸುತ್ತ, ಕೇಂದ್ರದ ಶಿಕ್ಷಣ ಸಚಿವ ಡಾ. ವಿ. ಕೆ. ಆರ್. ವಿ. ರಾಯರು ನಿರ್ದಿಷ್ಟರೂಪ ತಳೆಯತೊಡಗಿದ್ದ ತಮ್ಮದೊಂದು ಕನಸನ್ನು ಪ್ರಸ್ತಾಪಿಸಿದರು. ಅದು ರಾಷ್ಟ್ರದಲ್ಲೇ ಮೊದಲ ಬಾರಿಗೆ ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆಯೊಂದರ ಸ್ಥಾಪನೆ. ಕೇಂದ್ರ ಸಂಪುಟ ಆ ಯೋಜನೆಗೆ ಒಪ್ಪಿಗೆ ನೀಡಿತ್ತು.

ಆ ಸಂಸ್ಥೆ, ಭಾಷಾ ಸಹಿಷ್ಣುತೆಗೆ ಹೆಸರಾದ ಮೈಸೂರು ರಾಜ್ಯದಲ್ಲಿ – ತಮ್ಮನ್ನು ಲೋಕ ಸಭೆಗೆ ಆರಿಸಿ ಕಳುಹಿಸಿದ ಈ ರಾಜ್ಯದಲ್ಲಿ – ಸ್ಥಾಪನೆಯಾಗಬೇಕೆಂಬುದು ತಮ್ಮ ಬಯಕೆ ಎಂದರು ಡಾ. ರಾಯರು.

ಬೆಂಗಳೂರಿನಲ್ಲೇ ಅದು ಸಾಧ್ಯವಾದರೆ ಇನ್ನೂ ಚೆನ್ನು – ಎಂದರು.

ಮಾರನೆಯ ಬೆಳಗ್ಗೆ ಪತ್ರಿಕೆಗಳು ಈ ಸುದ್ದಿಯ ಸಿಹಿ ಹಂಚಿದವು. ದೇಶದ ವಿವಿಧ ಭಾಷೆಗಳಲ್ಲಿ, ಅವುಗಳ ಸಾಹಿತ್ಯದಲ್ಲಿ, ಆಸಕ್ತಿಯುಳ್ಳ ಪೌರರೆಲ್ಲ ಸಂತೋಷ ಪಟ್ಟರು. ಅವರೆಲ್ಲ ಕೇಳಿದ ಪ್ರಶ್ನೆ: ಈ ಸಂಸ್ಥೆಯ ವ್ಯಾಪ್ತಿಯೇನು ? ಕಾರ್ಯಕ್ರಮವೇನು ?

* * * * *

ಕಳೆದ ತಿಂಗಳು ಡಾ. ರಾಯರು ಮತ್ತೆ ಬೆಂಗಳೂರಿಗೆ ಬಂದರು. ಕೇಂದ್ರ

ಭಾಷಾ ಅಧ್ಯಯನ ಸಂಸ್ಥೆಯ ಕಟ್ಟಡ ಇತ್ಯಾದಿಗಳಿಗೆ ನಿವೇಶನ ಹುಡುಕಿದರು. ಕೇಂದ್ರದ ಶಿಕ್ಷಣ ಮಂತ್ರಿಶಾಖೆಯ ಅಧಿಕಾರಿಗಳೂ ಬಂದರು. ಬೆಂಗಳೂರು ಪಟ್ಟು ಕಟ್ಟಿಕೊಂಡುದು ಅಧಿಕಾರಿಗಳು ಮೈಸೂರಿಗೆ ಹೊರಟಾಗ. ಹೊಸ ರಾಜಧಾನಿಯ ವೈಶಿಷ್ಟ್ಯವನ್ನು ಎಲ್ಲರೂ ಬಲ್ಲರು. ಆ ವಿದ್ಯಾನಗರದ ಆಕರ್ಷಣೆಯ ಮುಂದೆ ಬೆಂಗಳೂರಿನದೇನು ನಡೆದೀತು ?

ಕೇಂದ್ರದ ಅಧಿಕಾರಿಗಳು, ಹಾಗೂ ಸಂಸ್ಥೆಯ ನಿರ್ದೇಶಕರಾಗಿ ನೇಮಕ ಹೊಂದಿದ್ದ ಡಾ. ಪಟ್ಣಾಯಕ್ ಯಾವ ಘಳಿಗೆಯಲ್ಲಿ ಮೈಸೂರನ್ನು ತಲುಪಿ ಮಾನಸ ಗಂಗೋತ್ರಿಯಲ್ಲಿ ಕಾಲಿರಿಸಿದರೋ, ಬೆಂಗಳೂರಿನ ಅದೃಷ್ಟವನ್ನು ಮೋಡ ಆವರಿಸಿತು. ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿ ಊರಲ್ಲಿರಲಿಲ್ಲ. ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕ ಪ್ರೊ. ಜವರೇಗೌಡರೂ ಭಾಷಾಶಾಸ್ತ್ರ ವಿಭಾಗದ ಮುಖ್ಯಸ್ಥ ಡಾ. ಮಾನಪ್ಪ ನಾಯಕರೂ ಬಂದವರಿಗೆ ಸ್ವಾಗತಬಯಸಿ ತಮ್ಮ ಸಂಸ್ಥಾನವನ್ನು ತೋರಿಸಿದರು.

ಅತಿಥಿಗಳು ಏನನ್ನು ಬಯಸಿದ್ದರೋ ಅದೆಲ್ಲವೂ ಅಲ್ಲಿದ್ದುವು. ಸದ್ಯಕ್ಕೆ ಇರಲು ಕಟ್ಟಡ, ಹೊಸ ಭವನಗಳ ನಿರ್ಮಾಣಕ್ಕೆ ಜಾಗ, ಎಲ್ಲದಕ್ಕಿಂತ ಹೆಚ್ಚಾಗಿ ಮಾನಸ ಗಂಗೋತ್ರಿಯ – ಕನ್ನಡ ಅಧ್ಯಯನ ಸಂಸ್ಥೆಯ – ಸಾಮೀಪ್ಯ ...

ಅಧಿಕಾರಿಗಳು ನಿರ್ಧಾರಕ್ಕೆ ಬರಲು ಹೆಚ್ಚು ಹೊತ್ತು ಹಿಡಿಯಲಿಲ್ಲ.

ಕೇಂದ್ರ ಭಾಷಾ ಅಧ್ಯಯನ ಸಂಸ್ಥೆಯನ್ನು ಮೈಸೂರು ನಗರದಲ್ಲಿ ಸ್ಥಾಪಿಸುವ ರಂತೆ. ಸುದ್ದಿ ಹಬ್ಬಿತು.

ವಿದ್ಯಾನಗರದ ಪೌರರಿಗೆ ವಿಸ್ಮಿತರಾಗುವ ಅಭ್ಯಾಸವೇ ಇಲ್ಲ. ಮಾನಸಗಂಗೋತ್ರಿಯ ಬೆಳವಣಿಗೆಯನ್ನು ಕಣ್ಣಾರೆ ಕಂಡವರಿಗೆ, 'ಇಲ್ಲಿ ಏನು ಬೇಕಾದರೂ ಸಂಭವನೀಯ' ಎನ್ನುವ ದೃಢ ವಿಶ್ವಾಸ.

ವಿಶ್ವದ ಎಲ್ಲ ಭಾಷೆಗಳ ಕೇಂದ್ರ ಸಂಸ್ಥೆ ಮೈಸೂರಿನಲ್ಲಿ ಸ್ಥಾಪಿತವಾದರೂ ಅವರಿಗೆ ಆಶ್ಚರ್ಯವಾಗದು.

—ಹಿರಿಯರಿಗಿಂತಲೂ ಮಕ್ಕಳು ಕೇಳಬೇಕು : ಏನು ಈ ಸಂಸ್ಥೆಯ ಗುರಿ ?

* * * * *

ಇದು ಕಾಲೇಜಲ್ಲ, ಸ್ವಾಯತ್ತತೆಯುಳ್ಳ ವಿಶ್ವವಿದ್ಯಾನಿಲಯವಲ್ಲ. ಇಲ್ಲಿ ಆಚಾರ್ಯರು – ಉಪನ್ಯಾಸಕರಿಲ್ಲ. ಸಾಂಪ್ರದಾಯಿಕ ಪ್ರವಚನಗಳಿಲ್ಲ.

ನಿರ್ದೇಶಕರು, ಸಹನಿರ್ದೇಶಕರು—ಒಟ್ಟು ೩೬ ಮಂದಿಯ ಅಧಿಕಾರಿ ವರ್ಗ. ಇಲ್ಲಿ ನಡೆಯುವುದು ತೌಲನಿಕ ಅಧ್ಯಯನ. ರಾಷ್ಟ್ರದ ಎಲ್ಲ ಭಾಷೆಗಳ ಇತಿಹಾಸ, ಪದಸಂಪತ್ತು, ಸಾಮ್ಯ, ವ್ಯಾಕರಣ, ನುಡಿಗಟ್ಟು, ಸಾಹಿತ್ಯ ಸಾಂಸ್ಕೃತಿಕ ಹೂರಣ ಇತ್ಯಾದಿಗಳ ಬಗೆಗೆ, ಭಾಷಾ ಶಾಸ್ತ್ರದ ಅಧ್ಯಯನಗಳು ಇಲ್ಲಿ ಭಾಷೆಗಳ ಬೋಧನೆಗೆ

ಸರಳ ತಂತ್ರಗಳನ್ನು ರೂಪಿಸುತ್ತಾರೆ; ವಿವಿಧ ಭಾಷೆಗಳ ಪ್ರಾಥಮಿಕ ಪದಸಂಪತ್ತನ್ನು ಜೋಡಿಸುತ್ತಾರೆ.

ಬಳಸುವ ವಿಧಾನ ವೈಜ್ಞಾನಿಕ. ಭಾಷಾ ಪ್ರಯೋಗಶಾಲೆಯನ್ನು ಹೊಂದಿರುತ್ತದೆ ಈ ಸಂಸ್ಥೆ. ಭಾಷೆಗಳ ಬೋಧನೆಗೆ ಟೆಲಿವಿಷನ್ ಚಲನಚಿತ್ರ ಇತ್ಯಾದಿಗಳನ್ನು ಬಳಸುತ್ತಾರೆ.

ಈ ಚಟುವಟಿಕೆಗಳಿಗೆ ಕಿರೀಟವೆನ್ನುವಂತೆ, ಬೇರೆ ಬೇರೆ ಭಾಷೆಗಳ ಶ್ರೇಷ್ಠ ಸಾಹಿತ್ಯ ಕೃತಿಗಳನ್ನು ದೇಶದ ಎಲ್ಲ ನುಡಿಗಳಲ್ಲಿ ಅನುವಾದಿಸುವ ಕಾರ್ಯ ನಡೆಯುತ್ತದೆ.

ಭಾಷೆಗಳನ್ನು ಕುರಿತ ಅಧ್ಯಯನವೆಲ್ಲ ಅಡಿಪಾಯುವ ಕೆಲಸ. ಅದರ ಮೇಲೆ ಸಾಹಿತ್ಯ ಸೌಧದ ನಿರ್ಮಾಣ.

ಭಾರತೀಯ ಸಾಹಿತ್ಯ ಎಂಬ ಮಾತನ್ನು ಎಷ್ಟು ಸಾರಿ ನಾವು ಕೇಳುವುದಿಲ್ಲ ? ಆದರೆ ಅಂಥದು ಎಲ್ಲಿದೆ? ಯಾವುದೇ ಒಂದು ಕೃತಿ ದೇಶದ ಎಲ್ಲ ಭಾಷೆಗಳಲ್ಲೂ ದೊರೆತಾಗ ಅಲ್ಲವೆ ಅದನ್ನೊಂದು ಭಾರತೀಯ ಸಾಹಿತ್ಯ ಕೃತಿ ಎಂದು ಕರೆಯುವ ಸಾಧ್ಯತೆ? ಅಂಥ ಸಾಧ್ಯತೆಯ ಆಶ್ವಾಸನೆ ನೀಡುತ್ತದೆ ಈ ಕೇಂದ್ರ ಭಾರತೀಯ ಭಾಷಾ ಸಂಸ್ಥೆ.

* * * * *

ನಾಲ್ಕು ತಿಂಗಳ ಹಿಂದಿನ ಮಾತು. ಮೈಸೂರು ವಿಶ್ವವಿದ್ಯಾನಿಲಯದ ಚಟುವಟಿಕೆಗಳ ಬಗೆಗೆ ಮಾತನಾಡುತ್ತಲಿದ್ದಾಗ ಪ್ರೊ. ದೇಜಗೌ ಅಂದರು :

"ದಕ್ಷಿಣದ ನಾಲ್ಕು ಭಾಷೆಗಳ ಕೇಂದ್ರವನ್ನು ಇಲ್ಲಿ ಸ್ಥಾಪಿಸುವ ಯೋಜನೆ ರೂಪಿಸಬೇಕು. ಕುಲಪತಿ ಶ್ರೀಮಾಲಿಯವರಿಗೆ ಇದು ಒಪ್ಪಿಗೆಯಾಗುತ್ತದೆ. ನಾಲ್ಕು ಭಾಷೆಗಳ ಅಭ್ಯಾಸವೂ ಇಲ್ಲಿ ನಡೆದರೆ ದಕ್ಷಿಣದ ಸಾಹಿತ್ಯದ ಭಾಷಾಂತರ ಕಾರ್ಯವೆಲ್ಲ ಸುಲಭವಾಗುತ್ತದೆ."

ಅವರು ಬಯಸಿದ್ದು ನಾಲ್ಕನ್ನು: ದೊರೆತಿರುವುದು ನಾಲ್ಕು ಪಟ್ಟು!

ಸಾಲದುದಕ್ಕೆ ಗಣಿತ ಕುಣಿಯುವ ಸಂಭ್ರಮ. 'ಕೇಂದ್ರೀಯ ಭಾರತೀಯ ಭಾಷಾ ಸಂಸ್ಥಾನ'ವಲ್ಲದೆ ದಕ್ಷಿಣದ ನಾಲ್ಕು ಭಾಷೆಗಳ ಒಂದು ಸಂಸ್ಥೆಯೂ ದಕ್ಷಿಣದ ನಾಲ್ಕು ರಾಜ್ಯಗಳಿಗೆ ಸಂಬಂಧಿಸಿದಂತೆ ಮೈಸೂರಿನಲ್ಲಿ ಸ್ಥಾಪನೆಯಾಗುತ್ತದೆ. (ಇಂಥವು ಬೇರೆ ಮೂರು ಭಾರತದ ಇತರ ಭಾಗಗಳಲ್ಲಿರುತ್ತವೆ.) ಕನ್ನಡ ಅಧ್ಯಯನ ಸಂಸ್ಥೆಯ ಅದೃಷ್ಟ.

* * * * *

ಈಗಿನ ಉಳುಮೆಯಿಂದ ಬರುವ ಬೆಳೆ ಎಂಥದು ?

ನಾಲ್ಕೈದು ವರ್ಷಗಳಲ್ಲೇ ಇದನ್ನು ಕಾಣಬಲ್ಲೆವು.

ಮೈಸೂರು ನಗರದ ಜೀವನದಲ್ಲಿ – ಕನ್ನಡಿಗರ ಬದುಕಿನಲ್ಲೇ – ಭಾರತೀಯ

ಭಾಷೆಗಳ ಕೇಂದ್ರೀಯ ಸಂಸ್ಥೆ ಹೆಮ್ಮೆಯ ಪಾತ್ರವಹಿಸುತ್ತದೆ. ರಾಷ್ಟ್ರದ ವಿವಿಧ ಭಾಷೆಗಳ ಆಚಾರ್ಯರು, ವಿದ್ವನ್ಮಣಿಗಳು, ಲೇಖಕರು ಸದಾಕಾಲವೂ ಒಟ್ಟಿಗೇ ಇರುವ ಪರಿಸ್ಥಿತಿ ಪರಿಸರದ ಸಾಹಿತ್ಯಕ ಸಾಮಾಜಿಕ ಜೀವನದ ಮೇಲೆ ವಿಶಿಷ್ಟ ಪ್ರಭಾವವನ್ನು ಬೀರುತ್ತದೆ. ಕನ್ನಡದ ತೊಟ್ಟಿಲಲ್ಲಿ ಭಾರತ ಬೆಳೆಯುತ್ತದೆ. ಪ್ರಾಚೀನ ಕಾಲದ ಋಷಿಘೋಷಕ್ಕೆ ಹೊಸ ಅರ್ಥ ದೊರೆಯುತ್ತದೆ. ಎಲ್ಲ ಕಾಲಗಳ ಎಲ್ಲ ಕವಿಗಳ ಕನಸು ಮೂರ್ತಸ್ವರೂಪ ತಳೆಯುತ್ತದೆ.

ಇಡೀ ರಾಷ್ಟ್ರಕ್ಕೆ ರಾಹು ಬಡಿಯುತ್ತಿದೆಯೇನೋ ಎಂಬ ಭೀತಿ ಜನಮನವನ್ನು ಕಾಡುತ್ತಿರುವ ಈ ವೇಳೆಯಲ್ಲಿ, ಇರುಳಿನಲ್ಲಿ, ಸೊಡರು ಮಿನುಗಿಸುವ ಪ್ರಯತ್ನ ಎಷ್ಟೊಂದು ಶ್ಲಾಘನೀಯ! ಅದೆಷ್ಟು ಪವಿತ್ರ!

೨೫-೭-೧೯೬೯

# ಶಶಿಗೆ ಚುಂಬನ

ಕೇಪ್ ಕೆನೆಡಿ ರಾಕೆಟ್ ತಾಣದಿಂದ ಅಪೊಲೋ–೧೧ ಹಾರಿಸಲ್ಪಟ್ಟ ಘಳಿಗೆಯಿಂದ ಶಾಂತ ಸಾಗರದಲ್ಲಿ ಅದು ಬಂದಿಳಿದವರೆಗೆ ಮನೆಯಲ್ಲಿ ಎಲ್ಲರೂ ರೇಡಿಯೋ ಕೇಳುವವರೇ, ಎಲ್ಲರೂ ಪತ್ರಿಕೆ ಓದುವವರೇ. ಎಚ್ಚರದ ಅವಧಿಯ ಮಾತುಕತೆಯ ಹೆಚ್ಚಿನ ಅಂಶವೆಲ್ಲ ಚಂದ್ರಲೋಕ ಯಾನಕ್ಕೆ ಮೀಸಲು. ಮಾನವನ ಮಹತ್ಸಾಧನೆಯ ಗುಣಗಾನವೇ ಎಲ್ಲರ ಬಾಯಲ್ಲೂ.

ಬೇರೆ ಯಾವುದೋ ಒಂದು ಗ್ರಹದಲ್ಲಿ ನಮಗಿಂತ ಉತ್ತಮರಾದ ಮಾನವರಿರುತ್ತಾರೆ ಎಂಬ ಆಸೆ ಇಟ್ಟುಕೊಂಡವನು ನಾನು. ಅವರೊಡನೆ ಸಂಪರ್ಕ ಸಾಧಿಸಿದ ಮೇಲಾದರೂ ನಮ್ಮ ಆಚಾರ ವಿಚಾರಗಳು ಬದಲಾಗುತ್ತವೆ ; ಈ ಭೂಮಿಯ ಮೇಲಣ ಬದುಕು ಹೆಚ್ಚು ಸಹ್ಯವಾಗುತ್ತದೆ ಎಂಬ ಕನಸು.

ಚಂದ್ರನಲ್ಲಿ ಜೀವರಾಶಿಯಿಲ್ಲ ಎಂದು ವಿಜ್ಞಾನಿಗಳು ಹಿಂದಿನಿಂದಲೂ ಹೇಳುತ್ತ ಬಂದಿದ್ದಾರೆ. ಆದರೂ, ಚಮತ್ಕಾರಿಕವಾದುದು ಇಲ್ಲೇನಾದರೂ ಇರಬಹುದು ಎಂದು ನಾಲಿಗೆಯಲ್ಲಿ ನೀರು. ವಿಜ್ಞಾನದ ಕೈಗೆ ಸಿಲುಕದ ವಿಷಯಗಳು ಇನ್ನೂ ಎಷ್ಟೊಂದಿಲ್ಲ! ಚಂದ್ರಲೋಕದ ಬಾಗಿಲು ತೆರೆದಾಗಲೂ ಅಂಥ ಭಂಡಾರ ಯಾಕೆ ಕಾಣಿಸಬಾರದು ?

ಆರ್ಮ್‌ಸ್ಟ್ರಾಂಗ್–ಆಲ್ಡ್ರಿನರಿಗೆ ತೀರಾ ವಿಸ್ಮಯಕರವಾದುದೇನೂ ಗೋಚರವಾಗಲಿಲ್ಲ ಎಂದು ಇಲ್ಲಿ ತುಸು ಬೇಸರ.

ಆದರೂ ಸೋದರರಿಬ್ಬರು ೨೪೦,೦೦೦ ಮೈಲುಗಳಾಚೆಯ ಚಂದ್ರಗ್ರಹವನ್ನು ಮುಟ್ಟಿ, ಇನ್ನೊಂದು ಗ್ರಹದ ಮೇಲೆ ಓಡಾಡಿದ ಪ್ರಥಮ ಮಾನವರಾಗಿ, ಮರಳಿ ಬಂದರಲ್ಲ ಎಂದು ಸಂತೋಷ.

ಇಪ್ಪತ್ತೈದು ಶತಮಾನಗಳ ಹಿಂದೆ ಗ್ರೀಕ್ ತತ್ವಜ್ಞಾನಿ ಸೊಫೊಕ್ಲೆಸ್ ಹೇಳಿದ್ದ:

"ಎಷ್ಟೋ ಅಚ್ಚರಿಗಳಿರಬಹುದು, ಆದರೆ ಮನುಷ್ಯನಿಗಿಂತ ಮಿಗಿಲಾದ ಅಚ್ಚರಿ ಮತ್ತೊಂದಿಲ್ಲ."

ನಿಜ, ನಿಜ.

* * * * *

ನೂರನಾಲ್ಕು ವರ್ಷಗಳ ಹಿಂದೆ ಜೂಲ್ಸ್‌ವರ್ನೆ "ಭೂಮಿಯಿಂದ ಚಂದ್ರಗ್ರಹಕ್ಕೆ" ಎಂಬ ಕಾದಂಬರಿಯೊಂದನ್ನು ಬರೆದ. ಆ ಕಥೆಯಲ್ಲಿ ನಾಯಕ ಯಾನ ಕೈಗೊಂಡದ್ದು 'ಕೊಲಂಬಿಯಾಡ್' ಎಂಬ ಆಕಾಶನೌಕೆಯಲ್ಲಿ. ಅದು ನೆಲಬಿಟ್ಟುದು

ಫ್ಲೋರಿಡಾದಲ್ಲಿ. ಮರಳಿ ಬಂದಿಳಿದುದು ಶಾಂತ ಸಾಗರದಲ್ಲಿ. ಅವರನ್ನು ಎತ್ತಿಕೊಂಡುದು ಅಮೆರಿಕದೊಂದು ಹಡಗು ...

ಕಾದಂಬರಿಯಾದರೇನಂತೆ ? ಸಾಹಿತ್ಯವನ್ನು ಕಡೆಗಾಣಿಸುತ್ತಾರೆಯೆ ವಿಜ್ಞಾನಿಗಳು ? ಕಳೆದ ಕೆಲ ದಿನಗಳಲ್ಲಿ ನಡೆದುದೆಲ್ಲ ಜೂಲ್ಸ್ ವರ್ನೆ ಚಿತ್ರಿಸಿದ್ದ ರೀತಿಯಲ್ಲೇ. ಆತನ ಗೌರವಾರ್ಥವೇ ಇರಬೇಕು, ತಾವು ಬಳಸಿದ ನೌಕೆಯನ್ನು ಅಮೆರಿಕನರು ಕರೆದುದು 'ಕೊಲಂಬಿಯಾ' ಎಂಬ ಹೆಸರಿನಿಂದಲೇ.

ಅಂತರ್ಗ್ರಹಯಾನ ಕಾವ್ಯಲೋಕಕ್ಕಂತೂ ಹೊಸದಲ್ಲ. ಭಾರತದ ಪುರಾಣ ಗ್ರಂಥಗಳಲ್ಲಿ ಅನ್ಯಗ್ರಹಗಳ ನಿವಾಸಿಗಳ ಚಿತ್ರಣವಿದೆ. ಚಂದ್ರ, ಸೂರ್ಯ, ನಕ್ಷತ್ರಗಳನ್ನು ಕೌತುಕದಿಂದ ಕಂಡ ಭಾರತೀಯ ಕವಿಗಳು ಪುಷ್ಪಕವಿಮಾನವನ್ನು ಸೃಷ್ಟಿಸಿದರೆನ್ನೋಣ.

ಇಂಥ ಸೃಷ್ಟಿ ನಮಗೆ ಮಾತ್ರ ಮೀಸಲಲ್ಲ. ಸಿರಿಯದ ಕವಿ ಲೂಸಿಯನ್ ಆಕಾಶಮಾರ್ಗವಾಗಿ ಹಾರಿಹೋಗುವ ಹಡಗನ್ನು ಚಿತ್ರಿಸಿದ. ಫ್ರೆಂಚ್ ಕವಿ, ಗಿಡುಗಗಳು ಹೊತ್ತು ಒಯ್ಯುವ ಸಿಂಹಾಸನದ ಮೇಲೆ ಯಾನ ಮಾಡಿದ. ಇಟಲಿಯ ಕವಿ ಅರಿಯಾಸ್ಟೋನ ವಾಹನವನ್ನೆಳೆಯಲು ಹಾರಾಡುವ ಕುದುರೆಗಳಿದ್ದುವು.

ಗದ್ಯದಲ್ಲಂತೂ ಚಂದ್ರಗ್ರಹಯಾನ ಅತ್ಯಂತ ಮನೋರಂಜಕ ಸಾಹಿತ್ಯಕ್ಕೆ ವಸ್ತುವಾಯಿತು. ಈ ಶತಮಾನದ ಖ್ಯಾತ ಲೇಖಕ ಎಚ್. ಜಿ. ವೆಲ್ಸ್ 'ಚಂದ್ರಲೋಕದ ಮೇಲಣ ಪ್ರಥಮ ಮಾನವರು' ಎಂಬ ಕಾದಂಬರಿಯನ್ನು ಬರೆದ.

ಅದನ್ನು ಆತ ರಚಿಸಿದ್ದು ಫೋಕ್‌ಸ್ಟೋನ್ ಪಟ್ಟಣದಲ್ಲಿ. ಆ ಊರಿನ ಪುರಸಭೆಯೀಗ, ಆರ್ಮ್‌ಸ್ಟ್ರಾಂಗ್–ಆಲ್‌ಡ್ರಿನ್‌ರನ್ನು ಗೌರವಿಸಿ ಅವರಿಗೆ ನಗರದ ಸ್ವಾತಂತ್ರ್ಯವನ್ನು ನೀಡಲು ನಿರ್ಧರಿಸಿದೆ.

* * * * *

ಕವಿಗಳೂ ಸಾಹಿತಿಗಳೂ ಕೈಗೊಂಡ ಚಂದ್ರಲೋಕ ಯಾತ್ರೆಗಿಂತ ಭಿನ್ನವಾದದ್ದು ಈಗಿನದು.

ಗೆಲಿಲಿಯೋ ೩೬೦ ವರ್ಷಗಳಿಗೆ ಹಿಂದೆ (೧೬೦೯ ರಲ್ಲಿ) ದೂರದರ್ಶಕ ಯಂತ್ರವನ್ನು ರಚಿಸಿ ಚಂದ್ರನತ್ತ ನೋಡಲು ಯತ್ನಿಸಿದ ಪ್ರಥಮ ವಿಜ್ಞಾನಿ.

ಚಂದ್ರ ವೀಕ್ಷಣೆಯಷ್ಟೇ ಅಲ್ಲ, ಆ ಗ್ರಹಕ್ಕೆ ಯಾನವೂ ಸಾಧ್ಯ – ಎಂಬ ಭಾವನೆ ಮೂಡಿದ್ದು ೧೮೯೫ ರಲ್ಲಿ, ರಷ್ಯದ ಕೊನ್‌ಸ್ಟಾಂಟಿನ್ ಎಡ್ವರ್ಡೋವಿಚ್ ಟ್ಸಿಯೊಲ್‌ಕೊವ್‌ಸ್ಕಿ ಕ್ಷಿಪಣಿಶಾಸ್ತ್ರದ ಮೂಲಭೂತ ತತ್ತ್ವಗಳನ್ನು ಸಿದ್ಧಗೊಳಿಸಿದಾಗ. ಮುಂದೆ ೧೯೨೩ ರಲ್ಲಿ ಜರ್ಮನಿಯ ಹೆರ್ಮಾನ್ ಓಬೆರ್ತ್ ಕ್ಷಿಪಣಿ ನಿರ್ಮಾಣ ಕಾರ್ಯದಲ್ಲಿ ನಿರತನಾದ. ೧೯೨೬ ರಲ್ಲಿ ಅಮೆರಿಕದ ರಾಬರ್ಟ್ ಹಚಿಂಗ್ಸ್ ಗೊಡ್ಡಾರ್ಡ್ ದ್ರಾವಕ ಇಂಧನದಿಂದ ಕ್ಷಿಪಣಿ ಹಾರಿಸುವ ಪ್ರಯತ್ನ ಮಾಡಿದ.

ಆ ಪ್ರಯತ್ನಗಳ ಆಧಾರದ ಮೇಲೆಯೇ ಆಧುನಿಕ ಮಾನವ ಸಾಗಿ ಬಂದಿರುವ ದೂರ ಅದೆಷ್ಟು ! ಅಣುಶಕ್ತಿಯ ನೆರವಿನಿಂದ ೩೬೩ ಅಡಿ ಉದ್ದದ ಕ್ಷಿಪಣಿ ಅಂತರಿಕ್ಷ ನೌಕೆಯನ್ನು ಹಾರಿಸಿ ಬಿಡುತ್ತದೆ, ಬಾಹ್ಯಾಂತರಿಕ್ಷಕ್ಕೆ. ಅಲ್ಲಿಂದ ಅದರ ಚಲನೆ ಚಂದ್ರ ಗ್ರಹಕ್ಕೆ.

ಚಂದ್ರಗ್ರಹಕ್ಕೆ ? ಇಲ್ಲ ; ಮುಂದೆ ಕುಜ ಗ್ರಹಕ್ಕೆ ಹೋಗುವರಂತೆ. ಬಳಿಕ ಮಿನುಗುವ ನಕ್ಷತ್ರಕ್ಕೆ ಪಯಣವಂತೆ. ಸೌರವ್ಯೂಹದಲ್ಲೆಲ್ಲಾ ಸಂಬಂಧ ಬೆಳೆಸಿ ಇನ್ನೂ ಮುಂದಕ್ಕೆ ಯಾನವಂತೆ.

ಭೇಷ್ ! ಭೇಷ್ !

* * * * *

ಸಾಹಸ ಪ್ರವೃತ್ತಿ ಮನುಷ್ಯ ಹುಟ್ಟಿನಿಂದಲೇ ಪಡೆದುಕೊಂಡು ಬಂದ ಗುಣ.

ಕೊಲಂಬಸ್ ತನ್ನ ಸಹನಾವಿಕರೊಡನೆ 'ಸಂತ ಮಾರಿಯಾ' ಹಾಯಿ ಹಡಗನ್ನೇರಿ, ಸಾಗರವನ್ನು ದಾಟಿ, ಐರೋಪ್ಯ ಹಿಂದೆಂದೂ ಕಂಡಿರದ ಭೂಮಿಯನ್ನು ಶೋಧಿಸಲಿಲ್ಲವೆ ? ಆತ ಕಂಡುದೇ ನೂತನ ಜಗತ್ತು. ಅಮೆರಿಕ. (ಆ ಹೊಸ ನೆಲದ ಮಕ್ಕಳೇ ಇನ್ನೊಂದು ಹೊಸ ನೆಲವನ್ನು ಈಗ ಹುಡುಕಿರುವುದು !)

ಆ ಸಾಹಸಿ ಹೊಸ ಭೂಮಿಯನ್ನು ಸ್ಪರ್ಶಿಸಿದಾಗ ಅವನ್ನು ಕಂಡವರು ಗಾಬರಿ ಗೊಂಡಿದ್ದ ಕೆಲವೇ ಜನ 'ಇಂಡಿಯನ್ನ'ರು, ಮೂಲನಿವಾಸಿಗಳು. ಆ ವಾರ್ತೆ ಆತನ ರಾಣಿ ಇಸಾಬೆಲ್ಲಾಗೆ ಆರುತಿಂಗಳ ಅನಂತರ ಮುಟ್ಟಿತು.

ಈ ಶತಮಾನದಲ್ಲೇ – ೧೯೦೯ ರಲ್ಲಿ – ಪೀರಿಯ ತಂಡ ಉತ್ತರಧ್ರುವವನ್ನು ತಲುಪಿತಲ್ಲ ? ಆ ಸುದ್ದಿಯಾದರೂ ಜಗತ್ತಿಗೆ ತಿಳಿದುದು ಐದು ತಿಂಗಳ ಬಳಿಕ.

ಮುಂದೆ ಅರುವತ್ತೇ ವರ್ಷಗಳಲ್ಲಿ ಅದೆಷ್ಟು ಬದಲಾವಣೆ ! ಚಂದ್ರನನ್ನು ಮಾನವ ಸ್ಪರ್ಶಿಸಿದ ರೋಮಾಂಚಕಾರಿ ಘಟನೆಯನ್ನು ಟೆಲಿವಿಷನ್ ನೆರವಿನಿಂದ ಕಂಡವರು ಲೋಕದಾದ್ಯಂತ ಒಟ್ಟು ಅರುವತ್ತು ಕೋಟಿ ಜನ ! ಆ ಲೋಕದಲ್ಲಿ ನಡೆದುದು ಇಲ್ಲಿ ತಿಳಿಯಲು, ಕಾಣಲು, ತಗಲಿದ ವೇಳೆ ಕೇವಲ ೧·೩ ಸೆಕೆಂಡು – ಚಂದ್ರನಿಂದ ಭೂಮಿಗೆ ರೇಡಿಯೋ ಅಲೆಗಳು ಸಾಗಿಬರಲು ಬೇಕಾದ ಅಲ್ಪಾವಧಿ.

ಟೆಲಿವಿಷನ್ ಕಾಣದೆ, ರೇಡಿಯೋ – ಪತ್ರಿಕೆಗಳನ್ನಷ್ಟೇ ಮರೆಹೊಕ್ಕವರು ಇನ್ನೂ ಅರುವತ್ತು ಕೋಟಿ – ಅಥವಾ ಅದಕ್ಕಿಂತಲೂ ಹೆಚ್ಚು........

ರಷ್ಯನ್ ಕ್ಷಿಪಣಿ ವಿಜ್ಞಾನಿ ಟ್ಸಿಯೊಲ್ಕೊವ್ಸ್ಕಿ ಅಂದನಂತೆ :

"ಈ ಜಗತ್ತು ಮನಸ್ಸಿನ ತೊಟ್ಟಿಲು ; ತೊಟ್ಟಿಲಲ್ಲೇ ಜೀವಿಸುವುದಕ್ಕಾಗುತ್ತ ದೆಯೆ ?"

* * * * *

ಮಾನವನ ಗುಣಗಾನ ಮಾಡಬೇಕು ಎನ್ನುವಾಗಲೂ ಒಂದು ಸಂಕಟ ಬಾಧಿಸುತ್ತದೆ.

ಕ್ಷುದ್ರತನ, ಅಲ್ಪತನ, ಪಿಶುಣತನ – ಇವೆಲ್ಲ ಮನುಷ್ಯನಲ್ಲಿ ಇನ್ನೂ ಇವೆಯಲ್ಲ? ಮಾರಕ ಅಸ್ತ್ರಗಳನ್ನು ಬಳಸಿ ನರಮೇಧ ನಡೆಸಲು ಆತ ಹಿಂಜರಿಯುವುದಿಲ್ಲವಲ್ಲ? ಅಧಿಕಾರದಾಹ ಭೂದಾಹ ಮಾನವನನ್ನು ಈಗಲೂ ದಾನವನನ್ನಾಗಿ ಮಾಡುತ್ತಿದೆಯಲ್ಲ? ಭಸ್ಮಾಸುರನಾಗಿ ಭೂಮಿಯನ್ನೆ ದಹಿಸಹೊರಟಿರುವುದೂ ಮಾನವನೇ ಅಲ್ಲವೆ?

ಆದರೂ ಒಂದು ಆಸೆ: ಶಶಿಚುಂಬನದ ಅಮೃತಘಳಿಗೆಯಿಂದ 'ಲೋಕ'ದ ದಿಕ್ಕು ಬದಲಾಗುವುದು ಸಾಧ್ಯವೆ?

ಅದು ಸಂಭವನೀಯ ಎನ್ನುವುದು ಆಶಾವಾದ. ಮಾನವ ಹೊಸ ಇತಿಹಾಸವನ್ನು ಬರೆದಿರುವ ಸುಸಮಯದಲ್ಲಿ ನಿರಾಶೆಯ ಮಾತಾದರೂ ಯಾಕೆ?

೩-೮-೧೯೬೯

# ಹೆಪ್ಪುಗಟ್ಟಿದ ಹೃದಯವೇದನೆ

"ನನ್ನ ಹೃದಯವತ್ತ ನೋಡುತ್ತ...."– ಅದೊಂದು ಆತ್ಮಕಥೆಯ ಶೀರ್ಷಿಕೆ. ಬರೆದವರು ದಂತವೈದ್ಯ ಫಿಲಿಪ್ ಬ್ಲೇಬರ್ಗ್.

ತಮ್ಮದಲ್ಲದ ಹೃದಯವನ್ನು ಹೊತ್ತು ಇಪ್ಪತ್ತು ತಿಂಗಳ ಕಾಲ ಬದುಕಿ, ಮೊನ್ನೆ ಅವರು ಕಣ್ಣು ಮುಚ್ಚಿದರು, ಹೃದಯದತ್ತ ನೋಡುತ್ತ.

ಪುಸ್ತಕದ ತುಂಬ ಆಶಾವಾದ. ಹೃದಯ ವೇದನೆಯಿಂದ ನರಳುವ ಇತರರು ತಮ್ಮ ದೃಷ್ಟಾಂತದಿಂದ ಸ್ಫೂರ್ತಿ ಪಡೆಯಲಿ ಎಂಬ ಬಯಕೆ.

ಆದರೆ ಅಸ್ವಸ್ಥರಾಗಿ ಆಸ್ಪತ್ರೆಗೆ ಬರಬೇಕಾಯಿತು. ಕೊನೆ ಹತ್ತಿರ ಬಂತು ಎನಿಸಿತು.

ಪತ್ನಿಯನ್ನು ಕುರಿತು ಬ್ಲೇಬರ್ಗ್ ಅಂದರು :

"ಐಲೀನ್, ನಾನು ಸಾಯ್ತಿದೀನಿ – ನನಗೆ ಗೊತ್ತು, ನಾನು ಹೋಗ್ತಿದೀನಿ."

ಅದೇ ಅವರು ಆಡಿದ ಕೊನೆಯ ಮಾತು.

ಒಂದೇ ಸಮನೆ ಹಾಸಿಗೆಯ ಬಳಿಯಲ್ಲೇ ಇದ್ದ ಪತ್ನಿ, ಪತಿಗೋಸ್ಕರ ತಿನಿಸು ಮಾಡಿ ತರಲೆಂದು ಮನೆಗೆ ಹೋಗಿದ್ದ ವೇಳೆಯಲ್ಲಿ, ಬ್ಲೇಬರ್ಗ್ ಹೊತ್ತಿದ್ದ ಹೃದಯ ಕೆಲಸ ನಿಲ್ಲಿಸಿತು.

ಹೀಗೆ, ತಮ್ಮದಲ್ಲದ ಎದೆಗುಂಡಿಗೆಯನ್ನು ಹೊತ್ತು ಅತಿ ದೀರ್ಘಕಾಲ ಬಾಳಿದ್ದ ವ್ಯಕ್ತಿ ಇತಿಹಾಸವಾದ.

* * * * *

ಚಂದ್ರಗ್ರಹದ ಮೇಲೆ ಮಾನವ ಕಾಲಿಟ್ಟುದು ಹೆಚ್ಚು ಮಹತ್ವದ್ದೊ? ಒಂದು ಹೃದಯವನ್ನು ಇನ್ನೊಂದು ದೇಹಕ್ಕೆ ಜೋಡಿಸುವ ಶಸ್ತ್ರಕ್ರಿಯೆ ಹೆಚ್ಚು ಮಹತ್ವದ್ದೊ?

ಹೋಲಿಕೆ ಸರಿಯಲ್ಲ. ಎರಡೂ ಮಹತ್ವದ್ದೇ. ಒಂದು, ಜೀವಂತ ಮಾನವನ ಸಾಹಸ. ಇನ್ನೊಂದು, ಸಾವನ್ನು ಜಯಿಸುವ ಯತ್ನ.

ದಕ್ಷಿಣ ಆಫ್ರಿಕದ ತುಂಬ ವರ್ಣದ್ವೇಷದ ಉಸಿರುಕಟ್ಟಿಸುವ ಹೊಗೆ. ಆದರೆ ಬರ್ನಾರ್ಡರ ದೃಷ್ಟಿಯಲ್ಲಿ ಹೃದಯಕ್ಕೆ ಒಂದೇ ಬಣ್ಣ. ಸಾವು ಸನ್ನಿಹಿತವಾದವನಿಗೆ ಸತ್ತವನ ಎದೆಗುಂಡಿಗೆ ಜೋಡಿಸಿ ಜೀವದಾನ ಮಾಡುವ ಕನಸು ಅವರದು. ಅದನ್ನು ನೆನಸು ಮಾಡಲು ದುಡಿಮೆ. ಲೋಕದ ಶ್ರೀಸಾಮಾನ್ಯರು ಬೆರಗುಗಣ್ಣಿನಿಂದ ನೋಡಿದರು. ವೈದ್ಯಲೋಕದಲ್ಲಿ ಕೆಲವರು ಉಘೇ ಎಂದರು; ಬೇರೆ ಕೆಲವರು ಅರ್ಥವಾಗದೆ ಮಾತನ್ನು ಗೊಣಗಿದರು.

ಪ್ರೊಫೆಸರ್ ಬರ್ನಾರ್ಡ್ ಅಂತಹ ಮೊದಲ ಶಸ್ತ್ರಕ್ರಿಯೆಯನ್ನು ನಡೆಸಿದ್ದು ೧೯೬೭ರ ಡಿಸೆಂಬರ್ ೩ ರಂದು. ರೋಗಿ, ಲೂಯಿ ವಿಶ್ಕನ್ಸ್ಕಿ. ಆತ ಅಲ್ಪಾಯುವಾದರು. ಮುಂದೆ ಕೆಲವೇ ದಿನಗಳಲ್ಲಿ ಡಾ. ಬ್ಲೇಬರ್ಗ್ ಮಂಚದ ಮೇಲೆ ಮಲಗಿದರು. ಅದೇ ಆಗ ಅಪಮೃತ್ಯುವಿಗೆ ಒಳಗಾದ ಕರಿಯರೊಬ್ಬರ – ಕ್ಲೈವ್ ಹಾಪ್ಟ್ – ಎದೆಗುಂಡಿಗೆಯನ್ನು ಬ್ಲೇಬರ್ಗರಿಗೆ ಜೋಡಿಸಲಾಯಿತು. ೧೯೬೮ರ ಜನವರಿ ೨. ಶಸ್ತ್ರಕ್ರಿಯೆ ಯಶಸ್ವಿಯಾಯಿತು.

ಎಂಥ ವಿಕ್ರಮ! ಬ್ಲೇಬರ್ಗರ ತೀರಾ ಅಸ್ವಸ್ಥವಾಗಿದ್ದ ಮೂತ್ರಾಂಗ. ಪಿತ್ತಕೋಶಗಳು ಚೇತರಿಸಿಕೊಂಡವು. ಮಿದುಳಿಗೆ ರಕ್ತದ ಪೂರೈಕೆ ಉತ್ತಮಗೊಂಡು ಅವರ ಮಾನಸಿಕ ಸ್ಥಿತಿ ಸುಧಾರಿಸಿತು.

ಸಾವು ಖಚಿತವಾಗಿದ್ದವರಿಗೆ ಪುನರ್ಜನ್ಮ ದೊರೆಯಿತು.

ಆದರೆ, ಪರಕೀಯ ಹೃದಯ ತಿರಸ್ಕೃತವಾಗುವ ಶಂಕೆ ಇದ್ದೇ ಇತ್ತು.

* * * * *

ಈ ಸಂದರ್ಭದಲ್ಲಿ ನುಚ್ಚುನೂರಾದದ್ದು ಒಂದು ಭ್ರಮೆ. ಮನಸ್ಸಾಕ್ಷಿ ಎಲ್ಲಿದೆ? ಎದೆಯ ಮೇಲೆ ಕೈ ಇಟ್ಟು ಹೇಳುತ್ತೇನೆ – ಎನ್ನುವದಲ್ಲ, ಏನು ಅದರ ಅರ್ಥ? ಹೃದಯದ ಪ್ರತಿಕ್ರಿಯೆ ಬೇರೆ ಮಿದುಳಿನ ತರ್ಕ ಬೇರೆ – ಎಂಬ ಪದಗಳು ಏನಾದುವು? ಭಾವವಿಕಾರದ ಬಗೆಗೆ ಕವಿಗಳು ಬರೆದದ್ದು ಎಷ್ಟೊಂದು!

(ಚಂದ್ರಬಿಂಬವೂ ಕವಿಗಳ ಬಣ್ಣನೆಗೆ ವಸ್ತುವಾಗಿತ್ತು. ಪಾಪ!)

ಹಲವರು ಕೇಳಿದರು:

"ಗುಣಮುಖರಾದ ಮೇಲೆ ಬ್ಲೇಬರ್ಗ್ ಹೇಗೆ ವರ್ತಿಸಬಹುದು?"

ಕ್ಲೈವ್ ಹಾಪ್ಟರ ಪತ್ನಿಯನ್ನು ಭೇಟಿಯಾಗಲು ಬ್ಲೇಬರ್ಗ್ ಬಯಸಿದರು ಎಂಬ ಸುದ್ದಿ ಬಂತು. ವಿಶ್ವಕ್ಕೆ ಕುತೂಹಲ. ಭೇಟಿಯಾದರು. ವಂದನೆ ಸಲ್ಲಿಸಿದರು. ಅಷ್ಟೇ, ಅಷ್ಟೇ. ಹೊಸ ಹೃದಯ ಹೊತ್ತರೂ ಅವರು ಬ್ಲೇಬರ್ಗರಾಗಿಯೇ ಇದ್ದರು.

"ಹೇಗಿದ್ದೀರಿ?" ಪ್ರಶ್ನೆಗೆ ಉತ್ತರ:

"ಇಷ್ಟು ಚೆನ್ನಾಗಿ ನಾನು ಯಾವತ್ತೂ ಇರಲಿಲ್ಲ."

ಜಗತ್ಪ್ರಸಿದ್ಧಿಯನ್ನು ಪಡೆದ ಬ್ಲೇಬರ್ಗ್, ಸಮುದ್ರಸ್ನಾನ ಮಾಡಿದರು. ಹಿಂದೂಮಹಾಸಾಗರದಲ್ಲಿ ಈಸಿದರು. ಖಾಸಗಿ ಕೊಳವೊಂದರಲ್ಲಿ ಈಜುವ ಅಭ್ಯಾಸ ಇಟ್ಟುಕೊಂಡರು.

ಆದರೂ ಅವರಿಗೆ ತಿಳಿದಿತ್ತು: ತನ್ನದು ಎರವಲು ಪಡೆದ ವೇಳೆ.

ಅವರ ಪತ್ನಿ ಎನ್ನುತ್ತಿದ್ದರು:

"ಭರವಸೆ ಇಲ್ಲದ ಬದುಕು ಅಂತ ನಮ್ಮಿಬ್ಬರಿಗೂ ಗೊತ್ತು."

* * * * *

ಕ್ಲೈವ್ ಹಾಪ್ಟ್ ಸತ್ತು ಇಪ್ಪತ್ತು ತಿಂಗಳಾದ ಮೇಲೆ ಆ ಹೃದಯ ಸತ್ತಿತು. ಬ್ಲೇಬರ್ಗರ ಮರಣದ ವಾರ್ತೆ ಕೇಳಿದಾಗ ಡೊರೊಥಿ ಅಂದರು :

" ನನ್ನ ಪತಿಯ ಹೃದಯವನ್ನು ಬ್ಲೇಬರ್ಗರೊಡನೆಯೇ ಸಮಾಧಿ ಮಾಡಿ. ಆಸ್ಪತ್ರೆಯ ಅಧಿಕಾರಿಗಳಲ್ಲಿ ಇದೇ ನನ್ನ ಪ್ರಾರ್ಥನೆ. ಹೃದಯವನ್ನು ಅವರು ಏನು ಮಾಡಬೇಕೆಂದಿದ್ದಾರೋ ನನಗೆ ತಿಳಿಯದು. ವಿಜ್ಞಾನದ ಉದ್ದೇಶಗಳಿಗಾಗಿ ಅವರು ಅದನ್ನು ಇಟ್ಟುಕೊಳ್ಳಬಾರದು."

ಬ್ಲೇಬರ್ಗರ ಸಾವು ಹೃದಯಗಳ ಶಸ್ತ್ರವೈದ್ಯರಿಗೆ ಕಲಿಸುವ ಪಾಠವೇನು ?

ಡಾ. ಬರ್ನಾರ್ಡ್ ಹೇಳಿರುವುದಿದು :

" ಹೃದಯ ಪಲ್ಲಟದ ಶಸ್ತ್ರಚಿಕಿತ್ಸೆಯನ್ನು ಮುಂದುವರಿಸ್ತೇನೆ. ಈ ರಾತ್ರಿ ನನ್ನ ಬಳಿ ಒಬ್ಬ ರೋಗಿ ಇದ್ದರೆ, ಹೃದಯದಾನಿಯೂ ಒಬ್ಬರು ದೊರೆತರೆ, ಖಂಡಿತ ಈಗಲೇ ಶಸ್ತ್ರಕ್ರಿಯೆ ನಡೆಸ್ತೇನೆ."

ಬ್ಲೇಬರ್ಗರ ಬಗೆಗಾದರೋ ವಿಜ್ಞಾನದ ಮೇರೆಯನ್ನು ಮೀರಿ ನಿಂತಿತ್ತು ಬರ್ನಾರ್ಡರ ಮನಸ್ಥಿತಿ. ಅವರೆಂದರು :

" ಕೆಲವು ಸಲ ಭಾವವಿಕಾರಗಳಿಂದ ತಪ್ಪಿಸಿಕೊಳ್ಳುವುದಕ್ಕಾಗುವುದಿಲ್ಲ. ಅವರು ನನ್ನ ಮಿತ್ರನಂತಿದ್ದರು, ರೋಗಿಯಂತಲ್ಲ. ಅವರು ಅಸಾಧಾರಣ ವ್ಯಕ್ತಿಯಾಗಿದ್ದರು."

* * * * *

ಪ್ರಾಧ್ಯಾಪಕ ಎಲ್. ಎಸ್. ಶೇಷಗಿರಿರಾಯರೆಂದರು :

" ನನ್ನ ಒಬ್ಬ ಡಿಪ್ಲೊಮಾ ತರಗತಿ ವಿದ್ಯಾರ್ಥಿ, ಕಲಾವಿದ. ವಿದೇಶ ಪ್ರವಾಸಕ್ಕೆ ಹೋಗ್ತಾರೆ. ಪಟೇಲ್ ಅಂತ."

" ಪಟೇಲ್ ಗೊತ್ತು."

" ಅವರ ಕೃತಿಗಳನ್ನು ನೋಡೋದಕ್ಕೆ ಕರೆದಿದ್ದಾರೆ. ಬರ್ತೀರಾ ? "

...ಪ್ರತಿಭಾಶಾಲಿ ಚಿತ್ರಕಾರ ಪಟೇಲ್, ಮಿತ್ರ ಮನೋಳಿಯ ಸಹಕಾರ ದೊಂದಿಗೆ, ತಮ್ಮ ಇತ್ತೀಚಿನ ಚಿತ್ರಗಳನ್ನು ಸಾಲಾಗಿ ಇರಿಸಿದರು. ನಾವು ನೋಡಿದೆವು. ಪ್ರತಿಕ್ರಿಯೆ ಹೃದಯದ್ದೊ ? ಮಿದುಳಿನದೊ ? ಆದ ಅನುಭವವಂತೂ ಸಂತೋಷದ್ದು.

ಮೂರು ಚಿತ್ರಗಳ ವಸ್ತು ಹೃದಯ. ಭಿನ್ನ ಸ್ಥಿತಿಗಳಲ್ಲಿ. ಒಂದಕ್ಕೆ ಅವರಿಟ್ಟಿದ್ದ ಹೆಸರು : ಹೆಪ್ಪುಗಟ್ಟಿದ ಹೃದಯವೇದನೆ.

ನಾನೆಂದೆ :

" ಪ್ರೊಫೆಸರ್ ಬರ್ನಾರ್ಡರಿಗೆ ಈ ಚಿತ್ರ ತುಂಬ ಇಷ್ಟವಾಗ್ತದೆ."

೩೧–೮–೧೯೬೯

# ಹುತ್ತ-ಹಾವು-ಪುಂಗೀನಾದ

ಪರಿಚಿತರೊಬ್ಬರು – ಚಿಗುರುಮೀಸೆಯ ಯುವಕ – ಈಗಿನ ಹುಡುಗ ಹುಡುಗಿಯರ ವಸನ ವ್ಯಸನಗಳ ಬಗೆಗೆ ಟೀಕಿಸಿ ಮಾತನಾಡಿದರು. ಸೊಗಸುಗಾರನಂತಿದ್ದ ಅವರನ್ನು ಮೇಲಿನಿಂದ ಕೆಳಗಿನವರೆಗೂ ನೋಡಿದೆ. ನೂತನ ಮಾದರಿಯ ಪ್ಯಾಂಟು. ಕೆಳಗೆ ಮಡಿಸಿರಲಿಲ್ಲ.

ಮಿನಿ ಸ್ಕರ್ಟುಗಳನ್ನು ಅವರು ಟೀಕಿಸಿದರು.

“ನಿಜ ಹೇಳಿ. ನೋಡೋದಕ್ಕೆ ಚೆನ್ನಾಗಿರೋಲ್ವೇನ್ರಿ?”

ಕಣ್ಣುಗಳನ್ನು ಕಿರಿದುಗೊಳಿಸಿ ಅವರು ನಕ್ಕರು.

ಒಂದು ಸಂದೇಹ:

ಸೌಂದರ್ಯದ ಆರಾಧಕರಾದ ಸಹಸ್ರ ಸಹಸ್ರ ಜನ ಶೃಂಗಾರ ಹೆಚ್ಚಾಯಿತೆಂದೋ ಪ್ರಣಯ ಅತಿಯಾಯಿತೆಂದೋ ನಿಜವಾಗಿಯೂ ಬೇಸರಗೊಳ್ಳುತ್ತಾರೆಯೆ? ಟೀಕಿಸುವವರುಂಟು. ಆದರೆ, ಟೀಕಿಸುವುದೂ ಒಂದು ಫ್ಯಾಶನ್ ಅಲ್ಲವಷ್ಟೆ? ಅಥವಾ, ಹೇಳುವ ಶಾಸ್ತ್ರ ಇತರರಿಗೆ ಮಾತ್ರ ಮೀಸಲೊ?

* * * * *

ಕಳೆದ ನಾಲ್ಕಾರು ವರ್ಷಗಳಲ್ಲಿ ಚಿತ್ರದ ಕೆಲ ಪೋಸ್ಟರುಗಳು ಅಶ್ಲೀಲವೆನಿಸಿದುವೆಂದು ಅವುಗಳ ಮೇಲೆ ದಾಳಿ ನಡೆದಿವೆ. ಕೆಲವು ನಗರಗಳಲ್ಲಿ ಮಹಿಳೆಯರು ಪ್ರತಿಭಟಿಸಿದ್ದಾರೆ. ಸೆನ್ಸಾರ್ ಬೋರ್ಡಿನ ಕುಲಗೋತ್ರಗಳನ್ನು ವಿಚಾರಿಸಿದ್ದಾರೆ. ಸರಕಾರ ಎಚ್ಚರಬೇಕು ಎಂದು ಸಾರಿದ್ದಾರೆ.

ಸಿದ್ಧವಾಗುವ ಚಲಚ್ಚಿತ್ರಗಳ ಮೇಲಿನ ಕತ್ತರಿಪ್ರಯೋಗದ ಪ್ರಶ್ನೆಯನ್ನು ಪರಿಶೀಲಿಸಿ ವರದಿ ನೀಡಲು ಸರಕಾರ ಖೋಸ್ಲಾ ಸಮಿತಿಯನ್ನು ರಚಿಸಿತು. ಸಮಿತಿ ಈಗ ತನ್ನ ವರದಿ ಸಲ್ಲಿಸಿದೆ.

ವರದಿಯನ್ನು ನೋಡಿ ಹಲವರು, ಗಣಪತಿಯನ್ನು ಮಾಡಲು ಹೋಗಿ ಇನ್ನೇನೊ ಆಯಿತಲ್ಲಾ ಎಂದು ಹಲುಬಿದ್ದಾರೆ!

ವರದಿಯಲ್ಲಿನ ಒಂದು ಅಂಶ, ಪರವಾಗಿಯೋ ವಿರುದ್ಧವಾಗಿಯೋ ತೀವ್ರ ಪ್ರತಿಕ್ರಿಯೆಗಳಿಗೆ ಕಾರಣವಾಗಿದೆ.

ಖೋಸ್ಲಾ ಸಮಿತಿಯ ಪ್ರಕಾರ:

“ಒಂದು ಕತೆಯನ್ನು ಹೇಳುವಾಗ, ರಾಗೋಜ್ವಲ ಚುಂಬನವನ್ನೋ

ನಗ್ನ ಮಾನವ ಶರೀರವನ್ನೋ ಚಿತ್ರಿಸುವುದು ತರ್ಕಬದ್ಧವೆನಿಸಿದರೆ, ಅಂಥ ಅಂಶಗಳನ್ನು ಕತ್ತರಿಸುವ ಪ್ರಶ್ನೆಯಿಲ್ಲ. ಆದರೆ ಅಂಥ ವಸ್ತುವನ್ನು ಸೂಕ್ಷ್ಮವಾಗಿಯೂ ಭಾವಪೂರ್ಣವಾಗಿಯೂ ಚಿತ್ರಿಸಬೇಕು. ಸೌಂದರ್ಯಾಭಿವ್ಯಕ್ತಿಯೇ ಗುರಿಯಾಗಿರಬೇಕು. ಚಿತ್ರದ ಅಂತಹ ಭಾಗ ಅಸಗತ್ಯವಾಗಿ ವಿಕೃತ ಕುತೂಹಲದಿಂದಾಗಲೀ ಕಾಮುಕತೆಯಿಂದಾಗಲೀ ಕೂಡಿರಬಾರದು. ಗಂಭೀರಮನೋವೃತ್ತಿಯ ಸಂವೇದನಾಶೀಲನಾದ ನಿರ್ಮಾಪಕನಿಗೆ ಸೌಂದರ್ಯಾಭಿವ್ಯಕ್ತಿಯ ಚಿತ್ರಗಳನ್ನು ತಯಾರಿಸಲು ಹೆಚ್ಚಿನ ಅವಕಾಶ ಇದರಿಂದ ದೊರೆಯುತ್ತದೆ."

ಇದೊಂದು ಸೂತ್ರ. ಹಲವು ಸಂಪುಟಗಳ ಭಾಷ್ಯವನ್ನೇ ಬರೆಯಬಹುದು ಇದನ್ನು ಕುರಿತು.

* * * * *

ಗಂಭೀರ ಮನೋವೃತ್ತಿಯ, ಸಂವೇದನಾಶೀಲನಾದ ನಿರ್ಮಾಪಕ! ನಗೆ ಬರುತ್ತದೆ! ಈ ದೇಶದಲ್ಲಿ ಈ ಬಗೆಯ ಚಿತ್ರತಯಾರಕರು? ಖೋಸ್ಲಾರಿಗೆ, ಅವರ ಸದಸ್ಯಮಿತ್ರರಿಗೆ ಹುಚ್ಚು! ಹುಚ್ಚು!

ಭಾರತದಲ್ಲಿ ಚಲಚ್ಚಿತ್ರ ನಿರ್ಮಾಣ ನಡೆಯುವುದು ಅನೀತಿಯ ಗೊಂಡಾರಣ್ಯದಲ್ಲಿ. ಇದು ವ್ಯಾಪಾರ, ವಾಣಿಜ್ಯ. ಕಲೆಯೆಂಬುದು ನೆಪಮಾತ್ರಕ್ಕೆ. ಕುರುಡು ಕಾಂಚಾಣವೇ ಇಲ್ಲಿ ಅಧಿದೇವತೆ. ನಿರಕ್ಷರಕುಕ್ಷಿಗಳೇ ಇಲ್ಲಿ ಪ್ರಜೆಗಳು.

ನಮ್ಮಲ್ಲಿ ತೆರೆಯ ಮೇಲೆ ಚುಂಬನವಿಲ್ಲ. ನಗ್ನತೆಯ ಪ್ರದರ್ಶನವೂ ಇಲ್ಲ. ಹಾಗೆಂದು ಚಿತ್ರ ನಿರ್ಮಾಪಕರು ಹತಾಶರಾಗಿದ್ದಾರೆಯೆ? ಖಂಡಿತ ಇಲ್ಲ. ಕಾನೂನಿನ ಛಿದ್ರಗಳನ್ನು ಅವರ ಕೈ ಬೆರಳುಗಳು ಬಲ್ಲುವು. ಹಿಂದಿಯೋ ತಮಿಳೋ – ಯಾವ ಭಾಷೆಯ ಚಿತ್ರಗಳೇ ಇರಲಿ, ಆ ರೀಲುಗಳಿಗೆ ಬೆಂಕಿ ಹಚ್ಚಿದರೆ ಅಲ್ಲಿಂದ ಹೊರಡುವುದು ಉಸಿರು ಕಟ್ಟಿಸುವ ಕಾಮದ ಹೊಗೆಯೊಂದೇ. ನಾಯಕಿಯನ್ನು ಬಿಗಿಹಿಡಿದು ನಾಯಕ ಮೂಗಿನ ಹೊಳ್ಳೆಗಳನ್ನು ಅರಳಿಸುತ್ತ, ತುಟಿಗಳನ್ನು ಮುಟ್ಟದೆಯೇ ಚುಂಬಿಸಲು ಯತ್ನಿಸುವ ದೃಶ್ಯ, ಉಡುಪು ಪ್ರದರ್ಶನ, ಏರು ತಗ್ಗುಗಳನ್ನು ತೋರಿಸುವ ಅಸಹಜ ವೈಖರಿ, ಅರೆಬತ್ತಲೆ ಕಾಮುಕ ನೃತ್ಯಗಳು... ಇವೆಲ್ಲವೂ ನಿಸ್ಪೃಹ ನಿಯಂತ್ರಣಾಧಿಕಾರಿಯ ಮುಚ್ಚಿದ ಕಣ್ಣುಗಳೆದುರಲ್ಲೇ ದ್ವಾರದಿಂದ ಹೊರಬೀಳುತ್ತವೆ.

ಅನೀತಿಯ ದೃಶ್ಯ? ಅಸಹ್ಯ ಸಂಭಾಷಣೆ? ಕಾನೂನು ರೀತ್ಯಾ ಇಂಥವೇ ಎಂದು ಹೇಳುವುದು ಬಲು ಕಷ್ಟ. ಹೀಗಾಗಿ ಕತ್ತರಿಗೆ ಕೆಲಸವೇ ಇಲ್ಲ. ಕತ್ತರಿಸಲು ಯತ್ನಿಸಿದರೂ ಅದು ಜಾರುತ್ತದೆ.

ನಮ್ಮ ಚಲಚ್ಚಿತ್ರ ನಿರ್ಮಾಪಕರನ್ನು ಕಂಡಾಗ ನೈಟ್ ಕ್ಲಬ್ಬುಗಳನ್ನು ನಡೆಸುವವರ ನೆನಪಾಗುತ್ತದೆ.

* * * * *

ಇಂಥವರಿಗೆ ಈಗ ಕಲಾಭಿಜ್ಞತೆಯ ಪಾಠ!

ಪೋಸ್ಲಾ ಸಮಿತಿಯ ವರದಿ ನೋಡಿ. "ಕಾಮೋದ್ದೀಪಕ ಚಿತ್ರ ನಿರ್ಮಾಣಕ್ಕೆ ಆಹ್ವಾನ ನೀಡಿದಂತೆ," ಎಂದರು ಒಬ್ಬರು. "ಚುಂಬಿಸಲು, ಉಡುಪು ಕಳಚಲು ಹೇಳಿದರೆ ನಾವಿನ್ನು ಚಲಚ್ಚಿತ್ರಗಳಲ್ಲಿ ಅಭಿನಯಿಸುವುದೇ ಇಲ್ಲ" ಎಂದು ನುಡಿದ ಕೆಲ ಸಾಧ್ವೀಮಣಿಯರೂ ಉಂಟು.

ಹೀಗೆ ಹೇಳಿ, ಒಳಗಿಂದೊಳಗೆ ಅವರು ನಕ್ಕಿದ್ದರೆ, ಪಾಪ! ಅವರನ್ನು ಟೀಕಿಸ ಬಾರದು. ಲೋಕದ ರೀತಿಯೇ ಹಾಗೆ. ತೆರೆಯ ಮುಂದೆ ಒಂದು ತೆರ; ಹಿಂದೆ ಇನ್ನೊಂದು ತೆರ.

ಚಿತ್ರರಂಗದಲ್ಲೂ ಅಲ್ಲೊಬ್ಬರು ಇಲ್ಲೊಬ್ಬರು ನಿಜವಾದ ಕಲೋಪಾಸಕರು ಇಲ್ಲ ವೆಂದಲ್ಲ. ಆದರೆ ಅವರದು ಗಣನೆಗೂ ಸಿಲುಕದ ಅಲ್ಪ ಸಂಖ್ಯೆ. ಗೊಂಡಾರಣ್ಯದಲ್ಲಿ ಈ ಸಾಧುಪ್ರಾಣಿಗಳು ವನ್ಯಮೃಗಗಳಿಗೆ ಆಹಾರವಾಗುವುದೇ ಹೆಚ್ಚು.

* * * * *

ನಿಯಮ ನಿರ್ಬಂಧಗಳು ಈಗಿನಂತೆಯೇ ಇರಬೇಕು, ಸಡಿಲವಾಗಬಾರದು - ಎಂದು ಬಲಾಢ್ಯ ನಿರ್ಮಾಪಕರು ಮುತಪ್ರದರ್ಶನಗಳನ್ನು ಏರ್ಪಡಿಸಿದರೂ ಏರ್ಪಡಿಸ ಬಹುದು. ಯಾಕೆಂದರೆ, ನಗ್ನತೆ ಸ್ವೀಕೃತವಾದ ಸ್ವಲ್ಪ ಸಮಯದಲ್ಲಿ ಪಾಶ್ಚಾತ್ಯ ಜಗತ್ತಿ ನಲ್ಲಿ ಆ ಬಗೆಯ ಚಿತ್ರಗಳಿಗೆ ಬೇಡಿಕೆಯೇ ಇಲ್ಲವಾಯಿತು. ಇಲ್ಲೂ ಹಾಗಾಗುವುದು ಅಸ್ವಾಭಾವಿಕವಲ್ಲ. ಅಲ್ಲದೆ ಈಗಿನ 'ಪವಿತ್ರ ಚಿತ್ರನಿರ್ಮಾಣ'ದ ವಿಶಿಷ್ಟ ಸೈಪಿರಿ ನಮ್ಮ ನಿರ್ಮಾಪಕರಿಗೆ ಕರಗತವಾಗಿದೆ. ಅದರಿಂದ ಸಾಕು ಸಾಕೆನಿಸುವಷ್ಟು ಹಣ ಸಂಪಾದನೆ ಯಾಗುತ್ತಿರುವಾಗ, 'ಕಲಾತ್ಮಕ ಚಿತ್ರ'ಗಳ ಸ್ಪರ್ಧೆಯನ್ನು ಅವರು ಇದಿರಿಸಬೇಕೆ? ಅವರ ದೃಷ್ಟಿಯಲ್ಲಿ ಕಲೆಯೆಲ್ಲ ಬುದ್ಧಿಜೀವಿಗಳಿಗೆ ಮೀಸಲು. ಶ್ರೀಸಾಮಾನ್ಯನಿಗೆ ಬೇಕಾಗುವ ಕಲೆಯೇ ಬೇರೆ. ಅದು ಅವರ ಡಬ್ಬಗಳಲ್ಲಿದೆ. ಹುತ್ತ - ಹಾವು - ಪುಂಗೀ ನಾದ ಇವೆಲ್ಲ ನಮ್ಮ 'ಗಣ್ಯ'ರಿಗೆ ಕರಗತವಾಗಿರುವಾಗ, ಮತ್ತೆ ಹೊಸದಾಗಿ ಹುತ್ತಕ್ಕೆ ಯಾಕೆ ಕೈ ಇಕ್ಕಬೇಕು?

ಅಂತೂ, ಬಿರುಗಾಳಿ ಏಳಲು ಕಾರಣವಾಗಿದೆ ಖೋಸ್ಲಾ ಸಮಿತಿಯ ವರದಿ.

೭-೯-೧೯೬೯

# ಚೆನ್ನಬಸವನಾಯಕ ಕರಾವಳಿಗೆ ಬಂದ

"ವಿಶು ಬಂದಿದ್ದಾನೆ."

ಫೋನ್ ಮಾಡಿದವರು ಮಾವಿನಕೆರೆ ರಂಗನಾಥ್.

ವಿಶುಕುಮಾರ್! ಆ ಬೆಳಗ್ಗೆಯಷ್ಟೇ ಅಗೋಚರವಾಗಿ ಅವರು ನನ್ನೆದುರು ಕುಳಿತು ಮಾತನಾಡಿದ್ದರು, – ದಿನ ಪತ್ರಿಕೆಯನ್ನು ನಾನು ಓದಿದ ಬಳಿಕ.

ಮುಂದೆ ಕೆಲ ನಿಮಿಷಗಳಲ್ಲಿ ಅವರನ್ನು ಪ್ರತ್ಯಕ್ಷವಾಗಿ ಕಂಡೆ. ಇದ್ದಕ್ಕಿದ್ದಂತೆ ಮನೆ ಮಾತಾಗಿದ್ದ ಮನುಷ್ಯ ಸಂಕಟ, ಅಸಮಾಧಾನ, ರೋಷ, ಅಸಹಾಯತೆ ಎಲ್ಲವೂ ಪರಸ್ಪರ ಬೆರೆತು ಇಂಥದೇ ಎಂದು ಹೇಳಲಾಗದ ಭಾವವಾಗಿ ಹೆಪ್ಪುಗಟ್ಟಿದ್ದುವು ಅವರ ಕಣ್ಣುಗಳಲ್ಲಿ.

ಅದೊಂದು ಮಾತು, ಇಮೊಂದು ಮಾತು. ಧಾರಾಳವಾದ ಮೌನ. ಇವನ್ನು ಪೋಣಿಸಿದಾಗ ರೂಪುಗೊಂಡದ್ದು ವ್ಯಥೆಯ ಒಂದು ಕಥೆ.

ಒಂದೇ ದಶಕದ ಅಂತರ. ಚೆನ್ನಬಸವನಾಯಕ ಕರಾವಳಿಗೆ ಬಂದು ತಲುಪಿದ್ದ.

"ಕರಾವಳಿ ಧಾರಾವಾಹಿಯನ್ನು ಕೂಡಲೇ ನಿಲ್ಲಿಸಬೇಕು!"

ದೊರೆಯ ನಿರೂಪ? ರಾಜಭಟರು ತಂದೊಪ್ಪಿಸಿದ ಕಟ್ಟಾಜ್ಞೆ?

ಅಲ್ಲ ತಂತಿ ಮತ್ತು ಕಾಗದ. ಒಕ್ಕಣೆ, ಸಮಾಜದ ಮುಖಂಡರದು.

ಇಲ್ಲಿ ಸಮಾಜ, ಸಮಷ್ಟಿ ಅರ್ಥದಲ್ಲಿ ಬಳಸಿರುವ ಪದವಲ್ಲ. ಒಂದು ಜಾತಿಯ ಇಲ್ಲವೆ ಕೋಮಿನ ಜನರದೂ ಸಮಾಜವೇ. ಅದರ ಮುಖಂಡರ ದೃಷ್ಟಿಯಲ್ಲಿ 'ಕರಾವಳಿ' ಕಾದಂಬರಿ ಒಳ್ಳೆಯ ಕೃತಿಯಲ್ಲ. ಧಾರಾವಾಹಿಯಾಗಿ ಅದನ್ನು ಪ್ರಕಟಿಸಬಾರದು. ಯಾಕೆಂದರೆ, ಈಗಾಗಲೇ ಪ್ರಕಟವಾಗಿರುವ ಕೆಲ ಅಧ್ಯಾಯಗಳಿಂದ ಸಮಾಜದವರಿಗೆ ನೋವುಂಟಾಗಿದೆ.

ಹೀಗೆ ನೋಯಿಸಿರುವ ಕೂರಲಗು ಯಾವುದು? ಲೇಖಕ ಮಾಡಿರುವ ತಪ್ಪೇನು?

'ಕರಾವಳಿ' ನಾನು ತಿಳಿದುಕೊಂಡಿರುವ ಮಟ್ಟಿಗೆ, ಮಲೆಯಾಳಿ ಸಾಹಿತಿ ಶಿವ ಶಂಕರ ಪಿಳ್ಳೆಯವರ ವಿಶ್ವವಿಖ್ಯಾತ ಕಾದಂಬರಿ 'ಚೆಮ್ಮೀನ್' ಪರಂಪರೆಯದು. ಅದರಂತೆ ಇಲ್ಲಿಯೂ ಚಿತ್ರಿತವಾಗಿರುವುದು ಕಡಲತೀರದ ಬೆಸ್ತರ ಬದುಕು. ಪರಿಸರದ ನಿತ್ಯವೀಕ್ಷಕ ವಿಶುಕುಮಾರ್ ಇಲ್ಲಿ ಕಲಾವಿದ: ಆ ಜೀವನ ವರ್ಣರಂಜಿತ. ಹಲವು ಬಣ್ಣಗಳಲ್ಲಿ ಅದನ್ನು ಚಿತ್ರಿಸುವ ಅವರ ಬಯಕೆ ಆ ಕೃತಿಯಲ್ಲಿ ಫಲಿಸಿದೆ.

ಅಂಥ ಕೃತಿಯನ್ನು ಕಂಡು ಕೆಲವರಿಗೆ ಕಣ್ಣು ಕೆಂಪಾಗಿದೆ.

ಯಾಕೆ? ಕೆಲವರನ್ನು ಕೆರಳಿಸುವಂಥದು 'ಕರಾವಳಿ' ಕಾದಂಬರಿಯಲ್ಲಿ ಏನಿದೆ?

"ನಮ್ಮ ಸಮಾಜಕ್ಕೆ ನೋವು ಉಂಟಾಗಿದೆ," ಎಂಬ ಆಕ್ರೋಶಕ್ಕೆ ಉತ್ತರವಾಗಿ ಸ್ವತಃ ವಿಶುಕುಮಾರ್ ಹೇಳಿರುವ ಮಾತುಗಳು ಇವು:

"ಸಮಾಜದಲ್ಲಿ ಒಳ್ಳೆಯವರು ಕೆಟ್ಟವರು ಹೇಗೆ ಇರುತ್ತಾರೋ ಹಾಗೆಯೇ ಕಾದಂಬರಿಗಳಲ್ಲಿ ಪಾತ್ರರಚನೆಯಾಗುವುದು ಸಹಜ. ಮತೀಯ ದ್ವೇಷವನ್ನು ಎಬ್ಬಿಸಲು ಅಥವಾ ಯಾವುದೇ ವ್ಯಕ್ತಿಯನ್ನಾಗಲೀ ಜಾತಿಯನ್ನಾಗಲೀ ದೂಷಿಸಲು ಬರೆದ ಕಾದಂಬರಿ 'ಕರಾವಳಿ' ಅಲ್ಲ.... ವಿಶ್ವದಲ್ಲಿ ಇರುವುದು ಎರಡೇ ಜಾತಿ. ಹೆಣ್ಣು ಮತ್ತು ಗಂಡು.... ಪ್ರಕೃತಿಗೆ ಹೇಗೆ ಜಾತಿ ಭೇದವಿಲ್ಲವೋ ಸಾಹಿತ್ಯಕ್ಕೂ ಹಾಗೆಯೇ. ಪ್ರತಿಯೊಂದು ಜಾತಿಯಲ್ಲೂ ಒಳಿತು – ಕೆಡುಕು, ಅಂಧಶ್ರದ್ಧೆ – ಅನಾಗರಿಕತೆ ಇದ್ದೇ ಇರುತ್ತವೆ. ಕಾದಂಬರಿಗಳಲ್ಲಿ ಇದನ್ನು ನಿರೂಪಿಸಿದಾಗ, ಇದು ನಮ್ಮ ಜಾತಿಯನ್ನು ಹೀನೈಸಲು ಬರೆದದ್ದು ಎಂದು ಭಾವಿಸುವುದು ದುರದೃಷ್ಟಕರ. ಸಾಹಿತ್ಯದ ವಿಷಯದಲ್ಲಿ ಅಂಥ ಭಾವನೆಗಳಿಗೆ ಎಂದೆಂದೂ ಆಸ್ಪದವಿರಬಾರದು."

ವಿಶುಕುಮಾರರ ಕಾದಂಬರಿಯನ್ನು ಧಾರಾವಾಹಿ ಪ್ರಕಟಣೆಗೆ ಸ್ವೀಕರಿಸಿದ ಪತ್ರಿಕೆಯ ಸಂಪಾದಕರು ವ್ಯಕ್ತಪಡಿಸಿದ ಅಭಿಪ್ರಾಯದಲ್ಲೂ ಮೇಲಿನ ಧ್ವನಿಯೇ ಇದೆ.

"....ಜೀವನದ ಚಿತ್ರಣ ನಡೆಸುವಾಗ ಪ್ರಚಲಿತ ಸಾಮಾಜಿಕ ವ್ಯವಸ್ಥೆಯಲ್ಲಿ ಸಾಪೇಕ್ಷವಾಗಿ ಕೆಲವು ಮಾತುಗಳು ಬರುತ್ತವೆ. ಅವು ಯಾರನ್ನೋ ಅಥವಾ ಯಾವುದೋ ಸಮಾಜವನ್ನೋ ಹೀಯಾಳಿಸುವ ಅಥವಾ ಪ್ರಶಂಸಿಸುವ ದೃಷ್ಟಿಯಿಂದ ಬರೆದುದಲ್ಲ ಎಂಬುದು ನಮ್ಮ ಭಾವನೆ. ಹಾಗೆ ಜೀವಂತ ಸಮಾಜದ ಓರೆಕೋರೆಗಳು ಚಿತ್ರಣದ ಚೌಕಟ್ಟಿನಲ್ಲಿ ಸಾಂದರ್ಭಿಕವಾಗಿ ಪ್ರತಿಬಿಂಬಿತವಾದರೆ ಅದನ್ನು ಉದ್ದೇಶಪೂರ್ವಕ ಎಂದು ಭಾವಿಸಬಾರದೆಂದೂ ನಮ್ಮ ಭಾವನೆ. ಇಲ್ಲವಾದರೆ, ಸಾಹಿತ್ಯ ರಚನೆ ಅಸಾಧ್ಯವಾದೀತು."

ಇದು ತೂಕದ ಮಾತು.

ಹೀಗೆ ಲೇಖಕ – ಸಂಪಾದಕರಿಬ್ಬರೂ ಏಕರೀತಿಯ ಪ್ರತಿಕ್ರಿಯೆ ವ್ಯಕ್ತಪಡಿಸಿಯೂ ಆದುದೇನು?

ಯಾರ ಮನಸ್ಸನ್ನೂ ಯಾವುದೇ ಸಮಾಜವನ್ನೂ ನೋಯಿಸಲು ಇಷ್ಟಪಡದ ಕಾರಣ ಕಾದಂಬರಿಯ ಧಾರಾವಾಹಿ ಪ್ರಕಟಣೆಗೆ ತಡೆ.

* * * * *

ಕಳೆದ ಒಂದು ದಶಕದ ಪತ್ರಿಕಾ ವಿಶೇಷವೆಂದರೆ, ಶ್ರೀಸಾಮಾನ್ಯರು ಅಭಿಪ್ರಾಯ ವ್ಯಕ್ತಪಡಿಸಲು ನಾಮುಂದು ತಾಮುಂದು ಎಂದು ನುಗ್ಗುವುದು. 'ಕರಾವಳಿ'ಯನ್ನು ಹಠಾತ್ತಾನೆ ನಿಲ್ಲಿಸುವುದಕ್ಕೆ ಸಂಬಂಧಿಸಿ ಪ್ರಕಟವಾಗಿರುವ ಪ್ರತಿಕ್ರಿಯೆ ಪ್ರಬುದ್ಧವಾದದ್ದು.

ಒಬ್ಬರು: "ಸಾಹಿತಿಗೆ ಜಾತಿ - ಮತ - ಪಂಥಗಳ ಭೇದವಿಲ್ಲ."

ಇನ್ನೊಬ್ಬರು: "ಕಾದಂಬರಿಯ ಸ್ವಲ್ಪ ಭಾಗವನ್ನಷ್ಟೇ ಓದಿ ಇಡೀ ಕಾದಂಬರಿಯ ಬಗ್ಗೆ ತೀರ್ಮಾನಕ್ಕೆ ಬರುವುದು ಸಹಜವೆನಿಸದು."

ಮತ್ತೊಬ್ಬರು: "ಇಂಥ ನೈಜ ಸುಂದರ ಬರಹವನ್ನು ಕುರಿತು ತಪ್ಪು ಕಲ್ಪನೆಯನ್ನು ಯಾರೂ ಮಾಡಬಾರದಾಗಿತ್ತು."

—ಹೀಗೆಯೇ ಇನ್ನೂ ಹಲವು.

'ಕರಾವಳಿ'ಯನ್ನು ಟೀಕಿಸುವವರ ವಾದವೇ ಸರಿ ಎಂದಾದರೆ, 'ಕಾನೂರು ಸುಬ್ಬಮ್ಮ ಹೆಗ್ಗಡಿತಿ'ಗೆ ಈ ನಾಡಿನಲ್ಲಿ ಉಳಿಗಾಲವಿಲ್ಲ. 'ಚೋಮನ ದುಡಿ'ಯನ್ನು ಮುಟ್ಟಿದ್ದೇ ತಪ್ಪು. 'ಬೆಟ್ಟದ ಜೀವ' ಉಸಿರಾಡುವಂತಿಲ್ಲ.

ಆರಂಭದ ಮೇಲಿನ ಕೃತಿಗಳೆಲ್ಲ ಬದುಕಿಕೊಂಡರೂ, 'ಚಿನ್ನಬಸವನಾಯಕ' ಸತ್ತುಬಿದ್ದ. ಒಂದೆಡೆ ಗ್ರಂಥದಹನವೂ ನಡೆಯಿತು. ಅಪರಾಧ? 'ಸಮಾಜಕ್ಕೆ ನೋವಾದದ್ದು.'

ಈಗ 'ಕರಾವಳಿ'ಯ ಸರದಿ.

* * * * *

ಮೊಗವೀರರು ಧೀರರು. ಕನ್ನಡ ಸಮಾಜದಲ್ಲಿ ಅವರಿಗೆ ಹಿರಿಯ ಸ್ಥಾನವುಂಟು. ನಿತ್ಯವೂ ಸಾವು ಹುಟ್ಟುಗಳೊಡನೆ ಭುಜ ಒರೆಸುವ ಸಾಹಸಿಗಳು ಅವರು. ಸ್ವಾತಂತ್ರ್ಯ ಹೋರಾಟದಲ್ಲಿ ಅವರ ಭಾಗ ಅವಿಸ್ಮರಣೀಯ. ನಮ್ಮ ಕಡಲತೀರದಲ್ಲೇ ಏಂದೇನು, ದೂರದ ಮುಂಬಯಿಯಲ್ಲೂ ಅವರು ಹಿರಿಯ ಪರಂಪರೆಯ ಧ್ವಜವಾಹಕರು. ಸ್ವಸಾಮರ್ಥ್ಯದಿಂದ ವಿದ್ಯಾರ್ಜನೆ ಮಾಡಿ, ವಿವಿಧ ಕ್ಷೇತ್ರಗಳಲ್ಲಿ ಮುಂದಾಳುಗಳಾಗಿ, ಕೀರ್ತಿ ಗಳಿಸಿರುವವರು ಅದೆಷ್ಟು ಜನ! ಇವರೆಲ್ಲ, ಬೆಸ್ತರ ಜೀವನ ಚಿತ್ರಿತವಾಯಿತೆಂದು, ಸಮಾಜದ ಆ ಜನವಿಭಾಗದ ಹಿರಿಕಿರಿಯ ಗುಣಗಳು ಸಾಹಿತ್ಯದಲ್ಲಿ ಮೂಡಿದುವೆಂದು ಮೂಗು ಮುರಿಯುವುದುಂಟೆ?

ಸೃಷ್ಟಿಕಾರ್ಯ ಎಲ್ಲರಿಂದಲೂ ಆಗುವಂಥದಲ್ಲ. ಆ ಸಾಮರ್ಥ್ಯವಿರುವವರನ್ನು ಕಂಡಾಗ ಸಮಾಜ ತಲೆಬಾಗಬೇಕು. ಬರೆಯುವ ಸ್ವಾತಂತ್ರ್ಯವನ್ನು ಲೇಖಕನಿಂದ ಯಾರೂ ಕಸಿದುಕೊಳ್ಳಬಾರದು.

ಒಂದು ವೇಳೆ ಬರೆಹಗಾರ ಹೊಣೆಗೇಡಿಯಾದರೂ? ಆಗ ಸೋದರ ನಾಗರಿಕರಿಗೆ ಬೇಸರವಾಗುತ್ತದೆ. ಆದರೆ, ಆ ಕಾರಣದಿಂದ, 'ಬರವಣಿಗೆಯನ್ನೇ ನಿಲ್ಲಿಸಿ' ಎನ್ನುವುದು ಅನಾಗರಿಕವೆನಿಸುತ್ತದೆ.

೧೪-೯-೧೯೬೯

# ‘ಮಾರ್ಗದರ್ಶಿ’ಗಳಿಂದ ರಕ್ಷಿಸಿ !

ಕನ್ನಡ ಆರನೆಯ ಪುಸ್ತಕವನ್ನು ತಂದಿರಿಸಿ, ಆದರ ಹಿಮ್ಮೈಯತ್ತ ಗಮನ ಸೆಳೆದು, ಮಗಳು ಕೇಳಿದಳು :

“ಅಂದರೆ ಏನು ?”

ಅಲ್ಲಿ ದಪ್ಪ ಅಕ್ಷರಗಳಲ್ಲಿ ಹೀಗೆ ಬರೆದಿತ್ತು:

ಈ ಪುಸ್ತಕವು ಸರ್ಕಾರದ ಬುಕ್ ಡಿಪ್ರೋ ಇಲಾಖೆಯಿಂದ ನಿಯಮಿಸಲ್ಪಟ್ಟಿರುವ ಏಜೆಂಟರುಗಳಲ್ಲಿ ಪುಸ್ತಕದ ಮೇಲೆ ಮುದ್ರಿಸಿರುವ ಬೆಲೆಗೆ ದೊರೆಯುವುದಿಲ್ಲವೆಂದಾಗಲಿ, ಇತರರು ಈ ಪುಸ್ತಕಕ್ಕೆ ರಚಿಸಿರುವ ‘ನೋಟ್ಸ’ನ್ನು ಕೊಂಡುಕೊಂಡ ಹೊರತು ಈ ಪುಸ್ತಕವನ್ನು ಮಾರುವುದಿಲ್ಲವೆಂದಾಗಲಿ ಹೇಳುವ ಅಥವಾ ಈ ಪುಸ್ತಕದ ಮೇಲೆ ಕೊಟ್ಟಿರುವ ಬೆಲೆಗಿಂತಲೂ ಹೆಚ್ಚಾದ ಬೆಲೆಯನ್ನು ಹಾಕಿ ಮಾರುವ ಏಜೆಂಟರು ಮೊದಲಾದವರ ಹೆಸರನ್ನೂ ವಿಳಾಸವನ್ನೂ ವಿದ್ಯಾಭ್ಯಾಸದ ಇಲಾಖೆಯ ಡೈರೆಕ್ಟರವರಿಗೆ ಬರಹ ಮೂಲಕ ಕೂಡಲೇ ತಿಳಿಯಪಡಿಸಬೇಕೆಂದು ಕೋರಿದೆ.

ಬೆಂಗಳೂರು — ಎ. ಸಿ. ದೇವೇಗೌಡ
ಫೆಬ್ರವರಿ, ೧೯೬೩ — ಡೈರೆಕ್ಟರ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್

ಮೇಲಿನದನ್ನೋದಿ, “ಇದು ಏಳು ವರ್ಷಗಳ ಹಿಂದೆ ಅಚ್ಚಾದದ್ದು,” ಎಂದೆ.

“ಹೌದು, ಈ ವರ್ಷ ಬಂದಿರೋ ಪುಸ್ತಕದಲ್ಲೂ ಹೀಗೇ ಇದೆ.”

“ಕಡೇಲಿ ಜೇವ್ಗೂರ್ ಅಂತ ?”

“ಹೂಂ.”

ವಿವರಿಸಿದೆ: ಮೊದಲು ಅಲ್ಲಿ ಬಳಸಲಾದ ಕನ್ನಡಕ್ಕೆ ಸಂಬಂಧಿಸಿ. ಇದು ಸರಕಾರೀ ಭಾಷೆ. ಮಕ್ಕಳಿಗೂ ಹೆತ್ತವರಿಗೂ ಅರ್ಥವಾಗುವ ಸರಳ ವಾಕ್ಯಗಳಲ್ಲಿ ಪುನಃ ಅದನ್ನು ಬರೆಯಬಹುದು.

“ನೋಟ್ಸ್ ಅಂದರೆ ?”

“ಟಿಪ್ಪಣಿ. ಗೈಡ್ ಅಂತಲೂ ಹೇಳ್ತಾರೆ.”

“ಹೌದು. ನನ್ನ ಕ್ಲಾಸ್ನಲ್ಲಿ ಒಬ್ಬಳ ಹತ್ತಿರ ಇದೆ. ನೋಡಿದೀನಿ.”

“ಪರೀಕ್ಷೆಯಲ್ಲಿ ಬರಬಹುದಾದ ಪ್ರಶ್ನೆಗಳಿಗೆ ಉತ್ತರ. ಅವನ್ನು ಉರು ಹೊಡೆದು ಬರೆದರೆ —”

"ಇಸ್ಸಿ!"

"ಪಠ್ಯ ಪುಸ್ತಕ ಮಾಡಿರೋದು ಸರಕಾರದವರು. ನೋಟ್ಸ್ ಅಥವಾ ಗೈಡ್ – ಟಿಪ್ಪಣಿ ಅಥವಾ ಮಾರ್ಗದರ್ಶಿ – ಅಚ್ಚು ಹಾಕಿರೋರು ಖಾಸಗಿಯವರು. ಪಠ್ಯ ಪುಸ್ತಕ ಬೇಕು ಅಂತ ಅಂಗಡಿಗೆ ಹೋದರೆ, ಜತೇಲಿ ನಮ್ಮ ಪುಸ್ತಕವನ್ನೂ ತಗೋ ಬೇಕು – ಅಂತ ಅವರು ಶರತ ಹಾಕಬಹುದು. ಹಾಗೆ ಮಾಡಿದರೆ –"

"ಸರಿ. ಡೈರೆಕ್ಟರಿಗೆ ಕಂಪ್ಲೇಂಟು ಕೊಡೋದು."

ಕಳೆದ ಏಳುವರ್ಷಗಳಲ್ಲಿ ಇಂಥ 'ಕಂಪ್ಲೇಂಟು'ಗಳು ಎಷ್ಟು ಬಂದುವೊ ತಿಳಿಯದು. ಅಥವಾ ಬಂದೇ ಇಲ್ಲವೊ.

ನಮ್ಮಲ್ಲಿ ಪಠ್ಯ ಪುಸ್ತಕ ಅಚ್ಚಾಗುವುದಕ್ಕೆ ಮುಂಚೆಯೇ ಅವರ 'ಟಿಪ್ಪಣಿ' ಅಥವಾ 'ಮಾರ್ಗದರ್ಶಿ' ಸಿದ್ಧವಾಗುವುದುಂಟು. ಮೇಲಣ ತರಗತಿಗಳಲ್ಲಿ, ಕಡಮೆ ಬೆಲೆಯ 'ಮಾರ್ಗದರ್ಶಿ'ಯನ್ನು ಬರಮಾಡಿಕೊಂಡು ಹೆಚ್ಚು ಬೆಲೆಯ ಪಠ್ಯ ಪುಸ್ತಕ ವನ್ನು ಅಂಗಡಿಯಲ್ಲೇ ಬಿಡುವ ವಿದ್ಯಾರ್ಥಿಗಳೂ ಇಲ್ಲದಿಲ್ಲ.

ಪರೀಕ್ಷೆಯಲ್ಲಿ ನೆರವಾಗುವ ಈ ಸಿದ್ಧೌಷಧಿಗಳನ್ನು ತಯಾರಿಸುವ ತಜ್ಞರು ಯಾರು? ಇಲ್ಲಿ ಮಾಲಿಕರೇ ತಯಾರಕರು. ಅಧ್ಯಾಪಕರು ಅವರ ಸಹಾಯಕರು. ಟಿಪ್ಪಣಿಗಳನ್ನು ಬರೆಯುವವರಲ್ಲಿ ಜಾಣರೂ ಇರಬಹುದು, ದಡ್ಡರೂ ಇರಬಹುದು. ಬರೆಸುವವರು ಮಾತ್ರ ಕುಶಾಗ್ರಮತಿಗಳು. ಅವರೇ ಅಂಗಡಿಕಾರರು, ಪುಸ್ತಕ ವ್ಯಾಪಾರಿಗಳು. 'ಪ್ರಕಾಶಕರು' ಎಂಬ ಹೆಸರು ಹಲಗೆಯನ್ನು ಅಂಗಡಿಗಳಲ್ಲಿ ಅವರು ತೂಗ ಹಾಕುವುದೂ ಉಂಟು.

ಬಹ್ವಂಶ ಮಾರ್ಗದರ್ಶಿಗಳ ಗುಣವಂತೂ ದೇವರಿಗೆ ಪ್ರೀತಿ.

ನಮ್ಮ ವಿದ್ಯಾಭ್ಯಾಸ ಪದ್ಧತಿಯ ಫಲಶ್ರುತಿ ಈ ಗೈಡ್ ನಿರ್ಮಾಣ. ಇದು ಶಿಕ್ಷಣ ಕ್ಷೇತ್ರವನ್ನು ಬಾಧಿಸುತ್ತಿರುವ ಪಿಡುಗು.

* * * * *

ಈ ವರ್ಷ ಈ ರೋಗದ ಹಾವಳಿ ಅಸಹನೀಯವಾಗಿದೆ ಎಂದು ಹಾಹಾಕಾರ ಎದ್ದಿದೆ. ಹೆಚ್ಚು ಹೆಚ್ಚು ಪುಸ್ತಕಗಳು ರಾಷ್ಟ್ರೀಕೃತವಾಗುವಾಗ ಲಕ್ಷಗಟ್ಟಲೆಯಲ್ಲಿ ಅವು ಅಚ್ಚಾಗುವಾಗ, ವಿದ್ಯಾರ್ಥಿಗಳ ಸಂಖ್ಯೆಯೂ ಹೆಚ್ಚುತ್ತಿರುವಾಗ, ವಿತರಣೆಯ ವ್ಯವಸ್ಥೆ ಎಷ್ಟು ಚೆನ್ನಾಗಿದ್ದರೂ ಸಾಲದು. ಇಂಥ ಸಂದರ್ಭದಲ್ಲಿ, ರಾಷ್ಟ್ರೀಕೃತ ಪುಸ್ತಕಗಳು ಸಿಗುತ್ತಿಲ್ಲ – ಎಂಬ ಹುಯಿಲೆಬ್ಬಿಸಿ, ಗೈಡ್‌ನ ಜೊತೆಗೆ ಪಠ್ಯ ಮಾರುವ ವೈಖರಿಯನ್ನು ಆಚರಣೆಗೆ ತಂದರೆ ಅದರಲ್ಲಿ ಆಶ್ಚರ್ಯವೇನಿದೆ?

ವಿಧಾನಸಭೆಯಲ್ಲಿ ಅದು ಟೀಕೆಯಾಗಿ ಹೊಮ್ಮಿತು. 'ಗೈಡ್ ಶರತ'ದಿಂದಾಗಿ ಪುಸ್ತಕಗಳ ಕೃತ್ರಿಮ ಅಭಾವವನ್ನು ಉಂಟುಮಾಡಲಾಗಿದೆ – ಎಂದರು ಸರಕಾರದ ವಕ್ತಾರರು.

ಪುಸ್ತಕ ವ್ಯಾಪಾರಿಗಳು ಹೇಗೆ ಸುಮ್ಮನಿರಬಲ್ಲರು ?

ಮೈಸೂರು ರಾಜ್ಯದ ಪ್ರಕಾಶಕರ ಹಾಗೂ ಪುಸ್ತಕ ವ್ಯಾಪಾರಿಗಳ ಸಂಘದ ಕಾರ್ಯದರ್ಶಿ ಪತ್ರಿಕಾ ಪ್ರತಿನಿಧಿಗಳನ್ನು ಕರೆದು, ನಾಣ್ಯದ ಇನ್ನೊಂದು ಮೈಯನ್ನು ತೋರಿಸಿದರು. ವ್ಯಾಪಾರಿಗಳು ಅಪೇಕ್ಷಿಸಿದಷ್ಟು ಪುಸ್ತಕಗಳನ್ನು ಸರ್ಕಾರ ಸರಬರಾಜು ಮಾಡುತ್ತಿಲ್ಲ ಎಂದರು. ಮುದ್ರಣ ಮತ್ತು ದಾಸ್ತಾನಿಗೆ ಸರಿಯಾದ ಏರ್ಪಾಟು ಮಾಡಿಕೊಳ್ಳದೆ ಪಠ್ಯಪುಸ್ತಕಗಳ ರಾಷ್ಟ್ರೀಕರಣ ಮಾಡಿದುದರಿಂದ ಹೀಗಾಯಿತು ಎಂದು ವಾದಿಸಿದರು. ಪಠ್ಯದೊಡನೆ ಒತ್ತಾಯಪೂರ್ವಕವಾಗಿ ಗೈಡ್ ಮಾರುವ ವ್ಯಾಪಾರಿಗಳ ಬಗೆಗೆ ಹೇಳುತ್ತ, "ಅಂಥ ಅವಿವೇಕಿಗಳು ಕೆಲವರಿರಬಹುದು," ಎಂದರು.

ಯಾವಾಗಲೂ ತೊಂದರೆಯುಂಟಾಗುವುದೇ ಅಂಥ ಕೆಲ ಅವಿವೇಕಿಗಳಿಂದ.

* * * * *

ಮೇಲಿನ ಪತ್ರಿಕಾಗೋಷ್ಠಿಯ ಸುದ್ದಿಯನ್ನೋದಿದ ಬಳಿಕ ಒಬ್ಬರು ಒಂದು ಪತ್ರಿಕೆಗೆ ಬರೆದರು :

"ಸ್ವಾಮಿ,

ಪಠ್ಯ ಪುಸ್ತಕ ಕೊಳ್ಳುವಾಗ ಗೈಡನ್ನು ಒತ್ತಾಯಪೂರ್ವಕವಾಗಿ ಪುಸ್ತಕ ವ್ಯಾಪಾರಿಗಳು ಹೇರುವುದಿಲ್ಲ ಎಂದು ಮೈಸೂರು ರಾಜ್ಯ ಪ್ರಕಾಶಕರ ಮತ್ತು ಪುಸ್ತಕ ವ್ಯಾಪಾರಿಗಳ ಸಂಘದ ಕಾರ್ಯದರ್ಶಿ ತಿಳಿಸಿದ್ದಾರೆ. ಕಳೆದ ಕೆಲವು ದಿನಗಳಿಂದ ಎಂಟನೆಯ ತರಗತಿಯ ಇಂಗ್ಲಿಷ್ ರೀಡರ್ ಕೊಳ್ಳಲು ನಾನು ಪ್ರಯತ್ನಿಸುತ್ತಿದ್ದೇನೆ. ನಾನು ಹೋಗಿ ಕೇಳಿದ ಪ್ರತಿಯೊಬ್ಬ ಪುಸ್ತಕ ವ್ಯಾಪಾರಿಯೂ ಗೈಡ್ ಕೊಳ್ಳದಿದ್ದರೆ ಪುಸ್ತಕವಿಲ್ಲ ಎಂದಿದ್ದಾರೆ. ಗೈಡ್ ಇಲ್ಲದೆಯೇ ಪುಸ್ತಕ ಎಲ್ಲಿ ಸಿಗುತ್ತದೆ ಎಂಬುದನ್ನು ಸಾರ್ವಜನಿಕರ ಮಾಹಿತಿಗೋಸ್ಕರ ಕಾರ್ಯದರ್ಶಿಗಳು ದಯವಿಟ್ಟು ತಿಳಿಸಬಲ್ಲರೆ?

ಬೆಂಗಳೂರು ಎಂ. ಪಾರ್ಥಸಾರಥಿ

ಕೆಲವೊಮ್ಮೆ ನಮ್ಮಲ್ಲಿ ಪ್ರಶ್ನೆಗಳಿಗೆ ಉತ್ತರ ಸಿಗುವುದಿಲ್ಲ!

೨೮-೯-೧೯೬೯

# ವಿಶ್ವಕೋಶ, ಪ್ರಥಮ ಸಂಪುಟ

"ಅಪೊಲೊ ಯಾನವನ್ನು ಕುರಿತು ವಿವರ ಬೇಕು. ಎನ್‌ಸೈಕ್ಲೊಪೀಡಿಯಾ ಬ್ರಿಟಾನಿಕ ನೋಡಿದೆ. ಎನ್‌ಸೈಕ್ಲೋಪೀಡಿಯಾ ಅಮೆರಿಕಾನಾ ನೋಡಿದೆ. ಎರಡ ರಲ್ಲೂ ಇಲ್ಲ. ಬೇರೆ ಯಾವುದಾದರೂ ವಿಶ್ವಕೋಶದಲ್ಲಿ ಸಿಗಬಹುದೆ?"

"ಓಹೊ!"

"ಹೌದೆ!? ಯಾವುದರಲ್ಲಿ?"

"ಕನ್ನಡ ವಿಶ್ವಕೋಶದ ಮೊದಲನೆಯ ಸಂಪುಟದಲ್ಲಿ."

ಜಗತ್ತಿನಲ್ಲೇ ಹೊಚ್ಚ ಹೊಸ ವಿಶ್ವಕೋಶ. ಅದರಲ್ಲಿನ ಒಂದು ಶೀರ್ಷಿಕೆ ಅಪೊಲೊ.

ಆ ವಿಶ್ವಕೋಶದ ಪ್ರಥಮ ಸಂಪುಟದ ಬಿಡುಗಡೆ ಈ ಶುಕ್ರವಾರ ಮೈಸೂರಿನಲ್ಲಿ.

* * * * *

ಕನ್ನಡ ವಿಶ್ವಕೋಶ ರಚನೆಯ ನಿರ್ಧಾರವನ್ನು ಸರಕಾರ ಕೈಕೊಂಡು ಒಂದು ದಶಕವೇ ಸಂದಿದೆ. ವಿಶ್ವಕೋಶದ ಕಾರ್ಯಾಲಯ, ಪ್ರತ್ಯೇಕ ನಿರ್ದೇಶಕರು, ಕಾರ್ಯನಿರ್ವಾಹಕ ಅಧಿಕಾರಿ, ಸಿಬ್ಬಂದಿ ಎಲ್ಲ ನೇಮಕಗಳೂ ಆದುವು. ಸಾಹಿತ್ಯ-ಸಂಸ್ಕೃತಿ ಅಭಿವೃದ್ಧಿ ಶಾಖೆ ಎಂಬ ದೊಡ್ಡ ಹೆಸರು. ಕೆಲಸ ಆದದ್ದು ಮಾತ್ರ ಬಹಳ ಕಡಮೆ. ಭಾರೀ ಪ್ರಮಾಣದಲ್ಲಿದ್ದುದೊಂದೇ — ವೆಚ್ಚವಾದ ಹಣ. ಲೆಕ್ಕವಿಲ್ಲದಷ್ಟು ಸಮಿತಿಗಳು, ಸಭೆಗಳು. ಟಿ. ಎ. ಡಿ. ಎ. ಹತ್ತು ಲಕ್ಷ ರೂಪಾಯಿ ಕರಗಿಯೇ ಹೋಯಿತು. 'ಸರಕಾರ ವಿಶ್ವಕೋಶ ರಚಿಸುತ್ತಿದೆ' ಎಂದೊಡನೆ ಜನ ನಗು ವಂತಾಯಿತು.

ಕವಿ ಕಾವ್ಯ ಪಕ್ಷಪಾತಿ ಶಂಕರಗೌಡರು ರಾಜ್ಯದ ವಿದ್ಯಾಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದ್ದು ಅಂತಹ ಪರಿಸ್ಥಿತಿಯಲ್ಲಿ. ಯೋಜನೆ ಹೀಗೆಯೇ ತೆವಳಿದರೆ ಕನ್ನಡ ವಿಶ್ವ ಕೋಶ ಕನಸಾಗಿಯೇ ಉಳಿದೀತು — ಎಂದು ಅವರು ಮನಗಾಣಲು ಹೆಚ್ಚು ಕಾಲ ಹಿಡಿಯಲಿಲ್ಲ. ಯಾವುದಾದರೂ ವಿಶ್ವವಿದ್ಯಾಲಯಕ್ಕೆ ಈ ಕೆಲಸ ವಹಿಸಿಕೊಡುವು ದೊಂದೇ ದಾರಿ ಎಂದು ಅವರಿಗೆ ತೋರಿತು. ನಮ್ಮ ನಾಡಿನಲ್ಲಿ ಆ ಹೊಣೆ ಹೊರಲು ಸಮರ್ಥವಾಗಿ ಕಂಡ ಕೇಂದ್ರ ಒಂದೇ: ಆಚಾರ್ಯ ದೇಜಗೌ ಅಧ್ಯಕ್ಷರಾಗಿದ್ದ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ.

ಸರಕಾರಕ್ಕೂ ವಿಶ್ವವಿದ್ಯಾನಿಲಯಕ್ಕೂ ಈ ಸಂಬಂಧವಾಗಿ ಒಪ್ಪಂದವಾಯಿತು.

ಮಾನಸಗಂಗೋತ್ರಿಯಲ್ಲಿ ವಿಶ್ವಕೋಶ ಪುನರ್ಜನ್ಮ ಪಡೆಯಿತು. ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸರ್ವಜ್ಞಾನ ಸಂಗ್ರಹ ಕಾರ್ಯ ಆರಂಭವಾಯಿತು.

*   *   *   *   *

ನೂತನ ಸಂಪಾದಕ ಮಂಡಲಿ. ದಕ್ಷ ಸಂಪಾದಕ ಸಮಿತಿ. ದಿನ, ತಿಂಗಳು, ವರ್ಷಗಳ ಲೆಕ್ಕವಿಟ್ಟು, ಗಡಿಯಾರದ ಮೇಲೆ ಕಣ್ಣಿಟ್ಟು, ದುಡಿಮೆ.

ಈ ಸಂಬಂಧದಲ್ಲಿ ಒಂದೆ ದುಡಿದವರಿಗೆ ವಿಶ್ವಕೋಶದ ಸ್ಪಷ್ಟ ಕಲ್ಪನೆಯೇ ಇದ್ದಂತೆ ತೋರಲಿಲ್ಲ. ಬಹಳ ಜನರಂತೂ, ಎನ್‌ಸೈಕ್ಲೊಪೀಡಿಯಾ ಬ್ರಿಟಾನಿಕಾ ದಲ್ಲಿದ್ದುದನ್ನು ಭಾಷಾಂತರ ಮಾಡಿದರಾಯಿತು ಎಂದು ಭಾವಿಸಿದಂತಿತ್ತು. ಕೃತಿ ಸ್ವಾಮ್ಯ, ಕೃತಿಚೌರ್ಯ ಪದಗಳ ಅರ್ಥವೂ ಕೆಲವರಿಗೆ ತಿಳಿದಂತೆ ಇರಲಿಲ್ಲ. ಹತ್ತಿಪ್ಪತ್ತು ಪುಟ ಬೇಕು ಎಂದರೆ, ಇನ್ನೂರು ಮುನ್ನೂರು ಪುಟಗಳ 'ಲೇಖನ' ಬರೆದವ ರಿದ್ದರು! ಪರಿಷ್ಕರಣ ಕಾರ್ಯವಂತೂ ನಾಸ್ತಿ.

ಈ ಎಲ್ಲ ಅರಾಜಕತೆಯನ್ನು ತೊಡೆದು, ಕಾರ್ಯವಿಧಾನವನ್ನು ಸುವ್ಯವಸ್ಥಿತ ಗೊಳಿಸುವುದೇ ಪ್ರಥಮ ಹೊಣೆಯಾಯಿತು.

ವೇಜಗೌರಿಗೆ ಹಲವು ಭುಜಗಳು. ಕಾರ್ಯನಿರ್ವಹಿಸಬಲ್ಲ ಪ್ರತಿಭಾವಂತರಿ ಗಾಗಿ ಅವರು ಶೋಧ ನಡೆಸಿದರು. ಅಲ್ಲಿಂದ ಇಲ್ಲಿಂದ ಅವರ ಆಯ್ಕೆ – ಅದಕ್ಕೆ ದಕ್ಷತೆ ಯೊಂದೇ ಆಧಾರ.

ಕಾಲಕಾಲಕ್ಕೆ ಸಂಪಾದಕ ಮಂಡಲದ ಸಭೆ. ಆಗಾಗ್ಗೆ ಸಂಪಾದಕರ ಸಮಿತಿಯ ಸಭೆ. ತಿಂಗಳು ಮುಗಿದೊಡನೆ ವರದಿ.

ಅಂಥದೊಂದು ವರದಿಯ ರೂಪ ಹೀಗೆ:

೧. ಕೈಸೇರಿದ ಲೇಖನಗಳು .... .... ೯೧

೨. ಸಂಪಾದಕವರ್ಗ (ಗೌರವ ಸಂಪಾದಕರನ್ನೂ ಒಳಗೊಂಡು) ಪರಿಷ್ಕರಿಸಿದ ಲೇಖನಗಳು.

—ಮಾನವಿಕ .... ೫೧

—ವಿಜ್ಞಾನ ಮತ್ತು ವೈದ್ಯಶಾಸ್ತ್ರ .... ೪೪

೩. ಸಂಯೋಜಕ ಸಂಪಾದಕರು ಅಂತಿಮವಾಗಿ ಪರಿಶೀಲಿಸಿ ಮುದ್ರಣಾಲಯಕ್ಕೆ ಕಳುಹಿಸಲು ಸಿದ್ಧಗೊಳಿಸಿದ ಲೇಖನಗಳು .... .... ೮೮

೪. ಲೇಖನಗಳಿಗಾಗಿ ಮಾಡಿದ ಹೊಸ ಕೋರಿಕೆ .... ೨೦

೫. ಉಪಸಮಿತಿಗಳ ಅಧ್ಯಕ್ಷರೂ ಸದಸ್ಯರೂ ಪರಿಶೀಲಿಸಿದ ಲೇಖನಗಳು. .... .... ೯೭

| | | | |
|---|---|---|---|
| ೬. ಟೈಪಾದ ಲೇಖನಗಳು | .... | .... | ೩೫೭ |
| ೭. ಭಾಷಾಂತರಿಸಿದ ಲೇಖನಗಳು | .... | .... | ೯ |

ಹೀಗೆ ಶಾಸ್ತ್ರೀಯ ರೀತಿಯ ಕೆಲಸ ಮುಂದುವರಿಯಿತು.

* * * * *

ರಾಜ್ಯೋತ್ಸವ ಆಚರಣೆಯ ವೇಳೆಗೆ ಪ್ರಥಮ ಸಂಪುಟವನ್ನು ಹೊರತರಬೇಕು. ಹೇಗೆ? ಸರಕಾರೀ ಮುದ್ರಣಾಲಯದ ನಿರ್ದೇಶಕ ಶ್ರೀರಾಮರು ಅಸಾಧ್ಯವಾದುದನ್ನೂ ಸಾಧ್ಯಗೊಳಿಸಬಹುದೆಂದು ಭಾವಿಸುವ ಶ್ರದ್ಧಾವಂತ. ಆದರೆ 'ಹಸ್ತಪ್ರತಿ' ಒಂದೇ ಸಮನೆ ಬರುತ್ತಿರಬೇಕು. ಪ್ರಧಾನ ಸಂಪಾದಕ ದೇಜಗೌರಿಗೆ ಆತಂಕ. ಆಹ್ವಾನಿತ ಸಂಪಾದಕ ಡಾ. ಹಾಮಾನಾಯಕರಿಗೂ ಅಷ್ಟೆ. ಸಂಯೋಜಕ ಸಂಪಾದಕ ಎನ್. ಪ್ರಹ್ಲಾದರಾಯರು, ಮಾನವಿಕ – ವಿಜ್ಞಾನ ಸಂಪಾದಕರಾದ ಮೈಲಾರರಾಯರು, ಜಿ. ಟಿ. ನಾರಾಯಣರಾಯರು, ಗೌರವ ಸಂಪಾದಕರಾದ ಡಾ. ವೀರಪ್ಪ – ಡಾ. ಶಿವಪ್ಪ, ಕಾರ್ಯನಿರ್ವಾಹಕ ಸಂಪಾದಕ ಕೆ. ಟಿ. ವೀರಪ್ಪ ಎಲ್ಲರಿಗೂ ಕಾತರ.

ಎಲ್ಲರೂ ಉರಿಸಿದ್ದು 'ನಡುವಿರುಳಿನ ದೀಪ'ವನ್ನು. ಬೆಳಗ್ಗೆ ೮ ರಿಂದ ರಾತ್ರಿ ೮ರ ವರೆಗೆ ದುಡಿಮೆ; ಮುಂದೆ ೭ರಿಂದ ರಾತ್ರಿ ೯ರ ವರೆಗೆ. ವಾರದ ೭ ದಿನಗಳಲ್ಲೂ ಕೆಲಸ.

ಈ ಸಮರ್ಪಣಭಾವವೊಂದು ಅಂಟುಜಾಡ್ಯ. ಮೈಸೂರಿನ ಕಾರ್ಯಾಲಯ, ಬೆಂಗಳೂರಿನ ಮುದ್ರಣಾಲಯ. ಎರಡು ಕಡೆಗಳಲ್ಲೂ ಇದೇ ಬೇಗೆ. ಅಚ್ಚು ಕೂಟಕ್ಕೆ ಧಾವಿಸಿ ಬಂದು, ಕರಡು ತಿದ್ದಿ, 'ಓಕೆ' ಕೊಡುವ ಸಂಪಾದಕರಿಗಂತೂ ಹಗಲೂ ಒಂದೇ, ಇರುಳೂ ಒಂದೇ.

ಅಂತೂ ೨೧ರ ವೇಳೆಗೆ ಸಂಪುಟ ಸಿದ್ಧ. ಅಲ್ಲಿಗಾಯಿತು, ಜ್ಞಾನಯಜ್ಞದ ಮೊದಲ ಹಂತ.

* * * * *

ಈ ದುಡಿಮೆಯ ಸಂದೇಶವೇನು?

ಭಾರೀ 'ಸಂಕಟ' ರಾಷ್ಟ್ರವ್ಯಾಪಿಯಾಗಿ, ರಾಜಕೀಯ ಕ್ಷೇತ್ರದ ಅಸ್ಥಿರತೆ ಇತರ ಕ್ಷೇತ್ರಗಳನ್ನು ಆವರಿಸಲು ಯತ್ನಿಸುತ್ತಿರುವಾಗ, ರಾಷ್ಟ್ರವನ್ನು ಮುನ್ನಡೆಸುವ ಶಕ್ತಿಗಳು ಕಾಲದ ಆಹ್ವಾನಕ್ಕೆ ತುತ್ತಾಗಿರುವಾಗ, ಸುತ್ತುಮುತ್ತೆಲ್ಲವನ್ನು ನಿರಾಸೆ ಕವಿದಂತಹ ಭಾವನೆಯಾಗುವುದು ಸಹಜ. ಇಂತಹ ಪರಿಸ್ಥಿತಿಯಲ್ಲೂ ನಾಡಿನ – ರಾಷ್ಟ್ರದ – ಬಗೆಗೆ ಭರವಸೆ ಮೂಡುವುದು ಸಾಧ್ಯ. ಅಂತಹ ಭರವಸೆ ದೊರೆಯುವುದು ಅರ್ಪಿತಭಾವದಿಂದ ದುಡಿಯುವ ಅಮೂಲ್ಯ ಚೇತನಗಳಿಂದ.

ಮೈಸೂರಿನಲ್ಲಿ ಉರಿಯುತ್ತಿರುವ ಇರುಳಿನ ಬೆಳಕು ಆ ಭರವಸೆಯನ್ನು ನೀಡುತ್ತದೆ.

೨೩–೧೧–೧೯೬೯

# ಶಿಕ್ಷಣ ಸಂಕೇತ

ಇತ್ತೀಚೆಗೆ ನೋಡಿದ ಎರಡು ಛಾಯಾ ಚಿತ್ರಗಳು ನೆನಪಿನಲ್ಲಿ ಉಳಿಯುವಂಥವು :

ಒಂದನೆಯದು – ಹೊಚ್ಚ ಹೊಸದಾದ, ಇಡೀ ಭಾರತವೇ ವ್ಯಾಪ್ತಿಯಾಗುಳ್ಳ, ಜವಾಹರಲಾಲ ನೆಹರೂ ವಿಶ್ವವಿದ್ಯಾಲಯದ ಪ್ರಾರಂಭೋತ್ಸವದ ಸಂದರ್ಭ. ರಾಷ್ಟ್ರಪತಿ, ಪ್ರಧಾನಿ, ಕುಲಪತಿ ಮತ್ತಿತರರು ಮೆರವಣಿಗೆಯಲ್ಲಿ ಆಗಮಿಸುತ್ತಿದ್ದಾರೆ. ಕಪ್ಪು ಶಿರಸ್ತ್ರಾಣಗಳಿಲ್ಲ, ನಿಲುವಂಗಿಗಳಿಲ್ಲ. ಭುಜಗಳನ್ನು ಬಳಸಿ ಎದೆಯ ಬಳಿ ತ್ರಿಕೋನಾಕೃತಿಯಲ್ಲಿ ಸಂಧಿಸುವ ಸ್ಕಾರ್ಫ್ ಪ್ರತಿಯೊಬ್ಬರಿಗೂ.

ಎರಡನೆಯದು – ಜವಾಹರಲಾಲ ನೆಹರೂ ವಿಶ್ವವಿದ್ಯಾಲಯದ ಘಟಿಕೋತ್ಸವ. ಸೊಗಸಾದ ಉಡುಪು ಧರಿಸಿ, ಕುಲಪತಿ ಪಾರ್ಥಸಾರಥಿಯವರಿಂದ ಡಿಪ್ಲೊಮಾ ಸ್ವೀಕರಿಸುತ್ತಿರುವ ವಿದ್ಯಾರ್ಥಿನಿ. ಆಕೆಯ ಭುಜದ ಮೇಲೂ ಸ್ಕಾರ್ಫ್. ಕುಲಪತಿಯೂ ಸ್ಕಾರ್ಫ್‌ಧಾರಿ.

ದಿಲ್ಲಿ ಕುರುಕ್ಷೇತ್ರದಲ್ಲಿ ಏನೇ ನಡೆಯುತ್ತಿರಲಿ, ಆ ನಗರದ ಹೊರಗೆ ಸಾವಿರ ಎಕರೆ ಸ್ಥಳದಲ್ಲಿ ನಿರ್ಮಾಣವಾಗುತ್ತಿರುವ ವಿಶ್ವವಿದ್ಯಾಲಯದ ಕ್ಯಾಂಪಸಿನ ವೈಖರಿಯೇ ಬೇರೆ. ಈ ವಿಶ್ವವಿದ್ಯಾಲಯ ತುಳಿಯುತ್ತಿರುವುದು ಹೊಸ ದಾರಿ. ಪಠ್ಯವಿಷಯಗಳಲ್ಲಿ, ಬೋಧನ ವಿಧಾನಗಳಲ್ಲಿ ನಾವೀನ್ಯ. ಸಮಾರಂಭಗಳಲ್ಲಿ ಧರಿಸುವ ಉಡುಪುಗಳಲ್ಲೂ ಅಷ್ಟೆ.

* * * * *

ನಮ್ಮ ವಿಶ್ವವಿದ್ಯಾನಿಲಯಗಳ ಘಟಿಕೋತ್ಸವಗಳಲ್ಲಿ ಆಂಗ್ಲರ ಆಕ್ಸ್‌ಫರ್ಡ್, ಕೇಂಬ್ರಿಜ್‌ಗಳನ್ನು ಅನುಸರಿಸಿ ತೊಡುವ ಪೋಷಾಕಿನ ಬಗೆಗೆ ಈ ನಡುವೆ ಜಿಜ್ಞಾಸೆ ಹೆಚ್ಚಿದೆ. ಎರಡು ದಶಕಗಳಿಗಿಂತಲೂ ಹೆಚ್ಚು ಸ್ವಾತಂತ್ರ್ಯ ಅನುಭವಿಸುತ್ತ ಬಂದಿರುವ ಈ ದೇಶದಲ್ಲಿ ಕಾಲ ಧರ್ಮದ ಪ್ರತಿಬಿಂಬವಾಗಿ ಪದವೀಪ್ರದಾನ ಉತ್ಸವಗಳ ಉಡುಪು ಬದಲಾಗುವುದು ಬೇಡವೆ? ಬೇಕು ಎಂದು ಕೆಲವರು; ಬೇಡ ಎಂದು ಬೇರೆ ಕೆಲವರು.

ಇಂತಹ ಸಂದರ್ಭಗಳಲ್ಲಿ ಭಾರತೀಯತ್ವವನ್ನು ಅಳವಡಿಸಿಕೊಳ್ಳಬೇಕು ಎಂದು ಒಂದು ತಂಡ ವಾದಿಸಿದರೆ, ಇನ್ನೊಂದು ತಂಡ ಈ ಉಡುಗೆ ಶತಮಾನಗಳಿಂದ ಲೋಕದಾದ್ಯಂತ ನಡೆದು ಬಂದಿರುವ ಪದ್ಧತಿ, ಬಿಟ್ಟುಕೊಡಬಾರದು – ಎನ್ನುತ್ತದೆ.

ಈ ಪ್ರತಿವಾದ ನಿಜವೆ?

ಶಿಕ್ಷಣಲೋಕದ ಪದವಿ ಪೋಷಾಕುಗಳ ಕಥೆಯನ್ನಿಷ್ಟು ನೋಡೋಣ.

ನೀಳ ಉಡುಪು, ಶಿರಸ್ತ್ರಾಣ, ಅದರ ಕೆಳಗಿಂದ ಭುಜದ ಮೇಲೆ ಹರಿಯುವ ಹುಡ್ – ಇವು ಹುಟ್ಟಿದ್ದು ಮಧ್ಯಯುಗದಲ್ಲಿ, ಇಂಗ್ಲೆಂಡಿನಲ್ಲಿ. ಇದು ಧರ್ಮಗುರುಪೀಠಗಳ ಸ್ನಾತಕರಿಗೋಸ್ಕರ ಸಿದ್ಧವಾಯಿತು. ಆಕ್ಸ್‌ಫರ್ಡ್, ಕೇಂಬ್ರಿಜ್‌ಗಳಲ್ಲಿ ಇವು ಬಳಕೆಗೆ ಬಂದುದಾದರೂ ಮೇಲಿನ ಹಿನ್ನೆಲೆಯಲ್ಲೇ. ಈ ವೈಭವ ಕಣ್ಣು ಕುಕ್ಕುವಂತಾಗಿ, ಶ್ರೀಮಂತರು ಹಾಗೂ ಬಡವರ ಮಕ್ಕಳ ನಡುವೆ ಅಂತರ ಹೆಚ್ಚಿ ಹದಿನಾರನೆಯ ಶತಮಾನದ ಆರಂಭದಲ್ಲಿ ಅತಿರೇಕದ ಸುಧಾರಣೆಯ ಶಾಸನವನ್ನು ಅರಸು ಎಂಟನೆಯ ಹೆನ್ರಿ ಜಾರಿಗೆ ತಂದ.

೧೫೨೦ ರಲ್ಲಿ ಪ್ಯಾರಿಸ್ ವಿಶ್ವವಿದ್ಯಾನಿಲಯದ ಮಾದರಿಯನ್ನು ಆಕ್ಸ್‌ಫರ್ಡ್, ಕೇಂಬ್ರಿಜ್‌ಗಳು ಅನುಕರಿಸಿ, ಚಚ್ಚೌಕ ಟೋಪಿ ತಲೆಯ ಮೇಲಿರಬೇಕೆಂದು ವಿಧಿಸಿದುವು. ಈ ಟೋಪಿಗೆ ಸಂಬಂಧಿಸಿ ೧೫೪೯ ರಿಂದ ೧೫೮೦ ರ ತನಕ ಅನೇಕ ಸಲ ಬದಲಾವಣೆಗಳಾದುವು.

ಇಪ್ಪತ್ತನೆಯ ಶತಮಾನದಲ್ಲಿ (೧೯೩೨–೩೪) ಕೇಂಬ್ರಿಜ್ ವಿಶ್ವವಿದ್ಯಾಲಯದ ಸೆನೆಟ್‌ನ ಉಪಸಮಿತಿ ಉಡುಪುಗಳ ವಿಷಯದಲ್ಲಿ ದೀರ್ಘ ಚರ್ಚೆ ನಡೆಸಿ, ಮೂರು ವರದಿಗಳನ್ನು ಸಲ್ಲಿಸಿತು. ಅದರ ಸಲಹೆಯಂತೆ ನಿಯಮಗಳು ಪರಿಷ್ಕರಿಸಲ್ಪಟ್ಟುವು.

ಆಕ್ಸ್‌ಫರ್ಡಿನ ನಿಯಮಗಳು ೧೭೭೦ ರಿಂದೀಚೆಗೆ ಬದಲಾಗದೆ, ಉಡುಪುಗಳ ವಿಷಯದಲ್ಲಿ ಗೊಂದಲ ಉಂಟಾಗಿ, ಹಿರಿಯ ಸಿಂಪಿಗರ ರಾಷ್ಟ್ರೀಯ ಮಂಡಳಿಯ ಆಕ್ಸ್‌ಫರ್ಡ್ ಶಾಖೆ, ಪದವೀಧರರ ಉಡುಪುಗಳು ಹೇಗಿರಬೇಕೆಂದು ತಾನೇ ನಿರ್ಧರಿಸಿ, ಕ್ಯಾಟಲಾಗ್ ಸಿದ್ಧಪಡಿಸಿ ವಿಶ್ವವಿದ್ಯಾಲಯ ಅದನ್ನು ಒಪ್ಪುವಂತೆ ಮಾಡಿತು.

* * * * *

ಇಂಗ್ಲೆಂಡಿಗಿಂತ ಅದೆಷ್ಟೋ ಪಾಲು ವಿಸ್ತಾರವಾದದ್ದಲ್ಲವೆ ಜಗತ್ತು ?

ಅಮೆರಿಕದ ಶೈಕ್ಷಣಿಕಕ್ಷೇತ್ರದ ಪದವಿ ಸಂಕೇತದ ಉಡುಪುಗಳನ್ನು ನಿರ್ಧರಿಸಿದವರು ಅಮೆರಿಕದವರೇ. ಇಂತಹ ಪೋಷಾಕು ದೇಶದಲ್ಲೆಲ್ಲ ಏಕಪ್ರಕಾರವಾಗಿರಬೇಕೆಂದು ಅಂತರ ಕಾಲೇಜು ಆಯೋಗವೊಂದು ೧೮೯೩ ರಲ್ಲಿ ನಿಯಮಗಳನ್ನು ರೂಪಿಸಿತು. ಪದವಿ ನೀಡುವ ೫೦೦ ಕ್ಕೂ ಹೆಚ್ಚು ಸಂಸ್ಥೆಗಳು ಇಂದಿಗೂ ಅಂತೆಯೇ ನಡೆಯುತ್ತಿವೆ.

ಮೊನ್ನೆಯವರೆಗೂ ಬ್ರಿಟಿಷರ ಅಧೀನದಲ್ಲಿದ್ದ ಮಾಲ್ಟಾ ರಾಯಲ್ ಯೂನಿವರ್ಸಿಟಿ ಅನುಸರಿಸುವುದು ಆಂಗ್ಲ ಪದ್ಧತಿಯನ್ನು. ಆದರೆ ಇಲ್ಲಿ ಹುಡ್ ಇಲ್ಲ.

ಹದಿನೆಂಟನೆಯ ಶತಮಾನದಲ್ಲಿ ಫ್ರಾನ್ಸಿನಲ್ಲಿ ಪದವಿ ಪೋಷಾಕಿನ ಬಳಕೆ ಕಡಿಮೆಯಾಗುತ್ತ ಬಂತು. (೧೭೯೩ ರಲ್ಲಿ – ಮಹಾಕ್ರಾಂತಿಯ ಬಳಿಕ – ಫ್ರಾನ್ಸಿನ ವಿಶ್ವವಿದ್ಯಾಲಯಗಳೆಲ್ಲ ರದ್ದಾಗಿಯೇ ಹೋದುವು!) ಮುಂದೆ ಫ್ರೆಂಚರು ತಮ್ಮದೇ

ಪ್ರೈಮರಿಯ ಶೈಕ್ಷಣಿಕ ಉಡುಪನ್ನು ಅಣಿಗೊಳಿಸಿದರು. ಅಲ್ಲಿ ಹುಡ್ ಇಲ್ಲ. ಎಡ ಭುಜದ ಮೇಲೊಂದು ರೇಶಿಮೆಯ ಸ್ಕಾರ್ಫ್ ಇದೆ.

*   *   *   *   *

ಇದೀಗ ಪದವಿ ಪೋಷಾಕುಗಳ ಕಥೆ. ಇದರಿಂದ ಸ್ಪಷ್ಟವಾಗುವ ಅಂಶವಿದು :

ಏತ್ರ ಶತಮಾನಗಳಿಂದಲೂ ಪದವಿ ಪೋಷಾಕು ಏಕಪ್ರಕಾರವಾಗಿತ್ತು ಎನ್ನುವುದು ಸುಳ್ಳು. ಜಗತ್ತಿನ ಎಲ್ಲ ವಿಶ್ವವಿದ್ಯಾನಿಲಯಗಳಲ್ಲೂ ಈ ಉಡುಪು ಒಂದೇ ರೀತಿಯದು ಎನ್ನುವುದು ಸುಳ್ಳು.

ಹಾಗಾದರೆ, ಪೋಷಾಕಿನ ಪಾವಿತ್ರ್ಯದ ಮಾತು ಬರೀ ಬುರುಡೆ.

ನಮಗೆ ತಿಳಿಯದೆ? ಪಾವಿತ್ರ್ಯವನ್ನು ಯಾವುದಕ್ಕೆ ಬೇಕಾದರೂ ಕಲ್ಪಿಸಬಹುದು. ಬಿಂಬರೂಪಣೆಗೆ, ಸಾಮಾಜಿಕ ಅನುಸರಣೆಗೆ, ಸಂಕೇತಗಳು ಬೇಕು ; ವಿಧಿವಿಧಾನಗಳು ಬೇಕು ; ಬುದ್ಧಿವಂತ ಮಾನವನ ಹಿಕ್ಮತ್ತುಗಳು ಇವು. ತಮಾಷೆಯಾಗಿ ತೋರಬಹುದಾದರೂ ಸ್ವಾಗತಾರ್ಹ.

ಇನ್ನೊಬ್ಬರನ್ನೆ ಸದಾ ಅನುಕರಿಸು, ಆಗ ಮಾತ್ರ ಮೋಕ್ಷ – ಎಂದು ಮಾತ್ರ ಯಾವ ಶಾಸ್ತ್ರದಲ್ಲೂ ಹೇಳಿಲ್ಲವಲ್ಲ ?

ನಲಂದಾ ತಕ್ಷಶಿಲೆ ವಿದ್ಯಾಲಯಗಳನ್ನು ಎರಡು ಸಾವಿರ ವರ್ಷಗಳಿಗೂ ಹಿಂದೆ ನಾವು ಹೊಂದಿದ್ದೆವು. ಲೋಕದ ಹತ್ತು ಮೂಲೆಗಳಿಂದ ವಿದ್ಯಾರ್ಜನೆಗೆ ಇಲ್ಲಿಗೆ ಬರುತ್ತಿದ್ದರು. ನಮ್ಮ ಜಿನ್ನಸನ್ನು ನಾವು ತಟ್ಟಿಕೊಳ್ಳಲು ಇಷ್ಟು ಸಾಕು.

ಈಗ ಎದೆಯ ಮೇಲೆ ಕೈ ಇಟ್ಟು ಒಂದು ಪ್ರಶ್ನೆಗೆ ನಾವು ಉತ್ತರ ನೀಡಬೇಕು. ವಿಶ್ವವಿದ್ಯಾಲಯಗಳ ಪದವಿ ಪೋಷಾಕಿಗೆ ಸಂಬಂಧಿಸಿ ಹೊಸ ಭಾರತೀಯ ಪರಂಪರೆಯೊಂದನ್ನು ನಿರ್ಮಿಸುವ ಅಂತಸ್ಸತ್ವ ನಮಗಿದೆಯೊ ? ಇಲ್ಲವೊ ?

೨೧-೧೨-೧೯೬೯

# ಹಾಡುತ್ತಲೇ ಇರಬೇಕು

"ಬಂಗಾಳಿ ಸಾಂಸ್ಕೃತಿಕ ಕಾರ್ಯಕ್ರಮದ ವಿಷಯ ತಿಳಿಯಿತೆ ?"

"ಹೌದು. ಬರ್ತೀನಿ."

ಫೋನ್ ಮಾಡಿದವರು ಶ್ರೀ ಬೋಸ್, ವಿಶ್ವೇಶ್ವರಯ್ಯ ವಸ್ತುಸಂಗ್ರಹಾಲಯದ ಮುಖ್ಯಾಧಿಕಾರಿ.

ಕಾರ್ಯಕ್ರಮ – ಸಾಂಸ್ಕೃತಿಕ. ಬೋಸರು – ವಿಜ್ಞಾನಿ. ಇದಲ್ಲವೆ ಮಹತ್ವದ್ದು?

ಕನ್ನಡಿಗರಾದ ನಾವು ಧಾರಾಳವಾಗಿ ಒಪ್ಪಬಹುದು: ಬಂಗಾಳಿಗಳು ಸ್ವಾಭಿಮಾನಿಗಳು, ಕ್ರಾಂತಿಕಾರರು, ಸಾಹಿತ್ಯಪ್ರಿಯರು, ಕಲಾರಾಧಕರು. ಕರ್ನಾಟಕದ ರಾಜಧಾನಿಯಲ್ಲಿದ್ದರೂ ದೂರದ ಲಂಡನ್ನಿನಲ್ಲಿದ್ದರೂ ಅವರ ಸ್ವಭಾಷಾಪ್ರೇಮ ಮಸಕಾಗುವುದಿಲ್ಲ. ದೂರವಿದ್ದಷ್ಟೂ ಅದು ತೀಕ್ಷ್ಣತರವೇ ಎನ್ನಬಹುದು.

ಕಾರ್ಯಕ್ರಮವನ್ನು ಏರ್ಪಡಿಸಿದವರು ರಾಜ್ಯದ ವಾರ್ತಾ–ಪ್ರವಾಸ ಇಲಾಖೆಯವರು. ನಿರ್ದೇಶಕ ಮರಿಪುಟ್ಟಣ್ಣನವರಿಗೂ ಉಪನಿರ್ದೇಶಕ ಆನಂದರಾಯರಿಗೂ ಬಿಡುವಿಲ್ಲದ ದುಡಿಮೆ. ಬಂಗಾಳದಿಂದ ಬಂದವರು ನಾಲ್ವತ್ತರಷ್ಟು ಜನ ಕಲಾವಿದ ಅತಿಥಿಗಳು, ಚಲಚ್ಚಿತ್ರ ನಿರ್ದೇಶಕರೊಬ್ಬರು. ಸಾಲದುದಕ್ಕೆ ಬಂಗಾಳದ ವಾರ್ತಾ ಮಂತ್ರಿ ಬೇರೆ. ಒಂದೆಡೆ ಸಂಗೀತ, ನೃತ್ಯ–ನಾಟಕ; ಇನ್ನೊಂದೆಡೆ ಬಂಗಾಳಿ ಚಿತ್ರಗಳ ಪ್ರದರ್ಶನ. "ನಮೊಶ್ಕಾರ್." "ನಮೊಶ್ಕಾರ್."

ಆ ದಿನಗಳಲ್ಲಿ ಮಾತು ಕಡಮೆ. "ಏನು ಸಮಾಚಾರ?" ಎಂದು ಕೇಳಬೇಕಾದುದೇ ಇಲ್ಲ. ಸಮಾಚಾರವೆಲ್ಲ ಬಂಗಾಳಿ ಸಾಂಸ್ಕೃತಿಕ ಸಮಾರಂಭವನ್ನು ಕುರಿತದ್ದು.

"ಹೋಗಿದ್ದಿರಾ?"

"ಹುಂ. ಹುಂ."

"ಹೇಗಿತ್ತು?"

"ಸೊಗಸಾಗಿತ್ತು."

* * * * *

ರಾಜ್ಯಗಳ ನಡುವೆ ಸಾಂಸ್ಕೃತಿಕ ನಿಯೋಗಗಳ ವಿನಿಮಯ ಹೊಸತಲ್ಲ. ಸಂಗೀತ ನಾಟಕ ಅಕಾಡಮಿಯವರ ಆಶ್ರಯದಲ್ಲಿ ಇಂತಹ ವಿನಿಮಯ ಆಗಾಗ್ಗೆ ನಡೆಯುತ್ತದೆ.

ಆದರೆ ಬೆಂಗಳೂರಿಗೆ ಬಂದ – ಮೈಸೂರಿಗೂ ಹೋದ – ಈ ತಂಡ ಪಶ್ಚಿಮ ಬಂಗಾಳ ಸರಕಾರದ ವಾರ್ತಾ ಇಲಾಖೆಗೆ ಸೇರಿದ್ದು.

ಟಿಕೆಟು ಕೊಡುತ್ತಿದ್ದಾಗ, ನಮ್ಮ ರಾಜ್ಯದ ವಾರ್ತಾ ಇಲಾಖೆಯ ಗೀತ-ನಾಟಕ ವಿಭಾಗದ ಶಿವಾನಂದ ಅಂದರು:

“ಪಶ್ಚಿಮ ಬಂಗಾಳದ ಗೀತ-ನಾಟಕ ವಿಭಾಗದಲ್ಲಿ ಇನ್ನೂರು ಕಲಾವಿದರಿದ್ದಾರಂತೆ, ಸಾರ್.”

ತಮಗಾದ ವಿಸ್ಮಯವನ್ನು ಬೇರೆಯವರಿಗೂ ಹಂಚುವ ಬಯಕೆ ಈ ಕಲಾವಿದರಿಗೆ.

ಆ ಕಲಾವಿದರು ಇನ್ನೂರು ಜನ. ಐದು ತಂಡಗಳು. ತಮ್ಮ ರಾಜ್ಯದ ನಾನಾ ಸ್ಥಳಗಳಲ್ಲಿ ಇವು ಪ್ರವಾಸ ಮಾಡುತ್ತಲೇ ಇರುತ್ತವೆ. ಒಮ್ಮೊಮ್ಮೆ ರಾಜ್ಯದ ಹೊರಗೆ ಕೂಡಾ.

ಬೆಂಗಳೂರಿಗೆ ಬಂದದ್ದು ಅಂತಹ ಒಂದು ತಂಡ. ‘ಜಾನಪದ ಕಲಾಕೂಟ.’

* * * * *

ಠಾಕೂರರ ಸ್ಮಾರಕವಾಗಿ ನಿರ್ಮಿತವಾದ ರವೀಂದ್ರಕಲಾಕ್ಷೇತ್ರವನ್ನು ಟೀಕಿಸದವರಿಲ್ಲ. ಯಾವ ದೃಷ್ಟಿಯಿಂದ ನೋಡಿದರೂ ಇದು ಅಸಮರ್ಪಕವೇ. ಆದರೂ ದಿನ ಕಳೆದಂತೆ ಆ ಸೌಧದ ಮಹತ್ವ ಹೆಚ್ಚುತ್ತಲೇ ಬಂದಿದೆ. ಸರಕಾರೀ ಕಾರ್ಯಕಲಾಪಗಳಿಗೆ ವಿಧಾನಸೌಧ ಎಷ್ಟು ಅಗತ್ಯವೋ ಅಷ್ಟೇ ಅಗತ್ಯ ಸಾಂಸ್ಕೃತಿಕ ಸಮಾರಂಭಗಳಿಗೆ ರವೀಂದ್ರ ಕಲಾಕ್ಷೇತ್ರ. ಭಾರೀ ಬಾಡಿಗೆ ತೆರುವವರೂ ಇಲ್ಲಿ ಕ್ಯೂ ನಿಲ್ಲಬೇಕು.

ಕಟ್ಟಡಕ್ಕೂ ಆತ್ಮವಿರುತ್ತದೆ. ಕಲಾಕ್ಷೇತ್ರದ್ದು ನೊಂದ ಆತ್ಮ. ಕಲ್ಕತ್ತೆಯ ಕಲಾವಿದರು ಮೂರು ಸಂಜೆ ನೀಡಿದ ಕಾರ್ಯಕ್ರಮದಿಂದ ಆ ಆತ್ಮ ತುಸು ತಣಿದಿರಬೇಕು. ರವೀಂದ್ರ ಸಂಗೀತ, ರವೀಂದ್ರರ ನೃತ್ಯ-ನಾಟಕಗಳಾದ ‘ಚಂಡಾಲಿಕ’ ಮತ್ತು ‘ಶ್ಯಾಮಾ’ ಕಲಾವಂತಿಕೆ, ಪ್ರಾಮಾಣಿಕತೆ, ಪ್ರತಿಭೆಗಳಿಂದ ಶೋಭಿಸಿದ ರಂಗಮಂಟಪ. ಕಿಕ್ಕಿರಿದ ಸಭಾಂಗಣ. “ಹೌಸ್ ಫುಲ್, ಟಿಕೆಟುಗಳೇ ಇಲ್ಲ.”

(ಒಬ್ಬರೆಂದರು: “ಇತ್ತೀಚಿಗೆ ಮೈಸೂರು ಸರಕಾರಕ್ಕೆ ಯಾವುದರಿಂದಲಾದರೂ ಲಾಭ ಬಂದಿದ್ದರೆ, ಅದು ಈ ಕಾರ್ಯಕ್ರಮದಿಂದ!”)

ರಸಾಸ್ವಾದನೆಗೆ ಭಾಷೆ ಅಡ್ಡಿಯಾಗಲಿಲ್ಲ. ಬಂಗಾಳಿ ತಿಳಿಯದವರಿಗೆ ರವೀಂದ್ರ ‘ಸಾಹಿತ್ಯ’ದ ಎಲ್ಲ ರುಚಿಗಳ ಸವಿ ದೊರೆಯಲಿಲ್ಲ ನಿಜ: ಆದರೂ ಕಲಾವಿದರು ನೀಡಿದ ರಸಗವಳ ಸಂತೃಪ್ತಿ ನೀಡುವಂತಿತ್ತು.

* * * * *

ಸರಕಾರೀ ಕಲಾವಿದರು. ವೇತನ, ತುಟ್ಟಿಭತ್ತೆ, ದಿನಭತ್ತೆಗಳ ನಿಯಮಗಳು. ಅವಕ್ಕೂ ಮಿಗಿಲಾದುದು ನೀತಿಧೋರಣೆಗಳ ಸಂಕೋಲೆ. ಇವೆಲ್ಲದರ ಒಳ ಹೊರಗನ್ನು ಬಲ್ಲವರು ಶಂಕೆ ಸಂದೇಹಗಳಿಂದ ಬಾಧಿತರಾಗುವುದು ಸಹಜ. ಪಶ್ಚಿಮ ಬಂಗಾಳ ಸರಕಾರದ ಐದು ತಂಡಗಳು ವರ್ಷವಿಡೀ ಆಡುವ ನಾಟಕಗಳು ಯಾವುವು? ಅವು

ಗಳನ್ನು ಬರೆದವರು ಯಾರು? ಹಾಡುವ ಗೀತೆಗಳು ಎಂಥವು? ರಚಯಿತರು ಯಾರು? ಈ ಎಲ್ಲ ಪ್ರಶ್ನೆಗಳಿಗೆ ಉತ್ತರ ಪ್ರಾಯಶಃ ಕಲ್ಕತ್ತೆಯಲ್ಲಿ ದೊರೆಯಬಹುದು. ಸಂಯುಕ್ತರಂಗ ಸರಕಾರ ಅಸ್ತಿತ್ವಕ್ಕೆ ಬರುವುದಕ್ಕೂ ಮುಂಚೆಯೇ ಅಲ್ಲಿ ಸರಕಾರೀ ಕಲಾವಿದರ ತಂಡ ಇಷ್ಟು ದೊಡ್ಡದಾಗಿತ್ತೆ? ಅಥವಾ 'ಸಾಂಸ್ಕೃತಿಕ' ಕಾರ್ಯಕ್ರಮಗಳ ಮಹತ್ವವನ್ನು ಅರಿತ ಹೊಸ ಸರಕಾರ ಸುದ್ದಿ-ಪ್ರಸಿದ್ಧಿ ಶಾಖೆಗಾಗಿ ಹೇರಳ ಹಣ ವೆಚ್ಚ ಮಾಡಲು ನಿರ್ಧರಿಸಿತೆ? ಇದೂ ಸ್ವಾರಸ್ಯಕರವಾದ ಅಂಶ.

ಅದೇನಿದ್ದರೂ ಬೆಂಗಳೂರಿಗೆ ಬಂದ ಸರಕಾರೀ 'ಜಾನಪದ ಕಲಾ ಕೂಟ' ಸಿದ್ಧಾಂತಗಳ ಘೋಷಣೆಗಳ - ಭಾಷಣಗಳ ಸುರುಳಿ ಬಿಚ್ಚಲಿಲ್ಲ. ರವೀಂದ್ರ ಕೃತಿಗಳಲ್ಲಿ ಶಾಂತಿ ಸೌಂದರ್ಯಗಳ ಭವ್ಯದರ್ಶನದ ಹೊರತು ಬೇರೇನು ದೊರೆತೀತು? ರಾಜ್ಯಗಳ ನಡುವಣ ಸುಮಧುರ ಬಾಂಧವ್ಯಕ್ಕೆ, ಭಾರತೀಯತ್ವದ ಅರಿವಿಗೆ, ಇದಕ್ಕಿಂತ ಹೆಚ್ಚಿನದು ಇನ್ನೇನು ಬೇಕು?

ಇಲ್ಲಿರುವುದು ಎಲ್ಲ ಸರಕಾರಗಳೂ ಕಲಿಯಬಹುದಾದ ಪಾಠ.

*   *   *   *   *

ಮೈಸೂರಿನ ರಾಜಧಾನಿಗೆ ಬಂದ ಬಂಗಾಳದ ಮಂತ್ರಿ, "ಕಲ್ಕತ್ತೆಯಲ್ಲಿ ಎಲ್ಲವೂ ಚೆನ್ನಾಗಿಯೇ ಇದೆ; ಈ ಕಲಾವಿದರನ್ನು ಕಂಡಾಗ ನಿಮಗಿದು ಅರ್ಥವಾದೀತು"- ಎಂದರು. ರಾಜಕೀಯದ ಮಾತು. ಪರಿಚಿತವಾದ ಧಾಟಿ. ರವೀಂದ್ರ ಸರೋವರದಲ್ಲಿ ಅಲ್ಲಿ ಅದೇನೋ ಆಯಿತಂತಲ್ಲ. ಆಯಿತು ಎಂಬ ವರದಿ ಸುಳ್ಳು ಎಂದು ತೀರ್ಪು ಕೊಟ್ಟರಲ್ಲ? ಕ್ರಿಕೆಟ್ ಕ್ರೀಡಾಂಗಣದಲ್ಲಿ ನೂಕು ನುಗ್ಗಲಿನ ಫಲವಾಗಿ ಆರು ಜನ ಪ್ರಾಣ ನೀಗಿದರಲ್ಲ?

ಅದು ನಿತ್ಯದ ಬದುಕು. ಅದನ್ನು ಹಸನುಗೊಳಿಸುವ ಬಯಕೆ ಈ ನೃತ್ಯಕ್ಕೆ, ಗೀತಕ್ಕೆ.

ಅರಚುವವರು ಅರಚುತ್ತಲೇ ಇರುತ್ತಾರೆ. ಅಂದ ಮಾತ್ರಕ್ಕೆ ಹಾಡುವವರು ಸುಮ್ಮನಾಗಬೇಕೆ? ಅವರು ಹಾಡುತ್ತಲೇ ಇರಬೇಕು.

೨೮-೧೨-೧೯೬೯

# ಕತ್ತರಿ - ಬೇಕೆ? ಬೇಡವೆ

ಚಲನಚಿತ್ರಗಳನ್ನು ಸೆನ್ಸಾರ್ ಮಾಡಬೇಕೆ, ಬೇಡವೆ? ಇದನ್ನು ಕುರಿತು ವಿ
ಚರ್ಚಿಸತೊಡಗಿದೆ. ನಾವು ಪ್ರಾಪ್ತವಯಸ್ಕರಾಗುತ್ತಿದ್ದೇವೆ ಎನ್ನುವುದಕ್ಕೆ ಇದೊಂ
ಸೂಚನೆ.

ಅಂತಾರಾಷ್ಟ್ರೀಯ ಚಲನಚಿತ್ರ ಉತ್ಸವ ಇತ್ತೀಚೆಗೆ ರಾಷ್ಟ್ರದ ರಾಜಧಾನಿಯ
ನಡೆಯಿತು. ಆ ಸಂದರ್ಭದಲ್ಲಿ ಸೆನ್ಸಾರ್ ಪದ್ಧತಿಯ ಬಗೆಗೆ ಒಂದು ವಿಚಾರಸಂಕಿ
ನಡೆಯಿತು. ಭಾಗವಹಿಸಿದವರು ವಿವಿಧ ದೇಶಗಳ ಚಲಚ್ಚಿತ್ರ ಪ್ರಮುಖರು, ಶಿಕ್ಷ
ತಜ್ಞರು, ಒಬ್ಬ ರಾಜಕಾರಣಿ ಕೂಡಾ.

ಚಲನಚಿತ್ರಗಳ ಪ್ರದರ್ಶನಪೂರ್ವ ವಿಮರ್ಶೆ ಬೇರೆ ರಾಷ್ಟ್ರಗಳಲ್ಲಿ ಹೇಗೆ ನ
ಯುತ್ತದೆ? ಈ ವಿವರ ಸ್ವಾರಸ್ಯಕರವಾಗಿದೆ.

* * * * *

ಬೆಲ್ಜಿಯಂನಲ್ಲಿ ಸಿದ್ಧವಾದ ಚಲಚ್ಚಿತ್ರಗಳ ಮೇಲೆ ನಿರ್ಬಂಧವಿಲ್ಲ. ಆದರೆ ಒಂ
ವಿಷಯದಲ್ಲಿ ಅಲ್ಲಿ ಎಚ್ಚರವಹಿಸುತ್ತಾರೆ. 'ಹದಿನಾರು ವರ್ಷಗಳ ಕೆಳಗಿನ ಕಿರಿಯ
ನೋಡಲು ಯಾವುದೇ ಚಿತ್ರ ಯೋಗ್ಯವಾಗಿದೆಯೆ?' ಎಂಬ ಅಂಶ. ಊಟ ಪಾನೀಯ
ಗಳಂತೆ ಲೈಂಗಿಕ ಪ್ರವೃತ್ತಿಯೂ ಜೀವನದ ಒಂದು ಭಾಗ ಎಂದು ಬೆಲ್ಜಿಯಮಿನ ಜನ
ಭಾವನೆ. ಪರಸ್ಪರ ಲೈಂಗಿಕ ಆಕರ್ಷಣೆಯ ದೃಶ್ಯಗಳನ್ನು ಅವರು ವಿರೋಧಿಸುವುದಿಲ್ಲ

ಇನ್ನೊಂದು ಧ್ರುವ ಆಸ್ಟ್ರೇಲಿಯ. ಇಲ್ಲಿನ ಸೆನ್ಸಾರ್ ಮಂಡಳಿಯ ಸದಸ್ಯರ
ಇವರು ಕಸ್ಟಮ್ಸ್ ಖಾತೆಯ ಮಾಜೀ ಅಧಿಕಾರಿಗಳು. (ಈ ಕಸ್ಟಮ್ಸ್‌ಗೂ ಸಂಸ್ಕೃತಿಗ
ಸಂಬಂಧವಿಲ್ಲ. ಇದು ಸುಂಕ!) ಒಬ್ಬ ಸದಸ್ಯ ಯಂಗ್ ವಿಮೆನ್ಸ್ ಕ್ರಿಶ್ಚಿಯನ
ಅಸೋಸಿಯೇಶನಿನ ಮಾಜಿ ಕಾರ್ಯದರ್ಶಿ. ಒಬ್ಬರು ಕಿಂಡರ್‌ಗಾರ್ಟನ್ ಸಂಘ
ಮಾಜಿ ಅಧ್ಯಕ್ಷರು. ಇನ್ನೊಬ್ಬರು ಪದವೀಧರ ಮಹಿಳೆಯರ ಸಂಘದ ಸದಸ್ಯೆ
ಮೊನ್ನೆಯವರೆಗೂ 'ಕಸ್ಟಮ್ಸ್' ಮಂತ್ರಿ ಅಲ್ಲಿನ ಸೆನ್ಸಾರ್ ಮಂಡಳಿಯ ಅಧ್ಯಕ್ಷ
ರಾಗಿದ್ದರು.

ಮತ್ತೊಂದು ದೇಶದಲ್ಲಿ ನೌಕಾದಳದ ಮತ್ತು ಪೋಲಿಸ್ ಪಡೆಯ ಅಧಿಕಾರಿಗಳ
ಸೆನ್ಸಾರ್ ಮಂಡಳಿ ಸದಸ್ಯರು!

ಪಶ್ಚಿಮ ಜರ್ಮನಿಯಲ್ಲಿ ವೈದ್ಯರು, ಸಮಾಜಶಾಸ್ತ್ರಜ್ಞರು, ಗೃಹಿಣಿಯರ

ಮತ್ತು ವಿದ್ಯಾರ್ಥಿಗಳು ಮಂಡಳಿಯ ಸದಸ್ಯ ಬಂಧುಗಳು. ಲೈಂಗಿಕ ಆಕರ್ಷಣೆಯ ದೃಶ್ಯಗಳ ಮೇಲೆ ನಿರ್ಬಂಧವಿಲ್ಲ. ಆದರೆ ಕ್ರೌರ್ಯ – ಹಿಂಸೆಗಳ ಮೇಲೆ ಅವರ ಕಣ್ಣು.

* * * * *

ಚಿಕ್ಕವರು ಕೆಲ ಚಲಚ್ಚಿತ್ರಗಳನ್ನು ನೋಡಬಾರದು ಎನ್ನುವುದು ಸರಿಯೆ ?

ವ್ಯಕ್ತವಾದ ಅಭಿಪ್ರಾಯಗಳು ಸ್ಥೂಲವಾಗಿ ಎರಡು :

— ಹದಿಮೂರು ವರ್ಷಗಳಿಗಿಂತ ಕಡಮೆ ವಯಸ್ಸಿನ ಹುಡುಗರನ್ನು ವಸ್ತು ಸಂಗ್ರಹಾಲಯಗಳಿಗೆ ಕರೆದೊಯ್ಯುವುದಿಲ್ಲವೆ ? ಅಲ್ಲಿ ನಗ್ನಸ್ತ್ರೀಯರ ಶಿಲ್ಪಗಳನ್ನೂ ಚಿತ್ರಗಳನ್ನೂ ಅವರು ನೋಡುವುದಿಲ್ಲವೇ ? ತಾವು ವಾಸಿಸುವ ನಗರಗಳಲ್ಲಿ ಕೆಂಪುದೀಪದ ಪ್ರದೇಶಗಳಲ್ಲಿ ಅವರು ಹಾದು ಹೋಗುವುದಿಲ್ಲವೆ ? ಮಕ್ಕಳು ಪ್ರಬುದ್ಧರಾದರೆಂದು ನಿರ್ಧರಿಸುವವರು ಹಿರಿಯರು ತಾನೆ ? ನಿಷಿದ್ಧವೆಂದು ಸಾರವೆಯೋ, ಬದುಕಿನ ಬಗೆಗೆ ಮಕ್ಕಳ ದೃಷ್ಟಿಯನ್ನು ರೂಪಿಸುವ ಹೊಣೆಯನ್ನು ಹೆತ್ತವರು ಹೊರಬೇಕು.

— ಲೈಂಗಿಕ ಅಂಶಗಳ ಮೇಲೆ ಕತ್ತರಿ ಪ್ರಯೋಗಿಸುವುದರಿಂದ ನಿರ್ಮಾಪಕರು ಹೆಚ್ಚು ಹೆಚ್ಚಾಗಿ ಕ್ರೌರ್ಯದ ದೃಶ್ಯಗಳನ್ನು ಅಳವಡಿಸುತ್ತಾರೆ. ಗಲ್ಲಾಪೆಟ್ಟಿಗೆ ತುಂಬಲು ಇದು ಅವರಿಗೆ ಪ್ರಯೋಜನಕಾರಿ. ಮಕ್ಕಳ ಮನಸಿನ ಮೇಲೆ ಇಂಥ ದೃಶ್ಯಗಳು ಅಹಿತಕರ ಪರಿಣಾಮ ಉಂಟುಮಾಡುತ್ತವೆ. ಕ್ರೌರ್ಯದ ದರೋಡೆಯ ದೃಶ್ಯಗಳಿಂದ ಎಳೆಯ ಪೀಳಿಗೆಗೆ ಖಂಡಿತ ಕೆಡುಕೇ.

ಲೈಂಗಿಕ ಆಕರ್ಷಣೆ, ರಾಜಕಾರಣ, ಕ್ರೌರ್ಯ – ಈ ಮೂರು ಭಾರತದ ಸೆನ್ಸಾರ್ ಮಂಡಳಿಯವರು ಪರಿಶೀಲಿಸುವ ಮುಖ್ಯ ವಿಷಯಗಳು.

ಅವರೆಷ್ಟೇ ಪರಿಶೀಲಿಸಿದರೂ ಅರ್ಥಹೀನ ಕುಣಿತ ಕುಲುಕಾಟಗಳೂ ಪ್ರೇಮೋದ್ವೇಗದ ವಿಮುಖಿರುಗಳೂ ಭಾರತೀಯ ಚಲಚ್ಚಿತ್ರಗಳಲ್ಲಿ ಹೇರಳವಾಗಿರುತ್ತವೆ. ಅಸಹ್ಯವೆನಿಸುವಂಥದು ಈ ಜಾಡ್ಯ. ಪರೀಕ್ಷಾಪ್ರದರ್ಶನದ ವೇಳೆಯಲ್ಲಿ ಸೆನ್ಸಾರರು ನಿದ್ದೆ ಹೋಗುತ್ತಾರೇನೊ !

ಇಂಥದನ್ನು ಆಕ್ಷೇಪಿಸದ ಸೆನ್ಸಾರರು, ಮನುಕುಲಿಗೆ ತಾಪ ಉಂಟುಮಾಡುವಂತಹ ತೀವ್ರತರ ವಿಚಾರಗಳು ಬಂದಾಗ (ಉದಾ : ಸಂಸ್ಕಾರ) ಕಣ್ಣುಚ್ಚಿ ಕುಳಿತು ಕಾರ್ಯೋನ್ಮುಖರಾಗುತ್ತಾರೆ. ಆಗ ಕೇಳಿಸುತ್ತದೆ ಕತ್ತರಿ ಸದ್ದು.

ಕ್ರೌರ್ಯ ? ಬುದ್ಧ, ಕ್ರಿಸ್ತ, ಗಾಂಧಿ ಎಲ್ಲವೂ ಬರಿ ಮಾತು. ಮನುಷ್ಯನ ಮೂಲಭೂತ ರಾಗಗಳಲ್ಲಿ ಹಿಂಸೆಯೂ ಒಂದು. ಅದನ್ನು ಪ್ರಚೋದಿಸಿದಷ್ಟೂ 'ನಾಗರಿಕ ಮಾನವ'ನಿಗೆ ಸಂತೋಷ. ಮಾನಸಿಕವಾಗಿ, ಸಾಮಾಜಿಕವಾಗಿ ಇಂಥ ದೃಶ್ಯಗಳಿಂದ ಜನರ ಮೇಲೆ ಆಗುವ ಪರಿಣಾಮವೇನು ? ಅದನ್ನು ತಿಳಿಯುವಂತಹ ವಿಚಾರಶೀಲರು ಸೆನ್ಸಾರ್ ಮಂಡಲದಲ್ಲಿ ಇದ್ದಂತಿಲ್ಲ.

* * * * *

'ಪ್ರತಿಯೊಬ್ಬ ಚಲಚ್ಚಿತ್ರಪ್ರೇಮಿಯೂ ಸ್ವತಃ ಸೆನ್ಸಾರನಾಗಬೇಕು.' ಇದೊಂ ಸದಭಿಪ್ರಾಯ. ಆದರೆ ಅವಿದ್ಯಾವಂತ ಬಹುಸಂಖ್ಯಾಕರಾಗಿರುವ ನಮ್ಮ ದೇಶ ದರೂ ಇದು ಸಾಧ್ಯವೆ ?

'ಸೆನ್ಸಾರ್ ಪದ್ಧತಿಯನ್ನೇ ತೆಗೆದುಹಾಕಬೇಕು.' ಮಂಡಲದ ರೀತಿ ನಿ ಗಳಿಂದ ಬೇಸತ್ತ – ನಿರ್ಮಾಪಕರು – ಬೇರೆ ಬೇರೆ ರಾಷ್ಟ್ರಗಳವರು – ಹೀಗೆ ಹೇ ವುದು ಸಹಜ. ಅವರ ಭಾವನೆಯ ತೀವ್ರತೆಯನ್ನು ಅರ್ಥಮಾಡಿಕೊಳ್ಳು ಕಷ್ಟವಲ್ಲ. ಆದರೆ—

ಭಾರತೀಯ ಸೆನ್ಸಾರ್ ಮಂಡಲದ ಅಧ್ಯಕ್ಷರು ಹೀಗೆ ಹೇಳುತ್ತಾರೆ:

"ನಮ್ಮಲ್ಲಿ ಪ್ರೇಮದ ವಸ್ತುಗಳ ಚಿತ್ರಣದಲ್ಲಿ ನಯವಿಲ್ಲ, ಸಂವೇದನೆ ವಿವೇಕವಿಲ್ಲ; ಅಂಥ ಚಿತ್ರಣ ಒರಟು, ಅಸಭ್ಯ. ಹಣ ಗಳಿಸುವುದೊಂದೇ ಬುದ್ಧಿ ಪ್ರಮುಖ ನಟ ನಟಿಯರು ದುಬಾರಿ ಶುಲ್ಕ ಕೇಳುತ್ತಾರೆ. ಅದರಲ್ಲೊಂದು ಭಾಗವ ನಿರ್ಮಾಪಕರು ಮುಚ್ಚುಮರೆಯಿಂದ (ತೆರೆಯ ಹಿಂದೆ!) ಕೊಡುತ್ತಾರೆ. ವ್ಯಕ್ತಿ ವಿಲ್ಲದ ಪ್ರಾಮಾಣಿಕರಲ್ಲದ ತಾರೆಯರು, ಸುಸಂಸ್ಕೃತರಲ್ಲದ ದುರಾಶೆಯ ನಿರ್ಮಾ ಕರು – ಇವರಿಗೆ, ಹಣಗಳಿಕೆಗಾಗಿಯೇ ಚಿತ್ರ ತಯಾರಿಸುವ ಸ್ವಾತಂತ್ರ್ಯ ಇರಬೇಕೆ

ತಪ್ಪು ಯಾರದು? ಚಿತ್ರನಿರ್ಮಾಪಕರದೊ? ಈ ಖಾಸಗೀ ಉದ್ಯಮದ ನೀತಿಗಳದೊ?

ಇದೊಂದು ವಿಷವರ್ತುಲ ಎನ್ನಬಹುದು.

ಹಾಗಾದರೆ ಇದನ್ನು ತುಂಡರಿಸುವವರು ಯಾರು ? ಎಲ್ಲಿದೆ ?

ಈ ವಿಷಯದ ಮಥನ ನಡೆದಷ್ಟೂ ಅಸಮಾಧಾನ, ಪರಿಹಾರ ಅಸಂತೋ ಇದು ಅನಿವಾರ್ಯ.

ಇಂತಹ ಚರ್ಚೆಯಾದರೂ ಆಗುತ್ತಿದೆಯಲ್ಲಾ ಎಂಬುದೇ ಸ್ವಲ್ಪ ಮಟ್ಟಿಗಾ ಸಮಾಧಾನ ನೀಡಬಲ್ಲ ಸಂಗತಿ.

೪-೧-೧೯

# ಹದಿನಾರು ವರ್ಷಗಳ ಅನಂತರ

ಬುದ್ಧಿಜೀವಿಗಳ ವೈಮನಸ್ಸು, ಕಲಹ ಎಷ್ಟರ ತನಕ ?

....ರೆಜಿಸ್ ಡೆಬ್ರೇ ಫ್ರಾನ್ಸಿನ ಯುವಕ ಬರೆಹಗಾರ. ಆತ, ಗತಿಸಿದ ಕ್ರಾಂತಿಕಾರಿ ಚೆಗೆವರಾನ ಸ್ನೇಹಿತ. ಬೊಲಿವಿಯದಲ್ಲಿ ಮಾಡಬಾರದ್ದನ್ನೇನೋ ಮಾಡಿದ ಎಂದು ಡೆಬ್ರೇಯನ್ನು ಅಲ್ಲಿನ ಸರಕಾರ ಹಿಡಿಯಿತು – ೧೯೬೭ ರಲ್ಲಿ. ಮೂವತ್ತು ವರ್ಷಗಳ ಸೆರೆಮನೆವಾಸ ವಿಧಿಸಿತು.

ಈ ದಂಡನೆ ಸರಿಯಲ್ಲ, ಆ ತರುಣನನ್ನು ಬಿಡಬೇಕು – ಎಂದು ಲೋಕದಾದ್ಯಂತ ಜನ ಒತ್ತಾಯಿಸಿದ್ದಾರೆ. ಬೊಲಿವಿಯದ ಆಡಳಿತಸೂತ್ರಗಳನ್ನು ನಿರ್ವಹಿಸುತ್ತಿರುವವರು ಅದಕ್ಕಿನ್ನೂ ಒಪ್ಪಿಲ್ಲ.

ಈ ಮಧ್ಯೆ ಫ್ರಾನ್ಸಿನ ಮೂವರು ಮಹಾನ್ ಲೇಖಕರು ಬೊಲಿವಿಯ ಅಧ್ಯಕ್ಷರಿಗೊಂದು ಮನವಿ ಸಲ್ಲಿಸಿದ್ದಾರೆ. “ಡೆಬ್ರೇ ತನ್ನ ಆದರ್ಶಗಳಿಗೆ ಅನುಗುಣವಾಗಿ ನಡೆಯಲು ಯತ್ನಿಸಿದ. ಅವನು ಕಾರಾಗೃಹದಲ್ಲಿ ಕೊಳೆಯುವುದು ಸರಿಯಲ್ಲ. ಆತ ಫ್ರಾನ್ಸಿಗೆ ಮರಳಬೇಕು. ಬಿಟ್ಟುಕೊಡಿ.” ಇದು ಪ್ರಾರ್ಥನೆಯ ಧಾಟಿ, ಸಾರ. ಸಹಿ ಹಾಕಿರುವವರು ಮಾರಿಯಾಕ್, ಮಾಲ್ರಾ ಮತ್ತು ಸಾರ್ತ್ರ್.

ವಿಶ್ವವಿಖ್ಯಾತರಾದ ಮೂವರು ಹಿರಿಯ ಸಾಹಿತಿಗಳ ಮನವಿ ಎಂದ ಮೇಲೆ ಅದಕ್ಕೆ ಮಹತ್ವ ಪ್ರಾಪ್ತವಾಗುವುದು ಸಹಜ.

* * * * *

ಆದರೆ ಇನ್ನೂ ಒಂದು ಕಾರಣಕ್ಕಾಗಿ ಫ್ರಾನ್ಸಿನ ಮತ್ತು ಇತರ ದೇಶಗಳ ಸಾಹಿತ್ಯಪ್ರಿಯರ ಗಮನವನ್ನು ಈ ಮನವಿ ಸೆಳೆದಿದೆ. ಅದು, ವಿಚಿತ್ರವೆನಿಸುವ ಈ ತ್ರಿಕೋನ ಸಂಬಂಧ.

ಮಾರಿಯಾಕ್ ಫ್ರಾನ್ಸಿನ ಹಿರಿಯ ಸಾಹಿತಿ. ಅಸಂಖ್ಯ ಕೃತಿಗಳಿಂದ ಜನಮನವನ್ನು ಗೆದ್ದವರು. ತಮ್ಮ ಎಡೆಬಿಡದ ಬರೆವಣಿಗೆಯಿಂದ ಫ್ರೆಂಚ್ ಸಾಹಿತ್ಯಲೋಕದಲ್ಲಿ ವಿರಾಜಮಾನರು.

ಮಾರಿಯಾಕ್ ಮತ್ತು ಸಾರ್ತ್ರ್ ನಡುವೆ ಸ್ನೇಹವಿಲ್ಲ. ಕಾರಣ, ಮಾರಿಯಾಕ್ ಬರೆದ “ಇರುಳಿನ ಕೊನೆ” ಎಂಬ ಕಾದಂಬರಿಯ ಬಗೆಗೆ ಸಾರ್ತ್ರ್ ಮಾಡಿದ ಖಂಡನೆ. (ಆ ಖಂಡನೆಯಿಂದಲೇ ಸಾರ್ತ್ರ್ ಸಾಹಿತ್ಯಕ್ಷೇತ್ರಕ್ಕೆ ಧುಮುಕಿದ್ದು.) “ದೇವರು ಕಲಾವಿದನಲ್ಲ; ಮಾರಿಯಾಕರೂ ಅಲ್ಲ” – ಎಂದು ಸಾರ್ತ್ರ್ ಆ ವಿಮರ್ಶೆಯಲ್ಲಿ

ಬರೆದರು. ಮಾರಿಯಾಕ್ ರೋಷಾವಿಷ್ಟರಾಗಿದ್ದರೂ ಕಿರಿಯ ಸಾರ್ತ್ರ್ ಬಗ್ಗೆ ತುಸು ಕಹಿಯಾಗಿ ಹೀಗೆ ನುಡಿದರು: "ಸಾರ್ತ್ರ್ ನನಗಿಂತ ಹೆಚ್ಚು ಬುದ್ಧಿವಂತರು, ಸಾಮರ್ಥ್ಯವಂತರು. ನಮ್ಮ ಲೇಖಕರಲ್ಲಿ ಅವರೇ ಕೊನೆಯವರು."

ಇವರಿಬ್ಬರದು ಹೀಗಾದರೆ, ಹೆಚ್ಚು ಕಡಿಮೆ ಸಮವಯಸ್ಕರಾದ ಸಾರ್ತ್ರ್ ಮತ್ತು ಮಾಲ್ರೊ ಸಂಬಂಧ ತುಸು ಬೇರೆ ರೀತಿಯದು. ಮೊದಲಿಲ್ಲಿ ಅವರು ಸ್ನೇಹಿತರು. ಮಾಲ್ರೊ ಬರೆದ ಆರಂಭದ ಕಾದಂಬರಿಗಳನ್ನು ಸಾರ್ತ್ರ್ ಹೊಗಳಿದರು. ಫ್ರಾನ್ಸನ್ನು ಹಿಟ್ಲರ್ ಆಕ್ರಮಿಸಿದ ಸಂದರ್ಭದಲ್ಲಿ ಅವರು ಪರಸ್ಪರ ಹೊಂದಾಣಿಕೆಯಿಂದ ಕೆಲಸ ಮಾಡಿದ್ದೂ ಉಂಟು. ಮುಂದೆ ಇವರಿಬ್ಬರೂ ಹಿಡಿದ ದಾರಿ ಬೇರೆ ಬೇರೆ. ಮಾಲ್ರೊ ದಿಗಾಲರ ಸರಕಾರದಲ್ಲಿ ಸಂಸ್ಕೃತಿಯ ಮಂತ್ರಿಯಾದರು. ಸಾಂಸ್ಕೃತಿಕ ಭವನಗಳನ್ನು ಕಟ್ಟಿಸಿದರು, ಚಿತ್ರಕಲಾಪ್ರದರ್ಶನಗಳನ್ನು ಏರ್ಪಡಿಸಿದರು ಇತ್ಯಾದಿ, ಇತ್ಯಾದಿ. ಸಾರ್ತ್ರ್ ಒಂಟಿ ದಾರಿ ಹಿಡಿದರು. ಎಡದಲ್ಲಿ ನಡೆದರೋ ಬಲದಲ್ಲಿ ನಡೆದರೋ ಹೇಳುವುದು ಕಷ್ಟ. ಅಥವಾ, ಒಮ್ಮೆ ಬಲದಲ್ಲಿ – ಒಮ್ಮೆ ಎಡದಲ್ಲಿ; ನೊಬೆಲ್ ಸಾಹಿತ್ಯ ಪಾರಿತೋಷಕ ಬಂದಾಗ, "ಬೇಡ" ಎಂದರು. ಈ ನಡುವೆ ಮಾಲ್ರೊ – ಸಾರ್ತ್ರ್ ನಡುವಣ ವಿರಸ ತೀವ್ರವಾಯಿತು. ತಮ್ಮ ಪತ್ರಿಕೆಯ ಪ್ರಕಟಣೆ ನಿಲ್ಲಿಸುವಂತೆ ಪ್ರಕಾಶಕರ ಮೇಲೆ ಮಾಲ್ರೊ ಒತ್ತಾಯ ಹೇರಿದ್ದಾರೆ – ಎಂದು ಸಾರ್ತ್ರ್ ಆರೋಪಿಸಿದರು. ಜರ್ಮನರ ಸೆರೆಮನೆಯಿಂದ ಸಾರ್ತ್ರ್ ಬಿಡುಗಡೆ ಪಡೆದ ರೀತಿಯಲ್ಲೇನೋ ವಿಶೇಷವಿದೆ – ಎಂದು ಮಾಲ್ರೊ ಚುಚ್ಚಿದರು.

ಹೀಗಿದ್ದೂ........

* * * * *

ಒಂದು ಮನವಿಗೆ ಮೂವರ ಸಹಿ ಬಿದ್ದಿತು ಮೊನ್ನೆ.

ಆ ಮನವಿಯನ್ನು ಬರೆದವರು ಸಾರ್ತ್ರ್. ಮಾರಿಯಾಕರಿಗೆ ಅದನ್ನು ಕಳುಹಿಸಿಕೊಟ್ಟು ಸಹಿ ಬೇಕು – ಎಂದರು. ಸಹಿಯೊಡನೆ ಮನವಿ ಮರಳಿ ಬಂತು.

೧೯೪೫ ರಿಂದ ತಾವು ಮುಖ ನೋಡದೇ ಇದ್ದ (ಒಂದೇ ಊರಲ್ಲಿದ್ದರೂ) ಮಾಲ್ರೊಗೆ ಸಾರ್ತ್ರ್ ಟೆಲಿಫೋನ್ ಮಾಡಿದರು. (ದಿಗಾಲ್ ಇಳಿದು ಬಂದು, ಮಾಲ್ರೊ ಮಂತ್ರಿ ಪದವಿ ಮುಗಿದಿತ್ತು.) ಮನವಿಯನ್ನು ಓದಿ ಹೇಳಿದರು. ಫೋನ್ ಮೂಲಕವೇ ಮಾಲ್ರೊ ಸಹಿ ದೊರೆಯಿತು.

ವಿವಿಧ ಪತ್ರಿಕೆಗಳಲ್ಲಿ ಲಕ್ಷಗಟ್ಟಲೆ ಪ್ರತಿಗಳಲ್ಲಿ ಮನವಿ ಅಚ್ಚಾಯಿತು. ಕೆಳಗೆ ಮೂವರ ಸಹಿಗಳು.

ಫ್ರಾನ್ಸು ಕಣ್ಣುಜ್ಜಿಕೊಂಡು ಓದಿದ್ದೇ ಓದಿದ್ದು.

* * * * *

ಹದಿನಾರು ವರ್ಷಗಳಿಗೆ ಹಿಂದೆಯೂ ಒಮ್ಮೆ ಇಂಥದೊಂದು ಮನವಿ ಸಿದ್ಧವಾ ತು

ಅದು ಗೂಢಚಾರರೆಂಬ ಆಪಾದನೆಯ ಮೇಲೆ ವಿಚಾರಣೆಗೆ ಒಳಗಾಗಿ ಮರಣದಂಡನೆಗೆ ಗುರಿಯಾದ ರೊಸನ್‌ಬರ್ಗ್ ದಂಪತಿಗಳನ್ನು ಉಳಿಸುವ ಪ್ರಯತ್ನ. ಫ್ರೆಂಚ್ ಸಾಹಿತ್ಯದ ಆ ತ್ರಿಮೂರ್ತಿಗಳು (ಇನ್ನೂ ಒಬ್ಬರು ಸಹಿ ಹಾಕಿದ್ದರು ಅದಕ್ಕೆ. ಈಗ ದಿವಂಗತರಾಗಿರುವ ರೋಜರ್ ಮಾರ್ಟಿನ್ ಡು ಗಾರ್ಡ್.) ಪ್ರಾರ್ಥನೆ ಸಲ್ಲಿಸಿದ್ದು ಅಧ್ಯಕ್ಷ ಐಸೆನ್‌ಹೋವರರಿಗೆ. ಆದರೆ ಅದು ಫಲಕಾರಿಯಾಗಲಿಲ್ಲ.

ಅನಂತರದ ಹದಿನಾರು ವರ್ಷಗಳ ಕಾಲ ಮೂರು ದಾರಿ ಹಿಡಿದಿದ್ದರು ತ್ರಿಮೂರ್ತಿಗಳು.

ಮತ್ತೆ ಯುವಕ ಡೆಬ್ರೆಯನ್ನು ಸೆರೆಯಿಂದ ಹೊರತರಲು ಜಂಟಿ ಮನವಿ.

* * * * *

ಬೊಲಿವಿಯದ ಅಧ್ಯಕ್ಷರು ಡೆಬ್ರೆಯನ್ನು ಈಗಲೇ ಬಿಡಬಹುದು. ಅಥವಾ, ಇನ್ನೂ ಸ್ವಲ್ಪ ದಿನ ಸೆರೆಯಲ್ಲಿಡಬಹುದು. (ಮೂವತ್ತು ವರ್ಷಗಳಂತೂ ದೀರ್ಘಕಾಲ. ಅರ್ಥವಿಲ್ಲದ್ದು. ಬೊಲಿವಿಯದ ರಾಜಕಾರಣಿಗಳ ಅಧಿಕಾರವೇನು ಶಾಶ್ವತವೆ?)

ಆ ಪ್ರಶ್ನೆ ಯಾವುದೇ ರೀತಿ ಬಗೆಹರಿದರೂ ಒಂದು ಅಂಶ ಮಾತ್ರ ಸಾಹಿತ್ಯ ಲೋಕದಲ್ಲಿ ತಾನು ಪಡೆದ ವಿಶಿಷ್ಟ ಸ್ಥಾನವನ್ನು ಭದ್ರವಾಗಿ ಉಳಿಸಿಕೊಳ್ಳುತ್ತದೆ. ಅದು ಅಂಚೆ – ಟೆಲಿಫೋನುಗಳು ಮೂವರು ಖ್ಯಾತ ಸಾಹಿತಿಗಳ ನಡುವೆ ನಿರ್ಮಿಸಿದ ಮೈತ್ರಿ ಸೇತುವೆ.

ರಾಜಕಾರಣಿಗಳು ಒಬ್ಬರನ್ನೊಬ್ಬರು ಹರಿದು ತಿನ್ನಬಹುದು. ಬುದ್ಧಿಜೀವಿಗಳು, ಸಾಹಿತಿಗಳು, ಕಲಾವಿದರು – ಸ್ವಲ್ಪಮಟ್ಟಿಗೆ ತಾವೂ ರಾಜಕಾರಣಿಗಳನ್ನು ಅನುಸರಿಸಬಹುದು. ಆದರೆ, ಸ್ವಲ್ಪಮಟ್ಟಿಗೆ ಮಾತ್ರ.

ಅಧಿಕಾರಕ್ಕಾಗಿ ಒಮ್ಮೊಮ್ಮೆ ರಾಜಕೀಯ ವೈರಿಗಳಲ್ಲೂ ಒಡಂಬಡಿಕೆ ಏರ್ಪಡುತ್ತದೆ. ಕಲೆ, ಸಾಹಿತ್ಯಲೋಕಗಳಲ್ಲಿ ಅಧಿಕಾರವಿಲ್ಲ. ಆ ಕಾರಣದಿಂದಲೇ ಅಂಥ ಒಡಂಬಡಿಕೆಯಿಲ್ಲ.

ಆದರೆ ಇಲ್ಲಿ ಮೈತ್ರಿ ಸಾಧ್ಯ – ಮಾನವತೆಗಾಗಿ, ಸಂಸ್ಕೃತಿಗಾಗಿ.

೨೫–೧–೧೯೭೦

# ನಿರಂಜನರ ಕೃತಿಗಳು

## ಕಾದಂಬರಿ

ವಿಮೋಚನೆ
ಬನಶಂಕರಿ
ಸೌಭಾಗ್ಯ
ಅಭಯ
ದೂರದ ನಕ್ಷತ್ರ
ನವೋದಯ
ರಂಗಮ್ಮನ ವಠಾರ
ಪಾಲಿಗೆ ಬಂದ ಪಂಚಾಮೃತ
ಏಕಾಂಗಿನಿ
ಚಿರಸ್ಮರಣೆ
ಕೊನೇ ನಮಸ್ಕಾರ
ಮಿಣುಕು ಹುಳ
ವಿಲಾಸಿನಿ
ಅಂಜನ
ವಿಶಾಲಾಕ್ಷಿ
ದೀಕ್ಷೆ
ಕಲ್ಯಾಣಸ್ವಾಮಿ
ತೊಟ್ಟಿಲು ತೂಗದ ಕೈ
ಹೆಣ್ಣಾಗಿ ಕಾಡಿತ್ತು ಮಾಯೆ
ಬಂಗಾರದ ಜಿಂಕೆ
ನಂದಗೋಕುಲ
ಸ್ವಾಮಿ ಅಪರಂಪಾರ
ನೂರು ಜುಟ್ಟು ಮೂರು ಜಡೆ
ಸ್ಮರಣೆಯೊಂದೇ ಸಾಲದೆ?

## ನಾಟಕ

ಸಂಗಮ ಸ್ನಾನ
ಆಹ್ವಾನ
ಸಾಮ್ರಾಜ್ಞಿ

## ಜೀವನ ವೃತ್ತ

ಮಗು ರಾಜ

## ಕಥಾಸಂಗ್ರಹ

ಸಂಧಿಕಾಲ
ರಕ್ತ ಸರೋವರ
ಅನ್ನಪೂರ್ಣ
ಕೊನೆಯ ಗಿರಾಕಿ
ವಾರದ ಹುಡುಗ
ಕಾತ್ಯಾಯಿನಿ
ಒಂಟಿ ನಕ್ಷತ್ರ ನಕ್ಕಿತು
ಯಾವ ಜನ್ಮದ ಶಾಪ?
ನಾಸ್ತಿಕ ಕೊಟ್ಟ ದೇವರು

## ಲೇಖನ ಸಂಕಲನ

ಐದು ನಿಮಿಷ
ಕಾಲಕ್ಷೇಪ
ರಾಜಧಾನಿಯಿಂದ
ದಿನಚರಿಯಿಂದ
ಅಂಕಣ

## ಪತ್ರ ಸಂಕಲನ

ಸಾಧನಾ
ಪುಷ್ಪಹಾರ

## ರಾಜಕೀಯ

ಹಿಮಾಲಯದ ದಳ್ಳುರಿ

## ಭಾಷಾಂತರ

ತಾಯಿ
ಅಧಃಪತನ
ನನ್ನ ಬಾಲ್ಯ
ಜನತೆಯ ನಡುವೆ
ನನ್ನ ವಿಶ್ವವಿದ್ಯಾಲಯ
ನೀತಿ ಕತೆಗಳು
ಮದುವಣಗಿತ್ತಿ
ಮಾನವನ ಪಾಡು
ಸ್ವಾತಂತ್ರ್ಯಸಂಗ್ರಾಮದ ಇತಿಹಾಸ

